# ಹರಪನಹಳ್ಳಿ
# ಭೀಮವ್ವನ ಹಾಡುಗಳು






ಸಂಪಾದಕರು

**ಡಾ. ಟಿ. ಎನ್. ನಾಗರತ್ನ**




**ಕನ್ನಡ ಅಧ್ಯಯನ ಸಂಸ್ಥೆ**
ಮೈಸೂರು ವಿಶ್ವವಿದ್ಯಾನಿಲಯ
1984

HARAPANAHḶḶI BHĪMAVVANA HĀDUGAḶU
(*Compositions of Smt. Bhīmavva*); Edited by Dr. Smt. T. N. Nagarathna; Published by the Institute of Kannada Studies, University of Mysore, Manasagangotri, Mysore-570 006; First Edition 1984. pp. 12+xlvi+674



**ಬೆಲೆ : ರೂ. 40=00**

ಮುದ್ರಕರು : ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ, ಮಾನಸಗಂಗೋತ್ರಿ, ಮೈಸೂರು-೬
ಮಾರಾಟಗಾರರು : ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು–೫೭೦ ೦೦೬.

# ಮುನ್ನುಡಿ

ಕನ್ನಡ ಸಾಹಿತ್ಯದ ಸಾವಿರದೈನೂರು ವರ್ಷಗಳ ಸುದೀರ್ಘ ಇತಿಹಾಸದಲ್ಲಿ ಹರಿದಾಸಸಾಹಿತ್ಯ ಒಂದು ಪ್ರಮುಖಘಟ್ಟ. ಹೆಚ್ಚು ಕಡಿಮೆ ಐದು ಶತಮಾನಗಳ ವ್ಯಾಪ್ತಿಯ ಈ ಭಕ್ತಿಸಾಹಿತ್ಯಪ್ರಕಾರವನ್ನು ಸುಮಾರು ಇನ್ನೂರು ಜನ ಹರಿದಾಸರು ತಮ್ಮ ಬಗೆಬಗೆಯ ರಚನೆಗಳಿಂದ, ಮುಖ್ಯವಾಗಿ ಕೀರ್ತನೆಗಳಿಂದ ಸಮೃದ್ಧವಾಗಿ ಸಿದ್ದಾರೆ. ಈ ಕೀರ್ತನೆಗಳು ಇಂದು ಜನಪ್ರಿಯವಾಗಿ ಪ್ರಚಾರದಲ್ಲಿವೆ. ಕೆಲವು ಮುಖ್ಯ ದಾಸರ ಹೆಸರುಗಳು ಮನೆಮಾತಾಗಿವೆ. ಸಾಹಿತ್ಯಿಕ ಶ್ರೀಮಂತಿಕೆಯಿಂದ ಮಾತ್ರವಲ್ಲದೆ ದ್ವೈತಸಿದ್ಧಾಂತವನ್ನು ಅಧ್ಯಯನ ಮಾಡುವ ದೃಷ್ಟಿಯಿಂದಲೂ ಹರಿದಾಸ ಸಾಹಿತ್ಯ ಮಹತ್ವದ್ದಾಗಿದೆ. ಕರ್ನಾಟಕ ಸಂಗೀತಕ್ಕೆ ಹರಿದಾಸರ ಕೀರ್ತನೆಗಳ ಕೊಡುಗೆಯಂತೂ ಅಸಾಧಾರಣವಾದದ್ದು.

ನಮ್ಮ ಪ್ರಾಚೀನ ಸಾಹಿತ್ಯದ ಇತರ ಕೃತಿಗಳೊಂದಿಗೆ ದಾಸಸಾಹಿತ್ಯವನ್ನು ಹೋಲಿಸಿದಾಗ ಎದ್ದು ಕಾಣುವ ಒಂದು ಮುಖ್ಯ ಅಂಶವೆಂದರೆ ಈ ಸಾಹಿತ್ಯದ ವಾಕ್ ಪರಂಪರೆ. ಗ್ರಂಥಸ್ಥವಾಗಿ ಉಳಿದುಬಂದಿರುವುದಕ್ಕಿಂತಲೂ ಜನರ ಬಾಯಲ್ಲಿ ನಿಂತಿರುವುದೇ ಹೆಚ್ಚು. ಭಕ್ತರ ಹೃದಯದ ಮೊರೆಗಳಾದ ಈ ಕೀರ್ತನೆಗಳು ತಲೆ ಮಾರಿನಿಂದ ತಲೆಮಾರಿಗೆ ಹಬ್ಬಿಬಂದಿವೆ. ನೆನಪಿನಲ್ಲಿ ನಿಂತ ಈ ರಚನೆಗಳ ಗ್ರಂಥ ರೂಪದ ಕಡೆ ಯಾರೂ ಅಷ್ಟಾಗಿ ಗಮನವಹಿಸಲಿಲ್ಲ. ಈ ಕಾರಣದಿಂದ ಕೀರ್ತನೆಗಳ ಅಧಿಕೃತ ಪಠ್ಯ ಆವೃತ್ತಿಗಳು ನಮಗೆ ದೊರೆಯುವುದಿಲ್ಲ. ನಮ್ಮ ಸಾಹಿತ್ಯ ಚರಿತ್ರೆಯ ಒಂದು ದೊಡ್ಡ ಕೊರತೆ ಇದು. ಕೆಲವು ಲೇಖಕರು, ಪ್ರಕಾಶಕರು ಹರಿದಾಸ ಸಾಹಿತ್ಯ ಪ್ರಕಟಣೆಯನ್ನು ಕೈಗೊಂಡಿರುವುದೇನೋ ನಿಜ. ಆದರೆ ಶಾಸ್ತ್ರೀಯ ದೃಷ್ಟಿಯಿಂದ ಸಮಗ್ರ ದಾಸಸಾಹಿತ್ಯವನ್ನು ಸಂಪಾದಿಸುವ ಕೆಲಸಕ್ಕೆ ಯಾರೂ ಈವರೆಗೆ ಕೈಹಾಕಿಲ್ಲ. ಇದನ್ನು ಗಮನಿಸಿ ಹರಿದಾಸ ಸಾಹಿತ್ಯದ ಸಂಗ್ರಹ, ಸಂಪಾದನೆ, ಪ್ರಕಟಣೆಗಳನ್ನು ವಿಮರ್ಶಾತ್ಮಕವಾಗಿ ಕೈಗೊಳ್ಳುವ ಯೋಜನೆಯೊಂದನ್ನು ೧೯೬೭ ರಷ್ಟು ಹಿಂದೆಯೇ ಕನ್ನಡ ಅಧ್ಯಯನ ಸಂಸ್ಥೆ ಸಿದ್ಧಪಡಿಸಿ, ನೆರವು ಕೇಳಿ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗಕ್ಕೆ ಒಪ್ಪಿಸಿತು. ಆ ಯೋಜನೆಯ ಮುಖ್ಯ ಅಂಶಗಳು ಇವು :

(೧) ಹಸ್ತಪ್ರತಿಗಳ ಸಂಗ್ರಹ—ಕ್ಷೇತ್ರಕಾರ್ಯ: ಕರ್ನಾಟಕದ ವಿವಿಧ ಭಾಗಗಳಲ್ಲಿ ಅಗತ್ಯಬಿದ್ದರೆ ಹೊರಗೂ ಸಂಚರಿಸಿ ಹಸ್ತಪ್ರತಿಗಳನ್ನು ಸಂಗ್ರಹಿಸುವುದು ; ಕೀರ್ತನೆಗಳನ್ನು ಧ್ವನಿಗ್ರಹಣ ಮಾಡಿ ಸಂಗ್ರಹಿಸುವುದು ; ಹಾಡುಗಾರಿಕೆಯ ವಿವಿಧ ಸಂಪ್ರದಾಯಗಳನ್ನು ಗುರುತಿಸಿ ಅವನ್ನು ಉಳಿಸಿಕೊಳ್ಳಲು ಕ್ರಮಗಳನ್ನು ಕೈಗೊಳ್ಳುವುದು.

(೨) ಸಂಪಾದನೆ : ಹಸ್ತಪ್ರತಿಗಳಲ್ಲಿ ವಾಕ್ ಸಂಪ್ರದಾಯದಲ್ಲಿ ದೊರೆಯುವ ಸಾಹಿತ್ಯವನ್ನು ಆಧರಿಸಿ ಶಾಸ್ತ್ರೀಯ ಗ್ರಂಥಸಂಪಾದನಕ್ರಮಗಳಿಗನು ಸಾರವಾಗಿ ಅಧಿಕೃತ ಪಠ್ಯಗಳನ್ನು ಸಿದ್ಧಪಡಿಸುವುದು.

(೩) ಪ್ರಕಟಣೆ: ಹೀಗೆ ಸಿದ್ಧಗೊಳಿಸುವ ಸಾಹಿತ್ಯವನ್ನು, ವಿಷಯ ಗಾತ್ರ ಗಳಿಗೆ ಅನುಗುಣವಾಗಿ ಬೇರೆ ಬೇರೆ ಸಂಪುಟಗಳಲ್ಲಿ ಪ್ರಕಟಿಸುವುದು; ಪ್ರತಿಯೊಂದು ಸಂಪುಟಕ್ಕೂ ಅಗತ್ಯವಾದ ಕವಿಕಾವ್ಯ ಸಂಬಂಧವಾದ ಪೀಠಿಕೆಯನ್ನೂ ಅಭ್ಯಾಸಿಗಳಿಗೆ ನೆರವಾಗುವ ಸೂಚಿಗಳನ್ನೂ ಕೊಟ್ಟು ಪ್ರಕಟಣೆಗಳು ಸಾಮಾನ್ಯರಿಗೂ, ವಿದ್ವಾಂಸರಿಗೂ ಉಪಯೋಗವಾಗು ವಂತೆ ನೋಡಿಕೊಳ್ಳುವುದು.

(೪) ಹರಿದಾಸ ಸಾಹಿತ್ಯದ ಬೇರೆಬೇರೆ ಮುಖಗಳನ್ನೂ ಇತರ ಭಕ್ತಿಪಂಥ ಗಳೊಡನೆ ಅದರ ಸಂಬಂಧವನ್ನೂ, ಕನ್ನಡ ಸಾಹಿತ್ಯಕ್ಕೆ ಹರಿದಾಸರ ಕೊಡುಗೆಗಳನ್ನೂ ಚರ್ಚಿಸುವ ಪ್ರಕಟಣೆಗಳನ್ನು ಹೊರತರುವುದು.

ಸುಮಾರು ಹದಿನೈದು ವರ್ಷಗಳ ಅವಧಿಯಲ್ಲಿ ಮೂರು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಪೂರ್ಣಗೊಳ್ಳುವ ಈ ಯೋಜನೆಯನ್ನು ವಿಶ್ವವಿದ್ಯಾನಿಲಯದ ಧನಸಹಾಯ ಆಯೋಗ ಭಾಗಶಃ ಒಪ್ಪಿ ನಾಲ್ಕನೇ ಯೋಜನೆಯ ಅವಧಿಯಲ್ಲಿ ಸ್ವಲ್ಪ ಹಣವನ್ನು ಮಾತ್ರ ನೀಡಿ, ಮೂವರು ಸಂಶೋಧನ ಸಹಾಯಕರನ್ನೂ ಇಬ್ಬರು ಪ್ರತಿಕಾರರನ್ನೂ ನೇಮಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಿತು. ಇದೇ ನೆರವನ್ನು ಐದನೆಯ ಯೋಜನೆ ಯಲ್ಲೂ ಮುಂದುವರಿಸಿ ಕೇವಲ ಎರಡು ವರ್ಷಗಳವರೆಗೆ ನೆರವನ್ನು ಮುಂದುವರಿಸಿತು. ನಮ್ಮ ವಿಶ್ವವಿದ್ಯಾನಿಲಯದ ಅಧಿಕಾರ ವರ್ಗದವರ ನೆರವಿನಿಂದ ಯೋಜನೆ ೧೯೮೫ರ ಮಾರ್ಚ್‌ವರೆಗೂ ಮುಂದುವರಿದಿದೆ. ಆಮೇಲೂ ಇದು ಮುಂದುವರಿಯುವಂತೆ ವಿಶ್ವ ವಿದ್ಯಾನಿಲಯ ಮನಸ್ಸು ಮಾಡುತ್ತದೆಂದು ನಮ್ಮ ನಂಬುಗೆ. ಯೋಜನೆ ೧೯೭೪ ರಲ್ಲಿಯೇ ಅಸ್ತಿತ್ವಕ್ಕೆ ಬಂದರೂ, ಗ್ರಂಥಗಳ ಪ್ರಕಟಣೆಯಲ್ಲಿ ತೀವ್ರ ವಿಳಂಬವಾಯಿತು. ಅಗತ್ಯವಾದ ಸಾಮಗ್ರಿಯ ಸಂಪಾದನೆಯಲ್ಲಿಯೇ ಆರಂಭದ ಕೆಲವು ವರ್ಷಗಳು ಕಳೆದುವು ; ಮೂಲ ಯೋಜನೆಯಂತೆ ಹೆಚ್ಚು ಕೆಲಸಗಾರರನ್ನು ನೇಮಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಈ ಪರಿಸ್ಥಿತಿಯೇ ವಿಳಂಬಕ್ಕೆ ಕಾರಣ.

ಯೋಜನೆಯ ಆರಂಭದಿಂದಲೂ ಇಬ್ಬರು ಸಂಶೋಧನ ಸಹಾಯಕರು, ಒಬ್ಬರು ಪ್ರತಿಕಾರರು ಕೆಲಸಮಾಡುತ್ತಾ ಬಂದಿದ್ದಾರೆ. ಇಷ್ಟರವರೆಗೆ ಕೀರ್ತನೆಗಳ ಸು. ೨೮,೦೦೦ ಸೂಚಕ ಪಟ್ಟಿಕೆಗಳನ್ನು ಸಿದ್ಧಪಡಿಸಿ ಅವುಗಳನ್ನು ಅಕಾರಾದಿಯಾಗಿ ಜೋಡಿಸಿಡಲಾಗಿದೆ ; ಕನ್ನಡನಾಡಿನ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿ ಸುಮಾರು ೩೦೭ ಅಮೂಲ್ಯ ಹಸ್ತಪ್ರತಿಗಳನ್ನು ಸಂಗ್ರಹಿಸಲಾಗಿದೆ; ವಿವಿಧ ಭಾಗಗಳಲ್ಲಿ ಜನರು ಕೀರ್ತನೆಗಳನ್ನು ಹಾಡುವ ಸಂಪ್ರದಾಯವನ್ನು ಈಗಲೂ ಹೇಗೆ ಉಳಿಸಿಕೊಂಡು

ಬಂದಿದ್ದಾರೆಂಬುದನ್ನು ಅಧ್ಯಯನ ಮಾಡಲು ನೂರಾರು ಕೀರ್ತನೆಗಳನ್ನು ಧ್ವನಿಮುದ್ರಿಸಿ ಕೊಳ್ಳಲಾಗಿದೆ. ಈ ಚಟುವಟಿಕೆಗಳ ಫಲವಾಗಿ ಈಗ ಕನ್ನಡ ಅಧ್ಯಯನ ಸಂಸ್ಥೆ ಹರಿದಾಸ ಸಾಹಿತ್ಯದ ಅದ್ವಿತೀಯ ಭಂಡಾರವಾಗಿದೆ.

ಹರಿದಾಸ ಸಾಹಿತ್ಯದ ಶಾಸ್ತ್ರೀಯ ಆವೃತ್ತಿಯ ಯೋಜನೆಗೆ ಅನುಸಾರವಾಗಿ ಹರಿದಾಸರಲ್ಲಿ ಮೊದಲಿಗರಾದ ಶ್ರೀಪಾದರಾಜರ ಕೀರ್ತನೆಗಳ ಸಂಪುಟ ೧೯೭೩ರಲ್ಲಿಯೂ, ಶ್ರೀ ಮಹಿಪತಿರಾಯರ ಕೀರ್ತನೆಗಳ ಸಂಪುಟ ೧೯೭೭ರಲ್ಲಿಯೂ, ಶ್ರೀ ಗೋಪಾಲದಾಸರ ಕೀರ್ತನೆಗಳ ಸಂಪುಟ ೧೯೭೭ರಲ್ಲಿಯೂ ಪ್ರಕಟವಾದವು. ಶ್ರೀಪಾದರಾಜರ ಕೃತಿಗಳ ಬಿಡುಗಡೆಯ ಸಂದರ್ಭದಲ್ಲಿ ನಡೆದ ಹರಿದಾಸಸಾಹಿತ್ಯಕ್ಕೆ ಸಂಬಂಧಿಸಿದ ವಿಚಾರಗೋಷ್ಠಿ ಯಲ್ಲಿ ವಿವಿಧ ವಿದ್ವಾಂಸರು ಮಂಡಿಸಿದ ಪ್ರಬಂಧಗಳನ್ನು ಸಂಕಲಿಸಿ 'ಹರಿದಾಸ ಸಾಹಿತ್ಯ ಸಮೀಕ್ಷೆ' ಎಂಬ ಹೆಸರಿನಿಂದ ೧೯೮೦ರಲ್ಲಿ ಪ್ರಕಟಿಸಲಾಯಿತು. ಶ್ರೀ ವಾದಿರಾಜರ ಕೀರ್ತನೆಗಳ ಸಂಪುಟವೂ ೧೯೮೦ರಲ್ಲಿಯೇ ಪ್ರಕಟವಾಯಿತು. ಈಗ ಹರಪನಹಳ್ಳಿ ಭೀಮವ್ವನ ಹಾಡುಗಳ ಸಂಪುಟ ಪ್ರಕಟವಾಗುತ್ತಿದೆ. ಹರಿದಾಸ ಸಾಹಿತ್ಯದ ಕೆಲವೇ ಕೆಲವು ಹಿರಿಯ ವಿದ್ವಾಂಸರಲ್ಲಿ ಒಬ್ಬರಾದ ಡಾ. ಜಿ. ವರದರಾಜರಾಯರ ಮೇಲ್ವಿ ಚಾರಣೆಯಲ್ಲಿ ಇದು ಸಿದ್ಧವಾಗಿದೆ; ಹರಿದಾಸ ಸಾಹಿತ್ಯ ಸಂಶೋಧನೆಯ ಯೋಜನೆ ಯಲ್ಲಿ ಸಂಶೋಧನ ಸಹಾಯಕರಾಗಿರುವ ಡಾ. (ಶ್ರೀಮತಿ) ಟಿ. ಎನ್. ನಾಗರತ್ನ ಅವರು ಇದನ್ನು ಸಂಪಾದಿಸಿ ಭೀಮವ್ವನ ಜೀವನ ಕೃತಿಗಳನ್ನು ಕುರಿತ ಪ್ರಸ್ತಾವನೆ ಯನ್ನು ಬರೆದಿದ್ದಾರೆ. ಹರಪನಹಳ್ಳಿ ಭೀಮವ್ವನ ಮರಿಮಕ್ಕಳಾದ ಕೆ. ವಿಜಯ ರಾಯರಿಂದ ದೊರೆತ ಹಸ್ತಪ್ರತಿಯ ಆಧಾರದಿಂದ ಈ ಸಂಪುಟವನ್ನು ಸಿದ್ಧಪಡಿಸ ಲಾಗಿದೆ. ಶ್ರೀಪಾದರಾಜರ, ಶ್ರೀ ಗೋಪಾಲದಾಸರ ಹಾಗೂ ಶ್ರೀ ವಾದಿರಾಜರ ಕೀರ್ತನೆಗಳ ಸಂಪುಟಗಳು ಎರಡೆರಡು ಆವೃತ್ತಿಗಳಲ್ಲಿ ಪ್ರಕಟವಾಗಿದ್ದವು. ಒಂದು ಪಂಡಿತ ಆವೃತ್ತಿ; ಇನ್ನೊಂದು ಜನಪ್ರಿಯ ಆವೃತ್ತಿ. ಅದು ನಾವು ಒಟ್ಟು ಯೋಜನೆಗೇ ಇಟ್ಟುಕೊಂಡ ಕ್ರಮವಾಗಿದೆ. ಜನಪ್ರಿಯ ಆವೃತ್ತಿಯಲ್ಲಿ ಮೊದಲನೆಯದರ ಪಾಂಡಿತ್ಯ ಪರಿಕರಗಳು ಇರುವುದಿಲ್ಲ. ಸಂಕ್ಷಿಪ್ತ ಪ್ರಸ್ತಾವನೆ ಹಾಗೂ ಕೀರ್ತನೆಗಳ ಪಠ್ಯಭಾಗ ಮಾತ್ರ ಇರುತ್ತವೆ. ಕಡಿಮೆ ಬೆಲೆಯಲ್ಲಿ ಈ ಸಾಹಿತ್ಯದ ಶುದ್ಧ ಆವೃತ್ತಿ ಹೆಚ್ಚು ಜನರ ಕೈಸೇರಬೇಕೆಂಬುದು ಈ ಯೋಜನೆಯ ಒಂದು ಮುಖ್ಯ ಉದ್ದೇಶ. ಆದರೆ ಮಹಿಪತಿರಾಯರ ಕೀರ್ತನೆಗಳ ಸಂಪುಟದಂತೆಯೇ ಹರಪನಹಳ್ಳಿ ಭೀಮವ್ವನ ಹಾಡು ಗಳ ಪ್ರಕಟಣೆಯಲ್ಲೂ ಹೀಗೆ ಎರಡು ಆವೃತ್ತಿಗಳ ಅಗತ್ಯ ಕಾಣಿಸದಿದ್ದುದರಿಂದ ಒಂದೇ ಆವೃತ್ತಿಯನ್ನು ಪ್ರಕಟಿಸಲಾಗಿದೆ.

ಯೋಜನೆ ಅಸ್ತಿತ್ವಕ್ಕೆ ಬಂದಂದಿನಿಂದ ಕನ್ನಡನಾಡಿನ ಉದ್ದಗಲಗಳಲ್ಲಿ ಅನೇಕ ಜನ ನಮಗೆ ಪರಿಚಯವಿರುವವರು ಇಲ್ಲದವರು ನಾನಾ ಬಗೆಯಾದ ನೆರವು ನೀಡಿದ್ದಾರೆ. ಅವರೆಲ್ಲರನ್ನು ಪ್ರತ್ಯೇಕವಾಗಿ ಹೆಸರಿಸುವುದು ಅಸಾಧ್ಯ. ಡಾ. ಜಿ. ವರದರಾಜರಾಯರು

ನಾನಾ ರೀತಿಯಲ್ಲಿ ನನಗೆ ಸಹಾಯಮಾಡಿದ್ದಾರೆ. ಶ್ರೀಮತಿ ಟಿ. ಕೆ. ಇಂದುಬಾಯಿ ಅವರು ಸಂಶೋಧನ ಸಹಾಯಕರಾಗಿ ಕೆಲಸಮಾಡುತ್ತಿದ್ದಾರೆ. ಡಾ. ಕೆ. ಜಿ. ನಾರಾಯಣ ಪ್ರಸಾದ್ ಮತ್ತು ಕುಮಾರಿ ಅಕ್ಕಮಹಾದೇವಿ ಅವರು ಈ ಯೋಜನೆಯಲ್ಲಿ ಕೆಲವು ಕಾಲ ಕೆಲಸಮಾಡುತ್ತಿದ್ದರು. ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದವರು ಯೋಜನೆಯನ್ನು ಒಪ್ಪಿ ಧನಸಹಾಯ ಮಾಡುತ್ತಾ ಬಂದಿದ್ದಾರೆ. ವಿಶ್ವವಿದ್ಯಾನಿಲಯದ ಕುಲಪತಿಗಳಾದ ಶ್ರೀ ಕೆ. ಎಸ್. ಹೆಗಡೆ ಹಾಗೂ ಇತರ ಅಧಿಕಾರ ವರ್ಗದವರು ಈ ಯೋಜನೆಯ ಬಗೆಗೆ ಆಸಕ್ತಿತೋರಿ ನೆರವು ನೀಡಿದ್ದಾರೆ. ಶ್ರೀ ಪ್ರಧಾನ್ ಗುರುದತ್ತ ಪ್ರಕಟಣೆಯ ಮೇಲ್ವಿಚಾರಣೆ ನೋಡಿಕೊಂಡಿದ್ದಾರೆ. ವಿಶ್ವವಿದ್ಯಾನಿಲಯ ಮುದ್ರಣಾಲಯದ ನಿರ್ದೇಶಕರು ಮತ್ತು ಅವರ ಸಿಬ್ಬಂದಿಯವರು ತಾಳ್ಮೆವಹಿಸಿ ಮುದ್ರಣಕೆಲಸ ಮುಗಿಸಿಕೊಟ್ಟಿದ್ದಾರೆ. ಇವರೆಲ್ಲರನ್ನೂ ನಾನು ಹೃತ್ಪೂರ್ವಕವಾಗಿ ವಂದಿಸುತ್ತೇನೆ.

ಡಾ. (ಶ್ರೀಮತಿ) ಟಿ. ಎನ್. ನಾಗರತ್ನ ಅವರು ಹೆಚ್ಚು ಕಡಿಮೆ ಯೋಜನೆಯ ಆರಂಭ ಕಾಲದಿಂದಲೇ ಈ ಕೆಲಸವನ್ನು ನಿರ್ವಹಿಸುತ್ತ ಬಂದಿದ್ದಾರೆ. ಈಚಿನ ವರ್ಷಗಳಲ್ಲಿ ಅವರೇ ಯೋಜನೆಯ ಉಸ್ತುವಾರಿ ನೋಡಿಕೊಂಡಿದ್ದಾರೆ. ಈ ಹೊಣೆಯನ್ನು ನಿರ್ವಹಿಸುವಲ್ಲಿ ಅವರು ತೋರಿರುವ ಶ್ರದ್ಧೆ ನಿಷ್ಠೆ ಆಸಕ್ತಿಗಳನ್ನು ನಾನು ವಿಶೇಷವಾಗಿ ಉಲ್ಲೇಖಿಸಬೇಕು. ಹರಿದಾಸ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಅಧ್ಯಯನ ಮಾಡಿರುವ ಅವರ ಸೇವೆ ಯೋಜನೆಗೆ ದೊರೆತಿರುವುದು ನನಗೆ ಸಂತೋಷವನ್ನುಂಟು ಮಾಡಿದೆ. ಅವರ ಸಹಕಾರವನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಹರಿದಾಸ ಸಾಹಿತ್ಯದ ಶಾಸ್ತ್ರೀಯ ಆವೃತ್ತಿಯ ಯೋಜನೆಯನ್ನು ಇನ್ನೂ ಉತ್ತಮಪಡಿಸಲು, ಹೆಚ್ಚು ಹೆಚ್ಚು ಉಪಯುಕ್ತಗೊಳಿಸಲು ಬರುವ ಎಲ್ಲ ಸಲಹೆ ಸೂಚನೆಗಳನ್ನು ಕೃತಜ್ಞತೆಯಿಂದ ಸ್ವಾಗತಿಸಲಾಗುವುದು.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಅಕ್ಟೋಬರ್ ೨೦, ೧೯೮೪

**ಹಾ. ಮಾ. ನಾಯಕ**
ಪ್ರಧಾನ ಸಂಪಾದಕ

# ಪರಿವಿಡಿ



ಚಿತ್ರ : ಹರಪನಹಳ್ಳಿ ಭೀಮವ್ವ

# ಮುಖ್ಯ ಸಂಕೇತಗಳ ವಿವರ

| ಸಂಕೇತಗಳು | ಮೂಲ. |
| --- | --- |
| ಅ. | ಅಧ್ಯಾಯ |
| ಉ. | ಉಗಾಭೋಗ |
| ಕಭವಿ. | ಶ್ರೀ ಕರ್ಣಾಟಕ ಭಕ್ತ ವಿಜಯ |
| ಧ್ವ. | ಧ್ವನಿ |
| ನಚ. | ನಳಚರಿತ್ರೆ |
| ಪ. | ಪಲ್ಲವಿ |
| ಪಹಾ. | ಪತಿದಾನ ಕೊಟ್ಟ ಹಾಡು |
| ಪ್ರ. | ಪ್ರಕಾಶಕರು |
| ಪು. | ಪುಟ |
| ಪುನಾಚೂ. | ಪುರಾಣ ನಾಮ ಚೂಡಾಮಣಿ |
| ಪುಭಾಕೋ. | ಪುರಾಣ ಭಾರತ ಕೋಶ |
| ಭಾ. | ಭಾಗವತ |
| ಭಾಶ್ರೀಗು. | ಭಾವಿಸಮೀರ ಶ್ರೀ ವಾದಿರಾಜ ಗುರುಸಾರ್ವಭೌಮರು |
| ರಕ. | ರತಿ ಕಲ್ಯಾಣ |
| ಲೇ. | ಲೇಖಕರು |
| ಶಹಾ. | ಶಕುಂತಲ ದುಷ್ಯಂತಮಹಾರಾಜನ ಹಾಡು |
| ಶ್ರೀನಿ. | ಶ್ರೀವತ್ಸ ನಿಘಂಟು |
| ಸ್ಕಂ. | ಸ್ಕಂಧ |
| ಸು. | ಸುಳಾದಿ |
| ಸುಕ. | ಸುಭದ್ರಾಕಲ್ಯಾಣ |
| ಸಂ. | ಸಂಪಾದಕರು |
| ಹಭೀ. | ಹೆರಪನಹಳ್ಳಿ ಭೀಮವ್ವನ ಹಾಡುಗಳ ಮೂಲ ಹಸ್ತಪ್ರತಿ |
| ಹಾ. | ಹಾಡು |

# ಪೀಠಿಕೆ

## ಭೀಮವ್ವನ ಜೀವನ ವಿಚಾರ

ಸು. ೫೦೦ ವರ್ಷಗಳ ಇತಿಹಾಸವಿರುವ ಹರಿದಾಸಸಾಹಿತ್ಯ ಪರಂಪರೆಯಲ್ಲಿ ಸ್ತ್ರೀಯರ ಹೆಸರು ವಿರಳ. ೧೭೫೦ರ ಸುಮಾರಿಗೆ ಇದ್ದ ಹೆಳವನಕಟ್ಟೆ ಗಿರಿಯಮ್ಮನ ಅನಂತರ ಹರಪನಹಳ್ಳಿಯ ಭೀಮವ್ವನನ್ನು ಹೆಸರಿಸಬಹುದು. ಈಕೆ ಹುಟ್ಟಿದ್ದು ಸ್ವಭಾನು ಸಂವತ್ಸರದ ಜ್ಯೇಷ್ಠ ಬಹುಳ ೧೩ರಂದು; (ಕ್ರಿ.ಶ. ೧೮೨೩, ಜುಲೈ ೬, ಭಾನುವಾರ) ಬಳ್ಳಾರಿ ಜಿಲ್ಲೆಗೆ ಸೇರಿದ ಹೊಸಪೇಟೆ ತಾಲ್ಲೂಕಿನ 'ನಾರಾಯಣದೇವರಕೆರೆ' ಎನ್ನುವ ಹಳ್ಳಿಯಲ್ಲಿ. (ಈಗ ಆ ಹಳ್ಳಿ ಹೊಸಪೇಟೆಯ ತುಂಗಭದ್ರಾ ಅಣೆಕಟ್ಟಿನ ನೀರಿನಲ್ಲಿ ಮುಳುಗಡೆಯಾಗಿದೆ.) ತಂದೆ ರಘುನಾಥಾಚಾರ್ಯ; ತಾಯಿ ರಾಘವಮ್ಮ. ಕೌಂಡಿನ್ಯ ಗೋತ್ರದ ಯಜುರ್ವೇದಿಗಳು; ರಾಘವೇಂದ್ರಸ್ವಾಮಿಗಳ ಮಠದ ಅನುಯಾಯಿಗಳು. ಅವರ ಚೊಚ್ಚಲು ಮಗಳಾದ ಈಕೆಯ ಹುಟ್ಟುಹೆಸರು ಕಮಲಾಕ್ಷಿ. ಕ್ರಮೇಣ ಅವಳ ಹೆಸರು ಭೀಮಾಬಾಯಿಯೆಂದಾಯಿತು. ಮುಂದೆ ಭೀಮವ್ವ ಎಂದು ಪ್ರಸಿದ್ಧಳಾದಳು. ಹುಟ್ಟಿದ ಮಗುವಿಗೆ ಕೆಲವು ದಿನಗಳವರೆಗೂ ಮೈತುಂಬ ಚಕ್ರಗಳೂ, ಕಾಲುಗಳೆರಡರಲ್ಲಿ ಪದ್ಮಗಳೂ ಕಾಣುತ್ತಿದ್ದುವಂತೆ.

ಚಿಕ್ಕಮಗು ಭೀಮವ್ವನಿಗೆ ಹರಿದಾಸರ ಪದಗಳನ್ನು ಕೇಳುವತ್ತ ಒಲವು. ಅವಳ ತಾತ (ತಾಯಿಯ ತಂದೆ) ಶ್ರೀ ಜೋಯಿಸ ವೆಂಕಪ್ಪಾಚಾರ್ಯರು ಹರಿದಾಸರಾಗಿದ್ದು, ಸದಾ ಹರಿನಾಮಸ್ಮರಣೆಯಲ್ಲಿ ನಿರತರಾಗಿರುತ್ತಿದ್ದುದರಿಂದ ಚಿಕ್ಕಂದಿನಿಂದಲೇ ಆಕೆಗೆ ಹರಿಮಯವಾದ ವಾತಾವರಣ ಲಭ್ಯವಾಗಿತ್ತು. ಆಕೆಯ ಒಂದು ವೈಶಿಷ್ಟ್ಯವೆಂದರೆ ತಾನು ಕೇವಲ ಒಂದು ವರ್ಷದವಳಾಗಿದ್ದಾಗಿನಿಂದ ನಡೆದ ಘಟನೆಗಳ ನೆನಪು ಜೀವಿತದ ಕೊನೆಯವರೆಗೂ ಆಕೆಯಲ್ಲಿ ಹಚ್ಚಹಸುರಾಗಿದ್ದುದು—ಒಮ್ಮೆ ತೊಟ್ಟಿಲಿನಲ್ಲಿ ಮಲಗಿದ್ದಾಗ ಜಂತೆಯಿಂದ ಇಳಿದುಬಂದ ಕೃಷ್ಣಸರ್ಪವೊಂದು ತನ್ನ ಮೇಲೆ ಮಲಗಿದ್ದಾಗ ಮನೆಯವರು ಗಡಿಬಿಡಿಯಿಂದ ತನ್ನನ್ನು ಹೊರಕ್ಕೆ ಎತ್ತಿಕೊಂಡು ಬಂದದ್ದು; ತಾನು ಒಂದು ಅತ್ತಿಯ ಹಣ್ಣನ್ನು ಭರಣಿಯೊಂದರಲ್ಲಿ ಹಾಕಿ ಮನೆಯ ಎತ್ತರದ ಮಾಡದಲ್ಲಿ ಇರಿಸಿದ್ದು, ಆರು ತಿಂಗಳ ಅನಂತರ ಅದನ್ನು ತಾನೇ ಕೇಳಿ ತೆಗೆಸಿಕೊಂಡದ್ದು—ಇತ್ಯಾದಿ.

ಭೀಮವ್ವನಿಗಿದ್ದ ಇಂತಹ ಅತೀತ ಪ್ರಜ್ಞೆಯ ಬಗ್ಗೆ ಒಂದು ಘಟನೆಯನ್ನು ಹೇಳುವುದುಂಟು. ಆಕೆಯ ಎರಡನೆಯ ವರ್ಷದ ಹುಟ್ಟುಹಬ್ಬಕ್ಕೆ ಒಂದು ಬಂಗಾರದ ಸಾಂಪಳಿಸರವನ್ನು ಮಾಡಿಸಿದ್ದರಂತೆ. ಅದರಿಂದ ಅಲಂಕೃತಳಾಗಿ ಮಲಗಿದ್ದ

ಮಗು ರಾತ್ರಿ ಇದ್ದಕ್ಕಿದ್ದಂತೆಯೇ 'ಚೇಳು ಬಂದವೆ ಚೇಳು' ಎಂದು ಕೂಗಲಾರಂಭಿಸಲು, ಎಲ್ಲರೂ ದಿಗ್ಗನೆದ್ದು ದೀಪಹಚ್ಚಿ ಎಲ್ಲಕಡೆಯೂ ಹುಡುಕಿದರು. ಚೇಳು ಕಾಣಿಸಲಿಲ್ಲ. ಆಗ ಮಗುವನ್ನೇ ಕೇಳಲು, ಅದು 'ನನ್ನ ಮುಂದಲಿಹೂವಿನ ಕೆಳಗೆ ಅವೆ' ಎನ್ನಲು ಎಚ್ಚರಿಕೆಯಿಂದ ಮುಂದಲಿ ಹೂವನ್ನು ತೆಗೆದರೆ ಚೇಳು ಆ ಹೂವಿನ ತಗ್ಗಿನಲ್ಲಿ ಕುಳಿತಿದ್ದಿತಂತೆ!

ಆಕೆ ನಾಲ್ಕುವರ್ಷದವಳಿದ್ದಾಗ ಹರಪನಹಳ್ಳಿಗೆ ಒಮ್ಮೆ ದಂಡು ಬಂದಿತ್ತು. ಆ ಪೈಕಿ ಒಬ್ಬ ಸಿಪಾಯಿ ಮಗು ಭೀಮವ್ವನ ಮೈಮೇಲಿದ್ದ ಆಭರಣಗಳ ಆಸೆಗೆ ಮಗುವನ್ನೇ ಅಪಹರಿಸಿಕೊಂಡು ಹೊರಟ. ಸ್ವಲ್ಪದೂರ ಹೋಗುತ್ತಲೆ ಅವನ ಕಣ್ಣುಗಳೆರಡೂ ಕುರುಡಾದುವಂತೆ; ಇತರರ ಸಹಾಯದಿಂದ ಅವನು ಆ ಮಗುವಿನ ಮನೆಯನ್ನು ಪತ್ತೆಹಚ್ಚಿ, ಮಗುವಿಗೆ ತಿಂಡಿಕೊಡಿಸಿ, ತಂದು ಮನೆಯಲ್ಲಿ ಬಿಟ್ಟು, ಅವರ ಕೈಯಲ್ಲಿ ಎರಡು ರೂಪಾಯಿಗಳನ್ನಿಟ್ಟು ಹೊರಡಲು ಪುನಃ ಅವನಿಗೆ ದೃಷ್ಟಿಬಂದಿತಂತೆ

ಭೀಮವ್ವನಿಗೆ ಆರುವರ್ಷ ವಯಸ್ಸಾಗಿದ್ದಾಗ ಒಮ್ಮೆ ಅವಳು ತಾತ ನಿಂಕಪ್ಪಾಚಾರ್ಯರೊಂದಿಗೆ ಕುಳಿತಿರಲು ಇದ್ದಕ್ಕಿದ್ದಂತೆಯೇ ಒಂದು ಬೆಳಕು ಕಂಡಿತಂತೆ. ತಾತ 'ಶ್ರೀ ವೇದವ್ಯಾಸರು ಬಂದಿದ್ದಾರೆ ನೋಡು' ಎಂದರು. ಆದರೆ ಆಕೆಗೆ ಯಾರೂ ಕಾಣಲಿಲ್ಲ. ಬೆಳಕು ಮಾತ್ರ ಆಕೆಯ ಮೈಮೇಲೆ ಬಿತ್ತು. ಅದೇ ಆಕೆಯ ಭಕ್ತಿಜೀವನಕ್ಕೆ ನಾಂದಿಯಾಯಿತು. ಆಟಪಾಟಗಳತ್ತ ಆಸಕ್ತಿ ಕಡಿಮೆಯಾಗಿ ಹರಿಭಜನೆ ಮಾಡುವುದು, ಭಕ್ತಿಗೀತೆಗಳನ್ನು ಗ್ರಹಿಸಿ ಹಾಡುವುದು ಪ್ರಾರಂಭವಾಯಿತು. ಆಕೆಗೆ ಹನ್ನೊಂದು ವರ್ಷಗಳಾಗುವವರೆಗೂ ಯಾರಾದರೂ ಕೃಷ್ಣನು ಸತ್ಯಭಾಮೆಯನ್ನು ಬಿಟ್ಟುಹೋದಂತಹ ಪ್ರಸಂಗವನ್ನು ಹಾಡಿದರೆ, ಭೀಮವ್ವ ಸಂಕಟಪಟ್ಟು ಜೋರಾಗಿ ಅತ್ತುಬಿಡುತ್ತಿದ್ದಳಂತೆ.

—ಹೀಗೆ ಭೀಮವ್ವನ ಬಂಧುಗಳಲ್ಲಿ ಆಕೆಯ ಬಾಲ್ಯಜೀವನದ ಬಗ್ಗೆ ಅನೇಕ ಸಂಗತಿಗಳು ಕರ್ಣಾಕರ್ಣಿಕೆಯಾಗಿ ಉಳಿದುಬಂದಿವೆ. ವಿದ್ಯಾಭ್ಯಾಸದ ದೃಷ್ಟಿಯಿಂದ ಹೇಳುವುದಾದರೆ ಆಕೆ ಓದುವುದಕ್ಕೂ ಬರೆಯುವುದಕ್ಕೂ ಬಾರದ ನಿರಕ್ಷರಕುಕ್ಷಿ. ಮನೆಯಲ್ಲಿದ್ದ ಭಕ್ತಿಯ ಒಂದು ಪರಿಸರ, ಪುರಾಣಕತೆಗಳ ಶ್ರವಣ, ಅವರಿವರಿಂದ ಕೇಳಿದ ಸಂಪ್ರದಾಯದ ಹಾಡುಗಳು, ಭಜನೆಗಳೇ ಆಕೆಯ ಭಕ್ತಿಗೆ ಸ್ಫೂರ್ತಿ.

ಭೀಮವ್ವನಿಗೆ ಹನ್ನೊಂದು ವರ್ಷಗಳಾದಾಗ ಅವಳನ್ನು ರಾಯದುರ್ಗ ತಾಲ್ಲೂಕಿನ ಹರೀಸಮುದ್ರ ಗ್ರಾಮದ ಕುಲಕರ್ಣಿಗಳ ವಂಶದ ಗೋಪಾಲಪ್ಪನವರ ಮಗನಾದ ಮುನಿಯಪ್ಪನವರಿಗೆ ಕೊಟ್ಟು ಮದುವೆಯಾಯಿತು. ಒಬ್ಬರ ತರುವಾಯ ಮತ್ತೊಬ್ಬರಂತೆ ಮೂರು ವಿವಾಹವಾಗಿದ್ದ ೪೫ ವರ್ಷದ ಮುನಿಯಪ್ಪನವರು ೧೧ ವರ್ಷದ ಭೀಮವ್ವನನ್ನು ಹೆಂಡತಿಯಾಗಿ ಮನೆತುಂಬಿಸಿಕೊಂಡರು. ಸಂಪ್ರದಾಯದಂತೆ ಅತ್ತೆಮನೆಯಲ್ಲಿ ಇವಳ ಹೆಸರನ್ನು—ಕೃಷ್ಣಾಬಾಯಿಯೆಂದು—ಬದಲಾಯಿಸಿದರು. ಅಷ್ಟ

ನಿಗೆ ಮದುವೆಯಾದ ಮೂರು ವರ್ಷಗಳಿಗೆ ಅವಳ ತಾಯಿ ತೀರಿಕೊಂಡಳು; ಹದಿನಾಲ್ಕು ವರ್ಷಗಳಾದ ಮೇಲೆ ಹಾಜೂರು ಸೋಮರಾಯ ಎಂಬ ಮಗನೂ, ಅನಂತರ ನಾಲ್ಕು ವರ್ಷಗಳ ಬಳಿಕ ಸುಬ್ಬಾಬಾಯಿಯೆಂಬ ಮಗಳೂ ಹುಟ್ಟಿದರು. ಅಲ್ಲಿಂದ ಅವರ ಕಷ್ಟಪರಂಪರೆಗಳು ಆರಂಭವಾದುವು. ಮನೆಯಲ್ಲಿ ಕಳ್ಳತನವಾಗಿ, ಇದ್ದ ಬದ್ದದ್ದನ್ನೆಲ್ಲ ಕಳ್ಳರು ದೋಚಿಕೊಂಡು ಹೋದರು. ಬಡತನದ ಬಾಳು ಪ್ರಾರಂಭವಾಯಿತು. ಈ ಕಳ್ಳತನವಾದ ಒಂದು ವರ್ಷದ ಬಳಿಕ ಮುನಿಯಪ್ಪನವರು ಸ್ವರ್ಗಸ್ಥರಾದರು. ಕೇವಲ ೩೬ ವರ್ಷ ವಯಸ್ಸಿಗೇ ಅವ್ವನಿಗೆ ವಿಧವೆಯಪಟ್ಟ ಸ್ಥಿರವಾಯಿತು. ಮಕ್ಕಳ ಪೋಷಣೆ, ದೇವಬ್ರಾಹ್ಮಣರ ಸೇವೆಗಳೇ ಆಕೆಯ ಜೀವನವಾಯಿತು.

ಇಲ್ಲಿಯವರೆಗೂ ಒಂದುರೀತಿಯಲ್ಲಿ ಸಾಗುತ್ತಾಬಂದ ಭೀಮವ್ವನ ಜೀವನದ ಮಾರ್ಗ ಇಲ್ಲಿಂದಾಚೆಗೆ ಹೊಸ ತಿರುವನ್ನು ಪಡೆಯಿತು. ನಮ್ಮ ಇತರ ಕವಯಿತ್ರಿಯರಂತೆಯೇ, ಚಿಕ್ಕವಯಸ್ಸಿನಲ್ಲೇ ಒದಗಿದ ವೈಧವ್ಯ ಆಕೆಯ ಭಕ್ತಿಸಾಧನೆಗೆ ಒತ್ತಾಸೆಯಾಯಿತು. ನಾರದರ ಆಜ್ಞೆಯಂತೆ ಕೃಷ್ಣಸರ್ಪವೊಂದು ತನ್ನ ನಾಲಿಗೆಯಿಂದ ಆಕೆಯ ನಾಲಿಗೆಯ ಮೇಲೆ ಮೂರು ಅಕ್ಷರಗಳನ್ನು ಬರೆದಂತೆ ಸ್ವಪ್ನವನ್ನು ಕಂಡ ಆಕೆಯ ಮನೋವ್ಯಾಪಾರವೇ ಬದಲಾಯಿತು. ಅವಳ ಆ ಸ್ವಪ್ನಾನುಭವವೇ ಆಕೆಗೆ ಹಾಡುಗಳು ಬರುವುದಕ್ಕೆ ನಾಂದಿಯಾಯಿತು. ಹಾಗೆ ಬಂದ ಮೊದಲಹಾಡು 'ರಕ್ಷಿಸಬೇಕೆನ್ನ ಲಕ್ಷ್ಮೀನರಸಿಂಹನ ಭಕ್ತನೆ'–ಎಂಬುದು ಎಂದು ಅವಳ ಮನೆತನದಲ್ಲಿರುವ, ಆಕೆಯ ಜೀವನಚರಿತ್ರೆ ಹಾಗೂ ಹಾಡುಗಳನ್ನುಳ್ಳ ಕೈಬರೆಹದ ಪ್ರತಿಯಲ್ಲಿ (ಹಭೀ.) ದಾಖಲಾಗಿದೆ. ಮೊದ ಮೊದಲು ತನಗೆ ಬಂದ ಹಾಡುಗಳನ್ನು ಹೇಳಲು ಆಕೆ ನಾಚಿ ಹಿಂಜರಿದಾಗ ತಲೆನೋವು, ಹೊಟ್ಟೆನೋವುಗಳನ್ನು ಅನುಭವಿಸಬೇಕಾಯಿತ್ತಂತೆ. ಅದೇ ವೇಳೆಗೆ ಆ ಊರಿನಲ್ಲಿ ವೆಂಕಟರಾಯ ಎನ್ನುವವನೊಬ್ಬನು ಶ್ರಮಪಟ್ಟು ಕವನಕಟ್ಟಿ, ಬರೆಯುತ್ತಿದ್ದನಂತೆ. ಅವನಿಗೆ ಕ್ರಮೇಣ ಹುಚ್ಚುಹಿಡಿದು, ಅವನನ್ನು ಕಂಬಕ್ಕೆ ಕಟ್ಟಿಹಾಕಿದ್ದನ್ನು ಅವ್ವನ ಮುತ್ತಜ್ಜ ಗಿರಿಯಪ್ಪ ಮತ್ತು ಮೈದುನ ಇಬ್ಬರೂ ನೋಡಿ, 'ಇನ್ನು ನೀನು ಹಾಡುಗೀಡು ಮಾಡಬ್ಯಾಡ. ಚಿಕ್ಕ ಹೆಣ್ಣು ಮಗಳು. ಮುಟ್ಟುಮುಡಿ ಆಗೀ. ಹುಚ್ಚುಹಿಡಿದು ಬಟ್ಟೆಬಿಟ್ಟು ತಿರುಗಿದರೆ ನಮ್ಮ ಮನೆತನದ ಗೌರವ ಕೆಟ್ಟೀತು' ಎಂದು ಅವ್ವನಿಗೆ ತಾಕೀತು ಮಾಡಿದನಂತೆ. ಕೊನೆಗೆ ಭೀಮವ್ವನ ಒದ್ದಾಟವನ್ನು ನೋಡಲಾಗದೆ, 'ದೇವರನ್ನು ಬೇಡಿಕೊಂಡು ಮಲಗಿಕೋ; ಸ್ವಪ್ನಫಲದಂತೆ ನಡೆದುಕೋ' ಎಂದು ಅವರು ಹೇಳಲು, 'ಹಾಡು ಮಾಡಿದರೆ ದೋಷವಿಲ್ಲ' ಎಂಬ ಸ್ವಪ್ನಫಲದ ಮೇರೆಗೆ ಆಕೆಗೆ ಹಾಡುಮಾಡಲು ರಹದಾರಿ ದೊರಕಿತೆಂದು ತಿಳಿದುಬರುತ್ತದೆ. ತನ್ನ ಹಾಡುಗಳಿಗೆ ಮುದ್ರಿಕೆ ಅಥವಾ ಅಂಕಿತವಿಲ್ಲವಲ್ಲಾ ಎಂದು ಆಕೆ ಕೊರಗುತ್ತಿರಲು, ಆಕೆಗೆ ನಾರದರಿಂದ ಸ್ವಪ್ನದಲ್ಲಿ 'ಭೀಮೇಶಕೃಷ್ಣ' ಎಂಬ ಅಂಕಿತ ಸೂಚಿತವಾಯಿತು. 'ಮಾತೆಯಬಸಿರೊಳ್ ಜನಿಸಿದೆ ನಾನು' ಎಂಬ ಹಾಡು (ಹಾ. ೧೧೧) ನಾರದರಿಂದ ಅವ್ವನಿಗೆ ಅಂಕಿತ

ಸೂಚಿತವಾದ ಹಾಡು ಎಂಬ ಮಾತಿದೆ. ಅವಳ ತಾಯಿಯ ಮನೆಯ ಹೆಸರಾದ ಭೀಮಾಬಾಯಿ, ಗಂಡನ ಮನೆಯ ಹೆಸರಾದ ಕೃಷ್ಣಾಬಾಯಿ– ಇವೆರಡೂ ಸೇರಿದಂತೆ 'ಭೀಮೇಶಕೃಷ್ಣ' ಎಂಬ ಅಂಕಿತ ಮೂಡಿತೆಂತಾಯಿತು. ಈ ಅಂಕಿತದಲ್ಲಿ ಭೀಮವ್ವ ನೂರಾರು ಹಾಡುಗಳನ್ನು ಹಾಡಿದ್ದಾಳೆ. ಅವಳ ಜೀವನಚರಿತ್ರೆಯನ್ನೋದಿದಾಗ ಪುರಾಣ ಪುಣ್ಯಕತೆಗಳ ಒಂದೊಂದು ಪ್ರಸಂಗವನ್ನೂ ಆಕೆ ಮೊದಲು ಕನಸಿನಲ್ಲಿ ಕಂಡು, ಮಾರನೆಯ ಬೆಳಗ್ಗೆ ಅದೇ ಪ್ರಸಂಗವನ್ನೇ ಹಾಡಿನ ರೂಪದಲ್ಲಿ ಹಾಡಿದಳೆಂದು ತಿಳಿದು ಬರುತ್ತದೆ. ಅಂದರೆ, ಸ್ವಪ್ನದಲ್ಲಿ ಆಕೆ ಏನನ್ನು ಕಾಣುತ್ತಾಳೋ ಅದು ಹಾಡಿನ ರೂಪದಲ್ಲಿ ಹೊರಬರುತ್ತಿತ್ತು. ಇದು ಆಕೆಯ ವೈಶಿಷ್ಟ್ಯ. ಗೋಪಿಕಾ ಸ್ತ್ರೀಯರು ಉದ್ಧವನ ಮುಂದೆ ಪ್ರಲಾಪಿಸಿದಂತೆ ಕನಸು ಕಂಡು, ೩೧ ನುಡಿಗಳಿರುವ "ನಂದ ಪುತ್ರನ ಆಜ್ಞೆಯಿಂದಲುದ್ಧವ" ಎಂಬ ಹಾಡನ್ನೂ; ನಾರದರು ಬಂದು 'ಕೃಷ್ಣ ತನ್ನ ಅಷ್ಟಮಹಿಷಿಯರೊಂದಿಗಿದ್ದುದನ್ನು ಕಂಡೆ' ಎಂದು ಹೇಳಿದಾಗ "ಪಕ್ಷಿ ವಾಹನ ಸತ್ಯಭಾಮೆ ಸದನ ದ್ವಾರದಿ" ಎಂಬ ಹಾಡನ್ನೂ ಹಾಡಿದಳೆಂದು ಹೇಳಲಾಗಿದೆ. ಅವ್ವನ ಜೀವನ ಚರಿತ್ರೆಯ ಉದ್ದಕ್ಕೂ ಇಂತಹ ದೈವಿಕಾನುಭವದ ಅನೇಕ ಪ್ರಸಂಗಗಳ ಪ್ರಸ್ತಾಪವಿದೆ.

ಹೀಗೆಯೇ ಕನಸು ಕಂಡು 'ಮುಯ್ಯದಹಾಡು', 'ಸುಭದ್ರಾ ಕಲ್ಯಾಣ', 'ರತಿ ಕಲ್ಯಾಣ', 'ನಳಚರಿತ್ರೆ', 'ಪತಿದಾನಕೊಟ್ಟ ಹಾಡು', 'ಶಕುಂತಲ ದುಷ್ಯಂತ ಮಹಾರಾಜನ ಹಾಡು' ಇವೇ ಆದಿ ದೊಡ್ಡ ಹಾಡುಗಳೊಂದಿಗೆ ಭೀಮವ್ವ ಅನೇಕ ಸಣ್ಣ ಹಾಡುಗಳನ್ನೂ ಮಾಡಿದ್ದಾಳೆ. ಅವುಗಳಲ್ಲಿ 'ಮುಯ್ಯದ ಹಾಡು' ಎಲ್ಲಕ್ಕಿಂತ ದೊಡ್ಡದು.

ಭೀಮವ್ವ ತನ್ನ ಜೀವಿತದ ಕೊನೆಯುವರೆಗೂ ಹಾಡುಗಳನ್ನು ಕಟ್ಟಿ ಹಾಡುತ್ತಲೇ ಇದ್ದಳೆಂದು ತಿಳಿದುಬರುತ್ತದೆ. ಸಾಯುವುದಕ್ಕೆ ಮೂರು ದಿನಗಳ ಮೊದಲು "ನಾಡೋಣೇ ಮುತ್ತೈದೇರು ಜೋಡು ಜ್ಯೋತಿ ಆರತಿ" ಎಂಬ ಆರತಿ ಹಾಡನ್ನು ಹಾಡಿ ಶ್ರೀಹರಿಗೆ ಅರ್ಪಣೆ ಮಾಡಿರುವಳು.* ಮೂರು ದಿನಗಳ ಅನಂತರ, ಅಂದರೆ ಶುಭಕೃತ್ ನಾಮಸಂವತ್ಸರ ಪುಷ್ಯ ಶುದ್ಧ ೧೨, ಆದಿತ್ಯವಾರ ಮುಕ್ಕೋಟಿ ದ್ವಾದಶಿಯು** ಮಧ್ಯಾಹ್ನ ೨ ಗಂಟೆಯ ವೇಳೆಗೆ ಭೀಮವ್ವ ಹರಿಪಾದವನ್ನು ಸೇರಿದಳು. ಆಕೆಯ ಉತ್ತರಕ್ರಿಯಾದಿಗಳು ೧೯೦೩ನೆಯ ಇಸವಿ ಜನವರಿ ಹನ್ನೊಂದನೆಯ ತಾರೀಕು ಜಮದಗ್ನಿಕ್ಷೇತ್ರದ ತುಂಗಭದ್ರಾ ತೀರದಲ್ಲಿರುವ ಹೊಸೂರು ಗ್ರಾಮದಲ್ಲಿ, ವಕೀಲ ಹೊಸೂರು ಕೃಷ್ಣಾಚಾರ್ಯರ ಮನೆಯಲ್ಲಿ ಜರುಗಿದುವೆಂದು ತಿಳಿದುಬರುತ್ತದೆ. ನನಗೆ ತಿಳಿದಿರುವಂತೆ ಆಕೆಯ ವಂಶವೃಕ್ಷವನ್ನು ಈ ರೀತಿ ಸೂಚಿಸಬಹುದು:

---

* ಶಹಾ. ಪೃ. ೬೧

** [illegible]




## ಕೃತಿಗಳು (ಸಣ್ಣ ಹಾಡುಗಳು)

ಹರಿದಾಸ ಪರಂಪರೆಯ ಹಿನ್ನೆಲೆಯಲ್ಲಿ ಭೀಮವ್ವನ ಹಾಡುಗಳನ್ನು ನೋಡಿದಾಗ ಹರಿದಾಸರ ಸಂಪ್ರದಾಯದಂತೆ ಕೀರ್ತನೆ, ಸುಳಾದಿ, ಉಗಾಭೋಗ-ಈ ಮೂರು ಪ್ರಕಾರಗಳನ್ನೂ ಕಾಣುತ್ತೇವೆ. ಸಂಖ್ಯೆಯಲ್ಲಿ ಕೀರ್ತನೆಗಳನ್ನು ಹೋಲುವ ಹಾಡುಗಳ ರಚನೆಯೇ ಹೆಚ್ಚು. ಒಂದೇ ಒಂದು ಉಗಾಭೋಗ (ಹಾ. ೭೦), ಎರಡು ಸುಳಾದಿಗಳು (ಹಾ. ೧೩, ಹಾ. ೧೨೩) ದೊರೆತಿವೆ. ಕ್ರಮವಾಗಿ ಹರಿಯ ದಶಾವತಾರ ಸ್ತುತಿ, ಹರಿಯ ಸಂದರ್ಶನ ಸುಖವನ್ನು ಬೇಡುವುದು, ನಿಂದಾಸ್ತುತಿಯಿಂದ ಹರಿಯನ್ನೆಚ್ಚರಿಸುವುದು—ಇವೇ ಅವುಗಳ ವಸ್ತು. ಸುಳಾದಿಯ ನುಡಿಗಳ ನಡುವಿನ 'ವಚನ' ಎಂಬ ನಿರ್ದೇಶನ ಹೊಸತು. (ಪೃ. ೨೬)

ಮೇಲಿನ ಮೂರನ್ನು ಬಿಟ್ಟರೆ, ಒಟ್ಟು ೧೪೦ ಸಣ್ಣ ಹಾಡುಗಳಿವೆ. ಅವುಗಳಲ್ಲಿ ಎರಡು ಮಂತ್ರಗಳು. (ಹಾ. ೮೯ ಮತ್ತು ಹಾ. ೧೨೪) ಇವು ಪಲ್ಲವಿ, ನುಡಿಗಳ ಅಡೆತಡೆಯಿಲ್ಲದೆ ಲಯಬದ್ಧವಾಗಿ ಸಾಗುವ ರಚನೆಗಳು. ಮಂತ್ರಗಳನ್ನು ನುಡಿಗಳಲ್ಲಿ ಗುರುತಿಸುವ ಸಾಧ್ಯತೆಯೂ ಇದೆ. (ಉದಾ. ಹಾ. ೧೨೫). ಉಳಿದ ೧೩೮ ಹಾಡುಗಳಲ್ಲಿ ಪಲ್ಲವಿಯೂ ಇಲ್ಲದ, ಕೇವಲ ಎರಡೇ ಸಾಲುಗಳ ಮೂರೇ ಮೂರು ನುಡಿಗಳುಳ್ಳ ಅತ್ಯಂತ ಸಣ್ಣ ಹಾಡಿನಿಂದ ಹಿಡಿದು (ಹಾ. ೪೪). ೧೫ ನುಡಿಗಳಷ್ಟು ದೀರ್ಘ

ಹಾಡಿನವರೆಗೂ (ಹಾ. ೧೩೦, ಸುದಾಮಚರಿತ್ರೆ) ಅವುಗಳ ಹರಹು ಇದೆ. ಅವ್ವನ ಹಾಡುಗಳಲ್ಲಿ ಉಳಿದ ಹರಿದಾಸರ ರಚನೆಗಳಲ್ಲಿರುವಂತೆ ಅನುಪಲ್ಲವಿ ಇಲ್ಲವೆಂಬುದು ಗಮನಾರ್ಹವಾದ ಅಂಶ.* ಇನ್ನು ಕೆಲವು ಹಾಡುಗಳಲ್ಲಿ ಪಲ್ಲವಿಯೂ ಇಲ್ಲ (ಉದಾ. ಹಾ. ೧)

ಲಕ್ಷ್ಮೀದೇವಿಹಾಡು (೧೬೧ನು. ಹಾ. ೧೩೫), ಜಲಕ್ರೀಡೆಹಾಡು, (೧೦೩ನು. ಹಾ. ೪೯), ಶನಿವಾರದ ಹಾಡು (೧೦೪ನು. ಹಾ. ೫೦), ಸ್ತುತಿಮಣಿಮಾಲಿಕೆ (ನು. ೧೧೧, ಹಾ. ೩೨) ಇವೇ ಮೊದಲಾದುವು ಸುದೀರ್ಘ ಹಾಡುಗಳು. ಸಾಮಾನ್ಯವಾಗಿ ಈ ದೀರ್ಘವಾದ ಹಾಡುಗಳು ಕಥನಕಾವ್ಯಗಳಾಗಿರುತ್ತವೆ. ಯಾವುದಾದರೂ ಒಂದು ಪುರಾಣ, ವ್ರತಕತೆಯನ್ನು ಆರಿಸಿಕೊಂಡು, ಅದನ್ನು ಬೆಳೆಸುತ್ತಾ ಹೋಗಿ ಕೊನೆಗೆ ಫಲಸ್ತುತಿಯೊಂದಿಗೆ ಮುಕ್ತಾಯ ಮಾಡಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ರಾಮಾಯಣ, ಮಹಾಭಾರತ, ಭಾಗವತಗಳ ಕತೆ ಘಟನೆಗಳೇ ಈ ಹಾಡುಗಳ ವಸ್ತುವಾಗಿರುತ್ತವೆ. ಉದಾ: ಸಂಕ್ಷೇಪ ರಾಮಾಯಣದ ಹಾಡು (ಹಾ. ೪೧). 'ಕಂದನೆನಿಸಿದ ಕೌಸಲ್ಯಾದೇವಿಗೆ ರಾಮ' ಎಂದು ಪ್ರಾರಂಭಿಸಿ ಅವನು ಅಯೋಧ್ಯೆಯನ್ನಾಳುವವರೆಗಿನ ಸಂಪೂರ್ಣರಾಮಾಯಣದ ಕತೆಯನ್ನು ಕೇವಲ ೨೪ ದ್ವಿಪದಿಗಳಲ್ಲಿ ಹಾಡಿದ್ದಾಳೆ, ಭೀಮವ್ವ. ಅವಳ ಸಂಗ್ರಹ ಸಾಮರ್ಥ್ಯಕ್ಕೊಂದು ಉತ್ತಮ ಉದಾಹರಣೆ ಈ ಹಾಡು.

ಇನ್ನು ಕೆಲವು ಹಾಡುಗಳು ಪುರಾಣದ ಕೆಲವು ಪ್ರಸಂಗಗಳನ್ನಾರಿಸಿಕೊಂಡು ಹೇಳುವವುಗಳಾಗಿವೆ. ಉದಾ: ದ್ರೌಪದಿಯ ವಸ್ತ್ರಾಪಹರಣದ ಪ್ರಸಂಗ (ಹಾ. ೧೫). ಮಹಾಭಾರತದ ಸಭಾಪರ್ವದಲ್ಲಿ ಬರುವ ದುಶ್ಶಾಸನನು ದ್ರೌಪದಿಯ ಸೀರೆಯನ್ನು ಸೆಳೆದ ಪ್ರಸಂಗವನ್ನು ಇತರ ಹರಿದಾಸರಂತೆಯೇ ಕೃಷ್ಣಭಕ್ತಿಯ ದ್ಯೋತಕವಾಗಿ ಹೆಣೆದು ಹಾಡಿದ್ದಾಳೆ, ಭೀಮವ್ವ. ಕೌರವ ಪಾಂಡವರ ಜೂಜು; ಸೋತ ಪಾಂಡವರು ಪತ್ನಿ ದ್ರೌಪದಿಯನ್ನೂ ಪಣಕ್ಕಿಟ್ಟು ಸೋಲಲು, ದುರ್ಯೋಧನ ಅವಳನ್ನು ತನ್ನ ಸಭೆಗೆ ಕರೆಸಿ, 'ನಿನಗಂಡರಡವಿಗೈದುವರೋರು ಹೆಂಡತ್ಯಾಗಿರೆನ್ನ ಬಳಿಗೆ ಬಾರೆ ಎಂದನು'. 'ಅಷ್ಟಬಡವರವರ ಹಿಂದೆ ಕಷ್ಟಬಟ್ಟು ತಿರುಗೋರೇನು ಪಟ್ಟಮಂಚಕ್ಕೊಪ್ಪುವಂತೆ ಬಾರೆಯೆಂದನು'. ಅದನ್ನು ಕೇಳಿ ಕನಲಿದ ದ್ರೌಪದಿ 'ಅಷ್ಟಬಡವರೈವರು ನಿನ ಶಿರ ಕುಟ್ಟಿ ಯಮಪಟ್ಟಣಕ್ಕೆ ಅಟ್ಟಿ ರಾಜ್ಯಕ್ಕಧಿಕಾರ್ಯವರು ಕೇಳೊಯೆಂದಳು'—ಹೀಗೆ ದುರ್ಯೋಧನ ದ್ರೌಪದಿಯರ ಮಾತಿನ ಚಕಮಕಿ ನಿರರ್ಗಳವಾಗಿ ಸಾಗಿ, ಕೊನೆಗೆ ಅಣ್ಣನ ಆದೇಶದಂತೆ ದುಶ್ಶಾಸನ ಬಂದು ದ್ರೌಪದಿಯ ಸೀರೆಯ ನಿರಿಯನ್ನು ಸೆಳೆಯ ತೊಡಗಿದ. ಅಸಹಾಯಕಳಾದ ದ್ರೌಪದಿ ಕಣ್ಣುಮುಚ್ಚಿ ಸರ್ವರಕ್ಷಕನಾದ ಶ್ರೀಹರಿ

* ಮಹಿಪತಿರಾಯರ ರಚನೆಗಳಲ್ಲೂ ಅನುಪಲ್ಲವಿ ಬರುವುದಿಲ್ಲ.

ಯನ್ನು ಅನನ್ಯಭಕ್ತಿಯಿಂದ ಭಜಿಸಲು, ಆಕೆ ಉಟ್ಟ ವಸ್ತ್ರ ಅಕ್ಷಯವಾಯಿತು. ಸೆಳೆಯುತ್ತಿದ್ದಂತೆ ಬೆಳೆಯುತ್ತಿದ್ದ ಬಿಳಿಯಹೂವಿನ, ಕೆಂಪುಹೂವಿನ, ಚಿಂತಾಕು, ಪೈಠಣಿ ಪಗಡಿಬಣ್ಣದ, ಕುಂಬಾವತಿ, ಸಾಸಿವೆಚುಕ್ಕೆಸೀರೆ—ದುಶ್ಶಾಸನ ಸೆಳೆದು ಬೆಂಡಾಗಿ, ರಟ್ಟೆನೊಂದು ಇಳಿದು ಹುಡಿಯಲ್ಲಿ ಬಿದ್ದು ಹೊರಳಾಡಿದ. ಈ ಹಾಡಿನ ಕೆಲವು ವರ್ಣನೆಗಳು ಪುರಂದರದಾಸರ ಹಾಗೂ ಕನಕದಾಸರ 'ದ್ರೌಪದೀವಸ್ತ್ರಾಪಹರಣ'ಗಳನ್ನು ನೆನಪಿಗೆ ತರುತ್ತವೆ.

## ವರ್ಣನಾ ಕುಶಲತೆ

ವರ್ಣನಾಕೌಶಲ ಭೀಮವ್ವನ ಸಹಜ ಪ್ರವೃತ್ತಿ. ಆಕೆಯ ಹಾಡುಗಳಲ್ಲಿ ಕಣ್ಣಿಗೆ ಕಟ್ಟುವಂತೆ ಬರುವ ಭಕ್ಷ್ಯಭೋಜ್ಯಗಳ ವರ್ಣನೆ (ಹಾ. ೭), ಹೆಂಗಳೆಯರ ಅಲಂಕಾರ ಆಭರಣಾದಿಗಳ ವರ್ಣನೆ, (ಹಾ. ೧೨), ಮೋಹಿನೀ ಅಲಂಕಾರದ ವರ್ಣನೆ (ಹಾ. ೪೩) ಇತ್ಯಾದಿಗಳನ್ನು ನೋಡಬಹುದು. ಜಲಕ್ರೀಡೆಹಾಡಿನ (ಹಾ. ೪೯) ಬಗೆಬಗೆಯ ಸೀರೆಗಳ ವರ್ಣನೆ ಆಕೆಯ ವರ್ಣನಾಕುಶಲತೆಗೆ ಕಲಶಪ್ರಾಯವಾಗಿದೆ. ನೀರಾಟವಾಡಬೇಕೆಂಬ ಹೆಂಗಳೆಯರ ಚಪಲ; ಸಂಭ್ರಮದಿಂದ ಬುತ್ತಿಕಟ್ಟಿಕೊಂಡು ವಸ್ತ್ರಾಭರಣಗಳಿಂದ ಅಲಂಕೃತರಾಗಿ ಉತ್ಸಾಹದಿಂದ ಅವರು ಹೊರಟ ರೀತಿ; ಅವರು ಪರಸ್ಪರ 'ನೋಡುತ ನಗುತ' ನಿಂತು ಮಾತಾಡುತ್ತಿದ್ದ ಚಿತ್ರ ಎಳೆಎಳೆಯಾಗಿ ನಮ್ಮ ಕಣ್ಣ ಮುಂದೆ ಬರುತ್ತದೆ. ಯಮುನೆಯಲ್ಲಿ ಮೀಯುತ್ತಾ 'ಎಂಥಾ ಚೆಂದವೆ ಯಮುನಾ ನದಿಯು', 'ಭಾಳ ಸಂಭ್ರಮದಿಂದ ಆಡೋ ಜಲಕ್ರೀಡೆ, ಹ್ಯಾಗೆ ನಮ್ಮನೆಗೆ ಬಿಟ್ಟೋಗುವ್ರೋಣೆ'—ಎನ್ನುವ ಗೋಪಿಯರ ಸಹಜ ಉದ್ಗಾರ ನಮ್ಮ ಕಿವಿಗೆ ಕೇಳಿಸುತ್ತದೆ. ಅಷ್ಟು ನಿರಾತಂಕವಾಗಿ ನೀರಾಟವಾಡಿ ಮೇಲೆ ಬಂದಾಗ ತಾವು ದಡದಲ್ಲಿಟ್ಟಿದ್ದ ಬಟ್ಟೆಗಳನ್ನು ಕಾಣದೆ ಅವರು ಗಡಗುಟ್ಟಿ ನಡುಗುವರು. 'ನದಿ ಆಟ ನಮಗೆಲ್ಲ ವಿಪರ್ತಾಯಿತೇ' ಎಂದು ಹಳಹಳಿಸುವರು. ತಾವು ಉಟ್ಟುಬಂದಿದ್ದ ಬಗೆಬಗೆಯ ಸೀರೆಗಳನ್ನು ಬಣ್ಣಿಸಿ ಪ್ರಲಾಪಿಸತೊಡಗುತ್ತಾರೆ.

ಕರಿಯಹೂವಿನ ಸೀರೆ ಬಿಳಿದುಹೂವಿನ ಸೀರೆ
ಜರತಾಟಿ ಕೆಂಪುಹೂವಿನ ಸೀರೆ.........
ಸಾರಾವಳಿ ಸೀರೆ ರಾಗಾವಳಿ ಸೀರೆ
ದ್ವಾರಮುನಿ ಸೀರೆ............
ಗೋಧಿಮುಗ್ಗಿ ಸೀರೆ ಗುಬ್ಬಿಕಣ್ಣಿನ ಸೀರೆ
ಬಾಳೆಪಟ್ಟಿ ಸೀರೆ ಬದನೆಬಣ್ಣದ ಸೀರೆ
ಸುರುತಿ ಸುಗುತಿ ಬಣ್ಣದ ಸೀರೆ........
ಕಾಡಿಗ್ಗಣ್ಣಿನ ಸೀರೆ ಕರಿಯಚಂದರ ಕಾಳಿ
..................
ಸಾಸ್ವೆಚುಕ್ಕೆ ಸೀರೆ ಸರಪಳ್ಯಂಚಿನ ಸೀರೆ

ತುಪ್ಪಗಳು ಬೇರೆ. ಹೀಗೆಯೇ ಕೃಷ್ಣ–ಸುದಾಮರ ಊಟ (ಪಾ. ೧೩೦), ಲಕ್ಷ್ಮೀ ದೇವಿಗೆ ಇಟ್ಟ ನೈವೇದ್ಯಾದಿಗಳನ್ನೂ (ಪಾ. ೧೩೫) ಸವಿಯಬಹುದು.

ಇನ್ನು ಒಡವೆಗಳ ವರ್ಣನೆಗೆ ತೊಡಗಿದರೆ ಅಪ್ಪನ ಕಾವ್ಯಕನ್ನಿಕೆಯರೆಲ್ಲ ನಾನಾ ಪದಕಗಳಿಂದ ಕೂಡಿದ ಕಂಕಣ, ಬಳೆ, ಡೋರ್ಯ, ಕಿಂಕಿಣಿ, ಕಿರುಗೆಜ್ಜೆ, ರುಳಿ, ಮುತ್ತಿನ ಬಟ್ಟು, ವಾಲೆ, ಸರಪಳಿ, ಬುಗುಡಿ, ಹೆಂಡೆ, ಅರೆಚಂದ್ರ, ರಾಗಟೆ, ಮೂಗುತಿ, ಬಾವಲಿ, ವಂಕಿ, ನಾಗಮುರಿಗೆ, ಒಡ್ಯಾಣಾದಿಗಳಿಂದ ಅಲಂಕೃತರಾದವರೇ. ದಮಯಂತಿ, ದ್ರೌಪದಿ, ರುಕ್ಮಿಣಿ, ಸತ್ಯಭಾಮೆಯರೇ ಅಲ್ಲದೆ ಗೋಕುಲದ ಗೋಪಿಕಾಸ್ತ್ರೀಯರೂ ಅಲಂಕಾರ, ಆಭರಣಾದಿಗಳಲ್ಲಿ ಯಾರಿಗೂ ಕಡಿಮೆಯಿಲ್ಲ.

ಅಪ್ಪನ ದೊಡ್ಡ ಹಾಡುಗಳಲ್ಲಿ ಒಂದಾದ ನಳಚರಿತ್ರೆಯಲ್ಲಿ ಬರುವ (ಪು. ೨೧) ಚ್ಯವನಋಷಿಗಳ ವರ್ಣನೆ ಸುಲಭವಾಗಿ ಮರೆಯುವಂತಹುದಲ್ಲ. ಭಾರತದ ಅರಣ್ಯ ಪರ್ವ, ಭಾಗವತದ ನವಮಸ್ಕಂಧಗಳಲ್ಲಿ ಬರುವ ಚ್ಯವನಋಷಿಯ ಮುಪ್ಪಿನ ಸಾಮಾನ್ಯ ವರ್ಣನೆಯನ್ನು ಭೀಮವ್ವ ಅದ್ಭುತವಾಗಿ ಕಂಡರಿಸಿದ್ದಾಳೆ:

"ಒಡೆದು ಹುತ್ತ ಗಿಡವಕಿತ್ತು ನಡುಗೋ ಶಿರದಲ್ಲಿ
ಜಡೆಯ ಕಟ್ಟಿ ನಡುವ ಬಾಗುತ ನಡೆದು ಬಂದರು
ಅಸ್ತಿ ಚರ್ಮ ಬಿಳಿಯಕೂದಲು ವ್ಯಾಪ್ತವಾಗಿರೆ
ರೆಪ್ಪೆಗುಬ್ಬು ಇಳಿದು ಕಣ್ಣು ಮುಚ್ಚಿಕೊಂಡಿರೆ
ವದನದಲ್ಲಿ ದಂತವಿಲ್ಲ ಒಣಗಿ ದೇಹವು
ಒದಗಿ ಮುಪ್ಪು ಒದರಿಕೊಂಡರು ಕೇಳವು ಕಿವಿಗಳು"—

ಮುಪ್ಪಿನ ಸಶಕ್ತ ವರ್ಣನೆಯಿದು. ಅಂತೆಯೇ ಸ್ವಯಂವರ ಮಂಟಪಕ್ಕೆ ಬಂದ ದಮಯಂತಿಯು ಜೀವಂತವಾಗಿ ಮೂಡಿ ನಮ್ಮ ಮನೋಮಂಟಪವನ್ನೂ ಪ್ರವೇಶಿಸುತ್ತಾಳೆ:

"ಬಂಗಾರ ಭಾರಕ್ಕೆ ಬಳುಕುತಲಿ ಝಳುಕುತಲಿ
ಶೃಂಗಾರ [illegible]
ಮುಂಗಾರ [illegible]
ಹೊಂಗ್ಯಾದಿಗೆಯಂತೆ ಮೈಬಣ್ಣ ನಡುಸಣ್ಣ
ಕಂಗಳ ಕಡೆನೋಟ [ಅ] ನಂಗನ್ನ ಸಿರಿಕಾಟ
ಅಂಗನೆಯು ಜನರೆಲ್ಲ ದಂಗಾಗಿ ನೋಡುತಿರೆ
ಉಂಗುರದ ಬೆರಳಿಂದ ಮುಂಗುರುಳು ತಿದ್ದುತಲಿ
ಅಂಗುಲಿಯ ತುದಿಯಿಂದ ಕಂಜಮಾಲೆಯ ಹಿಡಿದು
ಮಂಗಳಾಂಗನೆ ಬಂದಳಂಗಳದ ಮಂಟಪಕ್ಕೆ"

ದಮಯಂತಿಯನ್ನು ಕಾಡಿನಲ್ಲಿ ಬಿಟ್ಟುಹೋಗುವಾಗ 'ತೊಟ್ಟಿಲು ತೂಗುವಂದದಿ ತಿರುಗ್ಯಾಡುವ್ರೋ' ಸರಸ ಚಿತ್ರ, 'ಹರಕು ಕೋರಿಯನುಟ್ಟು ಮುರುಕು ತಂಬಿಗೆ ಹಿಡಿದು ಕೆರಕು ಬುತ್ತಿಯು ಕಟ್ಟಿಕೊಂಡು' ಹೊರಟ ಕಡುಬಡವ ದೇಹಕ್ಕನ ನಗೆಯ ಚಿತ್ರ, ಸುಭದ್ರಾಕಲ್ಯಾಣದಲ್ಲಿ ತನ್ನ ಎದುರು ಕುಳಿತ ಸಂನ್ಯಾಸಿಯೇ ಅರ್ಜುನನೆಂದು ತಿಳಿದ ಸುಭದ್ರೆಯ ಸೂಕ್ಷ್ಮಸ್ಥಿತಿಯ ವರ್ಣನೆಗಳು ಚಿರಕಾಲ ನೆನಪಿನಲ್ಲಿ ಉಳಿಯುವಂತಹವು. ಒಟ್ಟಿನಲ್ಲಿ, ಅಪ್ಪನ ಕಾವ್ಯ ವರ್ಣನಾ ಪ್ರಧಾನವಾದುದು.

## ಸಂಭಾಷಣಾ ಚತುರತೆ.

ಭೀಮಪ್ಪನ ಸಂಭಾಷಣಾ ತಂತ್ರ ಅನನ್ಯವಾದುದು. ಆಕೆಗೆ ತುಂಬ ಪ್ರಿಯವಾದುದು. ಈಶ್ವರ ಪಾರ್ವತಿಯರ ಸಂವಾದ (ಹಾ ೧೪), ದುರ್ಯೋಧನ ದ್ರೌಪದಿಯರ ಮಾತಿನ ಚಕಮಕಿ (ಹಾ.೧೫, ನು ೧೧–೧೨), ಸತ್ಯಭಾಮೆ ಪಾರ್ವತಿಯರ ಸಂವಾದ (ಹಾ.೨೪), ರುಕ್ಮಿಣಿ ಸತ್ಯಭಾಮೆಯರ ಸಂವಾದ (ಹಾ.೨೯), ಕೃಷ್ಣ ಸುಭದ್ರೆಯರ ಸಂವಾದ (ಹಾ.೪೫), ದ್ರೌಪದಿ ಪಾಂಡವರ ಸಂವಾದ (ಹಾ.೪೦), ಸತ್ಯಭಾಮೆ ಕೃಷ್ಣರ ಸಂವಾದ (ಹಾ ೪೧) ಇತ್ಯಾದಿಗಳನ್ನು ಉದಾಹರಿಸಬಹುದು. ರುಕ್ಮಿಣಿ ಭಾಮೆಯರ ಸಂವಾದವಂತೂ ಸವತಿಮಾತ್ಸರ್ಯದ ಸಮರ್ಥ ಅಭಿವ್ಯಕ್ತಿಯಾಗಿದೆ.

'ಪಟ್ಟದ್ಹೊಲ್ಲಭೆ ನಾನು ಕೃಷ್ಣಗೆ
ಮೆಚ್ಚಿ ಬಂದೆಯೆ ನೀನು
ಅಚ್ಚ್ಯುತ ತಾ ಪರಮಾನುಗ್ರ [ಹ] ವ ಮಾಡಿ ಬಂ—
ದಿಟ್ಟಿ ಲಿರುವ ತಾನು'

ಎಂದು ಕೃಷ್ಣ ತನ್ನ ಬಳಿಯಲ್ಲಿ ಬಂದಿರುವುದನ್ನು ಸಮರ್ಥಿಸಿಕೊಂಡ ರುಕ್ಮಿಣಿಗೆ ಭಾಮೆ :

'ಮಾತಾಪಿತರು ಅನುಜನನ್ನಂಜಿಸಿ
ಈತಗ್ವಾಲೆಯ ಬರೆದು
ಯಾತಕಂಜಿಕೆ ವಲಿಸ್ಕೊಂಡು ಬಂದವಳೆಂದು
ಕೀರ್ಹೊಗಳುವುದಲ್ಲಿ'

–ಎಂದು ಮೂದಲಿಸುವಳು. ಈ ಬಗೆಯ ಸಂವಾದಗಳ ಮೂಲಕ ಆಯಾ ಪಾತ್ರಗಳ ಗುಣಾವಗುಣಗಳು, ಸಂಸ್ಕೃತಿ ಸೌಜನ್ಯಗಳು ಅಭಿವ್ಯಕ್ತವಾಗಿವೆ. ಜೊತೆಗೆ ಪೂರ್ವಕತೆಗಳ, ಸಂದರ್ಭಗಳ ಪ್ರಸ್ತಾಪವೂ ಹಾಸುಹೊಕ್ಕಾಗಿರುವುದನ್ನು ಕಾಣುತ್ತೇವೆ. (ಉದಾ : ಅರ್ಜುನ ದ್ರೌಪದಿಯರ ಸಂವಾದದಲ್ಲಿಯ (ಹಾ. ೩೦) ಪಾರ್ಥನ ದಶನಾಮಗಳ ಪ್ರಸ್ತಾಪ ; ಈಶ್ವರ ಪಾರ್ವತಿಯರ ಸಂವಾದದಲ್ಲಿ ಬರುವ (ಹಾ. ೧೪) ಶಿವನ ವಿವಿಧ ನಾಮಾವಳಿ. ಕ್ರೀಡ್ವತೆಗಳು ಇತ್ಯಾದಿ.)

## ತತ್ತ್ವನಿರೂಪಣೆ

ಭೀಮವ್ವನ ಅನೇಕ ಹಾಡುಗಳಲ್ಲಿ ಮಧ್ವಮತತತ್ತ್ವಗಳ ನಿರೂಪಣೆಯಿದೆ. ಸ್ತುತಿ ಮಣಿಮಾಲಿಕೆ (ಹಾ.೩೨)ಯಂತೂ ಮಧ್ವಮತ ತತ್ತ್ವಗಳನ್ನು ಬಟ್ಟಿಯಿಳಿಸಿಟ್ಟಂತಿದೆ. ಕ್ರಮವಾಗಿ ಗಣಪತಿ, ವಾಣಿ, ಬ್ರಹ್ಮ, ಭಾರತಿಯರನ್ನು ಪ್ರಾರ್ಥಿಸಿದ ಅವ್ವ ಋಷಿ ಮುನಿಗಳಿಗೂ ಪ್ರಾರ್ಥನೆ ಸಲ್ಲಿಸಿದ್ದಾಳೆ. ತನ್ನ ಮನೆದೈವವಾದ ವೆಂಕಟೇಶನನ್ನು ಸ್ತುತಿಸಿ, ಹರಿ ದ್ವಾಸುಪರ್ಣನಂತೆ ಈ ಶರೀರದಲ್ಲಿ ವ್ಯಾಪ್ತ (ಜೀವ ಪರಮಾತ್ಮರ ಭೇದ ತತ್ತ್ವ), ಭಕ್ತವತ್ಸಲ, (ಅಂಬರೀಷ, ಭೃಗು, ಪ್ರಹ್ಲಾದ, ಧ್ರುವ, ಅಜಾಮಿಳ, ಕುಚೇಲ, ಪುಂಡರೀಕ, ಅಕ್ರೂರ, ಗಜರಾಜ, ಅಹಲ್ಯೆ, ದ್ರೌಪದಿ, ಮುಚುಕುಂದ ಮೊದಲಾದವರನ್ನು ಕಾಯ್ದವನು.) ಬಿಂಬಮೂರುತಿ ; ಕರುಣಾಮಯಿ ; ಜರಾಮರಣಗಳಿಲ್ಲದವನು ; ಶುಕ್ಲಶೋಣಿತ ಸಂಬಂಧಗಳಿಲ್ಲದವನು ; ಜನ್ಮಕರ್ಮಗಳಿಲ್ಲದವನು, (ಸು. ೭೦) ನಿತ್ಯಮುಕ್ತ ; ಒಬ್ಬನೇ ಆದ ಶ್ರೀಹರಿ ಅನಾದಿ ; ಅನಂತ ; ಆರ್ಯ ; ಪರಮಾಣುರೂಪಿ; ಘನರೂಪಿ; ಸರ್ವವ್ಯಾಪ್ತ ಎಂದು ಮುಂತಾಗಿ ಸ್ತುತಿಸಿರುವಳು. ಹರಿಯ ನಖದಿಂದ ಗಂಗೆಯು ಹುಟ್ಟು ; ನಾಭಿಯಿಂದ ಬ್ರಹ್ಮನ ಹುಟ್ಟು ; ಲಕ್ಷ್ಮಿ, ಬ್ರಹ್ಮ, ರುದ್ರ, ಶೇಷ, ಇಂದ್ರಾದಿಗಳೂ ಹರಿಯನ್ನು ತಿಳಿಯಲು ಅಸಮರ್ಥರು ; ಲಕ್ಷ್ಮಿ ಶ್ರೀ ಭೂ ದುರ್ಗಾ ರೂಪಿಯಾಗಿ ಹರಿಯನ್ನು ಒಲಿಸುವಳು. ಜೋಲಿ ಮಂಚಗಳಾಗಿ ಶಾಲು ಶಾಕೂತ್ಯಾಗಿ (ಸಕಲಾತಿ ?) ಲೋಡು ತಲೆದಿಂಬು ತಾನಾಗಿ ಹರಿಯನ್ನು ಸೇವಿಸುವಳು. ಅವಳು ದೇಶಕಾಲಗಳಲ್ಲಿ ಹರಿಗೆ ಸಮಳಾದರೂ ಗುಣದಲ್ಲಿ ಅಸಮಳು (ಸು. ೫೨). ಜೀವ–ಜೀವಕ್ಕೆ, ಜೀವ–ಜಡಕ್ಕೆ, ಜಡ–ಜಡಕ್ಕೆ, ಜೀವ–ಈಶರಿಗೆ ಭೇದವಿದೆ (ಸು. ೬೭). ಹರಿ ಪಂಚಕೋಶಗಳಲ್ಲೂ (ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ) ವ್ಯಾಪ್ತ. ಹರಿಯಿಂದ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಪದವ ಪಡೆದವರು ಮುಕ್ತರು. ಜೀವರಿಗೆ ದತ್ತ ಸ್ವಾತಂತ್ರ್ಯ ಮಾತ್ರ ; ಹರಿ ಸರ್ವಸ್ವತಂತ್ರ. ಸತ್ವಾದಿ ಜೀವರಿಗೆ ಮುಕ್ತಿಯೂ ತಾಮಸರಿಗೆ ತಮಸ್ಸೂ ನಿತ್ಯಸಂಸಾರಿಗಳಿಗೆ ಸುಖ-ದುಃಖ ಮಿಶ್ರಫಲವೂ ಲಭಿಸುವುದು.

–ಹೀಗೆ ಹರಿಯ ಸರ್ವೋತ್ತಮತ್ವ, ಸರ್ವವ್ಯಾಪ್ತತ್ವಾದಿ ತತ್ತ್ವಗಳನ್ನು ಭೀಮವ್ವ ಮನಮುಟ್ಟಿ ಸ್ಮರಿಸಿದ್ದಾಳೆ. ಮಾಧ್ವರಲ್ಲಿ ಗುರುಗಳಿಗೆ ಪ್ರಾಶಸ್ತ್ಯ ಹೆಚ್ಚು. ಅವ್ವನಹಾಡುಗಳಲ್ಲಿ ಗುರುಸ್ಥಾನದಲ್ಲಿರುವ ಮುಖ್ಯ ಪ್ರಾಣದೇವರ ಸ್ತುತಿಯೂ (ಹಾ. ೨೦), (ಹಾ. ೫೬), (ಹಾ. ೫೭), ಅವರ ಹನುಮ, ಭೀಮ, ಮಧ್ವ–ಈ ಅವತಾರಸ್ತುತಿಯೂ ಮತ್ತೆ ಮತ್ತೆ ಬರುತ್ತದೆ :

ನೂರುಗಾವುದ ಶರಧಿಯ ದಾಟಿ ಲಂಕೆ
ಊರು ಸುಟ್ಟು ಬಂದ ಧೀರ ನೀನಲ್ಲೆ
ಕ್ರೂರ ಕೌರವರ ಮಡುಹಿ ಕರಿಪತಿ ರಾಜ್ಯ

ಪ್ರಲಾಪಿಸುವರು. ಹರಿಯನ್ನು ವಶ್ಯಸಿಕೊಳ್ಳಲಾರದ ಮಂದಭಾಗ್ಯರು ತಾವೆಂದು ನಿಂದಿಸಿಕೊಳ್ಳುವರು. ಮಥುರಾಪಟ್ಟಣದ ಚದುರೆಯಂತೆ ತಾವು ರತಿಕ್ರೀಡೆಯಲ್ಲಿ ಪರಿಣತರಲ್ಲವಾದುದರಿಂದ ಆ ಚದುರೆಯರಿಗೆ ಕೃಷ್ಣ ಮರುಳಾದನೆಂದು ಅವರ ನಂಬಿಕೆ.* ಕೃಷ್ಣನನ್ನಗಲಿ ಇರಲಾರೆವು, ಆವನನ್ನು ತೋರಿಸು ಎಂದು ಉದ್ಧವನನ್ನೇ ಮರೆಹೊಕ್ಕಿದ್ದಾರೆ. ಗೋಪಿಯರ ಈ ವಿರಹ ನಾನಾ ರೀತಿಯಲ್ಲಿ ಹೊರಹೊಮ್ಮಿದೆ. ಭೀಮಪ್ಪನೂ ವ್ರಜದ ಗೋಪಿಕಾಸ್ತ್ರೀಯರಲ್ಲಿ ಒಬ್ಬಳಾಗಿದ್ದಳೆನ್ನುವುದು ಆವಳ ಮನೆತನದವರ ಬಲವಾದ ನಂಬಿಕೆ. ಹಾಗೆಯೇ ಸತ್ಯಭಾಮೆಯ ವಿರಹಾಲಾಪ ರುಕ್ಮಿಣಿಯ ಬಗೆಗಿನ ಸವತಿ ಮಾತ್ಸರ್ಯವಾಗಿ ಪರಿಣಮಿಸಿದೆ. (ಹಾ. ೧೧೩). ದಂಪತಿಗಳು ಪರಸ್ಪರರಿಗೆ ಬಾಗಿಲು ಕಟ್ಟುವ ಸಂದರ್ಭಗಳಲ್ಲೂ ಮಧುರಭಾವದ ಆವಿರ್ಭಾವವಿದೆ. (ಉದಾ:ಹಾ. ೩೦)

ವಾತ್ಸಲ್ಯಭಾವದ ಹಾಡುಗಳು ಇವಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿವೆ. ಕೃಷ್ಣನ ಮೇಲೆ ಯಶೋದೆಯಲ್ಲಿ ಗೋಪಿಯರ ದೂರು, ಗೋಪಿಯರಿಗೆ ಯಶೋದೆಯ ಭರ್ತ್ಸನೆ (ಉದಾ. ಹಾ. ೭೬, ಹಾ. ೭೯); ಗೋಪಿಯರಿಂದ ತುಂಟ ಹಾಗೂ ಕಳ್ಳಕೃಷ್ಣನ ವರ್ಣನೆ (ಹಾ. ೪೬); ಯಶೋದೆಯಲ್ಲಿ ಬಾಲಕೃಷ್ಣನ ಸಮರ್ಥನೆ (ಹಾ. ೧೦೯)–ಹೀಗೆ ಹಲವು ಬಗೆಯಲ್ಲಿ ವಾತ್ಸಲ್ಯಭಾವದ ನಿರೂಪಣೆಯಿದೆ.

ಭಾಗೀರಥೀ ಜನಕಗೆ ಭಾಗವತಪ್ರಿಯಗೆ
ಆಗ ನೀರೆರೆದರವಿಂದ ಲೋಚನನಿಗೆ
ತೀಡಿಕಾಡಿಗೆ ಹಚ್ಚಿ ತಿದ್ದಿ ಕಸ್ತೂರಿಯಿಟ್ಟು
ಪಾಲಾಬ್ಧಿಶಯನಗೆ ಹಾಲನೆರೆದು ಗೋಪಿ

ಬಗೆಬಗೆಯ ಆಭರಣಗಳನ್ನಿಟ್ಟು ಮಗು ಕೃಷ್ಣನನ್ನು ಸಿಂಗರಿಸಿ ‘ಹೊನ್ನು ತಾ ಗುಬ್ಬಿ ತಾರಮ್ಮಯ್ಯ ಎನುತಲಿ’ ಆಟವಾಡಿಸಿ ರಮಿಸಿದಳಂತೆ (ಹಾ. ೧೦೦). ಈ ಹಾಡಿನ ವಿವರಗಳು ಪುರಂದರದಾಸರ ‘ಗೋಪಿಯ ಭಾಗ್ಯವಿದು, ಆ ಪರಮಾತ್ಮನ ಅಪ್ಪಿ ಮುದ್ದಿಡುವುದು’ ಎನ್ನುವ ಕೀರ್ತನೆಯನ್ನು ನೆನಪಿಗೆ ತರುತ್ತವೆ.

ಶಾಂತಭಾವದ ಹಾಡುಗಳೂ ಸಾಕಷ್ಟು ಸಂಖ್ಯೆಯಲ್ಲಿವೆ. ‘ನಾರಾಯಣ ಎನ್ನಿರೊ ನಾರಾಯಣ ಎನ್ನಿ’ (ಹಾ. ೬೮), ‘ನಾರಾಯಣ ನಿಮ್ಮ ನಾಮ ನಾಲಿಗೆಲಿರಲಿ’ (ಹಾ. ೬೯)–ಇತ್ಯಾದಿ ಹಾಡುಗಳನ್ನು ಉದಾಹರಿಸಬಹುದು. ಹೀಗೆ ಅಪ್ಪನ ಭಕ್ತಿನಿರೂಪಣೆಯ ಹಾಡುಗಳ ಹೊರತು ಭಗವಂತನನ್ನು ಕುರಿತ,

ಇಂದು ಎನಗೆ ನಿನ್ನ ಸಂದರುಶನ ಸುಖ

---

* ಶ್ರೀಪಾದರಾಜರ ವೃತ್ತನಾಮದಲ್ಲಿಯೂ ಈ ಭಾವನೆಯನ್ನು ಕಾಣುತ್ತೇವೆ.
ನೋಡಿ : ಶ್ರೀಪಾದರಾಜರ ಕೃತಿಗಳು, ಪು. ೪೩.

ಮೊಂದು ತೋರಿಸಗರವಿಂದ ನಯನ........
ಕಂದನಂದದಿ ನೋಡಿ ಸಲಹೋಎನ್ನ
ಮಂದಬುದ್ಧಿಯು ಮಹಾ ಮದಡ ಪಾಮರ ಭವ
ಬಂಧನದೊಳು ಸಿಲುಕಿ ನೊಂದೆನಯ್ಯ
ಸಂದೇಹ ಮಾಡದೆ ಸಲಹದಿದ್ದರೆ ನಿನ್ನ
ಹೊಂದಿ ಬಾಳುವುದೆಂತೊ ಮುಂದರಿಯೆ

—ಇತ್ಯಾದಿ ಮೊರೆಯಿಂದ ಹಿಡಿದು 'ಅಪ್ಪ ವೆಂಕೋಬನ ನೇತ್ರದಲಿ ನೋಡಿ ಪವಿತ್ರಳಾದೆನೊ ಇಂದಿಗೆ' ಎನ್ನುವ ಧನ್ಯತಾಭಾವದವರೆಗೂ ಬೆಳೆದು ವ್ಯಾಪಿಸಿದೆ. ಅಪ್ಪನ ಭಗವದ್ದರ್ಶನಾನುಭವ 'ಕಂಡು ಧನ್ಯಳಾದೆ ನಂದ ತನಯನ ಕಣ್ಣಾರ, (ಹಾ. ೩೭), 'ಕಂಡೆ ಕಂಡೆ ಸ್ವಾಮಿಯ' (ಹಾ. ೪೦), 'ಚಿನ್ನದ ಚಾವಡಿ ಮ್ಯಾಲೆ' (ಹಾ. ೪೧) ಇತ್ಯಾದಿ ಹಾಡುಗಳಲ್ಲಿ ಕೋಡಿವರಿದಿದೆ.

## ಸಂಪ್ರದಾಯ ಪ್ರಿಯತೆ

ಭೀಮವ್ವ ಸಂಪ್ರದಾಯಪ್ರಿಯಳೆಂಬುದು ಅವಳ ಹಾಡುಗಳಿಂದ ಸ್ಪಷ್ಟವಾಗುತ್ತದೆ. ಮನಸ್ಸಿಗೆ ಒಂದು ನೈತಿಕ ಬಲ, ದೃಢತೆಗಳನ್ನು ಪಡೆಯಲು ಸಹಾಯಕವಾಗುವ ವ್ರತ–ಕತೆಗಳಿಗೇ ಅವಳ ಹಾಡುಗಳಲ್ಲಿ ಸಿಂಹಪಾಲು. ಶುಕ್ರವಾರದ ಹಾಡು (ಹಾ. ೧೧೫), ಶನಿವಾರದ ಹಾಡು (ಹಾ. ೫೦), ಮಂಗಳಗೌರಿ ಹಾಡು (ಹಾ. ೬೧), ಬುಧ ಬೃಹಸ್ಪತಿ ಹಾಡು (ಹಾ. ೩೩), ಲಕ್ಷ್ಮೀದೇವಿ ಹಾಡು (ಹಾ. ೧೩೫), ಕೃಷ್ಣದಾನವ್ರತದ ಹಾಡು (ಹಾ. ೧೧) ಮೊದಲಾದುವನ್ನು ಉದಾಹರಿಸಬಹುದು. ಅಪ್ಪನ ಕಾಲದ ಬ್ರಾಹ್ಮಣ ಕುಟುಂಬಗಳ ಹೆಣ್ಣುಮಕ್ಕಳು ಆಚರಿಸುತ್ತಿದ್ದ ಬಗೆಬಗೆಯ ವ್ರತಗಳು, ಅವುಗಳನ್ನಾಚರಿಸುವ ಉದ್ದೇಶ, ಕ್ರಮ, ಫಲಾಫಲಗಳ ಕಲ್ಪನೆಗಳು ಮೇಲಿನ ಎಲ್ಲ ಹಾಡುಗಳಲ್ಲಿಯೂ ನಿರೂಪಿತವಾಗಿವೆ. ಸಾಮಾನ್ಯವಾಗಿ ಎಲ್ಲ ವ್ರತಾಚರಣೆಯ ಉದ್ದೇಶವೂ ಮುತ್ತೈದೆತನ ಹಾಗೂ ಸಂತಾನ, ಸೌಭಾಗ್ಯಗಳ–ಪ್ರಾಪ್ತಿ. 'ಕಟ್ಟಿದ ಮಾಂಗಲ್ಯ ಕುಂಕುಮ ಗಾಜಿನಬಳೆ। ಮುತ್ತೈದೆತನ ಸಂಪತ್ತು ಸಂತಾನಕ್ಕೆ' ಬೇಡಿಕೆ. (ಹಾ. ೧೧೮, ನು. ೨). ಭಗವಂತನ ಕರುಣೆ, ಪ್ರಸಾದಗಳಿಂದ ಮಾತ್ರ ಅವು ದೊರೆಯುವುವೆಂಬ ದೃಢವಾದ ನಂಬಿಕೆಯೇ ಅವುಗಳ ಹಿನ್ನೆಲೆ.

ಮೇಲಿನ ದೀರ್ಘ ಕಥನ ಕವನಗಳೇ ಅಲ್ಲದೆ ವಿವಿಧ ಸಂಪ್ರದಾಯಗಳನ್ನೊಳಗೊಂಡ ಬಿಡಿಹಾಡುಗಳೂ ಇವೆ. ಹಸೆಗೆ ಕರೆಯುವುದು, ಆರತಿಯೆತ್ತುವುದು, ಆಶೀರ್ವಾದಮಾಡುವುದು, ಬಾಗಿಲುಕಟ್ಟುವುದು, ಉರುಟಣೆ ಮಾಡುವುದು, ಜೋಗುಳ ಹಾಡುವುದು ಇವೇ ಮೊದಲಾದ ಧಾರ್ಮಿಕ ಸಂಪ್ರದಾಯಗಳು ನಮ್ಮ ಸಮಾಜದಲ್ಲಿ ರೂಢಿಯಲ್ಲಿವೆ. ಇವೆಲ್ಲವನ್ನೂ ಭೀಮವ್ವ ತನ್ನ ಹಾಡುಗಳಲ್ಲಿ ಬಿಂಬಿಸಿದ್ದಾಳೆ.

ಅಂಗಜ ಪಿತನರ್ಧಾಂಗಿ ನೀ ಏಳು
ಶೃಂಗಾರದಂಥ ಶುಭಾಂಗಿ ನೀ ಏಳು
ಕಂಗಳ ನೋಟದ ಕಡುಚೆಲ್ವೆ ನಿನ್ನ ಪಾ
ದಂಗಳಿಗೆರಗುವೆ ಎನುತ ಮಾಲಕ್ಷುಮಿ [ಯ ?]
ಅಂಗನೆಯರ್ಹಸೆಗೆ ಕರೆದರು (ಹಾ. ೨೬)

—ಲಕ್ಷ್ಮೀದೇವಿಯನ್ನು ಹಸೆಗೆ ಕರೆದ ಹಾಡಿದು. ಯಾವುದೇ ಶುಭಸಮಾರಂಭದಲ್ಲಿ ಲಕ್ಷ್ಮೀಸ್ವರೂಪಳಾದ ಮುತ್ತೈದೆಯನ್ನು ಹಸೆಯಮೇಲೆ ಕೂಡಿಸುವಾಗ ಈ ಹಾಡನ್ನು ಹಾಡಬಹುದು. ಕರೆದು ಹಸೆಯಮೇಲೆ ಕೂಡಿಸಿ ಕಡಲೆ, ಬೆಲ್ಲ, ಕೊಬ್ಬರಿ, ಬಾಳೆಹಣ್ಣು ಇತ್ಯಾದಿಗಳಿಂದ ಉಡಿತುಂಬುವುದೂ ನಮ್ಮ ಒಂದು ಸಂಪ್ರದಾಯ. 'ಉಡಿಯ ತುಂಬಿರೆ ನಮ್ಮ ಉಡುರಾಜ ಮುಖಿಗೆ' (ಹಾ. ೧೭) ಎಂದು ಅವ್ವ ರುಕ್ಮಿಣಿಗೆ ಉಡಿ ತುಂಬಿಸಿದ್ದಾಳೆ. ಅನಂತರ ಆರತಿಯೆತ್ತುವ ಸಂಭ್ರಮ : 'ಚೆಲ್ವೆಗಾರತಿಯ ತಂದೆತ್ತಿರೆ' (ಹಾ. ೫೫) ಎಂದು ಮಾಲಕ್ಷ್ಮಿಗೆ ಆರತಿಯೆತ್ತಿಸಿದ್ದಾಳೆ. ಅನಂತರ ಹಸೆಯ ಮೇಲೆ ಕುಳಿತವರಿಗೆ ಆಶೀರ್ವಾದ ಮಾಡುವುದು ಕ್ರಮ. 'ಪುಣ್ಯಪಡೆಯೆ ನೀನು ಪೂರ್ಣೇಂದುವದನೆ' (ಹಾ. ೮೨) ಎಂದು, ಹಾಡಿನ ಉದ್ದಕ್ಕೂ ದ್ರೌಪದಿ, ದೇವಕಿ, ಸಾವಿತ್ರಿ, ಅರುಂಧತಿ, ಮಹಾಲಕ್ಷ್ಮಿಯರ ಹರಕೆಗಳನ್ನು ಕ್ರೋಡೀಕರಿಸಿರುವಳು.

ಇವೇ ಅಲ್ಲದೆ ಬಸಿರಿಹೆಣ್ಣುಮಗಳಿಗೆ ಹೂ ಮುಡಿಸಿ ಬಯಕೆ ತೀರಿಸುವ ವಿಶೇಷ ಸಂದರ್ಭವೂ ನಮ್ಮಲ್ಲಿ ರೂಢಿಯಲ್ಲಿದೆ. ಆ ಸಂದರ್ಭಕ್ಕೆ ತಕ್ಕಂತೆ ಭೀಮವ್ವನ 'ಬಸಿರು ಬಣ್ಣಿಸಿದ ಹಾಡನ್ನೂ' (ಹಾ. ೬೦), 'ಹೂ ಮುಡಿಸಿದ' ಹಾಡನ್ನೂ (ಹಾ.೧೪೨) ನೋಡಬಹುದು. ಅಂತೆಯೇ ಹೆಣ್ಣುಮಕ್ಕಳು ಪೂಜೆ ಪುರಸ್ಕಾರಗಳನ್ನು ಮಾಡುವಾಗ ತಮ್ಮ ಮುತ್ತೈದೆತನ ವೃದ್ಧಿಯಾಗುವಂತೆ, ಸಂತಾನ ಸೌಭಾಗ್ಯ ಪ್ರಾಪ್ತಿಯಾಗುವಂತೆ ದೇವರಲ್ಲಿ ವರವನ್ನು ಕೇಳಿಕೊಳ್ಳುವುದುಂಟು :

" ಅಂಬಾ ನೀ ಹೂವ ಪಾಲಿಸೆ ವರನೀಡೆ ಶ್ರೀ ಜಗದಂಬಾ
ನೀ ಹೂವ ಪಾಲಿಸೆ............——
ಬಳೆಯು ಕರಿಯಮಣಿ ಕೊರಳ ಮಂಗಳ ಸೂತ್ರ
ಸ್ಥಿರವಾಗಿಯಿರುವಂತೆ ಸರ್ವ ಸಂಪತ್ತು ನೀಡಂಬಾ
ಮಕ್ಕಳು ಮನೆಭಾಗ್ಯ ತೊಟ್ಟಿಲು ತೂಗುವಂತೆ
ನ್ಯೃಷ್ಟಾನ್ನದಾನ ಮಾಡಲಿಷ್ಟಾರ್ಥದ್ವರಗಳ "

ಹುಟ್ಟಿದ ಮಗುವನ್ನು ತೊಟ್ಟಿಲಿಗೆ ಹಾಕಿ ಜೋಗುಳವನ್ನು ಹಾಡುವುದು (ಹಾ. ೧೧೬) ಮದುವೆಯ ಸಂದರ್ಭದಲ್ಲಿ ಉರುಟಣೆ ಮಾಡುವುದು (ಹಾ. ೭೫), ಭೂಮ ಇಡುವುದು (ಹಾ. ೧೦೧), ಬಾಗಿಲು ಕಟ್ಟುವುದು (ಹಾ. ೪೫), ಅಪೋಶನ ಹಾಕುವುದು

## ತೀರ್ಥಕ್ಷೇತ್ರಗಳು

ಭೀಮವ್ವ ತಾನು ಸಂದರ್ಶಿಸಿದ ತೀರ್ಥಕ್ಷೇತ್ರಗಳನ್ನೂ ಮಿಂದ ಪುಣ್ಯತೀರ್ಥಗಳನ್ನೂ ತನ್ನ ಹಾಡುಗಳಲ್ಲಿ ಪ್ರಸ್ತಾಪಿಸಿದ್ದಾಳೆ.

ಬಂದೆನಿಲ್ಲಿಗೆ ಸಂದರುಶನಕ್ಕೆ ಬಂದೆನಿಲ್ಲಿಗೆನ್ನ ಮನದಿ
ಬಂದು ನಿಲ್ಲೆಂದು ನಿನ್ನ ವಂದಿಸ್ವರವ ಬೇಡುವೆ ನಾ
ನಂದನ ಸುಂದರ ಕೃಷ್ಣ ಬಂದೆನಿಲ್ಲಿಗೆ
....................................
ಅಷ್ಟಮಠದ ಯತಿಗಳಿಂದ ಮುಟ್ಟಿ ಪೂಜೆಗೊಂಬುವಂಥ
ಶ್ರೇಷ್ಠರೊಳಗೆ ಶ್ರೇಷ್ಠ ನಿನ್ನ ಕೃಷ್ಣ ಮುಖವ ನೋಡಲೀಗ (ಹಾ. ೯೧)

—ಎಂದು ರಜತಪೀಠಪುರಿ(ಉಡುಪಿ)ಯ ಕೃಷ್ಣನನ್ನು ಕುರಿತು ಹಾಡಿರುವಳು. ಸೋದೆ ಕ್ಷೇತ್ರದ ವಾದಿರಾಜರು (ಹಾ. ೭), ಕೊಲ್ಹಾಪುರದ ಲಕ್ಷ್ಮಿ (ಹಾ. ೭೧), ಪಂಢರಾಪುರದ ಪಾಂಡುರಂಗ (ಹಾ. ೮೩), ಕಾಶೀವಿಶ್ವನಾಥ (ಹಾ. ೪೪), ಗಯೆಯ ವಿಷ್ಣುಪಾದ (ಹಾ. ೧೬೩), ಕಾಗಿನೀ ತೀರದ ಜಯತೀರ್ಥರ ವೃಂದಾವನ (ಹಾ. ೮೨), ತಿರುಪತಿಯ ತಿಮ್ಮಪ್ಪ (ಹಾ. ೨), ತಿಮ್ಮಲಾಪುರದ ರಾಮ, ವೆಂಕಟೇಶರು (ಹಾ. ೧೮, ಹಾ. ೩೭), ಮಂತ್ರಾಲಯದ ರಾಯರು (ಹಾ. ೭೮), ಹೂವಿನಹಡಗಲಿಯ ಹನುಮ (ಹಾ. ೪೭), ಜೊಮ್ಮಗಟ್ಟಿಯ ಪ್ರಾಣೇಶ (ಹಾ. ೯೬), ಆದವಾನಿಯ ಮಂಗರಾಯ (ಹಾ. ೧೦೩) ಮೊದಲಗಟ್ಟಿಯ ಹನುಮ (ಹಾ. ೧೦೮), ಸೊಸೂರು ಕ್ಷೇತ್ರದೇವತೆ ರೇಣುಕಾಂಬ (ಹಾ. ೧೩೨)—ಈ ಎಲ್ಲ ಕ್ಷೇತ್ರಮೂರ್ತಿಗಳ ಸ್ತುತಿಯನ್ನೂ ಮಾಡಿದ್ದಾಳೆ, ಭೀಮವ್ವ. ತಿರುಪತಿಯ ತಿಮ್ಮಪ್ಪನನ್ನು ಕನಕದಾಸರು 'ತಿಮ್ಮಸೆಟ್ಟಿ' ಎಂದರೆ ಈಕೆ 'ಆಸೆಯಪ್ಪನ' ಎನ್ನುತ್ತಾಳೆ. (ಹಾ. ೬೩, ನು. ೩) ನಾರಾಯಣದೇವರಕೆರೆಯ ತಿಮ್ಮಪ್ಪ ಆಕೆಯ ಮನೆದೇವರೆಂದು ತಿಳಿಯಬರುತ್ತದೆ. ಕೃಷ್ಣಾ ತೀರದ ಚಿಂತಲರೇವಳಿನ ಹನುಮಂತನನ್ನೂ ಸ್ತುತಿಸಿರುವಳು (ಹಾ. ೮೨). ತೀರ್ಥಯಾತ್ರಾ ಕಾಲದಲ್ಲಿ ತಾನು ಮಿಂದ ಗಂಗಾ, ಭಾಗೀರಥೀ, ಅಳಕನಂದಾ, ಭೀಮರಥೀ, ಯಮುನೆ, ಗೋದಾವರೀ ಮುಂತಾದ ತೀರ್ಥಗಳನ್ನೂ ಪ್ರಾರ್ಥಿಸಿದ್ದಾಳೆ. (ಹಾ. ೫೧, ಹಾ. ೫೨) ಇಷ್ಟೆಲ್ಲವನ್ನೂ ಸುತ್ತಿ ಬಂದ ಭೀಮವ್ವ ಕೊನೆಗೆ:

ಲೆಕ್ಕವಿಲ್ಲದಷ್ಟು ದೇಶ ತುಕ್ಕಿ ತಿರುಗಿದರಿಂದೆ
ದಕ್ಕುವಲ್ಲದೆ ಜ್ಞಾನ ಮುಕ್ತಿ ನೊರೆಕವುದೇನು
ಬಿಟ್ಟು ವಿಷಯದ ಭೀಮೇಶ ಕೃಷ್ಣನ
ಗಟ್ಟಿ ಧ್ಯಾನ ಭಕ್ತಿ ಹರಿಪುರ ಸೋಪಾನ ರಕ್ಷಿಸುವ ಖಗವಾಹನ

—ಎಂದಿರುವಳು. ಇದೇ ಜನರಿಗೆ ಅವ್ವನ ಸಂದೇಶ.

## ವಿಶಿಷ್ಟ ಹಾಡುಗಳು

ಈ ಎಲ್ಲ ಹಾಡುಗಳಿಗೂ ಹೊರತಾಗಿ ನಿಲ್ಲುತ್ತದೆ, ಅಪ್ಪನ 'ರಾಶಿಹಾಡು' (ಹಾ. ೨೧). 'ಎಂಥ ರಾಶಿಯೊ ಶ್ರೀಕಾಂತನ ಮುಖಸೂನು ನಿಂತು ಏರುವೊ ರಾಶಿ ನ್ಯಾಯವೊ ಇದನೆಲ್ಲರು ಹೇಳಿ'—ಎಂದು ಪ್ರಾರಂಭವಾಗಿ ಸೂರ್ಯನು ಚಲಿಸುವ ಪಥವನ್ನು ಗುರುತಿಸುವ ಹನ್ನೆರಡು ರಾಶಿಗಳ ಹೆಸರುಗಳನ್ನು (ಮೇಷ, ವೃಷಭ, ಮಿಥುನ, ಕಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ, ಮೀನ) ಒಗಟಿನ ರೀತಿಯಲ್ಲಿ ಪ್ರಸ್ತಾಪಿಸಿ, ಕೊನೆಯಲ್ಲಿ

ಈಸು ರಾಶಿಗಳು ಭೀಮೇಶ ಕೃಷ್ಣನ ದಯ
ದೀಕ್ಷಣದಲ್ಲೇ ತಿಳಿದು ಪೇಳಿ ಇದನೆಲ್ಲರು ಪೇಳಿರಿ

—ಎಂದು ಸವಾಲೊಡ್ಡಿದ್ದಾಳೆ. ಇದೇ ರೀತಿಯ ಇನ್ನೊಂದು ಒಗಟಿನ ಹಾಡನ್ನು ಭೀಮಪ್ಪನದೆಂದು ಕೆಲವರು ಗುರುತಿಸಿರುವುದುಂಟು.* ಅದು ಕೃಷ್ಣ–ರುಕ್ಮಿಣಿಯರು ಪರಸ್ಪರ ಒಗಟುಗಳನ್ನು ಹೇಳಿ ಅವುಗಳನ್ನು ಬಿಡಿಸುವ ಹಾಡು:

ರುಕ್ಮಿಣಿ: ಒಬ್ಬನ್ನ ಕಟ್ಟಿದ್ದೆ ಒಬ್ಬನ್ನ ಬಿಟ್ಟಿದ್ದೆ ಒಬ್ಬನ್ನ ಒಳಗೆ ಕರೆದೊಯ್ದೆ...
ಕೃಷ್ಣ: ದನನ್ನ ಕಟ್ಟಿದ್ದೆ ಮಾನನ್ನ ಬಿಟ್ಟಿದ್ದೆ ನಾಯನ್ನ ಒಳಗೆ ಕರೆದೊಯ್ದೆ
ರುಕ್ಮಿಣಿ: ಆಕಳ ಕಟ್ಟಿದ್ದೆ ಕರುವನ್ನ ಬಿಟ್ಟಿದ್ದೆ ಸೋಗಿನಾಲು ಒಳಗೆ ಕರೆದೊಯ್ದೆ

—ಹಾಡು ಈ ರೀತಿಯಲ್ಲಿ ಸಾಗುತ್ತದೆ. ಆದರೆ ಸಾಮಾನ್ಯವಾಗಿ ಭೀಮಪ್ಪನ ಹಾಡುಗಳ ಅಂಕಿತ 'ಭೀಮೇಶಕೃಷ್ಣ'; 'ಭೀಮೇಶ ಕೃಷ್ಣರಾಯ' ಎಂದು ಬರುವುದಿಲ್ಲ. ಮೇಲಿನ ಹಾಡಿನ ಅಂಕಿತ 'ಭೀಮೇಶಕೃಷ್ಣರಾಯ' ಎಂದಿದೆ. ಮತ್ತು ಅಪ್ಪನ ಮನೆತನದವರಲ್ಲಿ ನಮಗೆ ದೊರೆತಿರುವ ಹಸ್ತಪ್ರತಿಯಲ್ಲಿ ಈ ಹಾಡು ಇಲ್ಲ. ಅದೂ ಅಲ್ಲದೆ 'ಮಾತಾಡ್ ಮಾತಾಡು ಮಲ್ಲಿಗೆ ಮಲ್ಲಿಗೆ ಶಾವಂತಿಗೆ'—ಎನ್ನುವ ಸೊಲ್ಲಿನೊಂದಿಗೆ ಈ ಹಾಡನ್ನು ಜನಪದ ಗೀತೆಯೆಂದು ಹಾಡುತ್ತಾರೆ. ಈ ಕಾರಣಗಳಿಂದ ನಮ್ಮ ಈ ಹೊತ್ತಿಗೆಯಲ್ಲಿ ಆ ಹಾಡನ್ನು ಕೈಬಿಡಲಾಗಿದೆ.

ಅಪ್ಪನ ಕೇಶವನಾಮ ಮತ್ತೊಂದು ಹೆಸರಿಸಬೇಕಾದ ಹಾಡು. (ಹಾ. ೧೩೯) ಕೇವಲ ಮೂರು ಚಿಕ್ಕನುಡಿಗಳಲ್ಲಿ ಸಂಪ್ರದಾಯದಂತೆ ಹರಿಯ ಇಪ್ಪತ್ನಾಲ್ಕು ನಾಮಗಳನ್ನೂ ಹೇಳಿರುವುದಲ್ಲದೆ ಇಡೀ ಹಾಡು ಹೆಂಗಳೆಯರು ಮಗುವನ್ನು ತೊಟ್ಟಿಲಿಗೆ ಹಾಕುವ ಒಂದು ಶಬ್ದಚಿತ್ರವಾಗಿದೆ.

ಹಿಡಿ ಕೇಶವ ಕೃಷ್ಣ ನಾರಾಯಣನ
ಕೊಡು ಮಾಧವ ಗೋವಿಂದ ವಿಷ್ಣುನ್ನ

* ಮಾಧ್ವಸಾಮ್ರಾಜ್ಯದ ತಪಸ್ವಿಗಳು, ಪು. ೧೧೨೨.

ಕಡಲಶಯನನಾದ ತಕ್ಕೊ ಮಧುಸೂದನನ
ಕಡು ಬ್ಯಾಗದಲಿ ತಾರೆ ತ್ರಿವಿಕ್ರಮನ ಜೋಜೋ

—ಎಂದು ಮುತ್ತೈದೆಯರು ಮಗು ಶ್ರೀಹರಿಯನ್ನು ತೊಟ್ಟಿಲಿನೊಳಗಿಂದ ಕೊಟ್ಟಿಕೆಳಗಿನಿಂದ ತೆಗೆದು ಕೊಂಡಿದ್ದಾರೆ. ಹರಿದಾಸರಲ್ಲಿ ಅಪರೂಪವಾಗಿರುವ, ಕನಕದಾಸರು ವಿಜಯದಾಸರುಗಳಲ್ಲಿ ಮಾತ್ರ ಕ್ವಚಿತ್ತಾಗಿ ಬರುವ 'ರಾಧೆ'ಯ ಪ್ರಸ್ತಾಪ ಭೀಮವ್ವನಲ್ಲೂ ಬಂದಿದೆ:

ಯಾದವರೇಶನೆ ನಿನಗೆ ಭೇದವ್ಯಾಕೆನ್ನ ಮ್ಯಾಲೆ
ನೀ ದಯ ಮಾಡೆನ್ನ ಮನೆಗೆ ಮಾತ ರಾಧೆ ಕರೆದಳು (ಹಾ. ೪೧, ಸು. ೯)†

ದೊಡ್ಡ ಹಾಡುಗಳು: ಈ ಬಿಡಿಹಾಡುಗಳೇ ಅಲ್ಲದೆ ಭೀಮವ್ವ ಅನೇಕ ಧ್ವನಿಗಳು ಹಾಗೂ ವಚನಗಳಿಂದ ಕೂಡಿದ, ಕಥಾ ನಿರೂಪಣೆಯಲ್ಲೇ ಗಮನವನ್ನು ಕೇಂದ್ರೀಕರಿಸಿರುವ ಆರು ದೊಡ್ಡ ಹಾಡುಗಳನ್ನೂ ಹಾಡಿದ್ದಾಳೆ

(೧) ನಳಚರಿತ್ರೆ (೨) ಮುಯ್ಯದಹಾಡು (೩) ಪತಿದಾನಕೊಟ್ಟಹಾಡು (೪) ಶಕುಂತಲ–ದುಷ್ಯಂತಮಹಾರಾಜನ ಹಾಡು (೫) ರತಿಕಲ್ಯಾಣ ಮತ್ತು (೬) ಸುಭದ್ರಾಕಲ್ಯಾಣ.

**ನಳಚರಿತ್ರೆ**: ಮಹಾಭಾರತದ ಅರಣ್ಯಪರ್ವದಲ್ಲಿ ಬರುವ ನಳೋಪಾಖ್ಯಾನದ ಕತೆಯನ್ನು ಭೀಮವ್ವ ೧೦೫ ಧ್ವನಿಗಳನ್ನುಳ್ಳ 'ನಳಚರಿತ್ರೆ'ಯೆಂಬ ಸುದೀರ್ಘ ಹಾಡಾಗಿ ಪರಿವರ್ತಿಸಿದ್ದಾಳೆ. ಚೌಂಡರಸನು ಚಂಪುವಿನಲ್ಲಿ, ಕನಕದಾಸರು ಷಟ್ಪದಿಯಲ್ಲಿ ಹೇಳಿರುವ ನಳನ ಕತೆ ಭೀಮವ್ವನಲ್ಲಿ ಧ್ವನಿ, ವಚನಗಳಿಂದ ಕೂಡಿದ ಹಾಡಾಗಿದೆ.

ಕಂತುಪಿತನ ಕರುಣದಲಿ ದಮಯಂತಿ
ಬಂದಾಪತ್ತು ಕಳೆದು
ಸಂತೋಷದ ಸಾಮ್ರಾಜ್ಯವಾಳಿದ ಕಥೆಯ ಪೇಳುವೆನು

–ಎನ್ನುವ ಸಂಕಲ್ಪದಿಂದ ನಳನ ಕತೆ ಪ್ರಾರಂಭವಾಗಿದೆ. ಕನಕದಾಸರು ರೋಮಶಮುನಿ ಧರ್ಮರಾಯನಿಗೆ ಈ ಕತೆಯನ್ನು ಹೇಳಿದನೆಂದು ಹೇಳಿದರೆ ಭೀಮವ್ವ ಮೂಲ ಮಹಾಭಾರತವನ್ನನುಸರಿಸಿ ಬೃಹದಶ್ವನು ಹೇಳಿದನೆಂದಿರುವಳು. ಕತೆಯ ಬೆಳವಣಿಗೆ ಇಬ್ಬರಲ್ಲೂ ಹೆಚ್ಚುಕಡಿಮೆ ಒಂದೇರೀತಿಯಲ್ಲಿ ಬರುತ್ತದೆ. ನಳನ ಪರಿಚಯ, ದಮಯಂತಿಯ ಜನನ, ಹಂಸದೌತ್ಯ, ಸ್ವಯಂವರದಲ್ಲಿ ದಮಯಂತಿ ಇಂದ್ರಾದಿ ದೇವತೆಗಳನ್ನು ಬಿಟ್ಟು ನಳನನ್ನು ವರಿಸಿದ್ದು, ಕಲಿಯ ಪ್ರವೇಶ, ನಳ ದಮಯಂತಿಯರ

† (ಹಾ. ೫೩, ಸು. ೪) ಇಲ್ಲೂ ರಾಧೆಯ ಹೆಸರಿದೆ. [ಸುಭದ್ರಾಕಲ್ಯಾಣದ ೩ನೇ ಧ್ವನಿಯ ೭ನೇ ನುಡಿಯಲ್ಲಿ ಕೃಷ್ಣನನ್ನು 'ರಾಧಾವಲ್ಲಭ'ನೆಂದು ಕರೆಯಲಾಗಿದೆ.]

ಅಗಲಿಕೆ, ಅವರ ಪುನರ್ಮಿಲನ—ಇದು ಸ್ಥೂಲವಾಗಿ ಕತೆಯ ಹಂದರ. ಈ ಸಮಾನ ವಿವರಗಳು, ವರ್ಣನೆಗಳು ಇಬ್ಬರಲ್ಲೂ ತಮ್ಮದೇ ಆದ ಬೆಡಗನ್ನು ಪಡೆದಿವೆ.

ಭೀಮಪ್ಪನ ಆತುಮಾತ್ರ, ಹಾಡಿನ ವೈಖರಿಗಳಿಗೆ ಕಥಾರೂಪ ಕೊಟ್ಟಂತಿದೆ, ನಳಚರಿತ್ರೆ. ದಮಯಂತಿಯ ಸೌಕುಮಾರ್ಯ, ಚೆಲುವುಗಳು ಕಣ್ಣಿಗೆ ಕಟ್ಟುತ್ತವೆ:

ಎರಡು ಪಾದಗಳು ಎಳೆಮಾವಿನಾ ತಳಿಲಂತೆ
ನಡೆವರಾಗಜ ನೋಡಿ ನನಗೆ ಮಿಗಿಲೆಂಬುವುದು
ನಡುವ ನೋಡುತ ಸಿಂಹ ನಾಚಿ ಬೆರಗಾಗುವುದು.

ಅವಳ ಹವಳ ಕುಡಿಯಂತಹ ಕೆಂಪುತುಟಿ, ಕನ್ನಡಿಯಂತಹ ಕೆನ್ನೆ, ಕಮಲದೆಸಳಿನಂತಹ ಕಣ್ಣುಗಳು, ಕದಲಿನಂತಹ ಗುಣಗಳಿಂದ ಚೆಲುವಿನಲ್ಲಿ ರತಿಗೆ ಹೊಯ್‌ಕೈಯಾಗಿ ನಿಲ್ಲುವಳಂತೆ! ಹಾಗೆಯೇ ನಳ ಪಗಡೆಯಾಡಿ ಸೋತಬಳಿಕ ದಮಯಂತಿಯ ಪ್ರಲಾಪ (ಪ. ೩೭), ಕಾಡಿನಲ್ಲಿ ದಮಯಂತಿ ತನ್ನ ಪತಿಗೆ ಅರ್ಧಸೀರೆ ಉಡಿಸುವುದು (ಪ. ೪೩), ನಳ ದಮಯಂತಿಯನ್ನು ಬಿಡಲಾರದೆ ಬಿಟ್ಟು ಹೋಗುವುದು (ಪ. ೪೫) —ಒಂದೊಂದು ಸಂದರ್ಭವೂ ಮನಮುಟ್ಟುವಂತಿದೆ. ಕಾರ್ಕೋಟಕನಿಂದ ಕಚ್ಚಿಸಿಕೊಂಡ ನಳನ ರೂಪ ಬೆಚ್ಚುವಂತೆ ಮಾಡುತ್ತದೆ:

ವಕ್ರವಾದುದಂದ ಮುಖವು ಸೊಟ್ಟಗಣ್ಣಿಂದ ಕೆಟ್ಟಿತು ದೇಹ
ಬೆಳೆದ ಹೊಟ್ಟೆ ಕಾಲು ಕೈ ಸೊರಗಿ ಸಣ್ಣವಾಗೆ ಪಾದ
ತಿರುಗೆ ಮೂಗುವರೆಗೆ ಗೋಣು ಶಿರವ ತೂಗುತ ನಿಂತನಾಗ.

ಚೇದಿರಾಜನ ಅರಮನೆಯನ್ನು ಸೇರಿದ್ದ ದಮಯಂತಿಯನ್ನು ಸುದೇವನು ಗುರುತಿಸುವಾಗ ಅವಳ ಹಣೆಯಲ್ಲಿ ಮಾಣಿಕ್ಯ [illegible] ಹೊಳೆಯುವುದು, ಮೂಲ ಭಾರತದ ಕತೆಯಲ್ಲಿಲ್ಲದ ಅವ್ವನ ಕಲ್ಪನೆ.

ರಥವನ್ನೋಡಿಸುವ ಬಾಹುಕನ ಚಾಲಾಕು ಸೊಗಸಾಗಿ ವರ್ಣಿತವಾಗಿದೆ:

ವಾಯುವೇಗ ಮನೋವೇಗದಿ ಕುದುರೆ
ಹಾರುತಿದ್ದುವು ಗಿರಿಗಂಹ್ವರವ
ಮ್ಯಾಲೊದ್ದ್ವಸ್ತ್ರ ಬಿದ್ದಿತು ಇಲ್ಲೆನುತಿರೆ
ನೂರುಗಾವುದ ಹಿಂದಾಯಿತೀಗೆಂದ.

ಕೇಶಿನಿಯೆಂಬ ದಾಸಿಯ ಸಹಾಯದಿಂದ ಬಾಹುಕನನ್ನು ಬಗೆಬಗೆಯಾಗಿ ಪರೀಕ್ಷಿಸಿದ ದಮಯಂತಿ ಅವನೇ ತನ್ನ ಪತಿ ನಳನೆಂದು ತಿಳಿದು, ಅವನನ್ನು ತನ್ನೆಡೆಗೆ ಕರೆಸಿಕೊಳ್ಳುವಳು. ಪುನಃ ಪುಷ್ಕರನೊಡನೆ ಜೂಜಾಡಿ ರಾಜ್ಯಕೋಶಗಳೆಲ್ಲವನ್ನೂ ಗೆದ್ದುಕೊಂಡ ನಳ ತನ್ನ ಹೆಂಡತಿ ದಮಯಂತಿಯನ್ನೂ ಮಕ್ಕಳನ್ನೂ ಕೂಡಿಕೊಳ್ಳುತ್ತಾನೆ.

ಕಥಾಸರಿತ್ಸಾಗರ, ನೈಷಧೀಯ, ಚೌಂಡರಸನ ನಳಚಂಪು, ಕನಕದಾಸರ ನಳಚರಿತ್ರೆ –ಇವುಗಳನ್ನು ಗಮನದಲ್ಲಿಟ್ಟುಕೊಂಡು ಭೀಮವ್ವನ ನಳಚರಿತ್ರೆಹಾಡನ್ನು ನೋಡಿದಾಗ ಇಲ್ಲಿ ಬರುವ ದಮಯಂತಿಯ ಪೂರ್ವದ ಸ್ವಯಂವರದ ಪ್ರಸ್ತಾಪ (ವ. ೬), ಹಂಸಪಕ್ಷಿ ಮೊದಲು ನಳನಿಗೆ ಮಾತುಕೊಟ್ಟು ಅದರಂತೆ ದಮಯಂತಿಯಲ್ಲಿಗೆ ಬಂದು ಅವಳನ್ನು ಒಪ್ಪಿಸಿ ತಿರುಗಿ ನಳನಲ್ಲಿಗೆ ಬಂದು ತಿಳಿಸುವುದು (ಪ್ಯ. ೭–೧೦), ದಮಯಂತಿಯ ವಿರಹತಾಪ ಸಖಿಯರಿಂದ ಭೀಮರಾಯನಿಗೆ ತಿಳಿಯುವುದು (ವ. ೧೭), ಚೇದೀದೇಶವನ್ನು ಸೇರಿದ ದಮಯಂತಿಯನ್ನು ರಾಜಮಾತೆ ಕರೆಯುವುದು (ವ. ೩೦), ಸುದೇವನು ದಮಯಂತಿಯ ನೆಲೆಯನ್ನು ಪತ್ತೆ ಹಚ್ಚುವುದು (ಪ್ಯ. ೩೭), ಜೀವಲನ ಪ್ರಸ್ತಾಪ ಈ ಕೆಲವು ಅಂಶಗಳಿಂದ ಭೀಮವ್ವ ನಳೋಪಾಖ್ಯಾನದ ಕತೆಯನ್ನು ಅನುಸರಿಸಿರುವುದು ಸ್ಪಷ್ಟವಾಗುತ್ತದೆ. ಅಂತೆಯೇ ಸ್ವಯಂವರ ಕಾಲದಲ್ಲಿ ದಮಯಂತಿ ಹೇಳಿದಂತೆ ಬರುವ ಚ್ಯವನಋಷಿಯ ಕತೆ ಉಳಿದ ಕಾವ್ಯಗಳಲ್ಲಿಲ್ಲ; ಅದು ಪೂರ್ಣವಾಗಿ ಭೀಮವ್ವನ ಸೇರ್ಪಡೆಯೇ.

ಶ್ರೀಹರಿಯ ದಯದಿಂದ ಒಂದುಗೂಡಿದ ನಳದಮಯಂತಿಯರ ಕತೆಯನ್ನು ‘ಭಕ್ತಿಂದ ಕೇಳಿದರೆ ಕೆಟ್ಟ ಕಲಿಬಾಧೆ ಬರದು ನಾಶವಾಗುವುದು.’ ಎಂಬ ಫಲಸ್ತುತಿಯೊಡನೆ ಹಾಡು ಮುಗಿಯುತ್ತದೆ. ಈ ನಂಬಿಕೆ ಇಂದಿಗೂ ಅವ್ವನ ಮನೆತನದವರಲ್ಲಿದೆ. ಕಷ್ಟಬಂದಾಗ ದೇವರಿಗೆ ತುಪ್ಪದ ದೀಪ ಹಚ್ಚಿಟ್ಟು ನಳಚರಿತ್ರೆಹಾಡನ್ನು ಹಾಡುತ್ತಾರೆ.

## ೨ ಮುಯ್ಯದ ಹಾಡು

ಉತ್ತರಕರ್ನಾಟಕದಲ್ಲಿ ಮುಯ್ಯಕೊಡುವುದು ಒಂದು ಪದ್ಧತಿ. ಸಾಮಾನ್ಯವಾಗಿ ಮದುವೆಯ ಸಮಯದಲ್ಲಿ ಗಂಡಿನ ಮನೆಯವರು ತಮ್ಮ ಗೌರವ, ಪ್ರತಿಷ್ಠೆಗಳ ಸಂಕೇತವಾಗಿ ಬಗೆಬಗೆಯ ವಸ್ತು, ವಸ್ತ್ರಾದಿಗಳನ್ನು ತೆಗೆದುಕೊಂಡು ಹೋಗಿ ಹೆಣ್ಣಿನವರಿಗೆ ಕೊಡುವರು. ಹೆಣ್ಣಿನವರು ಅವನ್ನು ಪಡೆದು ಅದಕ್ಕೂ ಮಿಗಿಲಾದ ವಸ್ತು, ವಸ್ತ್ರಾದಿಗಳಿಂದ ಗಂಡಿನವರ ಮುಯ್ಯ ತೀರಿಸಬೇಕು. ಕೃಷ್ಣನ ಮಡದಿಯರು ಕುಂತಿಯ ಸೊಸೆಯರಿಗೆ ಮುಯ್ಯ ತೆಗೆದುಕೊಂಡು ಹೋಗಿ ಕೊಟ್ಟುಬರುವುದೇ ಈ ಹಾಡಿನ ವಸ್ತು. ಕೃಷ್ಣನ ಅಪ್ಪಣೆಯನ್ನು ಪಡೆದ ಮಡದಿಯರು ದೇವಾಧಿದೇವತೆಗಳು, ಋಷಿಪುಂಗವರು ಅಷ್ಟದಿಕ್ಕಿನ ಸಮಸ್ತ ಜನರುಗಳೆಲ್ಲರನ್ನೂ ಕೂಡಿಕೊಂಡು ಹಸ್ತಿನಾವತಿಗೆ ಹೊರಡುವರು. ಹಾಡಿನ ಉದ್ದಕ್ಕೂ ರಂಭೆ ಊರ್ವಶಿಯರ ನೃತ್ಯ, ಗರುಡನ ಅಲಂಕಾರ, ಗಂಧರ್ವರ ಗಾಯನ, ಗಜದ ಮೇಲೇರಿ ಬರುವ ಹಣ್ಣುಹಂಪಲುಗಳು, ಭಕ್ಷ್ಯಭೋಜ್ಯಗಳು ಎಲ್ಲವೂ ಒಂದರನಂತರ ಒಂದರಂತೆ, ಸ್ಥಿರಚಿತ್ರಪ್ರದರ್ಶನದಂತೆ ಮನಸ್ಸಿನ ಮೇಲೆ ಹಾದು ಹೋಗುತ್ತವೆ.

ಅನಂತರ ಪ್ರಾರಂಭವಾಗುತ್ತದೆ, ಪರಸ್ಪರರ ಮಾತಿನ ಚಕಮಕಿ. ರುಕ್ಮಿಣಿ ಭಾಮೆಯರು ದ್ರೌಪದಿ ಸುಭದ್ರೆಯರನ್ನು ಬಗೆಬಗೆಯಾಗಿ ಆಡಿಕೊಂಡು,

ನೀಚಬುದ್ಧಿ ಕೀಚಕಗೆ ಮಾತುಕೊಟ್ಟು ಕೊಲಿಸಿ ಬಂದು
ಸಾಯಿಸ್ಲಿದೆ ನನ್ನ ಎದುರು ಇಂತ ಸಖಿಯಳು
...........
ಕಂಡು ಚೆಲುವನ ಪುಂಡಗಾರಳೆ
ಕಂಡಿರಾ ಪಾರ್ಥನ ಹಾಗೆಂದು ನುಡಿದಳು
ಕೇಳಿ ಅರ್ಜುನ ಎನುತ ಪಾರ್ತೆಯು
ಕಾಳರಾತ್ರಿಯಲ್ಲವನ ಕೂಡಿದೆ ಸಖಿ

—ಎಂದು ಮುಂತಾಗಿ ಮೂದಲಿಸುವರು. ಹಾಗೆಯೇ ದ್ರೌಪದಿ ರುಕ್ಮಿಣಿ ಗಂಡನನ್ನು ಬಿಟ್ಟುಕೊಲ್ಲಾಪುರಕ್ಕೆ ನಡೆದದ್ದು; ಸತ್ಯಭಾಮೆ ಕೃಷ್ಣನನ್ನು ದಾನ ಕೊಟ್ಟದ್ದು, ಪಾರಿಜಾತದ ಪ್ರಕರಣ, ಶಮಂತಕ ಮಣಿಯ ಪ್ರಕರಣಗಳನ್ನೆಲ್ಲ ಎತ್ತಿ ಆಡುತ್ತಾಳೆ. ಹೆಂಗಸರು ಹೀಗೆ ವಾದಮಾಡುತ್ತಿದ್ದರೆ, ಕೃಷ್ಣ ಅರ್ಜುನರಿಗೆ ವಾದ ಪ್ರಾರಂಭವಾಗುತ್ತದೆ. 'ಷಂಡ ನಿನ್ನಂಥ ಪುರುಷಿಲ್ಲ, ಕೃಷ್ಣ ಸುಭದ್ರೆಗ್ವರನಲ್ಲ' ಎಂದು ಕೃಷ್ಣ ಅರ್ಜುನನನ್ನು ಮೂದಲಿಸಿದರೆ 'ಗೋಪಾಲಕ, ಹುಚ್ಚು ಪುರುಷ' ಎಂದು ಮುಂತಾಗಿ ಅರ್ಜುನ ಕೃಷ್ಣನನ್ನು ಪೀಡಿಸುತ್ತಾನೆ. ಈ ಬಿಸಿಬಿಸಿ ಮಾತುಕತೆಗಳು ಮುಗಿದಾಗ ಪರಸ್ಪರರನ್ನು ಕ್ಷಮೆ ಕೇಳುವರು. ಬಳಿಕ ರುಕ್ಮಿಣಿ ತಂಗಿಯರೊಡನೆ ದ್ರೌಪದಿಗೆ ಮುಯ್ಯ ಒಪ್ಪಿಸುವಳು. ಮುಯ್ಯಪಡೆದ ದ್ರೌಪದಿ ಅವರೆಲ್ಲರಿಗೂ ಬಗೆ ಬಗೆಯ ವಸ್ತ್ರಾಭರಣಗಳ ಉಡುಗೊರೆಯಿತ್ತು ಗೌರವಿಸುವಳು.

ಜಾಂಬೂನದಂಬರ ನಿನಗೆ ತಂದೆವು ಸ್ವಾಮಿ
ಜಾಂಬವಂತೀಶ ಉಡುಬಾರೊ
........
ವಜ್ರ ಮಾಣಿಕ್ಯದ ಹೊಸವಂಕಿ ಕಂಕಣ ಚೂಡ್ಯ
ಪ್ರಜ್ವಲಿಸುತಿರುವಂಥ ಹರಳು ಪಂಜರದ್ವಾಲೆ
ಹೆಜ್ಜೆಗಲೆವೊ ಪೀತಾಂಬರವು ಗೆಜ್ಜೆ ಸರಪಳಿ
ರುಕ್ಮಿಣಿ ದೇವೇರಿಗುಡುಗೊರೆ

—ಹೀಗೆ ಒಬ್ಬೊಬ್ಬರಿಗೂ, ಕೊನೆಗೆ ಮುಯ್ಯ ನೋಡಲು ಬಂದ ಹಸ್ತಿನಾವತಿಯ ಜನರಿಗೂ ಉಡುಗೊರೆ ದಕ್ಕುತ್ತದೆ. ಅನಂತರ ಓಕುಳಿಯಾಟದ ಕಾರ್ಯಕ್ರಮ. ಕೃಷ್ಣನಿಗೆ ಶುದ್ಧ ಸ್ನಾನ, ಅಭಿಷೇಕ, ಧೂಪ ದೀಪಾರತಿಗಳ ಸೇವೆ. ಎಲ್ಲರಿಗೂ ಬಗೆಬಗೆಯ ಭಕ್ಷ್ಯ ಭೋಜ್ಯಗಳ ಔತಣ. ಬಳಿಕ ಮುಯ್ಯಕೊಡಲು ಬಂದ ಅತಿಥಿಗಳ ಬೀಳ್ಕೊಡುಗೆ.

ಅತಿ ಧ್ವನಿಗಳಿಲ್ಲ, ಈ ಹಾಡು ವರ್ಣನಾಪ್ರಧಾನವಾದುದು. ಕೇವಲ ಮುಯ್ಯ ಕೊಟ್ಟು ಹೋಗುವ ಒಂದು ಪ್ರಸಂಗವನ್ನು ಹಿಂಜಿ ಹಿಂಜಿ ವರ್ಣಿಸಿದ್ದಾಳೆ, ಭಾವವು ಹಾಡಿನುದ್ದಕ್ಕೂ ಉತ್ಸಾಹ, ಸಡಗರ, ಸಂಭ್ರಮಗಳು ಚೆಲುವು ಜಾಣ್ಮೆಗಳೊಡನೆ ಮಿಳಿತವಾಗಿದೆ. ಚಲನ ಚಿತ್ರದ ಪರಿಣಾಮವನ್ನುಂಟುಮಾಡುವ ಶಕ್ತಿ ಈ ಹಾಡಿಗಿದೆ. ಭಾರತ ಭಾಗವತಗಳ ಅನೇಕ ಪ್ರಸಂಗಗಳ ಪ್ರಸ್ತಾಪಕ್ಕೆ ಈ ಹಾಡಿನಲ್ಲಿ ಬರುವ ಪರ

ಸ್ವರ ಪಾದಗಳನ್ನು ಬಳಸಿಕೊಂಡಿರುವ ಅಪ್ಪನ ತಂತ್ರ ಶ್ಲಾಘನೀಯ. ಈ ಕತೆಯನ್ನು ಮನಸ್ಸಿಟ್ಟು ಕೇಳಿದವರಿಗೆ ಅನಿಷ್ಟ ಓಡಿಹೋಗಿ ಇಷ್ಟಾರ್ಥ ಸಿದ್ಧಿಸಿ ಭೀಮೇಶಕೃಷ್ಣನ ದಯವಾಗುವುದೆಂಬ ಫಲಸ್ತುತಿಯೊಂದಿಗೆ ಹಾಡು ಮುಗಿಯುತ್ತದೆ. ವಚನಗಳಿಲ್ಲದೆ ಕೇವಲಧ್ವನಿಗಳಿಂದಲೇ ಪೂರ್ತಿ ಹಾಡನ್ನು ನಿರ್ವಹಿಸಿರುವುದು ಈ ಹಾಡಿನ ವೈಶಿಷ್ಟ್ಯ. ಈ ಹಾಡಿನ ಕೆಲವು ಧ್ವನಿಗಳಿಗೆ ಮಾತ್ರ ಮೂಲಪ್ರತಿಯಲ್ಲಿ (ಹಭೀ) ರಾಗ, ತಾಳಗಳು ಸೂಚಿತವಾಗಿದ್ದು ಅವುಗಳನ್ನು ಆಯಾಧ್ವನಿಯ ಅಡಿಟಿಪ್ಪಣಿಯಲ್ಲಿ ಕೊಟ್ಟಿದೆ. ಬಹುಶಃ ಹಸ್ತಪ್ರತಿಗೆ ಇವು ಅನಂತರದ, ಶಾಸ್ತ್ರೀಯ ಸಂಗೀತವನ್ನು ಬಲ್ಲವರ, ಸೇರ್ಪಡೆಯಿರಬಹುದು.

## ೩ ಪತಿದಾನ ಕೊಟ್ಟ ಹಾಡು

ಹರಿವಂಶ ಪುರಾಣದಲ್ಲಿ ಸಂಕ್ಷೇಪವಾಗಿ ಬರುವ ಕೃಷ್ಣದಾನವ್ರತದ ಕತೆಯನ್ನು ಭೀಮವ್ವ ೭೨ ನುಡಿಗಳ, ಧ್ವನಿ ವಚನಗಳಿಂದ ಕೂಡಿದ ಸುದೀರ್ಘ ಹಾಡನ್ನಾಗಿ ಹಾಡಿದ್ದಾಳೆ. ಸತ್ಯಭಾಮೆ ತನ್ನ ಪತಿ ಕೃಷ್ಣನನ್ನು ವಶೀಕರಿಸಿಕೊಳ್ಳುವ ಸಲುವಾಗಿ ಅವನನ್ನು ನಾರದರಿಗೆ ದಾನವಾಗಿ ಕೊಡಲು, ರುಕ್ಮಿಣಿ ಕೇವಲ ಒಂದು ತುಳಸೀದಳವನ್ನು ನಾರದರಿಗಿತ್ತು ಕೃಷ್ಣನನ್ನು ಹಿಂತಿರುಗಿ ಪಡೆಯುವುದೇ ಈ ಹಾಡಿನ ಕತೆಯ ಹರಹು. ನಾರದನ ಕಿತಾಪತಿ, ಚಾಡಿಕೋರ ಬುದ್ಧಿಗಳು ಕೆಲಸಮಾಡುವ ರೀತಿಗೆ ಈ ಹಾಡು ಉತ್ತಮ ನಿದರ್ಶನ.

ಕೃಷ್ಣ–ರುಕ್ಮಿಣಿಯರು ಪಗಡೆಯಾಡುತ್ತಾ ಕುಳಿತಿರಲು, ಕೃಷ್ಣನನ್ನು ಹುಡುಕಿ ಬಂದ ಸತ್ಯಭಾಮೆ ನೋಡಿ ಸಹಿಸದೆ

> ಹೆಚ್ಚಿನರಸಿಯು ಈಗ ಮೆಚ್ಚುಮಾಡಿದಳೊ
> [illegible] ಅಚ್ಯುತನನಗೆ
> ಆತ್ತಿತ್ತ ಪೋಗದಂದದಲಿ ರುಕ್ಮಿಣಿಯು
> ಮತ್ತೇನು ತೈಲ ನಿನ ನೆತ್ತಿಗೂರಿದಳೊ

ಎಂದು ಮುಂತಾಗಿ ಕೃಷ್ಣನನ್ನು ಬೈದು, ತಟ್ಟನೆ ಅಲ್ಲಿಂದ ಹೊರಟು ಹೋದಳು. ಆ ಹೊತ್ತಿಗೆ ಅಲ್ಲಿಗೆ ಹಾಜರಾದ ನಾರದನನ್ನು 'ಅನೇಕವಿಧದಿ [illegible] ಭಾಮೆಗೆ ಎನ್ನ ಕಲಿಸು ....ನೀಡಿದ್ದು ಕೊಡುವೆ ನನಗೆ ಹಣಹೊನ್ನು'. ಎಂದು ಮಾತುಕೊಟ್ಟು ಅವನ ಕೈಯಲ್ಲಿ ಸಿಕ್ಕಿಹಾಕಿಕೊಂಡ ಕೃಷ್ಣ. ಕಿಡಿಗೇಡಿನಾರದ ಅದೇ ಸಮಯವೆಂದು ಅವನ ಕೊರಳಿನಲ್ಲಿರುವ ತುಳಸಿಮಾಲೆಯನ್ನು ಬೇಡಿದ. ಕೃಷ್ಣ, ಅವಳು ತಾನು ಮಾಡಿಕೊಂಡ ಹೆಂಡತಿಯೆಂದೂ ಅವನನ್ನು '[illegible] ನೀವು [illegible] ನಾನು' ಎಂದುಬಿಟ್ಟ !

ಇತ್ತ, ಭಾಮೆಯ ಮನೆಗೆ ಬಂದ ನಾರದ

> ರುಕ್ಮಿಣಿಯ ಕೂಡೆ ಒಂದಾಗಿ
> ಕುಳಿತರೊಬ್ಬ ಕೃಷ್ಣನುಯೆಂದು

## ೪ ಶಕುಂತಲೆ–ದುಷ್ಯಂತ ಮಹಾರಾಜನ ಹಾಡು

ಮೂಲತಃ ಇದು ಮಹಾಭಾರತದ ಶಾಕುಂತಲೋಪಾಖ್ಯಾನದ ಕತೆ. 'ಭಾಮಿ ಗೊಡೆಸು, ಭೀಮಶಕ್ತ್ಯಷ್ಣು ಈ ಮಹಾಭಾರತದ ಕತೆಯನ್ನ ಮಧುವಾಡಲಿ' ಎಂದು ಅವ್ವ ಕೇಳಿಕೊಂಡರೂ ಆಕೆ ಕಾಳಿದಾಸನ ಶಾಕುಂತಲಾ ನಾಟಕವನ್ನು ನೋಡಿ, ಕಥಾ ಸರಣಿಯನ್ನು ಹಾಗೆಯೇ ಬೆಳೆಸಿರುವಳೆಂದು ಹೇಳಬಹುದು.* ಅದರ ನಾಟಕೀಯತೆಯನ್ನು ಈ ಹಾಡಿನ ಉದ್ದಕ್ಕೂ ಕಾಣಬಹುದು.

ವಿಶ್ವಾಮಿತ್ರನ ತಪಸ್ಸನ್ನು ಭಂಗಮಾಡಲು ಇಂದ್ರನಿಂದ ಪ್ರೇರಿತಳಾದ ಮೇನಕೆ ಭೂಲೋಕಕ್ಕೆ ಬರುವಲ್ಲಿಂದ ಕತೆ ಪ್ರಾರಂಭವಾಗುತ್ತದೆ. ಮೇನಕೆಯನ್ನು ವಿಶ್ವಾಮಿತ್ರ ಮೋಹಿಸಿದ ಪರಿಣಾಮವಾಗಿ ಒಂದು ಹೆಣ್ಣುಮಗು ಜನಿಸುತ್ತದೆ. ಮೇನಕೆ 'ಒಣಗಿದೆಲೆಗಳ ಮ್ಯಾಲೆ ಅಣುವಿನ ಆ ಮುನಿಚರಣದಲ್ಲಿ ಬಿಸುಟು' ತಿರುಗಿಯೂ ನೋಡದೆ ತನ್ನ ಲೋಕಕ್ಕೆ ಹೊರಡಲು, ವಿಶ್ವಾಮಿತ್ರನೂ ತನ್ನ ದಾರಿ ಹಿಡಿದ.

ಆ ಅನಾಥಮಗು ಪುಷ್ಪಸಂಗ್ರಹಣೆಗಾಗಿ ಕಾಡಿಗೆ ಬಂದ ಕಣ್ವರಿಗೆ ಸಿಕ್ಕುತ್ತದೆ. ಮಗುವನ್ನು ಆಶ್ರಮಕ್ಕೆ ಕರೆದೊಯ್ದು ಶಾಕುಂತಲಾ ಎಂದು ಹೆಸರಿಟ್ಟು ಸಾಕತೊಡಗುತ್ತಾರೆ. ಆಶ್ರಮವಾಸಿಗಳ ಲಾಲನೆ ಪಾಲನೆಯಲ್ಲಿ ಶಕುಂತಲೆ ಬೆಳೆದು ದೊಡ್ಡವಳಾಗುತ್ತಾಳೆ.

ಒಮ್ಮೆ ಬೇಟೆಯಾಡುತ್ತಾ ಅಲ್ಲಿಗೆ ಬಂದ ಹಸ್ತಿನಾಪತಿಯು ರಾಜ ದುಷ್ಯಂತ ಒಂದು ಜಿಗರೆಯನ್ನು ಬೆನ್ನಟ್ಟಿ ಇನ್ನೇನು ಬಾಣಬಿಡಬೇಕು ಎನ್ನುವಷ್ಟರಲ್ಲಿ ಇಬ್ಬರು ಬ್ರಾಹ್ಮಣರು ಎದುರಿಗೆ ಬಂದು :

ಇತ್ತ ಮಾಲಿನೀ ನದಿಯು ನೋಡದ
ರ್ದತ್ತಿಲೆ ಕುಟೀರವು
ಸತ್ಯವಂತರು ಕಣ್ವಮುನಿಗಳ
ಪುತ್ರಿಯಾದ ಶಕುಂತಲೆ
........
ಪತ್ನಿಯಾದರೆ ನಿನ್ನಸರಿ
ಪುಣ್ಯಕ್ಕೆ ಜೋಡಿನ್ನಿಲ್ಲವೊ

ಎಂದು ಹೇಳಿ ಜಿಂಕೆಯನ್ನು ಉಳಿಸುವರು. ಆ ಬಳಿಕ ದುಷ್ಯಂತ ಆಶ್ರಮಕ್ಕೆ ಬಂದು 'ಥಳಥಳನೆ ಹೊಳೆವ ಶಕುಂತಲೆಯನ್ನು ನೋಡಿ, ದುಃಖವನ್ನು ನಿವಾರಿಸಿ

---

* ಒಮ್ಮೆ 'ಶಾಕುಂತಲಾ' ಎಂಬ ಕನ್ನಡ ನಾಟಕವನ್ನು ನೋಡಿದ ಅವ್ವನು ಅವರ ಮನೆಯಲ್ಲಿ ಯಾರೋ 'ಅವ್ವಾ, ನೀನೇಕೆ ಅದರ ಮೇಲೆ ಒಂದು ಹಾಡು ಕಟ್ಟಬಾರದು' ಎಂದು ಕೇಳಿದ ಮರುದಿನವೇ ಅವ್ವನಿಗೆ ಈ ಹಾಡು ಬಂದಿತೆಂದು ಅವ್ವನ ಮರಿಮಕ್ಕಳಾದ ಶ್ರೀ ವಿಜಯರಾಯರೂ ತಿಳಿಸಿರುತ್ತಾರೆ.

ಅವಳನ್ನು ಗಾಂಧರ್ವವಿಧಿಯಿಂದ ವಿವಾಹವಾದ. ಅವಳನ್ನು ಜಾಗ್ರತೆ ಕರೆಸಿಕೊಳ್ಳುವು ದಾಗಿ ಹೇಳಿ ಹಸ್ತಿನಾವತಿಗೆ ತೆರಳಿದ.

ವಿರಹತಪ್ತೆಯಾದ ಶಕುಂತಲೆ ದೂರ್ವಾಸರ 'ಮೊರೆ ತಾನು ನಿನ್ನಾಗ ಮರೆತುಬಿಡಲಿ' ಎಂಬ ಶಾಪಕ್ಕೆ ಗುರಿಯಾಗುವಳು. ಅನಸೂಯಾ ಪ್ರಿಯಂವದೆಯರು ಉಶ್ಶಾಪವನ್ನು ಬೇಡಲು 'ರಾಜ ಕೊಟ್ಟ ಉಂಗುರವನ್ನು ನೋಡಿದಕೂಡಲೆ ನೆನಪಾಗಲಿ' ಎಂದು ಹೇಳಿ ನಡೆದರು.

ಇತ್ತ ಗರ್ಭಿಣಿಯಾದ ಶಕುಂತಲೆಗೆ ಮಗ ಹುಟ್ಟಿದ. ಭರತರಾಯನೆಂದು ಹೆಸರಿಟ್ಟರು. ತಾಯಿ ಮಗನನ್ನು ಕಣ್ವರು ದುಷ್ಯಂತನಲ್ಲಿಗೆ ಕಳುಹಿಸಲು ಅವನು :

ಇಂದುವದನೆ ನಿನ್ನ ಮುಖವ ಎಂದೂ
ಕಂಡರಿಯೆನೆ ನಾನು ನಂದು ಗುರುತೇನಿದ್ದರೆ ತೋರು
ಸುಂದರಾಂಗಿ ಸುಮ್ಮನೆ ಪೋಗು

ಎಂದುಬಿಟ್ಟ. ಆ ಹೊತ್ತಿಗೆ ಜಾಲಗಾರನೊಬ್ಬ, ಮತ್ಸ್ಯವೊಂದು ನುಂಗಿದ್ದ ರಾಜನ ಮುದ್ರೆಯುಂಗುರವನ್ನು ತಂದುಕೊಡಲು, ಅದನ್ನು ನೋಡುತ್ತಲೇ ದುಷ್ಯಂತನಿಗೆ ತಟ್ಟನೆ ಎಲ್ಲವೂ ನೆನಪಾಗುತ್ತದೆ. ಅದೇ ವೇಳೆಗೆ 'ಪೊಡವಿಗೊಡೆಯನೆ ದುಷ್ಯಂತನೆ ಕೇಳು ನಿನ್ನ ಮಡದಿ ಪಾವನೆ ನೀ ಮಾಡಿಕೊಂಡಪ್ಪುದು' ಎಂದು ಆಕಾಶವಾಣಿ ನುಡಿಯುತ್ತದೆ. ಆಗ ರಾಜ ಎದ್ದು ಶಕುಂತಲೆಯನ್ನು ಸ್ವೀಕರಿಸಿ, ಮಗನೊಡನೆ ತಾಯಿಗೆ ನಮಸ್ಕರಿಸಲು ತೆರಳಿದ. ಶೀಘ್ರದಲ್ಲಿಯೇ ಮಗ ಭರತನಿಗೆ ಪಟ್ಟಾಭಿಷೇಕ ಮಾಡಿ ತನ್ನ ಮಾತನ್ನು ಉಳಿಸಿಕೊಂಡ.

ಕಾಂತನಾದಂಥ ದುಷ್ಯಂತರಾಜನು ತನ್ನ
ಕಾಂತೆ ಶಕುಂತಲೆಯ ಕೂಡಿಕೊಂಡ ಕಥೆಯ
ಸಂತೋಷದಿಂದ್ಹೇಳಿಕೇಳಿದ ಜನಕೆಲ್ಲ
ಸಂತಾನ ಸಂಪತ್ತು ಸಾಯುಜ್ಯಪದವಿ ಶ್ರೀ
ಕಾಂತ ಭೀಮೇಶಕೃಷ್ಣನು ಒಲಿದು ವರಗಳಕೊಡುವನು

ಎಂಬ ಫಲಶ್ರುತಿಯೊಂದಿಗೆ ಧ್ವನಿ, ವಚನಗಳಿಂದ ಕೂಡಿದ ೬೧ ಧ್ವನಿಗಳ ಈ ಹಾಡು ಮುಗಿಯುತ್ತದೆ. ಹಾಡಿನುದ್ದಕ್ಕೂ ನಾಟಕೀಯತೆಯ ಸೊಬಗು ಮಿಂಚಿದೆ. ದೂರ್ವಾಸರ ಶಾಪವೃತ್ತಾಂತ ಮೂಲಭಾರತದಲ್ಲಿ ಇಲ್ಲದಿದ್ದರೂ ಭೀಮವ್ವ ಕಾಳಿದಾಸನನ್ನನುಸರಿಸಿ ತನ್ನ ಹಾಡಿನಲ್ಲಿ ತಂದಿದ್ದಾಳೆ. ಉಂಗುರದರ್ಶನವಾದಾಗ ಜೊತೆಗೆ ಮೂಲದ ಆಕಾಶವಾಣಿಯನ್ನೂ ಉಳಿಸಿಕೊಂಡಿದ್ದಾಳೆ. ಆದರೂ ಕಣ್ವರಿಗೆ ಶಕುಂತಲೆಯ ವಿವಾಹವಾಗಿ ಆಕೆ ಗರ್ಭಿಣಿಯಾಗಿರುವ ವೃತ್ತಾಂತ ಆಕಾಶವಾಣಿಯ ಮೂಲಕ

ತಿಳಿಯುವುದು ; ಗರ್ಭಿಣಿಯಾಗಿದ್ದಾಗಲೇ ಶಕುಂತಲೆಯನ್ನು ಕಣ್ವರು ದುಷ್ಯಂತನಲ್ಲಿಗೆ ಕಳುಹಿಸುವುದು ; ದುಷ್ಯಂತನಿಂದ ತಿರಸ್ಕೃತಳಾದ ಶಕುಂತಲೆಯನ್ನು ಮೇನಕೆ ಕರೆದೊಯ್ಯುವುದು ; ಶಕುಂತಲೆಯ ಮಗನಿಗೆ ಸರ್ವದಮನನೆಂದು ಹೆಸರಿಡುವುದು, ದುಷ್ಯಂತ–ಶಕುಂತಲೆಯರ ಪುನರ್ಮಿಲನ ಮಾರೀಚಾಶ್ರಮದಲ್ಲಿ ಆಗುವುದು– ಈ ಕೆಲವು ಕಾಳಿದಾಸನ ನಾಟಕದ ಅಂಶಗಳನ್ನು ಅಪ್ಪ ಕೈಬಿಟ್ಟಿದ್ದಾನೆ. ಇದರಿಂದ ಅಪ್ಪನ ಕಥಾ ನಿರೂಪಣೆ ಇನ್ನೂ ಸರಳ, ಸುಲಭ, ನೇರವಾಗಿ ಪರಿಣಮಿಸಿದರೂ, ಸೊಗಸು ಕುಂದಿದೆ

## ೫. ರತಿಕಲ್ಯಾಣ

ರತಿ–ಮನ್ಮಥರ ವಿವಾಹವೇ ಈ ಹಾಡಿನ ವಸ್ತು. ಭಾಗವತದಲ್ಲಿ ಬರುವ ಮನ್ಮಥ ದಹನದ ಅನಂತರದ ಕತೆಯನ್ನು ಕನಕದಾಸರು ತಮ್ಮ ಮೋಹನತರಂಗಿಣಿಯಲ್ಲಿ ಬಳಸಿಕೊಂಡಿರುವಂತೆ ಕೃಷ್ಣನ ಮಗನಾದ ಮನ್ಮಥ–ರತಿಯರ ವಿವಾಹದ ವೈಭವವನ್ನು ಭೀಮಪ್ಪ ೬೧ ಪದ್ಯಗಳಲ್ಲಿ ವಿಸ್ತಾರವಾಗಿ ಹಾಡಿದ್ದಾನೆ. ಜೊತೆಗೆ 'ಕೃಷ್ಣನನುಜೆ ಕೃಷ್ಣೆ ಮಹಿಮೆ'ಯನ್ನೂ ಹೇಳುವುದಾಗಿ ಸಂಕಲ್ಪ ಮಾಡಿರುವನು. ಮನ್ಮಥನು ಶಂಬರಾಸುರನನ್ನು ವಧಿಸಿದ ಅನಂತರ,

ಗಂಡ ಸಣ್ಣವನಾದರ್ಕೊಂಡಿರಿಗಿದು ಭಾಳ  
ಮುಂಡಿ (ಡೆ ?) ಕುಗ್ಗಲ್ಲೆ ಭೂಮಂಡಲದೊಳಗೆ  
ವರಹೀನ ಪತಿಯು ಕೂಡಿರುವುದುಚಿತವಲ್ಲ  
ಉರಿಯು ಬೀಳುವುದೆ ಲೇಸು [ಉ]ತ್ತಮ ಜನರಿಗೆ

ಎಂದು ಹೇಳಿದ ನಾರದರ ಮಾತುಗಳನ್ನು ಕೇಳಿದ ರತಿ ಅಗ್ನಿ ಪ್ರವೇಶಮಾಡಿ ಕಮಲಾವತಿಯ ರಾಜನಿಗೆ ಮಗಳಾಗಿ ಹುಟ್ಟಿ ತನ್ನ ಪತಿಯ ಧ್ಯಾನದಲ್ಲೇ ಬೆಳೆಯುತ್ತಿದ್ದಳು.

ಇತ್ತ ರತಿಯನ್ನಗಲಿದ ಮನ್ಮಥನ ದುಃಖವನ್ನು ನೋಡಿದ ರುಕ್ಮಿಣಿ ಕೃಷ್ಣನಿಗೆ ಹೇಳಲು, ಇನ್ನು ಏಳು ದಿನಗಳಲ್ಲಿ ಅವನಿಗೆ ಕನ್ಯೆಯನ್ನು ತರುವುದಾಗಿಯೂ ಇಲ್ಲದಿದ್ದರೆ ತಾನು ಸೋಳಸಾವಿರ ಸತಿಯರನ್ನು ಬಿಟ್ಟು ಬಿಡುವುದಾಗಿಯೂ ಶಪಥಮಾಡಿದನು. ಅಷ್ಟ ದಿಕ್ಕುಗಳನ್ನು ಶೋಧಿಸಿದರೂ ತಕ್ಕ ಕನ್ಯೆ ಸಿಕ್ಕಲಿಲ್ಲ. ಕೃಷ್ಣ ಕಾಣದೆ ಸುಮ್ಮನೆ ಬೇಸರದಿಂದ ಕುಳಿತುಬಿಟ್ಟ. ಆ ವೇಳೆಗೆ ಅಲ್ಲಿಗೆ ಬಂದ ನಾರದ :

ಪೃಥಿವಿಗೊಡೆಯ ಕಮಲಾವತಿ ರಾಜಗೆ  
ಸುತೆಯಾಗಿಹುಟ್ಟಿಹಳತಿ ಗುಣವಂತೆ  
ಅಂಗನಾಮಣಿ ಅರವಿಂದಲೋಚನೆ ಆ  
ನಂಗಗೆ ತಕ್ಕಕನ್ನಿಕೆ ನೋಡವಳು

ಎಂದು ಹೇಳಿ 'ಈ ಕಾರ್ಯಕ್ಕೆ ಗೋಪಾಲಕನಾದ ನೀನು ಹೋಗುವುದು ಬೇಡ; ಪಂಚಪಾಂಡವರ ಮಡದಿ ದ್ರೌಪದಿಯನ್ನು ಕಳುಹಿಸು' ಎಂದು ಸೂಚಿಸುವನು. ಸರಿ,

ಇತ್ಯಾದಿಗಳಿಂದ ಅತಿ ಭಯಂಕರಿಯಾಗಿ ಪರಿಣಮಿಸಿ ಶಾಂಬ್ರಿಕನ ಒಡಲನ್ನು ಬಗೆದು ಕರುಳನ್ನು ಕಿತ್ತು ರಕ್ತವನ್ನು ಚೆಲ್ಲಾಡಿದಳು. ರತಿಯನ್ನು ಬಗಲಲ್ಲೆತ್ತಿ ತಂದು ಕಮಲರಾಜನ ಮುಂದೆ ಇಳಿಸಿದಳು. ಈ ಭಾಗ ಪೂರ್ತಿ ಭೀಮವ್ವನ ಕಲ್ಪನೆಯೇ.

ಮುಂದೆ ನಿರಾತಂಕವಾಗಿ, ಶಾಸ್ತ್ರೋಕ್ತವಾಗಿ ರತಿ–ಮನ್ಮಥರ ಕಲ್ಯಾಣವಾಯಿತು. ಆರತಿ ಉರುಟಣೆ ಊಟಗಳ ಸಂಭ್ರಮವೋ ಸಂಭ್ರಮ. ಕೊನೆಯಲ್ಲಿ ಬೀಗರೆಲ್ಲರನ್ನೂ ಕೂಡಿಸಿ ಉಡುಗೊರೆ ಕೊಡುವ ಉತ್ಸಾಹ, ಓಕುಳಿಯಾಟದ ಕೇಕೆ! ಇಷ್ಟೆಲ್ಲ ಸಂತೋಷ ಸಂಪತ್ತುಗಳಿಗೆ ಆಕರವಾದ ರತಿಕಲ್ಯಾಣದ ಕತೆಯನ್ನು ಕೇಳಿದವರಿಗೆ 'ಶ್ರೀಪತಿ ಒಲಿದು ಕೊಡುವ ಕಾಮಿತ ಫಲದ ಕರುಣದಿಂದ' ಎಂಬ ಫಲಸ್ತುತಿಯೊಂದಿಗೆ ಹಾಡು ಮುಗಿಯುತ್ತದೆ.*

## ೬ ಸುಭದ್ರಾಕಲ್ಯಾಣ

ಈ ಹಾಡಿನ ಮೂಲಕತೆ ಭಾಗವತ(ದಶಮಸ್ಕಂಧ), ಮಹಾಭಾರತಗಳಲ್ಲಿದ್ದರೂ ನಿರೂಪಣಾವಿಧಾನ, ವರ್ಣನೆಗಳು, ಸೂಕ್ಷ್ಮಘಟನಾವಳಿಗಳ ಚಿತ್ರಣ ಭೀಮವ್ವನ ಸ್ವಂತಿಕೆಯೇ ಆಗಿದೆ. ಒಮ್ಮೆ ದ್ರೌಪದಿ ಧರ್ಮರಾಯರು ಏಕಾಂತದಲ್ಲಿದ್ದಾಗ ಒಬ್ಬ ಬ್ರಾಹ್ಮಣನ ಗೋವುಗಳನ್ನು ರಕ್ಷಿಸುವ ಸಲುವಾಗಿ ಆಯುಧಗಳನ್ನು ತೆಗೆದುಕೊಳ್ಳಲು ಅರ್ಜುನ ಅಲ್ಲಿಗೆ ಹೋಗಬೇಕಾಗುತ್ತದೆ. ಒಪ್ಪಂದದಂತೆ ಅರ್ಜುನ ತೀರ್ಥಯಾತ್ರೆಗೆ ಹೋಗಲು ಅಣ್ಣನ ಅಪ್ಪಣೆಯನ್ನು ಕೇಳುತ್ತಾನೆ.

ಅಗಲಿರಲಾರೆ ಅರ್ಜುನಕೇಳೊ ನೀ ಎನ್ನ
ಮಗುವೆಂದು ನಾನು ತಿಳಿದೆನೊ

ಎಂದು ಧರ್ಮರಾಯ ಎಷ್ಟು ವಿಧವಾಗಿ ಹೇಳಿದರೂ ಕೇಳದೆ ಅರ್ಜುನ ಹೊರಟುಬಿಟ್ಟ. ಗಂಗಾತೀರದಲ್ಲಿ ಉಲೂಪಿಯನ್ನು ವರಿಸಿ, ಮಣಿಪುರದಲ್ಲಿ ಚಿತ್ರಾಂಗದೆಯನ್ನು ಪರಿಗ್ರಹಿಸಿ, ದ್ವಾರಾವತಿಗೆ ಬಂದ. ಅಲ್ಲಿ ಬಲರಾಮ ಸುಭದ್ರೆಯನ್ನು ಕೌರವನಿಗೆ ಕೊಡಬೇಕೆಂದಿರುವುದನ್ನೂ, ಸುಭದ್ರೆಗೆ ಅದು ಇಷ್ಟವಿಲ್ಲವೆಂಬುದನ್ನೂ ತಿಳಿದು

ನಾ ಸುಭದ್ರೆಯ ತರದೆಯೋದರೆ
ವಿಾಸೆಯೂತಕೀ ಮುಖದೊಳೆಂದು

ಪ್ರತಿಜ್ಞೆ ಮಾಡಿ ಸನ್ಯಾಸಿವೇಷವನ್ನು ಧರಿಸಿದ; ಕೃಷ್ಣನ ಸಹಾಯ ಸಹಕಾರಗಳನ್ನು ಬೇಡಿದ; ಕೃಷ್ಣ ಸುಭದ್ರೆಯನ್ನು ಕೊಡಿಸುವುದಾಗಿ ವಚನವಿತ್ತ.

---

* ಭೀಮವ್ವನ ಮಗ ದಾವಣಗೆಯ ಬಳಿಯ ಮಾಗೂವಳ್ಳಿ ಗ್ರಾಮದಲ್ಲಿ ಕೆಲಸದಲ್ಲಿರುವಾಗ ರಾಘಪ್ಪ ಎಂಬ ಬ್ರಾಹ್ಮಣನೊಬ್ಬ ಒಂದು ಪುಸ್ತಕದಿಂದ 'ರತಿಕಲ್ಯಾಣ' ಎಂಬ ಕತೆಯನ್ನು ಓದಿಹೇಳಿದ್ದೇ ಅವ್ವನ ಈ ದೊಡ್ಡ ಹಾಡಿಗೆ ಪ್ರೇರಣೆಯಂತೆ.

ಯತಿಗಳು ಬಂದಿರುವ ಸುದ್ದಿ ತಿಳಿದ ಬಲರಾಮ, ಅವರನ್ನು ಸತ್ಕರಿಸಿ ಮನೆಗೆ ಕರೆದೊಯ್ದು ಸೇವೆಗೆಂದು ತಂಗಿ ಸುಭದ್ರೆಯನ್ನೇ ನೇಮಿಸುವನು. ಹಗಲಿನಲ್ಲಿ ಯತಿಗಳನ್ನು ಸೇವಿಸುತ್ತಾ ರಾತ್ರಿಯಲ್ಲಿ

ಅಣ್ಣಯ್ಯಗೆನ್ನಲ್ಯಂತಃಕರಣಗಳಿಲ್ಲ
ಟೊಣ್ಯಕೌರವಗೇ ಒಪ್ಪಿಸಿಕೊಡುವನೆಂದು

ಚಿಂತಿಸುತ್ತಾ ನಿದ್ದೆ ಬಾರದೆ ಕಳವಳಿಸುವಳು. ಕೊನೆಗೆ ತನ್ನ ಸೋದರತ್ತೆಯ ಮಗನ ಸಮಾಚಾರವನ್ನು ಆ ಯತಿಗಳಿಂದಲೇ ತಿಳಿಯುವ ಸಲುವಾಗಿ ಅರ್ಧರಾತ್ರಿಯಲ್ಲಿ ಎದ್ದು ಬಂದು ಯತಿವೇಷಧಾರಿ ಅರ್ಜುನನ ಎದುರಿನಲ್ಲಿ ನಿಂತು

ಕಂಡಿರಾ ಯತಿರಾಯ ಪಾಂಡವ ಎನ್ನ ಪ್ರಿಯನ
ಕೌಂತೇಯನಮ್ಮಾಲಂತಃಕ್ಕರಣ್ಕೆನಗುಂಟಾಗಿದೆ
ಕೃಷ್ಣೆಕಾಂತರ್ಜುನನ ಕಂಡಿರಾ

ಎಂದು ಕೇಳುವಳು! ಈ ಮಾತುಗಳು ಕಿವಿಗೆ ಬಿದ್ದದ್ದೇ ತಡ 'ಕೆಟ್ಟ ಕುರುಡನಿಗೆ ದಿವ್ಯ ದೃಷ್ಟಿಬಂದಂತೆ' ಅರ್ಜುನ ಪರಮಾನಂದಭರಿತನಾದ. ತಾನು ಅರ್ಜುನನನ್ನು ಕಂಡಿರುವುದಾಗಿಯೂ, ಅವನು ದ್ವಾರಾವತಿಯಲ್ಲಿಯೇ ಇರುವುದಾಗಿಯೂ ಹೇಳಿ ಅವಳನ್ನು ಸಾಕಷ್ಟು ಸತಾಯಿಸಿ, ಕೊನೆಗೆ :

ಮಂದಬುದ್ಧಿಯೇನೆ ನಿನಗೆ ಅಂಧಕಳಾದಿಯೆ ನೀನು
ಬಂದೆ ನಾ ಯತಿಯಾಗಿ ಪಾರ್ಥಎಂದು ತಿಳಿಬ್ಯಾಗೇ

ಎಂದು ಹೇಳಿದ. ಅದನ್ನು ಕೇಳಿದ ಸುಭದ್ರೆ ಲಜ್ಜೆ, ಭಯ, ಅವಮಾನಗಳಿಂದ 'ಯಾಕೆ ಬಂದೆನೊ ಇಲ್ಲಿಗ್ಯಾಕೆಬಂದೆನು ನಾನು' ಎಂದು ಅಲವತ್ತುಕೊಳ್ಳಲು, ಅರ್ಜುನ ಎದ್ದುಬಂದು ಅವಳನ್ನು ಮುದ್ದಿಸಿ, ಬೆವರೊರೆಸಿ, ಜಾರಿಬಿದ್ದ ಸೆರಗನ್ನು ಹೊದಿಸಿ ಸಂತೈಸಿದ.

ವಿಷಯ ತಿಳಿದ ಕೃಷ್ಣ ಸತಿಯರೊಡನೆ ಆಗಮಿಸಿ, ದೇವಕಿ, ಉದ್ಧವ, ಅಕ್ರೂರರನ್ನು ಕರೆಸಿ ಇಂದ್ರ, ಬೃಹಸ್ಪತಿ, ಗರ್ಗಾಚಾರ್ಯರನ್ನು ಆಹ್ವಾನಿಸಿದ. ಕೂಡಲೇ ಹಸೆಜಗುಲಿಯನ್ನು ನಿರ್ಮಿಸಿ. ಶಾಸ್ತ್ರೋಕ್ತವಾಗಿ ಅರ್ಜುನ ಸುಭದ್ರೆಯರಿಗೆ ಮದುವೆ ಮಾಡಿಸಿದ. ಸಾವಧಾನವಾಗಿ ನಾಲ್ಕು ದಿನಗಳು ನಡೆಯಬೇಕಾಗಿದ್ದ ಶಾಸ್ತ್ರ ಸಂಪ್ರದಾಯಗಳನ್ನೆಲ್ಲ ಒಂದೇ ರಾತ್ರಿಯಲ್ಲಿ ಮುಗಿಸಿದ ಕೃಷ್ಣ ನವದಂಪತಿಗಳನ್ನು ಇಂದ್ರಪ್ರಸ್ಥಕ್ಕೆ ಕಳುಹಿಸಿಕೊಟ್ಟ.

ಸುದ್ದಿ ತಿಳಿದು ಕೌರವನಿಗೆ ವಚನಕೊಟ್ಟು ಭ್ರಷ್ಟನಾದೆನೆಂದು ಹಾರಾಡುತ್ತಿದ್ದ ಬಲರಾಮನನ್ನು, ಕೃಷ್ಣ 'ಅತ್ತೆ ತನಯ ಪಾರ್ಥನಂಥ ಶ್ರೇಷ್ಠರುಂಟೇನೋ?, ಅವನು

ಬಿಟ್ಟ ಕನ್ಯೆ ಮಾಡಿಕೊಂಡೊ ಬಿಟ್ಟರುಂಟೇನೋ' ಎಂದು ಹೇಳಿ ಸಮಾಧಾನಪಡಿಸಿದ. ಕೊನೆಗೆ ಎಲ್ಲರೂ ಹಸ್ತಿನಾವತಿಗೆ ತೆರಳಿ ಧರ್ಮಭೀಮಾರ್ಜುನರೊಂದಿಗೆ ಉಂಡುಟ್ಟು, ಓಕುಳಿಯಾಡಿ ದ್ವಾರಕೆಗೆ ಹಿಂತಿರುಗುತ್ತಾರೆ. ಈ ಸುಭದ್ರಾ ಕಲ್ಯಾಣವನ್ನು ಕೇಳಿದವರಿಗೆ 'ಮಂಗಳಾದೇವಿ ರಮಣನು ಒಲಿದು ಜಯಮಂಗಳ ಕೊಡುವ....ವರಗಳ ಕೊಡುವ' ಎಂಬ ಫಲಸ್ತುತಿಯೊಂದಿಗೆ ಹಾಡು ಮುಗಿದಿದೆ.

ಅಪ್ಪನ ಈ ಎಲ್ಲ ದೊಡ್ಡ ಹಾಡುಗಳನ್ನೂ ಬೇರೆ ಬೇರೆ ನಿರ್ದಿಷ್ಟ ಧಾಟಿಗಳಲ್ಲಿ ಹಾಡುವ ಕ್ರಮವಿದೆ. ಅವಳ ಮನೆತನದವರು ಈಗಲೂ ಆಯಾ ಧಾಟಿಗಳನ್ನು ಉಳಿಸಿಕೊಂಡು ಬಂದಿದ್ದಾರೆ. ನಮಗೆ ಅಪ್ಪನ ಮರಿಮಕ್ಕಳಾದ ವಿಜಯರಾಯರ ಪತ್ನಿ ಶ್ರೀಮತಿ ದಿ॥ ರಾಧಾಬಾಯಿಯವರು ಹಾಡಿದ ಕೆಲವು ಹಾಡುಗಳ ಧಾಟಿಗಳನ್ನು ಮಾತ್ರ ಧ್ವನಿಮುದ್ರಿಸಿಕೊಳ್ಳಲು ಸಾಧ್ಯವಾಗಿದೆ.

## ಕಾವ್ಯಶೈಲಿ

ಭೀಮವ್ವನ ಹಾಡುಗಳನ್ನು ಓದುತ್ತಾ ಹೋದರೆ ಆಕೆ ಹೆಚ್ಚು ಶ್ರಮಪಡದೆ ಸುಲಲಿತವಾಗಿ, ನಿರರ್ಗಳವಾಗಿ ಹಾಡುತ್ತಾ ಹೋಗಿರುವುದು ಅನುಭವಕ್ಕೆ ಬರುತ್ತದೆ.

ಮುಗ್ಗವನೆ ಹಾಕಿ ಮಾರುಬಟ್ಟೆನೇದಿಲ್ಲ
ರೊಕ್ಕವನೆ ಕೊಟ್ಟು ತರಲಿಲ್ಲ ತರಲಿಲ್ಲ ದ್ರೌಪದಿಗೆ
ಲೆಕ್ಕಿಲ್ಲದ್ವಸ್ತ್ರ ಉಡಿಸಿದಿ ( ಹಾ. ೩೨, ನು. ೨೯ )

ಬಹುಶಃ ಬೇರೆ ಯಾವ ದಾಸರೂ ಇಷ್ಟು ಸಹಜವಾಗಿ ಸೊಗಸಾದ ಅಡುಮಾತುಗಳಲ್ಲಿ ದ್ರೌಪದಿಗೆ ಕೃಷ್ಣ ಅಕ್ಷಯ ವಸ್ತ್ರವನ್ನಿತ್ತ ಪ್ರಸಂಗವನ್ನು ಹೇಳಿಲ್ಲ. ಬಗೆ ಬಗೆಯ ವರ್ಣನೆಗಳಿಂದ ಹಾಡುಗಳನ್ನು ರಸಭರಿತವಾಗಿ ಮಾಡಿದ್ದಾಳೆ, ಭೀಮವ್ವ. ಪ್ರಾಸ, ಅನುಪ್ರಾಸಗಳು ಕಿವಿಯಲ್ಲಿ ಅನುರಣನಗೊಳ್ಳುತ್ತವೆ:

ಅಂಧಕಾರದ ಮನೆಯೊಳಿಟ್ಟಿದ್ದ ದಧಿ ಬೆಣ್ಣೆ
ಚಂದ್ರನಂತ್ಹೊಕ್ಕು ತಾ ತಿಂದ ನೋಡಮ್ಮ ( ಹಾ. ೧೦, ನು. ೯ )

ಏನುಮಾಡಿದನೀಗ ನಮುರಂಗ
ಬೇಡಿ ಬಯಸಿದ್ದಿರವನಂಗಸಂಗ
ಜೋಡೇನೆ ನಿಮಗೆ ಕೋಮಲಾಂಗ
ಮರನೇರಿ ಮಾಡಿದನೆ ಮಾನವು ಭಂಗ ( ಹಾ. ೪೨, ನು. ೧ )

ಗೋವಿಂದನ ಕೊಳಲಗಾನವನ್ನು ಕೇಳಿ ಭಕ್ತಿಭಾವದಿಂದ ಚಿತ್ತಪರವಶರಾಗಿ ನಡೆದ ಗೋಪಿಯರ ಅಲಂಕಾರ ಎಂತಹವರಿಗೂ ನಗೆತರಿಸುವಂತಹುದು:

ಹಲ್ಲಿಗೆ ಕುಂಕುಮ ಗಲ್ಲಕ್ಕೆ ಕಾಡಿಗೆ

ಚೆಲ್ವ ಹಚೆಗೆ ಅರಿಷಿಣವ ತೀಡಿ
ಚೆಲ್ವ ಹಚೆಗೆ ಅರಿಷಿಣವ
ಪುಲ್ಲಾಕ್ಷದಲ್ಲಿ ಕಸ್ತೂರಿತಿಲಕವನಿಟ್ಟು
ಗೊಲ್ಲಸತಿಯರು ನಡೆದರು. (ಹಾ.೧೨ ನು.೧೧)

ಅಪ್ಪನ ಹಾಡುಗಳಲ್ಲಿ ಉಪಮಾಲಂಕಾರ, ರೂಪಕಾಲಂಕಾರಗಳೂ ಅಲ್ಲಲ್ಲಿ ಸುಳಿದಿವೆ. ಉದಾ: ನಳದಮಯಂತಿಯರ ಜೋಡಿ 'ಮೊಸರು ತಂಬಿಗ್ಗೆ ಹಿಪ್ಪಿಟ್ಟಂತೆ ಕೂಡಿದೆಯಂತೆ' (ನಚ.ಪ.೮). ದ್ರೌಪದಿಯು 'ಬಿಟ್ಟ ತಲೆಯಂಬಂಥ ಸೀರೆ ಉಟ್ಟು', 'ಭೀಮಸೇನ ಕೃಷ್ಣನ ಸಗಿ ಕ್ರೀಷ್ಣ ಶಿಂಬ ಗಸಿನಾಲೆಯುಟ್ಟು' ಒಲಾಕಿದಳಂತೆ.

ಹಾಡುಗಳಲ್ಲಿ ಅಪ್ಪನ ಲೋಕಾನುಭವ ಗಾದೆಯ ಮಾತುಗಳಾಗಿ ಮೂಡಿ ಬಂದಿವೆ: "ಕೆಟ್ಟು ಪಟ್ಟಣ ಸೇರಿಕೊಂಬುದಕಿಂತ ಅಟ್ಟಡವಿಯಲ್ಲಾ ವಾಸ ಲೇಸು" (ನಚ.ಧ್ವ.೪೩), "ಮುದಿಯಾದರೆ ಮತ್ತೊಬ್ಬರಾಗುವರೆ" (ನಚ.ಪ.೨೪), "ಪರರ ಮಂದಿರವಾಸ ಪರಮ ಕಷ್ಟವೆ ತಾಯಿ." (ನಚ.ಪ.೫೨) ಇತ್ಯಾದಿ.

ಅಪ್ಪನ ಹಾಡುಗಳಲ್ಲಿ ಉದ್ದಕ್ಕೂ ಮತ್ತೆ ಮತ್ತೆ ಬರುವ ಕೆಲವು ವಿಶೇಷ ಭಾಷಾ ಪ್ರಯೋಗಗಳನ್ನು ಕಾಣಬಹುದು:

ಬ್ರಾಂಬರು-ಬ್ರಾಹ್ಮಣರು, ಬಿಸ್ಟು-ಬಿಸುಟು, ಭಾಳ-ಬಹಳ, ಅಂಕಾರ-ಅಹಂಕಾರ, ದೂರಿಂದ-ದೂರದಿಂದ, ಭಕ್ತಿಂದ-ಭಕ್ತಿಯಿಂದ, ಸೌಶಿಲಿಂದ-ಸೌಶೀಲ್ಯದಿಂದ, ಪತಿವರ್ತಿ-ಪತಿವ್ರತೆ, ಅಗ್ರ-ಅಗ್ರಹ, ಅನುಗ್ರ-ಅನುಗ್ರಹ— ಇತ್ಯಾದಿ. ಈ ಶಬ್ದಗಳಿಗೆ ಸರಿಯಾದ ರೂಪಗಳನ್ನು ಕೆಲವುಕಡೆ ಕಂಸಗಳಲ್ಲಿ ಸೂಚಿಸಿದೆ. ಉಳಿದಂತೆ ಹಾಗೆಯೇ ಬಿಡಲಾಗಿದೆ. ಈಕೆಯ ಶಬ್ದಸಂಪತ್ತು ವಿಪುಲವಾದುದು. ಒಂದೇ ಶಬ್ದಕ್ಕೆ ಪರ್ಯಾಯ ಶಬ್ದಗಳನ್ನು ಬಳಸುವುದು ಆಕೆಯ ರೂಢಿ. ಉದಾ: ಭೂಮಿಗೆ ಅವನಿ, ಪೊಡವಿ, ಪೃಥ್ವಿ, ಕ್ಷೋಣಿ, ವಸುಧೆ, ರೂಢಿ, ಕುಂಭಿನಿ, ಇಳೆ- ಇತ್ಯಾದಿ ಶಬ್ದಗಳನ್ನೂ, ಹಸ್ತಿನಾವತಿಗೆ ನಾಗಪುರ, ಕರಿಪುರ, ಕರಿಪತಿರಾಜ್ಯ, ಗಜಪುರ, ಕೌರವೇಂದ್ರಪುರ, ದಂತಿಪುರ, ಆನೆಪತಿ ಇತ್ಯಾದಿ ಶಬ್ದಗಳನ್ನೂ, ಮನ್ಮಥನಿಗೆ ಪರ್ಯಾಯವಾಗಿ ಅನಂಗ, ಅಂಗಜ, ಇಕ್ಷುಚಾಪ, ಮನಸಿಜ, ಕಂತು, ಕಂದರ್ಪ, ಕಾಮ, ಕುಸುಮಶರ, ಪಂಚಶರ, ಶಂಬರಾರಿ, ಮಾರ ಇತ್ಯಾದಿ ಶಬ್ದಗಳನ್ನೂ ಬಳಸಿರುವಳು. ಆಕೆಯ ಮೋಹಕ ಶಬ್ದಗಳ ಮೋಡಿ ಮತ್ತು ಬರಿಸುವಂತಹುದು :

ಏಳೇಳು ಕಮಲರಾಜನ ಸುತೆಯೆ
ಏಳೇಳು ಕಮಲನಾಭನ ಸೊಸೆಯೆ
ಏಳಮ್ಮ ಕಮಲಸುತನ ಸತಿರತಿಯೆ ನೀ
ಏಳೆಂದು ಹಸೆಗೆ ಕರೆದರಾಗ (ರಕ.ಧ್ವ.೪೯,ನು.೨)

ಭೀಮವ್ವ. ಮಾದೇವ ಹಾರದವೇಣಿ (=ಫಣಿವೇಣಿ), ಉರುಗಮುರುಗಿ (=ನಾಗಮುರಿಗೆ)–ಇಂತಹ ಶಬ್ದ ಚಮತ್ಕಾರಗಳನ್ನೂ ಮಾಡಬಲ್ಲಳು. ಅನ್ಯಭಾಷಾಶಬ್ದಗಳ ಬಳಕೆಯನ್ನೂ ಇವಳಲ್ಲಿ ಕಾಣಬಹುದು. ಉದಾ : ಶಿಫಾರಸ್ತು (ಶಿಫಾರಸ್) (ಮುಹಾ. ಧ್ರು. ೭೦. ನು. ೭) ದೌಲತ್ತು (ಹಾ. ೧೧೫, ನು. ೩೮), ಜುಲ್ಮಾನೆ (ಹಾ.೧೧೫, ನು. ೨೭), ಬಾಜಾರ (ಬಜಾರ್) (ಹಾ. ೧೧೫, ನು. ೭) ಇತ್ಯಾದಿ.

ಅವ್ವನ ಹಾಡುಗಳಲ್ಲಿ ವಡಿ ಇಡಿಕಿರಿದಿವೆ :

ಮೊದಲೆ ಪಾಲಿಸೆನ್ನ ಮೊದಲಗಟ್ಟಿಹನುಮನೆ
ಮುದದಿ ಜಾನಕಿಗೆ ಮುದ್ರೆಇಟ್ಟವಾನರನೆ

ಆದಿಪ್ರಾಸ ನಿಯತವಾಗಿಬಂದರೂ ಅಲ್ಲಲ್ಲಿ ಇದಕ್ಕೆ ಅಪವಾದವುಂಟು. (ಉದಾ: ಹಾ.೨೦, ಹಾ. ೨೩) ಕೆಲವುಕಡೆ ಪ್ರಾಸದ ಸಲುವಾಗಿ ವ್ಯಾಕರಣಶುದ್ಧವಲ್ಲದ ಪ್ರಯೋಗಗಳ ಬಳಕೆಯನ್ನು ಕಾಣಬಹುದು :

ನೀಲವರ್ಣನೆ ನೀರಜಾಕ್ಷ ನಿನ್ನಪಾರ
ಗುಣವ ನಾ ಏನು ವರ್ಣಿಸಲ್ಲೇಳೊ ಸಾಕ್ಷ
ಇಂದಿರಾಪತಿ ನಿನ್ನ ಆಕಾರ ನೋಡುವನೆ
ನೆಂಪುಟ್ಟಿತೆನಗೆ ಮಹಾಪೇಕ್ಷ

ನಾಟಕೀಯಗುಣ ಅವ್ವನ ಹಾಡುಗಳ ಜೀವಾಳ. ಅವಳ ಕೃತಿಗಳೆಲ್ಲವೂ ಭಕ್ತಿರಸದಿಂದ ತುಂಬಿದ್ದು ಭಾವಪೂರ್ಣವಾಗಿ ರಸಭರಿತವಾಗಿವೆ. ನಾಟಕಗಳಂತೆ ಸಜೀವವಾಗಿವೆ. ಇವುಗಳಲ್ಲಿಯ 'ನಾಟಕೀಯ ಸಂಭಾಷಣೆಗಳೇ ಒಂದು ವೈಶಿಷ್ಟ್ಯ' ಎಂದು ಗುರುತಿಸಿ ಮೆಚ್ಚಿದ್ದಾರೆ, ಶ್ರೀಮತಿ ಸರಿತಾಕುಸುಮಾಕರದೇಸಾಯಿಯವರು.[1] "ಇಷ್ಟು ವಿಪುಲವಾಗಿ, ಅದೂ ಇಷ್ಟು ಸುಂದರವಾಗಿ ಕನ್ನಡದಲ್ಲಿ ಕೃತಿನಿರ್ಮಾಣ ಮಾಡಿದ ಕವಯಿತ್ರಿಯರು ಬೇರೆಯಾರೂ ಇಲ್ಲ"[2]ಎಂಬುದು ಪಂಡಿತ ಪಂಢರೀನಾಥಾಚಾರ್ಯ ಗಲಗಲಿಯವರ ಅಭಿಪ್ರಾಯ. "ಕರ್ನಾಟಕ ಭಾಷೆಯಲ್ಲಿ ಇಷ್ಟು ಗ್ರಂಥಗಳನ್ನು ಬರೆದ ಹೆಣ್ಣುಮಕ್ಕಳು ಇನ್ನಾರೂ ದೊರೆಯಲಾರರು"[3]–ಇದು ಕಲಮದಾನಿ

1 ಅನುಭಾವಿಕವಯಿತ್ರಿ ಭೀಮವ್ವನವರು (ಲೇಖನ), ಕರ್ನಾಟಕದ ಕವಯಿತ್ರಿಯರು. ಸಂ. ನಿರುಪಮಾ, ಪು. ೯೬.

2 ಸಾಧ್ವ ಸಾಧ್ವಿಯ ತಪಸ್ವಿಗಳು, ಸಂ. ಜಯರಾಮಾಚಾರ್ಯ ಮಳಗಿ, ಗದಗ. ೧೯೬೯. ಧಾರವಾಡಜಿಲ್ಲೆ. ಪು. ೧೧೧೯.

3 ಹರಿದಾಸರ ಕತೆಗಳು. ಸಿಟಿಬುಕ್‌ಸ್ಟಾಲ್, ಮುಲ್ಕಿ. ೧೯೫೮, ಪು. ೨೪೫.

ಪ್ರಾಸದ ಉದ್ದೇಶಕ್ಕಾಗಿ ಅಪ್ಪನ ಕೆಲವು ಪ್ರಾದೇಶಿಕ ಆಡುಮಾತುಗಳನ್ನು ಹಾಗೆಯೇ ಇಟ್ಟುಕೊಳ್ಳಲಾಗಿದೆ. (ಉದಾ. ನಚ. ಪು.೩೯, ಪ.) ಪಾಡುಗಳಲ್ಲಿ ಮತ್ತೆ ಮತ್ತೆ ಬರುವ ಪುರಾಣ ಪ್ರಸಂಗಗಳನ್ನು ಅನುಬಂಧ ೧ರಲ್ಲಿ ಒಮ್ಮೆ ಮಾತ್ರ ವಿವರಿಸಿ, ಉಳಿದಂತೆ ಆ ವಿವರಣೆಯು ಮುಂದೆ ಅದೇ ಪ್ರಸಂಗಗಳು ಬರುವ ಪಾಡಿನ ಸಂಖ್ಯೆ ಮತ್ತು ನುಡಿಸಂಖ್ಯೆಗಳನ್ನು ಬರೆಯುವ ಮೂಲಕ ಸೂಚಿಸಿದೆ.

## ಕೃತಜ್ಞತೆಗಳು

ತಮ್ಮಲ್ಲಿರುವ ಅಪೂರ್ವ ಹಸ್ತಪ್ರತಿಯನ್ನು ಉದಾರಮನಸ್ಸಿನಿಂದ ನಕಲು ಮಾಡಿಕೊಳ್ಳಲು ಅವಕಾಶ ಮಾಡಿಕೊಟ್ಟು, ಅಪ್ಪನ ಭಾವಚಿತ್ರವನ್ನೂ ಒದಗಿಸಿಕೊಟ್ಟಂತಹ ಶ್ರೀ ಕೆ. ವಿಜಯರಾಯರಿಗೂ, ಈ ಪುಸ್ತಕ ಹೊರಬರುವ ವೇಳೆಗೆ ನಮ್ಮನ್ನಗಲಿರುವ ಅವರ ಪತ್ನಿ ಶ್ರೀಮತಿ ರಾಧಾಬಾಯಿಯವರಿಗೂ ನಮ್ಮ ಅನಂತ ವಂದನೆಗಳು. ನಕಲು ಮಾಡಿಕೊಂಡದ್ದನ್ನು ತಾಳೆನೋಡುವಾಗಿನ ಆ ದಂಪತಿಗಳ ತಾಳ್ಮೆ ಸಹಕಾರಗಳು ನೆನೆಯುವಂತಹವು.

ಸಂಪಾದನ ಕಾರ್ಯದಲ್ಲಿ ಹೆಜ್ಜೆ ಹೆಜ್ಜೆಗೂ ಸಲಹೆ ಸೂಚನೆಗಳನ್ನು ಕೊಟ್ಟ ಡಾ. ಜಿ. ವರದರಾಜರಾಯರಿಗೆ ನಾವು ಋಣಿಗಳು. ಉತ್ತರ ಕರ್ನಾಟಕದ ಭಾಷಾ ಪ್ರಯೋಗಗಳ ಬಗ್ಗೆ ಹಾಗೂ ಅವುಗಳ ಅರ್ಥಗಳ ಬಗ್ಗೆ ತಿಳಿಸಿಕೊಟ್ಟಂತಹ ಶ್ರೀ ಸೀತಾರಾಮ ಜಾಗೀರದಾರರಿಗೂ, ಅಪ್ಪನ ಹಾಡುಗಳ ಬೇರೆ ಪ್ರತಿಗಳ ಬಗ್ಗೆ ಮಾಹಿತಿ ಒದಗಿಸಿದ ಶ್ರೀಮತಿ ಸರಿತಾ ಕುಸುಮಾಕರ ದೇಸಾಯಿಯವರಿಗೂ, ಕರಡುಗಳನ್ನು ತಿದ್ದಲು ಜೊತೆಗೂಡಿದ ಶ್ರೀಮತಿ ಎಂ. ಎಸ್. ರಾಧಾ ಅವರಿಗೂ ನಮ್ಮ ವಂದನೆಗಳು.

# ಹಾಡುಗಳ ಕ್ರಮಸೂಚಿಕೆ

## ಭಾಗ–೧

(ಸಣ್ಣ ಹಾಡುಗಳು)

## ಭಾಗ-೨

(ದೊಡ್ಡ ಹಾಡುಗಳು)

## ೧

*

ಅಕ್ಕರವುಳ್ಳ ನಮ್ಮಕ್ಕ ರುಕ್ಮಿಣಿ ಕೇಳೆ
ರಕ್ಕಸಾಂತಕ ಕೃಷ್ಣ ಮತ್ತೆಲ್ಲಿ ಪೋದ ೧

ಸತ್ಯಭಾಮೆಯೆ ನಿನ್ನ ಚಿತ್ತದ್ವಲ್ಲಭ
ನೀರೊಳು ಪೊಕ್ಕು ವೇದವ ತಂದು ಪುತ್ರಗಿಡಹೋದ ೨

ಪನ್ನಂಗಶಯನ ಲಾವಣ್ಯರೂಪನು
ಎನ್ನ ಕಣ್ಣಿಗೆ ಮರೆಯಾಗಿ ಇನ್ನೆಲ್ಲಿ ಪೋದ ೩

ನಿನ್ನ ಪತಿ ಶರಧಿಯೊಳು ಬೆನ್ನಲಿ ಗಿರಿಯೆತ್ತಿ
ತನ್ನ ಭಕ್ತರಿಗೆ ಸುಧೆಯ ನೀಡಲು ಪೋದ ೪

ವನಜನಾಭನ ಕಾಣದೆ ಘನಕ್ಲೇಶದಿಂದೀಗ
ಮನದ ವಿರಹತಾಪವನು ಸೈರಿಸಲ್ಹ್ಯಾಗೆ ೫

ಅವನಿ ಕದ್ದವನ ಸಂಹರಿಸಿ ಕೋರೆಗಳಿಂದ
ಭುವನಾಧಿಪತಿಯು ಬರುವನೆ ಸತ್ಯಭಾಮೆ ೬

ಹಂಬಲ ಬಿಡದರವಿಂದನೇತ್ರನ ಬಿಟ್ಟು
ಸುಂದರಾಂಗನ ಕರೆತಂದು ತೋರೆನಗೆ ೭

ಕಂಬದಿಂದೊಡೆದು ಕಂದನ ತಂದೀ(ದೆಯ ?)ಕರುಳ್ಹಾರ
ಕಂದರದಿ ಧರಿಸಿ ತಾ ಬಂದನು ಭಾಮೆ ೮

ಸೃಷ್ಟಿಕರ್ತನುಯೆನ್ನ ದಿ(ದೃ?)ಷ್ಟಿಂಪೆ ನೋಡದೆ
ಎಷ್ಟುಹೇಳಲಿ ಪ್ರಾಣ ಬಿಟ್ಟುಹೋಗುವುದೆ ೯

ಪುಟ್ಟ ಬ್ರಾಹ್ಮಣನಾಗಿ ದಿಟ್ಟತನವಲಿ ದಾನವ
ಕೊಟ್ಟ ಬಲಿ ಪಾತಾಳಕೆ ಮೆಟ್ಟಿ ಬಾಹುವನೆ ೧೦

ತ್ವರಿತದಿಂದಲಿ ಯಾದವರರಸು ಶ್ರೀಕಾಂತನ
ಸರಸವಾಡಲೀಗ ಕರೆಸಿ ತೋರೆನಗೆ ೧೧

* ರುಕ್ಮಿಣಿ ಸತ್ಯಭಾಮೆಗೆ ಹತ್ತು ಅವತಾರ ವರ್ಣಿಸಿದ್ದು.

ಆರಸರ ಕುಲವ ಸಂಹರಿಸಿ ಕ್ಷತ್ರೇರನೆಲ್ಲ
ನಿರುತ ನಿಷ್ಠೆಯಲಿ ತಪ ಚರಿಸಿ ಬಾಹುವನೆ ೧೨

ಹೇಮಪುತ್ಥಳಿಗೊಂಬೆ ಸಾಮಜವರದನ
ಆ ಮಾಸುರರೊಡೆಯು ಮೋಘಶ್ಯಾಮನ ತೋರೆ ೧೩

ಮಾಡಿ ಯುದ್ಧವ ಲಂಕಾ ನೋಡಿ ದಶಶಿರವ
ಚೆಂಡಾಡಿ ಜಾನಕಿಯು ಒಡಗೂಡಿ ಬಾಹುವನೆ ೧೪

ವಾಸುದೇವನ ಕಾಣದೊಂದರಘಳಿಗೀಗ
ನಾಲ್ಕುಯುಗವಾಗಿ ತೋರುವುದೆನ್ನ ಮನಕೆ ೧೫

ಶ್ರೀಶ ತಾ ಸೋಳಸಾಸಿರ ಮಂದಿ ಸತಿಯೇರ ವಿ-
ಲಾಸದಿಂದಿದ್ದನೀಗಿಂದೀವರಾಕ್ಷ ೧೬

ಸಿರಿವೊಬ್ಬಳಲ್ಲದೆ ಪರನಾರಿಯರ ಕಣ್ಣು
ತೆರೆದು ನೋಡುವ ತಾ ಭೂಮಾಣನೆಲ್ಲಿಹನೆ ೧೭

ಖರೆಯುವೀಮಾತು ತ್ರಿಪುರದ ಸತಿಯರ ಲಜ್ಜೆ
ತೊರೆದು ಕೂಡಿದನೆಂಬೋದು ಪರಮ ಮೋಹಕವೆ ೧೮

ನಾಡೊಳಗಧಿಕಶ್ವಾರೂಢ ರುಕ್ಮಿಣೀಕಾಂತನ
ನೋಡದೆನಜೀವ ನಿಲ್ಲದು ನೀರಜಾಕ್ಷಿ ೧೯

ಬೇಡಿಕೊಂಬುವೆನೆಂ(ಯೆ?)ಮ ಭೀಮೇಶಕೃಷ್ಣನ
ಕೂಡಿಸುವೆನೆ ಕರೆತಂದು ಕಮಲಾಕ್ಷಿ ೨೦

೨

*

ಅಪ್ಪವೆಂಕೋಬನ ನೇತ್ರದಲಿ ನೋಡಿ ಪವಿತ್ರಳಾದೆನೋ ಇಂದಿಗೆ
ತಪ್ಪುಗಳೆಲ್ಲ ನಿನಗರ್ಪಿಸುವೆ ನಾನೀಗ
ಒಪ್ಪಿಕೋಬೇಕೊ ತಿಮ್ಮಪ್ಪ ಕರುಣಾನಿಧಿಯೆ ಪ.

* ತಿರುಪತಿ ವೆಂಕಟರಮಣನ ಮೇಲಿನ ಗೀತೆ.

ಹೆದರದೆ ಭೃಗುಋಷಿಯು ಒದೆಯೆ ಪಾದಗಳಿಂದ
ಎದೆಯಮೇಲಿರುವ ಲಕ್ಷ್ಮಿ
ಕದನಮಾಡುತಲೆ ಕೊಲ್ಲಾಪುರಕೆ ನಡೆತರಲು
ಒದಗಿ ವೈಕುಂಠ ಬಿಟ್ಟು
ಯದುನಾಥ ಯಾರಿಲ್ಲದಂತೆ ಗುಡ್ಡವ ಸೇರೆ
ಇದು ನಿನಗೆ ಸದನಾಯಿತೊ ದೇವ ೧

ಹುತ್ತಿನೊಳಗಡಗಿ ನೀ ಗುಪ್ತದಿಂದಿರುತಿರಲು
ಉತ್ತಮ ಗೋವು ಬಂದು
ನಿತ್ಯದಲಿ ಕ್ಷೀರವನು ಕರೆಯೆ ಗೋವಳನಿಂದೆ
ನೆತ್ತಿಯನೊಡೆದುಕೊಂಡು
ಸಿಟ್ಟಿನಿಂದಲಿ ಚೋಳರಾಯಗೆ ಶಾಪವನು
ಕೊಟ್ಟು ಕಿರೀಟವನು ಇಟ್ಟು ಮೆರೆಯುವ ದೇವ ೨

ಮಾಯಾರಮಣನೆ ನಿನ್ನ ಗಾಯದೌಷಧಕ್ಕೋಗಿ
ಭೂರಮಣನ್ವರಾಹನಿಂದ
ನೂರುಪಾದ ಭೂಮಿಕೊಟ್ಟರೆ ಸಾಕೆಂದು-
ಪಾಯದಿಂದದನ್ವ್ಯಾಪಿಸಿ
ತಾಯಿ ಬಕುಳಾದೇವಿಯಿಂದ ಪೂ
ಜೆಯಗೊಂಡೊ ಶ್ರೀನಿವಾಸ ನಿನಗೆ ಸರಿಯೆ ದೇವ ೩

ನಾಟಕಧಾರಿ ಕಿರಾತರೂಪವ ಧರಿಸಿ
ಬೇಟೆಗೆನುತಲಿ ಪೋಗಲು
ತೋಟದಲಿ ಚೆಲ್ವೆ ಪದ್ಮಾವತಿಯ ಕಡೆಗಣ್ಣ
ನೋಟದಲಿ ಮನಸೋಲಿಸಿ
ಬೂಟಕತನದಿ ಜಗಳಾಟವನ್ನು ಮಾಡಿ
ಪಾಟುಬಟ್ಟು ಕಲ್ಲೇಟುತಿಂದೆಯೋ ದೇವ ೪

ಗದಗದನೆ ನಡುಗುತಲಿ ಕುದುರೆಯನು ಕಳಕೊಂಡು
ಪದ್ಮಾವತಿ ವಾರ್ತೆಯನ್ನು ಬಳಿಯ
ಲಿದ್ದ ಬಕುಳಮಾಲಿಕೆಗೆ ಬೋಧಿಸಿ ಕಳಿ
ಸಿದಾಕಾಶನಲ್ಲಿ ಚದುರಮಾತಿನ
ಚಪಲಕೊರವಂಜಿ ನೀನಾಗಿ ಕಣಿಯ
ಹೇಳಲು ಎಲ್ಲಿ ಕಲಿತೆಯೊ ಮಹದೇವ ೫

ಬಂಧುಬಳಗವ ಕೂಡಿ ಭಾರಿ ಸಾಲವ ಮಾಡಿ
ಕೊಂಡು ಕರ ವೀರದಿಂದೆ
ಅಂಡಲೆದು ಕರೆಸಿ ಕಾಣುತಲಿ ಲಕ್ಷ್ಮಿಯನಪ್ಪಿ
ಕೊಂಡು ಪರಮ್ಹುರುಷದಿಂದ
ಮಂದಗಮನೆಯೆ ನಿನ್ನ ಮಾತುಲಾಲಿಸಿ ಮಾಡಿ
ಕೊಂಡೆ ಪದ್ಮಾವತಿಯ ಅಂದೆಂಬೊ ಎಲೆ ದೇವ ೬

ಆಕಾಶರಾಜ ಅನೇಕ ಹರುಷದಿ ಮಾಡೆ
ತಾ ಕನ್ಯಾದಾನವನ್ನು
ಹಾಕಿದ ರತ್ನಮಾಣಿಕ್ಯದ ಕಿರೀಟವನು
ಬೇಕಾದಾಭರಣ ಭಾಗ್ಯ
ಸಾಕಾಗದೇನೊ ಬಡವರ ಕಾಡಿ ಬೇಡುವುದು
ಶ್ರೀಕಾಂತ ನಿನಗೆ ಸರಿಯೆ ದೇವ ೭

ಹೇಮಗೋಪುರದಿ ವಿಮಾನ ಶ್ರೀನಿವಾಸ
ದೇವರನು ನೋಡಿ ನಮಿಸಿ
ಕಾಮಿಸಿ ಕಂಡೆ ಹೊನ್ನೊಪ್ಪಿಸ್ತಿಲು ಗರುಡ
ಗಂಬದ ಸುತ್ತ ಪ್ರಾಕಾರವೊ
ಸ್ವಾಮಿಪುಷ್ಕರಣಿಯಲಿ ಸ್ನಾನ ಪಾನವ ಮಾಡಿ
ನೋಡಿದೆನು ನಿನ್ನ ಭಕುತರ ದೇವ ೮

ಪನ್ನಗಾದ್ರಿ ವೆಂಕಟನ್ನ ರಥ ಶೃಂಗಾರ
ವರ್ಣಿಸಲಳವೆ ನಮಗೆ
ಕಣ್ಣಾರೆಕಂಡೆ ಗರುಡೋತ್ಸವದಲಂಕಾರ
ಇನ್ನೆಲ್ಲು ಕಾಣೆ ಜಗದಿ
ಅನ್ನಪೂರ್ಣೆಯ ನೋಡೆ ಅಧಿಕ ಗಂಟೆಯ ನಾದ
ಎನ್ನ ಕಿವಿಗಾನಂದವೊ ದೇವ ೯

ಪಾದದಲ್ಲೊಪ್ಪೋ ಪಾಗಡ ರುಳಿ ಕಿರುಗೆಜ್ಜೆ
ಮೇಲಲೆವೊ ಪೀತಾಂಬರ
ನೀಲಮಾಣಿಕದ ಉಡಿದಾರವೊ ವೈಜ[ಯಂ]ತಿ-
ಮಾಲೆ ಶ್ರೀವತ್ಸದ್ಹಾರ

ಮೇಲಾದ ಸರಿಗೆ ಸರ ಪದಕವೊ ಕಮಲ-
ದಳಾಯತಾಕ್ಷನ ನೋಡಿದೆ ದೇವ ೧೦

ಕರಗಳಲ್ಲಿಟ್ಟ ಕಂಕಣ ಕಡಗ ಭುಜಕೀರ್ತಿ
ವರ ಶಂಖ ಚಕ್ರ ಧಾರಿ
ಗಿರಿಯ ಭೂವೈಕುಂಠನೆಂದು ತೋರುತ ನಿಂತ
ಶಿರದಿ ಕಿರೀಟ ಧರಿಸಿ
ಬಿಳಿಯ ತ್ರಿನಾಮ ಫಣೇಶಕೃಷ್ಣನ ಮುಖವಿ
ಹೊಳೆವ ಮೂರ್ತಿಯ ನೋಡಿ ಹೇ ದೇವ ೧೧

೩

ಅಮ್ಮ ನೀ ಕರೆತಾರೆ ಅರವಿಂದನಯನ
ಒಮ್ಮ್ಯಾದರು ಬಾರ ನಮ್ಮನೆಗೆ
ಬ್ರಹ್ಮನ ಪಡೆದನಗಮ್ಯಮಹಿಮನೆ ತಾ
ಕಾಮ್ಯಾರ್ಥ ಕರೆವ ಶ್ರೀ ರಮ್ಮೆರಮಣನ ಪ.

ಘನ ಉದಕದಿ ನೋಡೆ ಗ್ರಂಥಚೋರನ ಕೊಂದು
ವೇದವ ತಂದಜಗಿತ್ತು ಬರುವೊನೊ
ಪಯಾಬ್ಧಿಯೊಳು ಸುಧೆ ಸುರಜನರಿಗೆ ನೀಡಿ
ಮೇರುಮಂದರದಲಡಗಿಕೊಂಡಿಹನೊ ೧

ಭೂಮಿ ಬಗಿದು ನೋಡೈ ಹಿರಣ್ಯಾಕ್ಷನಂತಕನಾಗಿ
ಕೋಡಿಂದಲಾ ಧರೆನೆತ್ತಿ ಬರುವೊನೊ
ಉಗುರಿನಿಂದಲಿ ಉರಬಗಿದು ಕರುಳನ್ಹಾಕಿ
ಮೃಗರೂಪ ಧರಿಸಿ ಕಂಬದಲಿ ಬರುವೊನೊ ೨

ಗೊತ್ತಿನ್ಹೇಳುವೆ ಈ ಜಗತ್ತು ಸಾಲದಲ್ಹೋಗಿ
ಒತ್ತಿ ಬಲಿಯ ಬಾಗಿಲ್ಹತ್ತಿಲಿರುವೊನೊ
ಹೈಹಯ ಮೊದಲಾದ ಸರುವ ರಾಜರನೆಲ್ಲ ಗೆಲಿದು
ಕಾಮಧೇನು ಕೊಂಡು ಬರುವನೊ ೩

ಒಬ್ಬ ಸತಿಯನಾಳಲಾರದೆ ಗರ್ಭಿಣಿಯ
ದಬ್ಬಿ ಕಾನಡಿಗೊಬ್ಬೆ(ಕಾಡಿನಲ್ಲೊಬ್ಬೆ?)ಲ್ಲಿರುವೊನೊ

ತೋಷ್ಟಪುತ್ರಿಯರು ಮೇಲಷ್ಟಭಾರ್ಯರು
ಶತಪತ್ನೇರನಾಳದಿನ್ನೆತ್ತ ಪೋಗಿಹನೊ ೪

ಬತ್ತಲೆ ತಿರುಗುವನಿತ್ತ ಬರುವನ್ಯಾಕೆ
ವಸ್ತ್ರವ ಕೊಟ್ಟು ಸಮ್ಮ[illegible]ತ್ತಿಲೆ ಹರಿಯು
ಖಡ್ಗ ಪಿಡಿದು ಕಲಿಗಳ ಕೊಲ್ಲಲ್ಹೋಗುವ
ಬಿಟ್ಟು ಪಾದಾರವಿಂದಕ್ಕೆರಗಿ ಭೀಮೇಶಕೃಷ್ಣನ ೫

೪

*

ಆಪ್ರೋಶನವ ಹಾಕೆ ಒ(ನ್ನೈ ?)ಯ್ಯಾರಿ ಲೋಕಸುಂದರಿ
ಶ್ರೀಪತಿಯು ಕರದಲ್ಲಿ ಘೃತಧಾರೆ ಲೋ-
ಕಪಿತನಾಗಿದ್ದ ಕಂಸಾರಿ ಕೈಯಲ್ಲಿ ತ್ರಿಧಾರೆ ಪ.

ಕೊಳಲನೂದುತಾಕಳನೆ ಕಾಯುತ್ತ ದಧಿಚೋರನಾಗಿ
ಕಳಲಗಡಿಗೆಯನೊಡೆದು ಪೋಗುತ್ತ
ಸೆಳೆದು ಗೋಪೇರ ಸೀರೆಗಳ ಮರಕೆ ಕಟ್ಟಿದ್ದ ಕರಕೆ ೧

ವಾರಿಜಾಕ್ಷಗೆ ಒಲಿದು ನಲಿಯುತ್ತ ವರ ಮೋಹನಾಂಗಿ
ಸಾರಸಮುಖಿ ಸರಸವಾಡುತ್ತ
ಮಾರಜನಕನ ಮನವ ಮೋಹಿಸುತ ಮುಖನೋಡಿ ನಗುತ ೨

ನಂದನಂದನ ನರನ ಸಾರಥಿಯೊ ಭೀಮೇಶಕೃಷ್ಣ
ಕೊಂಡಾಪೋಶನ ಕುಳಿತ ಸತಿಜೊತೆಗೆ
ಚೆಂದದಿಂದಲಿ ಬೆಳಗಲಾರತಿಯು ಪಾಡಿ ಕೀರುತಿಯು ೩

೫

ಆರತಿ ಮಾಡೆ ನೀರೆ ಭಾರತಿ-
ಗಾರತಿ ಮಾಡೆ ನೀರೆ
ಮಾರುತಿ ಸತಿಯಾದ ದ್ರೌಪದಿದೇವ್ಯೇರಿ-
ಗಾರತಿ ಮಾಡೆ ನೀರೆ ಪ.

*ಆಪೋಶನ ಹಾಕಿದ್ದು.

ಅರಸು ಭೀಮರಾಯಗ್ಹೊಂದಿ ಕುಳಿತಿರೆ ಕೃಷ್ಣೆ
ಅರಿಷಿಣ ಕುಂಕುಮ ಹಚ್ಚಿ ಹರುಷದಿ ದ್ರೌಪದಿ ೧

ಸುಂದರ ಭೀಮಸೇನ ತಂದ ಸುಗಂಧಕುಸುಮ
ಗಂಧಪರಿಮಳ ಹಚ್ಚಿ ಮುಡಿಸಿ ಮಲ್ಲಿಗೆ ಕೃಷ್ಣೆ ೨

ವಾಸವಾಗಿ ಬೊಮ್ಮಗಟ್ಟಲಿ ಕುಳಿತ ಭೀ-
ಮೇಶಕೃಷ್ಣನ ದಯ ಪಡೆದ ಪಾಂಚಾಲಿ ಸತಿ ೩

೬

*

ಆರತಿಯ ಬೆಳಗಬನ್ನಿರೆ ಆರತಿಯ ಬೆಳಗಬನ್ನಿರೆ
ಪಾರ್ವತಿದೇವಿಯರಿಗೆ
ಕೀರುತಿ ಕೊಂಡಾಡುತಲಿ ಪರ್ವತರಾಜನ ಮಗಳಿಗೆ
ಆರತಿಯ ಬೆಳಗಬನ್ನಿರೆ ಪ.

ವಾಲೆ ಕಠಾಣಿ ಚಿಂತಾಕು ವ್ಯಾಲೆ ಸರಿಗೆ ಸರ ಮುತ್ತುಗಳ
ಕಾಲಗೆಜ್ಜೆ ಸರಪಳಿಸಿಟ್ಟ ಫಾಲಾಕ್ಷನ ಮಡದಿಗೆ ೧

ರಂಗುಮಾಣಿಕ್ಯದ ಹೆರಳು ಬಂಗಾರದಾಭರಣವಿಟ್ಟು
ದುಂಡುಮಲ್ಲಿಗೆ ಮುಡಿದು ಕುಳಿತ ಮಂಗಳಾದೇವಿಯರಿಗೆ ೨

ದುಂಡುಮುತ್ತಿನ ಮೂಕುತ್ಯವು ಚಂದ್ರಬಾಳ್ಯಬುಗುಡಿನಿಟ್ಟು
ದುಂಡು ಹರಡಿ ಕಂಕಣಕಮಲ ದ್ವಾರ್ಯಸಿಟ್ಟ ವಾರಿಜಾಕ್ಷಿಗೆ ೩

ಜಾತಿಮಾಣಿಕ್ಯದ ಪಂಕಿ ನೂತನಾದ ನಾಗಮುರಿಗೆ
ಪ್ರೀತಿಯಲಿ ಪೀತಾಂಬ್ರಸುಟ್ಟು ಜ್ಯೋತಿಯಂತೆ ಹೊಳೆವೊ ಗೌರಿಗೆ ೪

ನೀಲವರ್ಣ ಭೀಮೇಶಕೃಷ್ಣ ಧ್ಯಾನಮಾಡುತ ಕೃಷ್ಣನ
ನೀಲಕಂಠನ ಸಹಿತ ಕುಳಿತ್ವಿಶಾಲನೇತ್ರೆ ಪಾರ್ವತಿಗೆ ೫

*ಮಂಗಳಗೌರಿ ಆರತಿ ಹಾಡು.

೭

*

ಆರೋಗಣೆ ಮಾಡಮ್ಮ ಮಂಗಳಗೌರಿ
ಬೇಡಿಕೊಂಬೆನೆ ನಿನಗೆ ಬೇಡಿದಡಿಗೆ ಎಡೆ
ಮಾಡಿ ತಂದಿಟ್ಟಹೆ ಜೋಡಿಸಿ ನಿನಗೆ
ಕೈಮುಗಿವೆನೆ ಮಹಾತಾಯೆ ಪ.

ನಂದಿವಾಹನನರ್ಧಾಂಗಿಯ ಪೂಜಿಸಿ
ಗಂಧಕುಂಕುಮದಿಂದ
ತಂದು ಕಸ್ತೂರಿ ಕಮಲದಪುಷ್ಪಗಳುಡಿ
ತುಂಬಿ ನೈವೇದ್ಯವ ತಂದಿರಿಸುವೆ ತಾಯೆ ೧

ಅಚ್ಚಮುತ್ತಿನ ಹರಿವಾಣದಿ ಮಾಲತಿ
ಬಟ್ಟವಿ ಗೌಲಿಗಳು
ಅಷ್ಟಗುಳ್ಳವು ಶಾವಿಗೆ ಪರಡಿ ಪಾಯಸ
ಭಕ್ಷ ಎಣ್ಣೋರಿಗೆ ಭಾರಿಬಟ್ಟಲು ತುಪ್ಪ ೨

ಮಂಡಿಗೆ ಚೂರ್ಮವು ಬುಂದ್ಯ ಬೀಸೋರಿಗೆ
ದುಂಡುಗುಳ್ಳೋರಿಗೆಯು
ಚೆಂದವಾಗಿದ್ದ ಚಕ್ಕುಲಿ ಕರ್ಜಿಕಾಯ್ಗಳು
ಅಂದವಾದ ಕಾಯಿರಸ ಶಾಖ ಪಾಕವು ೩

ಸಣ್ಣಅಕ್ಕಿಯ ಶಾಲ್ಯಾನ್ನಕೊಪ್ಪುವ ತವ್ವೆ
ಇನ್ನು ದಧ್ಯನ್ನಗಳು
ಸನ್ಮತವಾಗಿದ್ದ ಶಾವಿಗೆಫೇಣಿ ಸಕ್ಕರೆ
ರುಬ್ಬಿದ ಆಂಬೋಡೆ ರುಚಿಯಾದ ಕಲಸನ್ನ ೪

ಕ್ಷೀರ ದಧಿಯು ಬೆಣ್ಣೆ ಘೃತ ಸೀಕರ್ಣೆ ಕಾಯ್ಹಾಲು
ಹೊಯ್ಗಡುವನಿಟ್ಟು
ಸಾರು ಸಾಂಬಾರ ಚಟ್ಟಣಿ ಕೋಸಂಬರಿ
ನೀರೆ ನಿನಗೆ ಪನ್ನೀರು ತಂದಿರಿಸುವೆ ೫

*ಮಂಗಳಗೌರಿಗೆ ನೈವೇದ್ಯ ಇಟ್ಟದ್ದು.

ದೇವಿ ನಿನ್ನ ಮನೋಭಾವ ತಿಳಿದು ನಾ
ಭೀಮೇಶ ಕೃಷ್ಣನಿಗೆ
ಬ್ಯಾಗ ಸಮರ್ಪಣೆ ಮಾಡಲು ಮಹಾದೇವ
ಸ್ವಾದ ಸವಿದಾಸುಖದಿಂದುಂಡ್ವಿಳ್ಯವ ಕೊಳ್ಳೆ ೬

೮

ಆಲವೆಲೆಯ ಮ್ಯಾಲೆ ಮಲಗಿದ್ದಾದಿಕೇಶವ[ನ]
ನೋಡಬನ್ನಿರಾಲದೆಲೆಯ ಮ್ಯಾಲೆ ಕೃಷ್ಣ
ಬಾಲರೂಪ ಧರಿಸಿ ಅಂಧಕಾರ ಪ್ರಳಯ
ಜಲದ ಒಳಗೊಂದಾಲದೆಲೆಯ ಮ್ಯಾಲೆ ಕೃಷ್ಣ ಪ

ಪ್ರಳಯಕಾಲದಲ್ಲಿ ಹರಿಯು ಸರ್ವ
ಜೀವರನೆಲ್ಲ ತನ್ನ
ಉದರದೊಳಗಿಂಬಿಟ್ಟುಕೊಂಡು
ಛಲವ ಮಾಡದಂತೆ ರಂಗ
ಬೆರಳು ಬಾಯೊಳಗಿಟ್ಟು ಚೀಪುತ
ಹರಳು ಮಾಣಿಕ್ಯದರಳೆಲೆ ಮಾಗಾಯಿ
ಹೊಳೆಯುತ ಕೊರಳಲ್ಲಿ ಕೌಸ್ತುಭ ಕಟಿಸೂತ್ರ
ಕರುಣಸಾಗರಗಿನ್ನು ವರ ವೈಕುಂಠವಾಸ
ಮುದ್ದು ವರ ಮಾಲಕ್ಷ್ಮಿಸಹಿತ ಹರಿ
ಒಂದಾಲದೆಲೆಯ ಮ್ಯಾಲೆ ೧

ಅಷ್ಟು ಜೀವರನೆಲ್ಲ ತನ್ನ ಹೊಟ್ಟೆಯೊಳಗಿಂ
ಬಿಟ್ಟುಕೊಂಡು
ಸೃಷ್ಟಿ ಲಯಕೆ ಕರ್ತನಾದ ಶ್ರೇಷ್ಠ
ಸುಂದರಾಂಗ ತನ್ನೆಬ್ಬೆಟ್ಟು ಬಾಯೊಳ
ಗಿಟ್ಟು ಚೀಪುತ ವಕ್ಷಸ್ಥಳದಿ
ಹೆಚ್ಚಿನ ಶ್ರೀವತ್ಸ ತೋರುತ
ಉತ್ತಮ ವೈಜ[ಯಂ]ತಿ ವಜ್ರ
ಕೆತ್ತಿದ ಕಿರೀಟ ಲಕ್ಷ್ಮೀಚಿತ್ತ
ಚೋರನಾದ ಪರಮಾತ್ಮ ಪರಮ ಹರುಷದಿಂ-
ದ್ವೊಂದಾಲದೆಲೆಯ ಮ್ಯಾಲೆ ೨

ಗಂಧ ಕಸ್ತೂರಿ ಪರಿಮಳ ಸುಗಂಧವಾದ
ಕುಸುಮ ಕೆಲದಿ
ಹೊಂದಿ ಕಟ್ಟಿದ ತುಳಸಿಮಾಲಿಕಿಂದೆ
ಪರಮ ಶೋಭಿತವಾದ ಬಂದಿ ಕಂಕಣ
ಬಾಹುಪ್ಪುರಿಗಳು ದುಂಡುಮುತ್ತಿನ
ಕೂದಲ ಕಾಂತಿ ಕದಪಿಲೆಸೆಯಲು
ಅಂದಿಗೆ ಪಾಗಡ ಗೆಜ್ಜೆ ಚೆಂದವಾದ ನಾದಗಳಿಂದ
ಇಂದುಕೋಟಿ ರವಿಯ ತೇಜ
ಮಂದಹಾಸ ಮುಖದ ಹರಿ
ಒಂದಾಲದೆಲೆಯ ಮ್ಯಾಲೆ ೩

ಥಳಥಳಿಸುವಂತ್ಹೊಳೆವೊ ಚಕ್ರ
ಧವಳವರಣ ಶಂಖ ಕರದಿ
ಹವಳದುಟಿಯು ಹರಿಯ ಪದ್ಮ
ದಳಗಳಂತಕ್ಷಿಗಳ ಚೆಲುವ
ಅರುಣನಂತೆ ಚರಣ ಕರದಲ್ಲಿ ಒತ್ತ್ಯಾಸ್ರೊ ಸಿರಿಯು
ಪರಮಪುರುಷ ನೋಡಿ ಸರಸದಿ
ಜರ ಪೀತಾಂಬರ ನಾಭಿಕಮಲಕ್ಹೊಳೆವೊ
ಒಡ್ಯಾಣವನೆ ಇಟ್ಟು ಹಲವು ಸೂರ್ಯರಂತೆ
ಲಕ್ಷ್ಮೀರಮಣ ಶ್ಯಾಮವರಣ ಹರಿ
ಒಂದಾಲದೆಲೆಯ ಮ್ಯಾಲೆ ೪

ಅಳಕನಂದನ ಪಿತನು ತಾ ಘ
ನೋದಕದೊಳು ತಾ
ರಂಗ ಚಾಮರ ಎಣಿಕಿಲ್ಲದೆ ಮಾ
ಣಿಕ್ಯದಾಭರಣ ಫಣಿಪಮಂಚಶಯನ
ನೀಲ ಕನಕರತ್ನ ಬಿಗಿದ್ಹಾಸಿಕೆಯಲಿ
ಪಂಚಶರನ ಜನಕ ಜಗವ
ನಿಟ್ಟು ತನ್ನಲ್ಲಿ ಅಳಕಗೂದಲು ಚೆಂಡಿಕೆಲ್ಲೆ
ಅರಳುಮಲ್ಲಿಗೆ ಸುತ್ತಿಹರಿಗೆ
ಥಳಕು ಮಿಂಚಿನಂತೆ ಜಗಕೆ ಬೆಳಕಿನಲಿ ಭೀಮೇಶ ಕೃ-
ಷ್ಣೊಂದಾಲದೆಲೆಯ ಮ್ಯಾಲೆ ೫

## ೯

ಆಸೆಯೆನಗಿಲ್ಲ ಸರ್ವೇಶ ನಿನಬಿಟ್ಟು
ವಾಸುಕೀಶಯನ ಜಗದೀಶ ನಿನ್ಹೊರತೆನಗೆ ಪ.

ನಿಗಮದಾಸೆಗೆ ಹೋಗಿ ನೀರೊಳಗೆ ಮುಳುಗಿ ನೀ
ಸುಧೆಯು ಆಸೆಗೆ ಹೋಗಿ ಸುರರ ಕೈ ಸಿಕ್ಕು
ನೆಲದ ಆಸೆಗೆ ಮಣ್ಣು ಬಗೆದು ಕ್ರಮವನೆ ಬಿಟ್ಟು
ಕೊರಳ ಹಾರದ ಆಸೆ[ಗೆ] ಕರುಳ ಬಗೆವೊಡೆ ಕಷ್ಟ ೧

ಭೂಮಿಯಲಿ ಭಾಗಾಸೆ ಭುವನ ವ್ಯಾಪಿಸಿಕೊಂಡು
ಕಾಮಧೇನಿ(ನುವಿ?)ನ ಆಸೆ ಕಾರ್ತವೀರ್ಯಾರ್ಜುನನ ಕೊಂದು
ಸಿರಿಯು ಸೌಂದರ್ಯದಾಸೆ ಶಿವನೆಬಲ್ಲನು ನೆಗಹಿ
ಉದರದಾಸೆಗೆ ಅಸುರೆಜಗಿದು ವಿಷಮೊಲೆನುಂಡಿ ೨

ತ್ರಿಪುರ ಸತಿಯರ ಆಸೆಗ್ವಸನವಿಲ್ಲದೆ ತಿರುಗಿ
ಅಶ್ವದಲಿ ಆಸೆ ಅತಿ ಕಲಿಭಂಜನನೆನಿಸಿ
ಈಸುಪರಿ ಆಸೆ ಭೀಮೇಶ ಕೃಷ್ಣಗೆ ಇರಲು
ನಾಶರಹಿತನೆ ನಿನ್ನ ನಾಮವಿದ್ದರೆ ಸಾಕು ೩

## ೧೦

ಇದು ಏನೆಶೋದ ಇದು ಏನೆಶೋದ
ದಧಿಯು ದಾಮೋದರ ಹೆದರಿಕಿಲ್ಲದೆ
ಕುಡಿದೋಡಿ ತಾ ಪೋದ ಪ.

ಕೊಳಲನೂದುತಲೆ ಆಕಳನೆ ಕಾಯುತಲ್ಹೋಗಿ
ಕಳಲ ಗಡಿಗೆಸುತ್ತ ಕುಣಿದಾಡುವುದು ೧

ವತ್ಸಕಾಯುತ ವನದೊಳಗೆ ಆಡೆಂದರೆ
ಕಿಚ್ಚುನುಂಗಿ ಸರ್ಪವ ತುಳಿಯುವುದು ೨

ಚೆಂಡನಾಡುತ ತುರುವ್ಹಿಂಡು ಕಾಯೆಂದರೆ
ಗಂಡನುಳ್ಳವರ್ಹಿಂದ್ಹಿಂದೆ ತಿರುಗುವುದು ೩

ವಥ(ತ್ಸ?)ಸಂಪದಲಿ ಬಾಯ್‌ಹಚ್ಚಿ ಗೋಪಿಯ ಕ್ಷೀರ
ಅಷ್ಟುಕುಡಿದನಾಶ್ಚರ್ಯ ನೋಡಮ್ಮ ೪

ಇಂದೆನ್ನ ಮನೆಯಲ್ಲೊಂದಿಷ್ಟು ಕ್ಷೀರಗಳಿಲ್ಲ
ಗಂಡ(+ಅ?)ತಿ ದುಷ್ಟೆನ್ನ ಕೊಲ್ಲುವನಮ್ಮ ೫

ಮೌನಗೌರಿಯ ನೋತು ನೀರೊಳಗಿದ್ದೆವೆ
ಮಾನಹೀನರ ಮಾಡಿ ಮರವನೇರುವುದು ೬

ಬ್ಯಾಡೊ ಕೃಷ್ಣನೆ ಬಟ್ಟೆ ನೀಡೆಂಪಾಲ್ಪರಿಯಲು
ಜೋಡಿಸಿ ಸಿಪ್ಪುಸ್ತ ಮುಗಿಯ ರಿಂಪಾಡುವುದು ೭

ಬುದ್ಧಿ ಹೇಳೆಂದರೆ ಮುದ್ದು ಮಾಡುವರೇನೊ
ಕದ್ದು ಬಂದರೆ ಕಾಲು ಕಟ್ಟಿ ಹಾಕಮ್ಮ ೮

ಅಂಧಕಾರದ ಮನೆಯೊಳಿಟ್ಟಿದ್ದ ದಧಿ ಬೆಣ್ಣೆ
ಚಂದ್ರ ಸಂತ್ಯೋಕ್ಕ ತಾ ತಿಂದ ನೋಡಮ್ಮ ೯

ಕೇರಿಮಕ್ಕಳ ನೋಡೊ ಮಹರಾಜ ಬಲರಾಮ
ದೊಡ್ಡ ಮಗನು ಎಲ್ಲೆ ದೊರಕಿದನಮ್ಮ ೧೦

ಮಿಾಸಲಾಕಿದ ಬೆಣ್ಣೆ ನೀ ಸವಿದೀಯೆಂದು
ಲೇಸಾಗಿ ಹೇಳೆ ಭೀಮೇಶಕೃಷ್ಣನಿಗೆ ೧೧

೧೧

*

ಇಂದಿರಾರಮಣನ ಮಂದಿರದಲ್ಲೆ ನಾ-
ರಂದ ತಾ ಬರುತಿರಲು
ಕಂಡು ಕೃಷ್ಣನು ಕರೆತಂದು ಮನ್ನಿಸಿ
ಬಂದಕಾರಣವೇನೆಂದನು ೧

ಕಾರಣವೇನುಂಟು ಕಾರಣಪುರುಷನ
ಕಾಣಬೇಕೆಂದೆನುತ
ಕಾಮಿಸಿಬಂದೆನೊ ಕೊರಳ ತುಳಸಿ ಮಾಲೆ
ನೀಡೊ ನೀ ಎನಗೆಂದನು ೨

---

* ಸಣ್ಣ ಪತಿದಾನ ಕೊಟ್ಟ ಹಾಡು

ಏನು ಬೇಡಿದರು ನಾ ಕೊಡುವೆನು ನಾರಂದ
ಪ್ರಾಣಪದಕ ತುಳಸಿ
ನೀಡಲಾರೆನೊ ಮುತ್ತಿನ್ಹಾರವ ಕೊಡುವೆ-
ನೆಂದು ಹೇಳುತಿದ್ದನು ಹರಿಯು ೩

ನೀಡದಿದ್ದರೆ ನಾನು ಬೇಡಿ ಬಿಡುವನಲ್ಲ
ನೋಡಿಕೋಯೆಂದೆನುತ
ಆಡಿದ ಮಾತು ತಪ್ಪುವರುಂಟೆ ಶ್ರೀಕೃಷ್ಣ
ಹೋಗಿಬರುವೆನೆಂದನು ೪

ಸತ್ಯಭಾಮೆಯು ಮನೆ ಹೊಕ್ಕನು ನಾರಂದ
ಹೆತ್ತಮ್ಮ ಕೇಳೆನುತ
ಸುತ್ತಿಬಂದೆನು ಸುರಲೋಕದ ವಾರ್ತೆಯ
ವಿಸ್ತರಿಸ್ಹೇಳುವೆನು ೫

ಇಂದ್ರಲೋಕದಲಿ ದೇವೇಂದ್ರ ಶಚಿಯು ಕೂಡ್ಯಾ
ನಂದದಿ ಕುಳಿತಿದ್ದನೆ ಅ-
ಲ್ಲಿಂದ ಕೈಲಾಸ ಮಾರುದ್ರ ಪಾರ್ವತಿದೇವಿ
ಚೆಂದವನ್ನರಣಿಸಲೆ ೬

ಸತ್ಯಲೋಕದಿ ಸರಸ್ವತಿ ಕೂಡಿ ಬ್ರಹ್ಮ ಭಾ
ಳುತ್ಸವದಿಂದಿದ್ದನೆ
ಹಸ್ತಿನಾವತಿಯು ಪಾಂಡವರು ದ್ರೌಪದಿದೇವಿ
ಅರ್ಥಿಯ ನೋಡಿ ಬಂದೆ ೭

ದ್ವಾರಾವತಿಗೆ ಬಂದೆ ದೇವಿ ನಿಮ್ಮರಸನು
ನಾರಿ ರುಕ್ಮಿಣಿ ಸಹಿತ
ಭಾಳ ಸಂಭ್ರಮದಿಂದ ಕುಳಿತಿದ್ದ
ಕಣ್ಣಬ್ಬವಾಗಿ ನಾ ಬಂದೆನಿಲ್ಲೆ ೮

ಕರೆದು ರುಕ್ಮಿಣಿ ಕರದಿಂದೆ ಆಲಂಗಿಸಿ
ತೊಡೆಯಮ್ಯಾಲಿಟ್ಟಿದ್ದನೆ
ಅರಳುಮಲ್ಲಿಗೆ ತುರುವಿ(ಬಿ?)ನಲ್ಲಿಟ್ಟು
ನಿನಗಿನ್ನು ಸರಿಯಿಲ್ಲವೆಂತೆಂಬನೆ ೯

ಹಾರಪದಕ ಇಬ್ಬರಿಟ್ಟಾಭರಣ ಬ್ಯಾರೆ
ಬ್ಯಾರಾಗಿ ತೋರವಲ್ಲೆ
ಸೂರ್ಯಚಂದ್ರರು ಕೂಡಿದಂಥ ಮುಖವು
ನೋಡಿ ನಾ ಬೆರಗಾಗಿದ್ದೆನೆ ೧೦

ಸತ್ಯಭಾಮೆಯೆ ನಿನ್ನ ಹೆತ್ತ ತಾಯಿತಂದೆ
ಮಿರ್ತಾಗಿದ್ದರೆ ನಿನಗೆ
ಕೊಟ್ಟರೀ ಕಪಟನಾಟಕ ದಯಹೀನಗಿ-
ನ್ನೆಷ್ಟು ನಾ ಸೈರಿಸಲೆ ೧೧

ಒಂದೊಂದು ಗುಣಗಳ ವರಣಿಸಲಿಕ್ಕೆ ಹ
ನ್ನೊಂದೊ(ದ್ವ?)ರುಷವು ಸಾಲದೆ
ಕಂಡುಬಂದ್ವಾರ್ತೆಯ ಖರೆಯ ನಾ ಹೇಳುವೆ
ಸಂದೇಹ ಮಾಡದಿರೆ ೧೨

ಕೇಳಿ ಸತ್ಯಭಾಮೆ ತಾಳಲಾರದೆ ಮುನಿ
ಪಾದದ ಮ್ಯಾಲೆ ಬಿದ್ದು
ಹೇಳಿ ಉಪಾಯ ಮುಂದಕೆ ಪೋಗೊ ಶ್ರೀ-
ಕೃಷ್ಣ ತಾ ನೊಲಿದಿರುವಂದದಿ ೧೩

ದಾನವಾಂತಕನ ನೀ ದಾನವ ಮಾಡಲು
ದಾವಜನ್ಮಕು ನಿನ್ನನು
ತಾನಗಲದೆ ಮುಂದೆ ಸೇರಿಕೊಂಡಿರುವೊ
ಉಪಾಯ ಹೇಳುವೆನೆಂದನು ೧೪

ರಂಗರಾಯನ ಕರೆತಂದುಕೊಟ್ಟವರಿಗೆ
ಹಿಂಗದೆ ಸೌಭಾಗ್ಯವ
ಎಂದೆಂದಿಗವರ ರಕ್ಷಿಸುವೋನೆಂದೆನುತಲಿ
ಅಂಗನೆಯರನಟ್ಟಿದಳು ೧೫

ದೂತೇರ ಸಹಿತಾಗಿ ಬಂದು ತಾ ಭರದಿಂದೆ
ಪ್ರೀತಿಲೆ ಸತ್ಯಭಾಮ
ಪೂತನಾಂತಕ ನಮ್ಮ ಮನೆಗೆ ಬಾರೆನುತ ಶ್ರೀ-
ನಾಥನೆಯೇಳೆಂದಳು ೧೬

ಮಡದಿ ರುಕ್ಮಿಣಿ ಭಾಮೆ ಮಂದಿರಕ್ಕೋಗುವೆ
ಕಡುಕೋಪ ಮಾಡದಿರೆ
ತಡೆಯದೆ ನಾಳೆ ಬರುವೆನೆಂದು ಶ್ರೀಕೃಷ್ಣ ಗ-
ರುಡನ ಹೆಗಲೇರಿದ ೧೭

ವಾರಕಾಂತೆಯರು ಬಾಜಾರ ಮಧ್ಯದಿ
ಸೋಳಸಾವಿರ ಸತಿಯರನೆ
ಓರೆನೋಟದಿ ನೋಡಿ ನಗುತ ಸತ್ಯಭಾಮೆ
ಬಾಗಿಲ ಮುಂದಿಳಿದ ೧೮

ಎದುರಿಗೆ ನಿಂತು ತಾ ಚೆದುರೆ ಸತ್ಯಭಾಮೆ
ಪದುಮ ಪಾದಕೆ ಎರಗಿ
ಮುದದಿಂದ ಮುದ್ದು ಶ್ರೀಕೃಷ್ಣನ ಮುಂಗೈಯ್ಯ
ಪಿಡಿದು ತಾ ನಡೆದಳಾಗ ೧೯

ಕೃಷ್ಣರಾಯನೆ ನಿನ್ನ ಕೊಟ್ಟೇನು ದಾನವ
ಬಿಟ್ಟೆನ್ನ ಅಗಲದಂತೆ
ಸತ್ಯಭಾಮೆಯು ನೋಡಿ ನಗುತ ಈ ಕಾರ್ಯ ಅ-
ಗತ್ಯಮಾಡೆಂದೆನುತ ೨೦

ಎರೆದು ಪೀತಾಂಬರವುಡಿಸಿ ಮಾಣಿಕ್ಯದ ಆ-
ಭರಣವ ತಂದಿಟ್ಟಳು
ತರಿಸಿ ತಾಂಬೂಲ ದಕ್ಷಿಣೆಯನ್ನು ಬ್ರಾಂಬರ
ಕರೆಸಿದಳಾಕ್ಷಣದಿ ೨೧

ಆಚಾರ್ಯ ನೀವ್ ಬನ್ನಿ ವಾಸುದೇವನ ದಾನ
ಈಕ್ಷಣದಲ್ಲಿ ಕೊಡುವೆ
ನಾಶರಹಿತ ನಮ್ಮ ಮನೆಯೊಳಗಿರಲಿಕ್ಕೆ
ಗ್ರಾಚಾರವೇನೆಂದರು ೨೨

ವಿದ್ಯಾರ್ಥಿಗಳು ಬನ್ನಿ ಮುದ್ದು ಶ್ರೀಕೃಷ್ಣನ
ವಿಧ್ಯುಕ್ತದಲಿ ಕೊಡುವೆ
ಮೂರ್ಜಗದೊಡೆಯ ತಾ ಮಂದಭಾಗ್ಯರ
ಮನೇಲಿದ್ದಾನ್ಯಾತಕೆ ಎಂದಾರೆ ೨೩

ಭಟ್ಟರೆ ನೀವ್ ಬನ್ನಿ ಸೃಷ್ಟಿಪತಿಯ ದಾನ
ಕೊಟ್ಟುಬಿಡುವೆನೆಂದಳು
ಅಷ್ಟದರಿದ್ರರಿಗಾಲಕ್ಷ್ಮೀವಲ್ಲಭ
ದಕ್ಕುವ್ರೋನಲ್ಲೆಂದರು ೨೪

ಯತಿಗಳೆ ನೀವ್ ಬನ್ನಿ ಪೃಥಿವಿಗೊಡೆಯ[1][ನನು][1]
ಹಿತದಿ ದಾನವ ಕೊಡುವೆ
ಗತಿಯಿಲ್ಲ ನಮಗೆ ಶ್ರೀಪತಿ ಸಲಹಲು ನಿನ್ನ
ಪತಿ ಬ್ಯಾಡ ನಮಗೆಂದರು ೨೫

ಋಷಿಗಳೆ ನೀವ್ ಬನ್ನಿ ಶಿಶುಪಾಲಾಂತಕನಾದ
ವಸುಧೇಶನ ನಾ ಕೊಡುವೆ
ಅಶನ ವಸನ ಬಿಟ್ಟು ಅಡವಿಲಿದ್ದವರಿಗೆ
ವಶವಲ್ಲ ನಮಗೆಂದರು ೨೬

ಸುರಮುನಿಗಳು ಬನ್ನಿ ಪರಮಪುರುಷ[2][ನನು][2]
ತ್ವರಿತದಿಂದಲಿ ಕೊಡುವೆ
ಇರುವೆಗೊಂದಾನೆಯು ಉರಲು ಕಟ್ಟಿದಂತೆ
ತರವಲ್ಲ ನಮಗೆಂದರು ೨೭

ಯಾಕೆ ವಲ್ಲಿರಿ ನೀವು ಈ ಕಮಲೇಶನ
ನಾ ಕೊಡುವೆನೆಂದರೆ
ಲೋಕ ಹಿಡಿವ್ರೊ ಹೊಟ್ಟೆಗ್ಹಾಕಿ ಅನ್ನವ ಮುಂದೆ
ಸಾಕುವೋರ್ಯಾರೆಂದರು ೨೮

ಪುಂಡರೀಕಾಕ್ಷ ಬ್ರಹ್ಮಾಂಡ ನಾಯಕನ ನಾ-
ರಂದ ನಿಮಗೆ ಕೊಡುವೆ
ಕಂಡಕಂಡವರಿಗೆ ಗಂಡನ ಕೊಡುವೋದು
ಕಂಡಿಲ್ಲ ಜಗದೊಳಗೆ ೨೯

ದಾರು ಹಿಡಿಯರೆನ್ನ ಪ್ರಾಣಬಿಡುವೆ ಮುನಿ
ನೀಯೆನ್ನ ಗತಿಯೆಂದಳು

---

1, 2, ನಾನ.

೧೯

ಜಾರ ಚೋರನು ಗೊಲ್ಲರೆಂಜಲುಂಡವನ
ನಾಯೇನು ಮಾಡಲಿ ಎಂದನು ೨೦

ಪರಮಕ್ಲೇಶಗಳಿಂದ ಪಾದದಮ್ಯಾಲ್ ಬಿದ್ದು
ಹೊರಳುತಿರುವೊ ಭಾಮೆಯು
ಕರುಣದಿಂದಲಿ ಕರಪಿಡಿದೆಬ್ಬಿಸುತ ದಾನ
ಕೊಡು ಎನಗೆಂತೆಂದನು ೨೧

ತಾರೆ ತಾರೆನಗೆ ತಮಾಷೆಮಾಡುವೆ ತಾಯಿ
ಈರೇಳು ಲೋಕದಲ್ಲಿ ಶ್ರೀ-
ಪಾದನಾಡಿದವನ ತನ್ನೆದೆ ಮ್ಯಾಲಿಟ್ಟುಕೊಂಡು
ತೋರುವೆ ಜನರಿಗೆಲ್ಲ ೨೨

ಮುತ್ತುಮಾಣಿಕ್ಯದ ಮಂತ್ರಾಕ್ಷತೆ ತಾಂಬೂಲ
ದಕ್ಷಿಣೆ ಸಹಿತವಾಗಿ
ಮುಟ್ಟಿ ಮೂಜಗನೊಡೆಯನ ಮುನಿಕೈಯಲ್ಲಿ
ಕೊಟ್ಟು ತಾನೆರಗಿದಳು ೨೩

ಕೃಷ್ಣ ಏಳೆನುತ ಕೃಷ್ಣಾಂಜನ ಪೆಟ್ಟಿಗೆ
ಇಟ್ಟುಕೊ ಹೆಗಲ ಮ್ಯಾಲೆ
ಭಕ್ತವತ್ಸಲನೆಂದೆನಿಸಿಕೊಂಡ ಕಾರಣ
ಭೃತ್ಯನಾಗಿರುಯೆಂದನು ೨೪

ಹಿಂದೆ ಉಳಿಯದಿರು ಮುಂದೆ ನಡೆಯದಿರು
ತಂಬೂರಿ ತೆಗೆದುಕೊಳ್ಳೊ
ರಂಭೆ ರುಕ್ಮಿಣಿ ಭಾಮೆಯ್ರ ಹಂಬಲ ಬಿಟ್ಟರು
ತಂದೆ ತಾಯರ ಧ್ಯಾನವ ೨೫

ಹರಿಯು ನಾರಂದ ತಾ ತೆರಳಿ ಪೋಗುತಲಿರೆ
ನಯನದಿ ಜಲವ ತುಂಬಿ
ಇದುಯೇನು ಸೋಜಿಗವಾಡಿ ಶ್ರೀಕೃಷ್ಣನ
ಕರೆದೊಯ್ದು ತಾನೆಲ್ಲಿಗೊ ೨೬

ಕೃಷ್ಣ ಕೃಷ್ಣನುಯೆಂದು ಘಟ್ಟಿಸಿ ತನ್ನೆದೆ
ಕೃಷ್ಣನಾಳಾಪದಿಂದೆ

ಕೃಷ್ಣ ನಿಲ್ಲದ ಪ್ರಾಣ ಬಿಟ್ಟು ಹೋಗಲೆಂದು
ಪಟ್ಟೆಮಂಚದಿ ಬಿದ್ದಳು ೩೭

ರೋಹಿಣಿ ಬಲರಾಮೆಶೋದ ದೇವಕಿ
ವಸುದೇವ ಯಾದವರು ಕೂಡಿ
ಸೋಳಸಾವಿರದಷ್ಟಭಾರ್ಯೆರು ಒಂದಾಗಿ
ಬಾಯಿಬಿಡುತ ಬಂದರು ೩೮

ಎನ್ನ ಕೂಸಿನ ದಾನ ಕೊಡಲಿಕ್ಕೆ ನಿನಗೀಗೆ
ಇನ್ನು ಸ್ವತಂತ್ರವೇನೆ
ಚೆನ್ನವಾಯಿತೆ ಸತ್ಯಭಾಮೆಯೆ ನೀ ಎನ್ನ
ಚಿನ್ನನ ತೋರೆಂದಳು ೩೯

ನಂದ ಯಶೋದೆಯ ಕಂದನ ಕೊಡಲಿಕ್ಕೆ
ನಿಂದು ಸ್ವತಂತ್ರವೇನೆ
ಚೆಂದವಾಯಿತೆ ಸತ್ಯಭಾಮೆಯೆ ನೀ ಎನ್ನ
ಕಂದನ ತೋರೆಂದಳು ೪೦

ದಿಕ್ಕುದಿಕ್ಕಿಗೆ ನಡೆದವು ಗಜ ತುರಗ ಪ-
ಲ್ಲಕ್ಕಿ ಕಾಲಾಳುಗಳು
ಸಿಕ್ಕ ನಾರಂದ ಶ್ರೀಕೃಷ್ಣನ ಬಿಡಿರೆಂದು
ಎತ್ತಿ ತಂದರು ಮನೆಗೆ ೪೧

ಮಾಡಿದ ದಾನ ಹಿಂದಕೆ ಸೆಳೆದೊಯ್ವಂಥ
ಯಾದವರೆಂದೆನುತ
ಈರೇಳು ಲೋಕಮೊಳಗೆ ನಿಮಗಪಕೀರ್ತಿ
ಸಾರುತ ತಿರುಗೇನೆಂದ ೪೨

ರಂಗರಾಯನ ತೂಕ ಬಂಗಾರ ಕೊಡುವೆ ಶು-
ಭಾಂಗನ ಬಿಡಿರೆನುತ
ಅಂಗನೆಯರು ತಮ್ಮ ಸೆರಗೊಡ್ಡಿ ಬೇಡುತ ನಾ-
ರಂದಗೆ ಎರಗಿದರು ೪೩

ಮುತ್ತು ಮಾಣಿಕ್ಯ ಚಿನ್ನ ಸರ ಪದಕವು ನವ
ರತ್ನದಾಭರಣಗಳು

ಮಕ್ಕಳ ಬಾಲದೊಡಿಗೆ ತಂದ್ಹಾಕಿದರೂ ಶ್ರೀ
ಕೃಷ್ಣ ತಾ ಜಡದಿರುವ ೪೪

ಸರಿಗೆ ಬಳೆಯು ನಾಗಮುರಿಗೆ ಕಠಾಣಿಯು
ಸರ ಪದಕದ ರಾಶಿಯು
ಸರಿಯಾಗದೆಂದರಿದ್ದರದಿ ರುಕ್ಮಿಣಿಯನು
ಕರೆಯ ಬಂದರು ಬ್ಯಾಗನೆ ೪೫

ಎದ್ದು ರುಕ್ಮಿಣಿ ತಾ ವೃಂದಾವನ ಪೂಜಿಸಿ
ಪದ್ಮಾಕ್ಷಿ ನಡೆದು ಬಂದು
ಬುದ್ಧಿವಂತಳು ಭಾಮೆ ಮಾಡಿದ ಕಾರ್ಯವ
ತಿದ್ದುವೋರ್ಯಾರೆಂದಳು ೪೬

ಕೊಡುವೋರಿನ್ಯಾರು ಹಿಡಿವೋರ್ಯಾರು ದಾನವ
ಬಿಡಿಸಿ ಕೊಂಬುವರು ದಾರು
ಕೊಡೆ ಮಾಡಿ ಮಂದರ ಹಿಡಿದ ಸಮರ್ಥಗೆ
ಇಡುವೋರ್ಯಾರೀ ಚಿನ್ನವ ೪೭

ಮಕ್ಕಳಾಟಿಕೆಯೇನೆ ತಕ್ಕಡಿಯೊಳಗೆ ದೇ-
ವಕ್ಕಿ ಯಶೋದಗಿನ್ನು
ಅಕ್ಕರವಾಗೇದೆಂದೆನುತ ಹಾಸ್ಯಗಳಿಂದೆ
ನಕ್ಕಳೆ ರುಕ್ಮಿಣಿಯು ೪೮

ತಕ್ಕಡಿಯೊಳಗಿದ್ದ ಚಿನ್ನವ ತೆಗೆಸಿ ತಂ-
ದಿಟ್ಟಳು ತುಳಸಿಯನ್ನು
ಭಕ್ತರಾಧೀನ ಭಾಳ್ಹರುಷದಿ ನೋಡುತ
ಚಕ್ಕನೆ ತಾನೆದ್ದನು ೪೯

ಇಂದಿರೆಪತಿ ನಮಗೊಲಿದನೆಂದೆನುತಲಿ
ದುಂದುಮಿ ಭೇರಿಗಳು
ಮಂದಾರ ಮಲ್ಲಿಗೆ ಮಳೆಯ ಕರೆದರತಿ
ಸಂಭ್ರಮ್ಮವಾಗಿದ್ದರು ೫೦

ಅರ್ಥಿಯಿಂದಲಿ ಮುದ್ದು ರುಕ್ಮಿಣಿಯನು ತೊಡೆ[ಯ]
ಲಿಟ್ಟು ಯಶೋದೆ ಬಂದು

ಅಕ್ಕರದಿಂದ ದೇವಕ್ಕಿದೇವಿಯು ಸೊಸೆ[ಯು]
ನಪ್ಪಿಕೊಂಡಳು ಬ್ಯಾಗನೆ ೫೧

ವಸುದೇವ ನಂದಗೋಪನು ನಸುನಗುತಲಿ
ಸೊಸೆಯು ಕೊಂಡಾಡುತಿರೆ
[illegible]
ದೆಸೆಪಂತಳಾಗೆನುತ ೫೨

ಮುಡಿಯು ಮುಂದಕೆ ಬಾಗಿ ನಿಂತ ಭಾಮೆಯು ಕೃಷ್ಣ
ಕಡು ಹರುಷದಿ ನೋಡುತ
ಪಿಡಿದು ಕರವ ತನ್ನ ತೊಡೆಯಮ್ಯಾಲೇರಿಸಿ
ಬಿಡು ಭಯಬ್ಯಾಡೆಂದನು ೫೩

ದಾರೇನೆಂದರು ಎನ್ನ ಪ್ರಾಣದರಸಿ ಭಾಮೆ
ಹೇಳಿದ ನಾರಂದನು
ಮಾಡಿದಳೆನ್ನ ದಾನವನೀಗೆ ಕೈವಶ
ವಾದೆ ನಾನೆಂತೆಂದನು ೫೪

ರೂಢಿಗೊಡೆಯ ನಿನ್ನಲ್ಲಾಡಿದ ಪಂಥವ
ಮಾಡಿ ಗೆದ್ದೆನು ಎನುತ
ನೀಡಿದ್ಯೊ ಎನಗೊಂದು ತುಳಸಿಯೆಂದೆನುತ ಮಾ-
ತಾಡಿ ತಾ ನಗುತಿದ್ದನು ೫೫

ಕರುಣಾಸಮುದ್ರ ನೀ ಕರುಣಿಸಬೇಕೆಂದು
ಕರವ ಮುಗಿದು ನಿಂತನು
ಪರಮ ದಯಾಳು ನೀ ಪಾಲಿಸಬೇಕೆಂದು
ತೆರಳಿದ ನಾರಂದನು ೫೬

ಧರೆಯ ಮ್ಯಾಲೆ ಭಾಮೆ ಹರಿಯ ದಾನವಕೊಟ್ಟ
ಚರಿತವ ಪೇಳುತಿರೆ
ಧರ್ಮಕಾಮ್ಯಾರ್ಥ ಭೀಮೇಶಕೃಷ್ಣನು
ನಮಗೊಲಿದು ತಾ ಕೊಡುತಿರುವ ೫೭

೧೨

*

ಇಂದಿರೇಶನು ಮಣಿನಂದಿನೀತೀರದಿ
ಚೆಂದದಿ ಕೊಳಲೂದುತಿರಲು ಹರಿ ಆ-
ನಂದದಿ ಕೊಳಲೂದುತಿರಲು
ಅಂಬುಜಾಕ್ಷಿಯರು ಕೇಳತಿ ಮೋಹತನದಿ ಗೋ-
ವಿಂದನಿದ್ದಲ್ಲೆ ನಡೆದರು ೧

ಕರೆವೊ ಕ್ಷೀರವು ಕರ ಸಡಿಲಬೀಳುತಲಿರೆ
ಪರವಶವಾಗಿ ನಾರಿಯರು ದೇಹ
ಪರವಶವಾಗಿ ನಾರಿಯರು
ಕರುಗಳ ತೊಟ್ಟಿಲೊಳಗೆಯಿಟ್ಟು ಪಾಡುತ
ಭರದಿಂದ ತೂಗಿ ನಡೆದರು ೨

ಉಕ್ಕುವೊ ಹಾಲಿಗೆ ಉರಿಮಾಡಿ ಮತ್ತಿಷ್ಟು
ಮಕ್ಕಳ ಕಣ್ಣಿಗೆ ಬಿಗಿದು ಅಳುವೊ
ಮಕ್ಕಳ ಕಣ್ಣಿಗೆ ಬಿಗಿದು
ಬೆಕ್ಕಿನ ಬಗಲೊಳಗೆತ್ತಿ ಮುದ್ದಾಡುತ
ಕೃಷ್ಣನಿದ್ದಲ್ಲೆ ನಡೆದರು ೩

ಕುಂಭಿಣಿಪತಿ ನೋಡೋಸಂಭ್ರಮದಿಂದಲಿ
ಅಂಬರವನೆ ಬಿಟ್ಟು ಕೆಲರು ತಾವು [ಉ]
ಟ್ಟಂಬರವನೆ ಬಿಟ್ಟು ಕೆಲರು
ಕುಂಭಕುಚದ ಕೋಮಲಾಂಗೇರು ಕಂಚುಕ
ಕಬರಕ್ಕೆ ಸುತ್ತಿ ನಡೆದರು ೪

ಪಂಚಭಕ್ಷ ಪರಮಾನ್ನ ಘೃತವು ಕ್ಷೀರ
ಪತಿಸುತರಿಗೆ ಉಣಬಡಿಸಿ ತಮ್ಮ
ಪತಿಸುತರಿಗೆ ಉಣಬಡಿಸಿ
ಮತಿಭ್ರಾಂತರಾಗಿ ಮ್ಯಾಲೆಡೆಗಳನಿಕ್ಕದೆ
ಸತಿಯರು ಸಾಗಿ ನಡೆದರು ೫

* ಶ್ರೀಕೃಷ್ಣಲೀಲಾ

ಪಂಚರತ್ನದ ಹಾರಪದಕ ಕಠಾಣಿಯು
ಟೊಂಕಕ್ಕೆ ಸುತ್ತಿ ನಾರಿಯರು ಸರವ
ಟೊಂಕಕ್ಕೆ ಸುತ್ತಿ ನಾರಿಯರು
ಪಂಚಮುಖದ ಪಟ್ಟೆ ಕಂಠದಲ್ಲಿಟ್ಟರು ವೈ-
ಕುಂಠಪತಿಯು ನೋಡೋ ಭರದಿ ೬

ಕಂಕಣಬಳೆ[ಡೋ]ರ್ಯ ಕಾಲಿನಲ್ಲೇರಿಸಿ
ಕಿಂಕಿಣಿ ಕಿರುಗೆಜ್ಜೆ ರುಳಿಯು ಕಾಲ
ಕಿಂಕಿಣಿ ಕಿರುಗೆಜ್ಜೆ ರುಳಿಯು
ಪಂಕಜಾಕ್ಷೇರು ನಳಿತೋಳಿನಲ್ಲೇರಿಸಿ ಅ-
ಲಂಕಾರವಾಗಿ ನಡೆದರು ೭

ಮುತ್ತಿನಬಟ್ಟರಳಲೆ ಚಂದ್ರರಾಗಟ
ಕಟ್ಟಿದರೊಂದೊಂದು ಕಿವಿಗೆ ಚೌರಿ
ಕಟ್ಟಿದರೊಂದೊಂದು ಕಿವಿಗೆ
ಅಚ್ಚಶಾವಂತಿಗೆ ಅರಳುಮಲ್ಲಿಗೆ ಮಾಲೆ
ದಿಕ್ಕಿಗೊಂದೊಂದುದುರುತಲಿ ೮

ವಾಲೆ ಮೂಗುತಿ ವೈಯಾರದ ಬಾವುಲಿ ಕೂ-
ದಲಿಗೊಂದೊಂದು ಸಿಗಿಸಿ ತಮ್ಮ ಕೂ-
ದಲಿಗೊಂದೊಂದು ಸಿಗಿಸಿ
ಮಾರನಯ್ಯನ ಮೋರೆ ನೋಡಲು ಮದ-
ವೇರಿದ ಗಜದಂತೆ ನಡೆವರು ೯

ಹಲ್ಲಿಗೆ ಕುಂಕುಮ ಗಲ್ಲಕ್ಕೆ ಕಾಡಿಗೆ
ಚೆಲ್ವ ಹಣೆಗೆ ಅರಿಷಿಣವ ತೀಡಿ
ಚೆಲ್ವಹಣೆಗೆ ಅರಿಷಿಣವ
ಫುಲ್ಲಾಕ್ಷದಲ್ಲಿ ಕಸ್ತೂರಿ ತಿಲಕವನಿಟ್ಟು
ಗೊಲ್ಲ ಸತಿಯರು ನಡೆವರು ೧೦

ಭಕ್ತಿಭಾವದಿ ಚಿತ್ತ ಪರವಶವಾಗಿದ್ದ
ಮಿತ್ರೆಯರನೆ ನೋಡಿ ನಗುತ ಬರುವೊ
ಮಿತ್ರೆಯರನೆ ನೋಡಿ ನಗುತ

ಕತ್ತಲೊಳಗೆ ದಿಟ್ಟತನದಿಂದ ಬರುವುದಿ-
ದಾಶ್ಚರ್ಯವೆಂದ ಶ್ರೀಕೃಷ್ಣ ೧೧

ಏನು ಕಾರಣ ನೀವು ಬಂದಿರಿ ವನಕಿನ್ನು
ಭಾನು ತಾ ಉದಿಸದ ಮುಂದೆ ಅರುಣ
ಭಾನು ತಾ ಉದಿಸದ ಮುಂದೆ
ಮಾನದಿಂದಲಿ ಮನೆಗಳಿಗೆ ಹೋಗಿರಿ ಎಂದು
ದಾನವಾಂತಕ ಕೃಷ್ಣ ನುಡಿದ ೧೨

ದೇವಾಧಿದೇವ ದೇವಕ್ಕಿ ಸುತನೆ ಕೃಷ್ಣ
ತ್ರಿಲೋಕ್ಯಾಧಿಪತಿ ನಿನ್ನ ಬಿಟ್ಟು ಕೇಳೊ
ತ್ರಿಲೋಕ್ಯಾಧಿಪತಿ ನಿನ್ನ ಬಿಟ್ಟು
ಮಾನವೆಲ್ಲಿಹುಟ್ಟೀಳೊ ಮಾವನಾಂತಕನಾದ
ಶ್ರೀನಾಥ ರಕ್ಷಿಸೊ ನಮ್ಮ ೧೩

ರಂಗನೆ ನಿನ್ನಂಗಸಂಗವ ಬೇಡುವ
ಅಂಗನೇರಿಗೆ ದಯಮಾಡೊ ನೀ ಗೋ-
ಪಾಂಗನೇರಿಗೆ ದಯಮಾಡೊ
ಕಂಗಳ ತೆರೆದು ಕಟಾಕ್ಷದಿ ನೋಡುತ
ಇಂದೀ ಜಲಕ್ರೀಡೆನಾಡೊ ೧೪

ಭಂಗಾರಾಭರಣದಿ ಕುಂದಣವಿಟ್ಟಂತೆ
ಚಂದ್ರ ತಾರದಲ್ಲಿದ್ದಂತೆ ಹರಿ ತಾ
ಚಂದ್ರ ತಾರದಲ್ಲಿದ್ದಂತೆ
ಮಂದಗಮನೆಯರ ಮಧ್ಯ ಆಡುತ ಗೋಪೀ
ಕಂದ ದೃಷ್ಟಿಗೆ ಮರೆಯಾದ ೧೫

ಜಾಜಿ ಮಲ್ಲಿಗೆ ಸಂಪಿಗೆ ಶಾವಂತಿಗೆ
ಕಲ್ಹಾರ ಕಮಲ ಕ್ಯಾದಿಗೆಯೆ
ಕಲ್ಹಾರ ಕಮಲ ಕ್ಯಾದಿಗೆಯೆ
ನೀವಿಲ್ಲೆ ಕಂಡಿರ ಯಾದವ ಕೃಷ್ಣನ
ತೋರೆ ತೋರೆಂದ್ಹೊದರುತಲಿ ೧೬

ಕೆಂದಾವರೆ ಕೆಲದಲ್ಲಿದ್ದ ತಾವರೆ
ಕುಂದಕುಸುಮ ಎಳೆತುಳಸಿ ತೋರೆ

ಕುಂದಕುಸುಮ ಎಳೆತುಳಸಿ
ಅಂಬುಜನಾಭನಾಲ್ಪರಿದ್ದು ಡುಕುತಲಿರೆ
ಕಂಡರ್ಹ್ಯೊಂದರವಿಂದ ನಖವ ೧೭

ವಂಚಿತಳಾಗಿದ್ದ ವನಿತೆಯು ಮುಖನೋಡಿ
ಚಂಚಲಾಕ್ಷನ ಸುದ್ದಿಕೇಳಿ ತಾವು
ಚಂಚಲಾಕ್ಷನ ಸುದ್ದಿ ಕೇಳಿ
ಭ್ರಾಂತರಾಗ್ವನದಿ ಶ್ರೀಕಾಂತನ ಸ್ತುತಿಸಲು
ನಿಂತ ಮನ್ಮಥನಂತೆ ಬಂದು ೧೮

ಮಿಂಚು ಸೂರ್ಯ ಮಧ್ಯ ಮೇಘವು ಪೊಳೆದಂತೆ
ಕಾಂತೆಯರನೆ ಕೂಡ್ಯಾಡಿ ಹರಿ ತಾ
ಕಾಂತೆಯರನೆ ಕೂಡ್ಯಾಡಿ
ಅಂತರಂಗದಿ ನಿಶ್ಚಂಚಲ ಭಕ್ತಿಗೆ
ಸಂತೋಷಬಡಿಸಿದ ಕೃಷ್ಣ ೧೯

ಕಸ್ತೂರಿಗಂಧ ಕೇಸರಿಗಂಧ ಕೇಸರಿ ಕುಂಕುಮರಿಶಿಣ
ತೆಪ್ಪದಂತಿರೆ ನದಿಯೊಳಗೆ ಕುಸುಮ
ತೆಪ್ಪದಂತಿರೆ ನದಿಯೊಳಗೆ
ಭಕ್ತವತ್ಸಲನ ರಾಸಕ್ರೀಡ್ಯುತ್ಸವದಲ್ಲಿ
ಪುಷ್ಪವೃಷ್ಟಿಗಳೆಸುರಿದವು ೨೦

ಉಸುಕಿನ ದಿಟ್ಟಲಿ ವಸುದೇವಸುತ ಕೃಷ್ಣ
ಶಶಿಮುಖಿಯರ ಸುಖಬಡಿಸೆ ಹರಿ ತಾ
ಶಶಿಮುಖಿಯರ ಸುಖಬಡಿಸೆ
ಅಸುರಾಂತಕನಾಟ ನೋಡುವ ಅಮರರಿಂ-
ದೆಸೆದುವು ಭೇರಿನಾದಗಳು ೨೧

ಗೋಪಿಯರಿಂದ ಕೂಡೀಪರಿ ರಮಿಸಿದ್ದು
ತಾಪವ ಬಿಡಿಸಿದ ಕೃಷ್ಣ ವಿರಹ
ತಾಪವ ಬಿಡಿಸಿದ ಕೃಷ್ಣ
ಅಪಾರ ಮಹಿಮ ದಯಾಪರ ಮೂರುತಿ
ಶ್ರೀಪತಿ ಸರ್ವಪಾಲಕನೆ ೨೨

ಕಾಮಜನಕನಲ್ಲಿ ಕಾಮಿಸಿ ಬಂದಂಥ
ಕಾಮಿನಿಯರಿಗ್ವೊರವಿಟ್ಟ ಹರಿ ತಾ
ಕಾಮಿನಿಯರಿಗ್ವೊರವಿಟ್ಟ
ಸಾಮಜವರದನೆ ಸಲಹೆಂದು ನಮಿಸಲು
ಭೀಮೇಶ ಕೃಷ್ಣ ತಾ ಒಲಿವ ೨೩

## ೧೪

## ಸುಳಾದಿ

### [ಧ್ರುವತಾಳ]

ಇಂದು ಎನಗೆ ನಿನ್ನ ಸಂದರುಶನಸುಖ
ವೊಂದು ತೋರೆನಗರವಿಂದನಯನ
ಮಂದಾಕಿನಿಯು ಪಡೆದ ಮುದ್ದು ಚರಣ
ಸುಂದರಾಂಗ ತೋರೆನಗೆ ಸುರೇಂದ್ರನಾಥ
ಕಂದರ್ಪಪಿತನ ಕಾಲಂದುಗೆ [illegible] ಗೆಜ್ಜೆ
ಚೆಂದುಳ್ಳ ಪದ್ಮರೇಖೆಯಿಂದೊಪ್ಪುವೊ
ಇಂದಿರೆ ಕರಕಮಲದಿಂದ ಪೂಜಿತನಾದ
ಚಂದ್ರವದನ ನಿನ್ನ ಚೆಲುವ ಪಾದ
ಇಂದ್ರಾದಿ ಹರ ನಾರಂದ ಸುರಬ್ರಹ್ಮಾದಿ
ವಂದ್ಯ ನಿನಗೆ ಕೋಟಿ ನಮೋನಮೋ
ಎಂದು ಬೇಡುವೆ ದಯಾಸಿಂಧು ಎನಿಸಿದಾತ
ಕಂದನಂದದಿ ನೋಡಿ ಸಲಹೋ ಎನ್ನ
ಮಂದಬುದ್ಧಿಯು ಮಹಾಮದಡ ಪಾಮರ ಭವ
ಬಂಧನದೊಳು ಸಿಲುಕಿ ನೊಂದೆನಯ್ಯ
ಸಂದೇಹ ಮಾಡದೆ ಸಲಹದಿದ್ದರೆ ನಿನ್ನ
ಹೊಂದಿ ಬಾಳುವುದೆಂತೊ ಮುಂದರಿಯೆ
ಬಿಂದುಮಾತ್ರದಿ ಸಾರಾಮೃತವ ಭೀಮೇಶಕೃಷ್ಣ
ತಂದು ನೀಡೆನಗೆ ಇಂದೀವರಾಕ್ಷ ೧

### [ಮಠ್ಯತಾಳ]

ಯುಗಳ ಪಾದಕ್ಕೆ ಕೈಯ ಮುಗಿದು ಬೇಡುವೆನಯ್ಯ
ಜಗದುದರನೆ ನಿನ್ನ ಜಾಣತನವ ಬಿಟ್ಟು
ಅಗಣಿತಗುಣಮಹಿಮ ಅಂತರಾತ್ಮಕ ದೇವ

ಬಗೆಬಗೆಯಲಿ ಸಲಹೋ ಭಕ್ತವತ್ಸಲ ನಿನ್ನ
ಮಗುವೆಂದೆನ್ನ ಕಾಯೊ ಮಂದರೋದ್ಧರ ದೇವ
ನಿಮಗೋಚರ ಸ್ವಾಮಿ ನಿಂತುನೋಡುತ ಎನ್ನ
ಚಿಗುರುಮೋಹದಕುಡಿಯು ಚಿವ್ರಟಿ ಹಾಕುತ ನಿನ್ನ
ಸುಗುಣಗಳನೆ ಬಿಟ್ಟೆನ್ನವಗುಣವೆಣಿಸಿದರೆ
ಇಗೋ ನಿನಗಪಕೀರ್ತಿ ಈಗ ಒಪ್ಪಿಸುವೆನು
ಬಿಗಿದ ಭವಪಾಶ ಬಿಟ್ಟಿ ಭೀಮೇಶಕೃಷ್ಣ
ತೆಗೆಯದೆ ನಿನ್ನೊಲ್ದರತೀ ಜಗದೊಳಗುಂಟೇನಯ್ಯ ೨

(ವಚನ)

ಸಕಲ ಸ್ನಾನವು ನೇಮ ಹೋಮ ಜಪಂಗಳು
ಸಕಲ ಪುಣ್ಯಕ್ಷೇತ್ರ ಮೂರ್ತಿನಾಮಂಗಳು
ಸಕಲ ಪುರಾಣ ವೇದಾದಿಗ್ರಂಥಗಳು
ಸಕಲ ಕಾರ್ಯವು ಸರ್ವೇಷ್ಟ ಫಲಂಗಳು
ಸಕಲ ಸೌಭಾಗ್ಯ ಸಾಯುಜ್ಯ ಪದವಿಗಳು
ಲಕುಮಿಶ ಇವು ನಿನ್ನ ನಖಶಿಖ ಪರಿಯಂತ್ರ
ಸಕಲಪೊಂದಿದ್ದವು ಸಖನ ಸಾರಥಿ ಸಮದೃಷ್ಟಿಲಿ ನೋಡಲು
ಸಕಲ ಸಿದ್ಧಿಯು ಸರಿಯಾಗಿ ಕೈಗೂಡೋದು
ಶಕಟಸುರಾಂತಕ ಕಕುಲಾತಿ ಮಾಡದೆ
ಬಕನ್ವೈರಿಯೆನ್ನ ಭಾರವ ನೀ ವಹಿಸಲಿಬೇಕೊ
ಇಕೋ ನಿನ್ನ ಚರಣಕ್ಕೆ ಈ ದೇಹ ಅರ್ಪಿಸುವೆ
ಗೋಕುಲವಾಸ ನಿನ್ನ ಪಾದಕೆ ನಮಸ್ಕರಿಸುವೆ
ಮುಕುತಿದಾಯಕ ಮುದ್ದು ಭೀಮೇಶಕೃಷ್ಣನೆ
ಭಕುತಿಜ್ಞಾನದಲಿಡೊ ಭಯಹಾರಿ ಎನ್ನ

ಗೋಪಸುತನೆ ನಿನ್ನ ಗುಣಮನ್ವಲ್ಲಿಘೆ ಮಹ
ದಪರಾಧವೆಣಿಸದೆ ನೀ ಕರುಣದಲೆ ಸಾಂ-
ದೀಪಗೆ ಸುತರನಿಟ್ಟ ಸಪ್ತಾಂಬುಧಿವಾಸ
ಕೋಪದಿ ಬಂದ್ದ ಶಿಶುಪಾಲಗೊಲಿದೆಯೊ
ಶ್ರೀಪತಿ ಶರಣೆಂದಾ ದ್ರೌಪದಿಕಾಯ್ದಂತೆ
ಕಾಪಾಡೊ ಈ ಭವಕೂಪದೊಳಗೆ ಬಿದ್ದೆ
ನೀ ಪಿಡಿಕೈಯ ದಯಾಪರಮೂರುತಿ

ಆಪತ್ತು ಬಾಂಧವ ಈ ದೇಹವೃಕ್ಷದಲಿ ದ್ವಾ-
ಸೂಪರಣನಂತೆ ದೂರೇನೋ ಎನ್ನ ಸ-
ಮಿಾಪದಲಿದ್ದು ಸ್ವರೂಪ ತೋರದಲೆ ಸಂ-
ತಾಪ ಬಡಿಸದಿರೆಂದಾಪನಿತು ಪೇಳ್ವೆ
ಭೂಪಾಲ ಭೀಮೇಶಕೃಷ್ಣ ನಿನ್ನ ಪಾದ
ನಾ ಪೊಂದಿದೆನೊ ದೊರೆ ನೀ ಪೊರೆಯೆಂದು ೪

[ಜತೆ]

ಏಸೇಸು ಕಾಲಕೆ ಬ್ಯಾಸರವೆ ಭೀಮೇಶಕೃಷ್ಣ
ಲೇಸು ನೀಡೆನಗೆ ಸದಾ ಸುಮಂಗಳವ ೫

೧೪

*

ಇಂದುವದನೆ ಪಾರ್ವತಿಯೆ ನಾ ಇಲ್ಲಿಗೆ
ಬಂದೆನು ಬಾಗಿಲು ತೆಗೆಯೆ ಜಾಣೆ
ಬಂದೆನು ಬಾಗಿಲು ತೆಗೆಯೆ ೧

ಬಂದವರ್ಯಾರೀ ವ್ಯಾಳ್ಯದಿ ಬಾಗಿಲು
ಬಂದು ತೆಗೆಯೊರ್ಯಾರಿಲ್ಲ ಈಗ
ಬಂದು ತೆಗೆಯೊರ್ಯಾರಿಲ್ಲ ೨

ಅಂಗನಾಮಣಿ ಕೇಳೆ ಗಂಗಾಧರೆನಿಸಿದ
ಚಂದ್ರಶೇಖರ ನಾ ಬಂದೀನೆ ಜಾಣೆ
ಚಂದ್ರಶೇಖರ ನಾ ಬಂದೀನೆ ೩

ಸಿಂಧುರಾಜನ ಸತಿಸುತರನ್ಹೊತ್ತಿಲ್ಲಿಗೆ
ಬಂದ ಕಾರಣವೇನು ನೀನು ಅವ
ರಿಂದ ಕಾರಣ ಮತ್ತೇನು ೪

ಕುಸುಮಲೋಚನೆ ಕೇಳೆ ಪಶುಪತಿ ನಾ ಬಂದೆ
ಕುಶಲದಿ ಬಾಗಿಲು ತೆಗೆಯೆ ಜಾಣೆ
ಕುಶಲದಿ ಬಾಗಿಲು ತೆಗೆಯೆ ೫

* ಈಶ್ವರನಿಗೆ ಪಾರ್ವತಿಯು ಬಾಗಿಲುಕಟ್ಟಿದ ಹಾಡು.

ಪಶುಗಳಿಗೆಲ್ಲ ಪತಿಯಾದರೆ ನಿನಕೊಂಬು
ಹಸನಾಗಿ ತೋರಿಸೊ ಎನಗೆ ಕೊಂಬು
ಹಸನಾಗಿ ತೋರಿಸೊ ಎನಗೆ ೬

ಸರ್ಪಶರೀರದವಸ್ತ್ರ ಕೊಂಡಿರುವಂಥ
ಶ್ರೇಷ್ಠ ಶಿವನು ನಾ ಬಂದೀನೆ ಜಾಣೆ
ಶ್ರೇಷ್ಠ ಶಿವನು ನಾ ಬಂದೀನೆ ೭

ಸರ್ಪಸೇರಿರುವಂಥ ಹುತ್ತ ನೀನಾದರೆ
ಇತ್ತ ಬರುವೋದುಚಿತಲ್ಲ ಪೋಗೊ
ಇತ್ತ ಬರುವೋದುಚಿತಲ್ಲ ೮

ಕಾಂತೆ ಪಾರ್ವತಿ ನೀಲಕಂಠ ನಾ ಬಂದೀನಿ
ಸಂತೋಷದಿ ಬಾಗಿಲು ತೆಗೆಯೆ
ಸಂತೋಷದಿ ಬಾಗಿಲು ತೆಗೆಯೆ ೯

ಕಂಠದೊಳಗೆ ಕಪ್ಪಿದ್ದರೆ ನೀ ನವಿ-
ಲಂತೆ ಕುಣಿದು ತೋರಿಸೆನಗೆ ನವಿ-
ಲಂತೆ ಕುಣಿದು ತೋರಿಸೆನಗೆ ೧೦

ಫಾಲಾಕ್ಷ ನಾ ರುಂಡಮಾಲೆ ಧರಿಸಿದಂಥ
ಶೂಲಿಯು ನಾನು ಬಂದೀನೆ ತ್ರಿ-
ಶೂಲಸಹಿತ ನಾ ಬಂದೀನೆ ೧೧

ಮೂರು ಶೂಲೆಗಳ್ಯಾವ್ಯಾವ ಕಡೆಯುಲುಂಟು
ಭಾಳ ಬಲ್ಲವರಲ್ಲೆ ಪೋಗಯ್ಯ ನೀ
ಭಾಳ ಬಲ್ಲವರಲ್ಲೆ ಪೋಗಯ್ಯ ೧೨

ಪ್ರಾಣದೊ(ದ್ವ)ಲ್ಲಭೆ ಕೇಳೆ ಸ್ಥಾಣು ನಾ ಬಂದೀನಿ
ಜಾಣೆ ನೀ ಬಾಗಿಲು ತೆಗೆಯೆ ಒಳ್ಳೆ
ಜಾಣೆ ನೀ ಬಾಗಿಲು ತೆಗೆಯೆ ೧೩

ಸ್ಥಾಣು ನೀನಾದರೆ ವೇಣುಮುದ್ದಲೆ ಮಾಡೊ
ಜಾಣರ ಮನೆಗೆ ನೀ ಪೋಗಯ್ಯ ಒಳ್ಳೆ
ಜಾಣರ ಮನೆಗೆ ನೀ ಪೋಗಯ್ಯ ೧೪

ಶಂಬರಾರಿಯು ಸಂಹರಿಸಿದ ಗಜ ಚ-
ರ್ಮಾಂಬರಧಾರನು ನಾನೇ ಚ-
ರ್ಮಾಂಬರಧಾರನು ನಾನೆ ೧೫

ಕಾಮನ ವೈರಿ ಭಸ್ಮಾಂಗವ ಧರಿಸಿದ
ಸಾಮಜ ವಸನವ ನೋಡಿ ಇರ-
ಲಾರೆನು ನಿನ್ನೊಡಗೂಡಿ ೧೬

ಭೂತಗಣಂಗಳ ನಾಥನಾಗಿರುವೊ ಪ್ರ-
ಖ್ಯಾತನು ನಾನು ಬಂದೀನೆ ಸದ್ಯೋ-
ಜಾತನು ನಾನು ಬಂದೀನೆ ೧೭

ಭೂತಗಣವ ಕೂಡಿ ಯಾತಕೆ ಬರುವುದು
ಭೀತಿ ಬಡುವೆ ಮುಂಜಿ ಸಾಗೋ ನಾ
ಭೀತಿ ಬಡುವೆ ಮುಂಜಿ ಸಾಗೋ ೧೮

ಮಾತಿಗೆ ಮಾತನಾಡುವ್ರೋರೆ ಪಾರ್ವತಿ ಕೇಳೆ
ಮೂಕನಂತಿರುವೆನೆ ನಾನು ಇನ್ನು
ಮೂಕನಂತಿರುವೆನೆ ನಾನು ೧೯

ಮೂಕನಂತಿರುವುದ್ವಿವೇಕ ಭೀಮೇಶಕೃಷ್ಣ-
ನ್ನ ಕರುಣಕೆ ಪಾತ್ರಳೇನೋ ನಿನಗೆ
ನಾ ಕೈಯ ಮುಗಿವೆ ಬಾ ನೀನು ೨೦

೧೫

*

ಇಂದ್ರಪ್ರಸ್ಥದಲ್ಲಿ ಕುಂತಿ [illegible] ರಾಜಸೂಯಯ್ಯಾಗವನು ಆ-
ನಂದದಿ ಮಾಡಿಂದಿರೇಶಗರ್ಪಿಸಿದನು ೧

ಮಂದಬುದ್ಧಿ ಕೌರವನು ಅದನೋಡಿ ಸೈರಿಸದೆ
ಪಾಂಡವರ ಪಟ್ಟದಿಂದೊಟ್ಟಿಗ್ಗೆ ಕೆಡಿಸೆಂದನು ೨

ಘಾತಕ ದುರ್ಯೋಧನ ತನ್ನ ಮಾವನ ಶಕುನಿಯ ಕೇಳಿ
ಪ್ರೀತಿಂದೆ ಪಾಂಡವರ ಕರೆಸಿ ದ್ಯೂತವಾಡಿದ ೩

---

* ಸೀರೆ ಸೆಳೆದದ್ದು

ಆಗ್ರಾದಿಂದಾಟಗಳ ಸೋಲಿಸಿ ಶೀಘ್ರದಿಂದ್ವನವಾಸವ ಚರಿಸಿ
ಅಜ್ಞಾತ್ವಾಸೊಂದೊ(ಪ್ಪ?)ದುಷವೆಂದು ಪ್ರತಿಜ್ಞೆ ಮಾಡಿದ ೪

ಸೋತು ಧರ್ಮ ಸಕಲೈಶ್ವರ್ಯ ಸಾದೇವ ನಕುಲ ಭೀಮರ
ಪಾರ್ಥ ದ್ರೌಪದಿಯ ಪಣಕಿಟ್ಟು ಕೂತನಾಗಲೆ ೫

ಆನೆ ಕುದುರೆ ಅಷ್ಟೈಶ್ವರ್ಯ ಜ್ಯಾಗೆ ತನ್ನಿರಿ ಭಂಡಾರವನು
ಹೋಗಿ ದ್ರೌಪದಿ ಕರೆಯಿರೆಂದು ಹೇಳಿದನಾಗ ೬

ಬಂದು ಭಟರು ದ್ರೌಪದಿಯು ಮುಂದೆ ಕರವ ಮುಗಿದು ನಿಂತು
ಇಂದು ನಮ್ಮ ರಾಜಸಭೆಗೆ ಬನ್ನಿರೆಂದರು ೭

ತಾಯೆ ಕೇಳ್ ನಿಮ್ಮರಸುಗಳು ಮಾಯದಿಂದ್ವಂಚಿತರಾಗಿ
ದಾಯವಾಡಿ ಸೋತರಿನ್ನುಪಾಯವಿಲ್ಲೀಗೆ ೮

ಇಂದಿರೇಶನ ದಯವು ನಮ್ಮಲ್ಲಿದ್ದ ಕಾರಣದಿಂದೀಗ
ಬಂದ ದುರಿತ ಬಯಲಾಗುವುದ್ಹ್ಯಾಗೆಂದು ನುಡಿದಳು ೯

ಚಂದ್ರಜ್ಯೋತಿಯಂತೆ ಹೊಳೆವೊ ಮುಂದಗಮನೆ [ಇ]ಂದುವದನೆ
ದುಂಡುಮಲ್ಲಿಗೆಶಿರವ ಬಾಗಿ ಬಂದು ನಿಂತಳು ೧೦

ಕಂಡು ದುರ್ಯೋಧನ ದ್ರೌಪದಿ ನಿನ ಗಂಡರಡವಿಗ್ಹೈದುವೋರು
ಹೆಂಡತ್ಯಾಗಿರೆನ್ನ ಬಳಿಗೆ ಬಾರೆ ಎಂದನು ೧೧

ಕೆಂಡತುಂಬಿದ ಕೊಂಡದೊಳು ಕಂಡೂ ನೀ ಹಾರುವರೇನೊ
ತುಂಡುಮಾಡಿ ಕಡಿವೋರೈವರು ಬ್ಯಾಡೋಯೆಂದಳು ೧೨

ಪತಿಗಳಿಂದೆ ರಹಿತಳೆ ದ್ರೌಪದಿಯೆ ನೀನತಿ ಹರುಷದಿಂದೆ
ಸತಿಯಾಗಿ ಬಾಳ್ಹುತವಿಂದೆನ್ನಕೂಡೇಯೆಂದನು ೧೩

ಪತಿಯಿಂದೆ ರಹಿತಳು ಭಾನುಮತಿಯೋ ಧೃತರಾಷ್ಟ್ರ ಗಾಂಧಾರಿ
ಸುತಹೀನರಾಗುವರತಿ ಜ್ಯಾಗೆ ಮತಿಗೇಡಿ ಕೇಳೊ ೧೪

ಅಷ್ಟಬಡವರವರ ಹಿಂದೆ ಕಷ್ಟಬಟ್ಟು ತಿರುಗೋರೇನೂ
ಪಟ್ಟಮಂಚಕ್ಕೊಪ್ಪುವ್ಯಂತೇ ಬಾರೇಯೆಂದನು ೧೫

ಅಷ್ಟಬಡವರೈವರು ನಿನಶಿರ ಕುಟ್ಟಿ ಯಮಪಟ್ಟಣಕ್ಕೆ
ಅಟ್ಟಿ ರಾಜ್ಯಕ್ಕಧಿಕಾರ್‍ಯವರು ಕೇಳೋಯೆಂದಳು ೧೬

ಅಚ್ಚ ಮುತ್ತಿನಂತೆ ದೇವಪುತ್ಥಳಿಗೊಂಬೆ ನಿನ್ನಕ್ಕ
ಇಚ್ಛಮಾಡಿದ್ದೇನೀಗೆನ್ನ ಕೂಡೆ ಎಂದನು ೧೭

ಹುಚ್ಚುಹಿಡಿದಿತೇನೋ ನಿನಗೆ ಉಚ್ಚುಬಡಿದು ನಿನ್ನ ಹಲ್ಲು
ನುಚ್ಚುಮಾಡಿ ಕೊಲ್ಲೋರೈವರು ಬ್ಯಾಡೋಯೆಂದಳು ೧೮

ಬಡನಡುವಿನ ಶೃಂಗಾರಿ ಕಡುಚೆಲ್ವೆ ದ್ರೌಪದಿಯೆ ಎನ್ನ
ತೊಡೆಯಮ್ಯಾಲೆ ಒಪ್ಪುವಂತೆ ಬಾರೆಯೆಂದನು ೧೯

ಕಡುಪಾಪಿ ನೀ ನುಡಿವೋ ನಾಲಿಗೆ ಕಡಿವ ಭೀಮನ ಗದೆಯು ನಿನ್ನ
ತೊಡೆ ಉರ ಭೇದಿಸುವೋದನು ನೋಡೇನೆಂದಳು ೨೦

ಅಂಗನೆ ನಿನ್ನಂಗಸಂಗವಾಗದಿದ್ದರೆ ನಿನ್ನ ಮಾನ-
ಭಂಗಮಾಡಿ ಬತ್ತಲೆ ನಾ ನಿಲಿಸೇನೆಂದನು ೨೧

ಪುಂಡ ಖಳ ನಿನ್ನುದರ ಓಕುಳಿಕೊಂಡಮಾಡೋಕುಳಿಯನಾಡಿ
ಚೆಂಡನಾಡಲು ನಿನ್ನ ಶಿರವ ನೋಡೇನೆಂದಳು ೨೨

ಪಾಪಿ ದು[1]ಶಾ[ ][1]ಸನನು ಬಂದು ದ್ರೌಪದಿಯ ಮುಂದೆ ನಿಂತು
ನೂತನದ ನಿರಿಯ ಹಿಡಿದು ಸೆಳೆಯುತಿದ್ದನು ೨೩

ನಿಲ್ಲೊ ಪಾಪಿ ನಿನ್ನ ರಕ್ತ ಎರೆದು ಹಲ್ ಹಣಿಗಿಯಲ್ಲಿಕ್ಕಿ
ಎಲ್ಲ ಕರುಳ್ವನಮಾಲೆಯ ಮಾಡಿ ಮುಡಿವೆನೆಂದಳು ೨೪

ಮಂಗಳ ಮೂರುತಿ ಮಾರಜನಕ ಎನ್ನ ರಕ್ಷಿಸೆಂದು
ಕಂಗಳೆರಡ ಮುಚ್ಚಿ ಕರವ ಮುಗಿದು ನಿಂತಳು ೨೫

ಮಡುವಿನಲ್ಲಿ ಮಚ್ಛನಾಗಿ ಬಿಡದೆ ವೇದವ ತಂದು ಕ್ಷೀರ-
ಕಡಲ ಕಡೆದ ಕೂರುಮ ಎನ್ನ ಕಾಯೋಯೆಂದಳು ೨೬

ಕಡುಕ್ರೂರ ವರಾಹಾವತಾರ ಹಿಡಿದು ಹಿರಣ್ಯಾಕ್ಷನ ಕಂಬ
ವೊಡೆದು ಬಂದಾರ್ಭಟಿಸುವ ಸಿಂಹ ಕಾಯೊ ಎಂದಳು ೨೭

1 ಶ್ಯಾ

ತಬಕಾದ್ಹೊವೇಳ್ಹ್ಯವು ಗೆರೆ ಸಾಸಿವೆಯ ಚಿಕ್ಕಿ ಸಂಪ್ರ್ಯಂಚು
ಥಳಕೆಂದ್ಹೊಳಿವೊ ಮುಗ್ಗೀಸೀರೆ ಸೆಳೆಯುತಿದ್ದನು ೪೦

ನೂತನವಾಗಿದ್ದ ಜರಿಪೀತಾಂಬರ ಕಡೆಯಿಲ್ಲ ಹರಿಯು
ಪ್ರೀತಿಂದೆ ಕೊಟ್ಟಂಥ ವಸ್ತ್ರ ಸೆಳೆಯುತಿದ್ದನು ೪೧

ಸೆಳೆದು ಸೆಳೆದು ಎರಡು ರಟ್ಟೆ ಬಳಲಿ ಅಸುರ ಭಾಳ ನೊಂದು
ಇಳಿಯಲ್ಲೆ ಬಿದ್ದ್ಹುಡಿಯು ಮ್ಯಾಲೆ ಹೊರಳುತಿದ್ದನು ೪೨

ಕಂಡು ದುರ್ಯೋಧನನು ಜವಳಿ ಪೆಂಡಿಗಳನೆ ಕಟ್ಟಿ ತನ್ನ
ಭಂಡಾರಕ್ಕೊಯ್ಯಿರ್ಯವೋದೆಂದಾಗಪ್ಪಣೆಯು ಮಾಡಿದ ೪೩

ಭರದಿ ಕೋಪದಿಂದ ದ್ರೌಪದಿ ತೆರೆದು ಕಂಗಳಿಂದ ನೋಡೆ
ಉರಿದು ಭಸ್ಮವಾಗಿ ಕುಪ್ಪೆ ಧರೆಗೆ ಬಿದ್ದವು ೪೪

ವಜ್ರದ್ಹರಳಿನಂತೆ ಬೆವೆತ ಮುದ್ದುಮುಖ ಮುಂಜೆರಗಿಲೊರೆಸಿ
ತಿದ್ದಿ ತನ್ನ ತವರ(ಕಬರಿ?)ಗಳನೆ ಕಟ್ಟಿ ನಿಂತಳು ೪೫

ವಿದುರ ಭೀಷ್ಮರೆಲ್ಲ ದ್ರೌಪದಿಯೆದುರು ಬಂದತಿ ಹರುಷದಿಂದ
ಇದು ನಿನ್ನಾಭೀಷ್ಟಗಳ ಬೇಡೆ ನೀಡೇವೆಂದರು ೪೬

ಕೆಟ್ಟಕೌರವರ ಕುಲವು ನಷ್ಟವಾಗುತಿರಲು ಧರ್ಮ
ಪಟ್ಟಣವಾಳುವುದೆ ಇದು ಎನಗಿಷ್ಟವೆಂದಳು ೪೭

ಇಂದ್ಹೋಗ್ವನವಾಸವ ಚರಿಸಿ ಬಂದು ಗಾಂಧಾರಿಯ ಸುತರ
ಕೊಂದು ಧರ್ಮ ರಾಜ್ಯಕೆ ರಾಜನಾಗುವನೆಂದರು ೪೮

ಮಿಂಚು ಸೂರ್ಯರಂತೆ ಹೊಳೆವೊ ಪಾಂಚಾಲೀಪರಿ ಮಾತನಾಡೆ
ಪಂಚಪಾಂಡವರ ಕೂಡ್ವನಕ್ಹೋಗುವೆನೆಂದಳು ೪೯

ಅಪಾರಮಹಿಮ ಕೃಷ್ಣನ ವ್ಯಾಪಾರ ನೋಡುತ ಜನರು
ದ್ರೌಪದಿಯ ಗುಣಗಳ ಕೊಂಡಾಡುತಿದ್ದರು ೫೦

ಮಂಗಳಮೂರುತಿ ಕೃಷ್ಣನ ತಂಗಿ ದ್ರೌಪದಿಯ ಮಹಿಮೆ
ಪಾಂಡವರು ಕಂಡು ಪರಮಾನಂದಬಟ್ಟರು ೫೧

ಭೀಮನ ವಲ್ಲಭೆಯು ಅಭಿಮಾನವ ಕಾಯ್ದಂಥ ಹರಿಯು
ಭೀಮೇಶ ಕೃಷ್ಣನೆ ನಮ್ಮನ್ ಸಲಹುವನೆಂದರು ೫೨

೧೬

*

ಈ ಧರಣಿಯೊಳ್ ಹದಿನಾರು ಸಾವಿರ ಮಂದಿ
ಆಳುತ ದ್ವಾರಕೆಯಲ್ಲಿ
ಶ್ರೀರಮಣನು ರುಕ್ಮಿಣಿದೇವಿ ಸಹಿತ
ವಿನೋದದಿ ಕುಳಿತಿದ್ದ ಹರಿಯು ೧

ಅಂಬುಜೋದ್ಭವನ ಅಂಕದಲುದಿಸಿದ ಸುತ
ಚೆಂದ ಚೆಂದ ವೀಣೆ ಪಿಡಿದು
ಕಂದರ್ಪಪಿತ[1][ನಲ್ಲಿಗೆ][1] ನಲಿನಲಿದಾಡುತ
ಬಂದ ನಾರಂದ ಹರುಷದಲಿ ೨

ಬಂದ ನಾರಂದನ ಕಂಡು ಕಮಲನಾಭ
ಕುಂದಣ ಮಣೆ ತಂದಿರಿಸಿ
ಚೆಂದದಿಂದಲಿ ಅರ್ಘ್ಯ ಪಾದಪೂಜೆಯ ಮಾಡಿ ನಾ-
ರಂದಗೆ ಎರಗಿದನಾಗ ೩

ದೇವಾಧಿದೇವನೆ ದೇವಲೋಕದಿ ಸುತ್ತಿ
ಈ ಪಾರಿಜಾತವ ತಂದೆ
ದೇವಿ ರುಕ್ಮಿಣಿಗೀಗ ಮುಡಿಸೆಂದು ನಾರಂದ
ಸ್ವಾಮಿಯ ಚರಣಕ್ಕರ್ಪಿಸಿದ ೪

ತಕ್ಷಣದಿ ಜಗನ್ಮಾತೆ ಮಾಲಕ್ಷುಮಿ
ಸಾಕ್ಷಾತ ಶ್ರೀ ನಾರಾಯಣನು
ವಕ್ಷಸ್ಥಳದಲಿ ಹೊಂದಿರುವ ರುಕ್ಮಿಣಿಯನು
ಸ್ತೋತ್ರ ಮಾಡಿದನು ನಾರದನು ೫

ಕಡಲಶಯನ ಕಡೆಗಣ್ಣ ನೋಟಗಳಿಂದ
ಕಡುಮುದ್ದು ಸುರಿವೊ ರುಕ್ಮಿಣಿಯ

* ಪಾರಿಜಾತ

[1] ನಾಗೆ

ಬಡನಡುವಿನ ಭಾಮಿನಿರನ್ನೆ ಬಾರೆಂದು
ತೊಡೆಯು ಮ್ಯಾಲಿಟ್ಟ ಶ್ರೀಕೃಷ್ಣ ೬

ದುಂಡುಮಲ್ಲಿಗೆ ಗೊಂಡ್ಯ ಚೌರಿ ರಾಗಟೆ ಜಡೆ–
ಬಂಗಾರದ ಸಿರಿಮುಡಿಗೆ
ಅಂಗನೆ ರುಗ್ಮಿಯಾಲಿಂಗನೆ ಮಾಡುತ
ರಂಗ ತಾ ಮುಡಿಸಿದ ಸತಿಗೆ ೭

ಸರಿಸವತೇರ ಬಿಟ್ಟು ಸುರಪಾರಿಜಾತವ
ಗರುವಿಕೆಯಿಂದ ನೀ ಮುಡಿದೆ
ಹರದಿ ಸತ್ಯಭಾಮೆ ಕೇಳಿ ಮುನಿದರಿನ್ನು
ಅರಿಯೆನು ನಾ ಇದಕೆ ಉಪಾಯ ೮

ಗಾಡಿಕಾರನು ಕೃಷ್ಣ ಆಡುವೊ ಮಾತನು
ಕೇಳಿ ರುಕ್ಮಿಣಿ ನಗುತಿರಲು
ಓಡುತ ಬಂದು ನಾರದ ಸತ್ಯಭಾಮೆ–
ಗಲ್ಲದ ವಾರ್ತೆಗಳರುಹಿದನು ೯

ಅಲ್ಲಿಂದ ದೇವಲೋಕವ ಸುತ್ತಿ ತಂದೇನೆ
ಚೆಲ್ವೆನಿನಗೆ ತಕ್ಕ ಕುಸುಮ
ಗೊಲ್ಲ ಕೃಷ್ಣನ ಕೈಯಲ್ಲಿ ಕೊಟ್ಟರೆ ತನ್ನ
ನಲ್ಲೆ ರುಕ್ಮಿಣಿಗೆ ಮುಡಿಸಿದನು ೧೦

ಕೇಳುತ ಭಾಮೆ ತಲ್ಲಣಿಸಿ ಕೋಪಗಳಿಂದ
ಹೇಮಮಾಣಿಕದ್ವಜಾಭರಣ
ಹಾರ ಪದಕ ಕಠಾಣಿಮುತ್ತನೆ ಚೆಲ್ಲಿ
ಭೂಮಿಲಿ ಬಿದ್ದ್ಹೊರಳಿದಳು ೧೧

ಮಲ್ಲಿಗೆ ದವನ ಕ್ಯಾದಿಗೆ ಶಾವಂತಿಗೆ ಬಿಟ್ಟು
ಒಲ್ಲೆನೆಂದೊರೆಸಿ ಕಸ್ತೂರಿಯ
ವಲ್ಲಭನೊಲ್ಲದೀಸೊಗಸ್ಯಾತಕೆನುತಲಿ
ಗಲ್ಲದ್ವಿಳ್ಯವನುಗುಳಿದಳು ೧೨

ಸರ್ಪನಂದದಿ ಉಸುರ್ಹಾಕುತ ಭಾಮೆ ತಾ
ನೇತ್ರದಿ ಜಲವ ಸುರಿಸುತಲಿ

ಸರ್ಪಶಯನನೊಲ್ಲದೀದೇಹವ್ಯಾಕೆಂದು
ಪಟ್ಟೆಮಂಚದಲೊರಗಿದಳು ೧೩

ನಿಂತು ನೋಡುತ ಸತ್ಯಭಾಮೆ ಮಾಡುವುದು ಇ-
ನ್ನೆಂತು ಮಾಡಲಿಯಿದಕೆಂದು
ಅಂತರಂಗದಲಿ ಯೋಚನೆ ಮಾಡಿ ನಾರಂದ ಶ್ರೀ-
ಕಾಂತನ ಮನೆಮಾರ್ಗ ಹಿಡಿದ ೧೪

ತಿರುಗಿ ಬಂದ್ಹರಿಯು ಮುಂದರುಹಿದ ನಾರಂದ
ತೊರೆವೋಳು ತನ್ನ ಪ್ರಾಣವನು
ಮರುಗುತ ಸೊರಗಿ ಬಿದ್ದಿರುವೊ ಭಾಮೆಯ ನೋಡಿ
ಕರುಣವಿಲ್ಲೇನೊ ಶ್ರೀಕೃಷ್ಣ ೧೫

ಮುನಿಯ ಮಾತನು ಕೇಳಿ ಮುಗುಳು ನಗೆಯ ನಕ್ಕು
ಈಪರಿ ಬವಣೆಗೆ ಒಳಗಾದೆ
ಧರೆಯ ಒಳಗೆ ಇಬ್ಬರ್ಹೆಂಡರಾಳುವೋರಿನ್ನು
ಪರಮ ಮೂರ್ಖರು ಅವರೆಂದ ೧೬

ಹೊದ್ದ ಪೀತಾಂಬರ ಅಲೆಯುತ ಶ್ರೀಕೃಷ್ಣ
ಹದ್ದನೇರದೆ ನಡೆಯುತಲಿ
ಮುದ್ದು ರುಕ್ಮಿಣಿಯು ಮುಂದಕೆ ಕರೆದ್ಹೇಳದೆ
ಎದ್ದು ಬಂದನು ಭಾಮೆಮನೆಗೆ ೧೭

ಅರ್ಕನಂತ್ಹೊಳೆಯುತ ಹೊಕ್ಕ ತನ್ನರಮನೆ
ಕಕ್ಕಬಿಕ್ಕ್ಯಾಗಿ ನೋಡುತಲಿ
ದಿಕ್ಕು ದಿಕ್ಕಿಗೆ ಬಿದ್ದಾಭರಣವಾರಿಸಿ ರತ್ನ
ದೆಕ್ಕಿಲೇ (?) ಬಂದು ತಾ ಕುಳಿತ ೧೮

ಮಿಂಚು ಸೂರ್ಯಗೆ ಮಿಗಿಲಾಗಿದ್ದಮುಖ ಬಾಡಿ
ಸಂಪಿಗೆ ಸರವ ಈಡ್ಯಾಡಿ
ಚಿಂತೆಮಾಡುವರೆ ಚಿನ್ನದ ಗೊಂಬೆ ಏಳೆಂದು
ಮಂಚದ ಮ್ಯಾಲೆ ತಾ ಕುಳಿತ ೧೯

ಬೆವರಿದ್ದ ಮುಖವ ಮುಂಜೆರಗಿಲಿಂದೊರೆಸುತ ಹ-
ರವಿದ ಹಾರ ಹಾಕುತಲಿ

ಪರಮ ಪ್ರೀತಿಲಿ ತನ್ನ ಕರಗಳಿಂದ್ಲಿ ಡಿಪೆತ್ತೆ-
ನ್ನರಗಿಳಿ ಏಳೆಂದೆಬ್ಬಿಸಿದ ೨೦

ಸಿಟ್ಟಲಿಂದೆದ್ದು ಶ್ರೀಕೃಷ್ಣನ ಒಳೆಯಿಕ್ಕೆ
ಬಿಟ್ಟವರ್‍ಯಾರು ಈಗೆನುತ
ದೃಷ್ಟಿತೆಗೆದು ಕೋಟಿಸೂರ್ಯಪ್ರಕಾಶನ ಇ-
ಕ್ಕದ್ಲಾಗೆವೆಯು ನೋಡಿದಳು ೨೧

ಇಷ್ಟು ಕ್ರೋಧಗಳ್ಯಾತಕೀ ಚಾಡಿ ನಾರಂದ
ಹಚ್ಚಿಹೋದನೆ ಕದನವನು
ಸತ್ಯಭಾಮೆಯೆ ನೀನು ಮುನಿವ್ರೋರೆ ಎನ್ನಲ್ಲೊಂ-
ದಿಷ್ಟಪರಾಧವಿಲ್ಲೆಂದ ೨೨

ಇಷ್ಟು ಘಾತಕತನವಿಟ್ಟು ನಿನ್ನೊಟ್ಟಿಯ-
ಲ್ಲೆಷ್ಟುಪಚಾರ ಮಾತುಗಳೋ
ಸ[1][ಕ್ಕರೆಯಂ][1]ದದಿ ಸುರಿಸುವರೇನೊ ನಡೆ
ನಿನ್ನ ಪಟ್ಟದರಾಣಿ ಮಂದಿರಕೆ ೨೩

ನಾರಿ ನಿನ್ನೊಡಗೂಡಿ ನಾಕದಮರಕೆ ಪೋಗಿ ಆ
ಸುರಪಾರಿಜಾತವನು ತಾರದಿದ್ದರೆ
ಎನ್ನತಾಯಿತಮ್ಮನ ಆಣೆ ಕೇ-
ಳೆನ್ನಮಾತೆಂದ ಹರಿಯು ೨೪

ಯಾರಾಣ್ಯೋ ಎನಗೇನು ನೀರೊಳು ಜಲಚರಪ್ರಾಣಿಗಳಂತೆ
ತಿರುಗುವಿಯೊ ಏನು ಸತ್ಯವೊ
ಗಿರಿಧರೆನ್ನೊತ್ತು ತಿರುಗುವಿ ವಿಚಾರಿ-
ಪೋರುಂಟೆ ಲೋಕದಲಿ ೨೫

ಹಡೆದವರ್‍ಯಾರೊ ನಿನ್ನೊಡೆಮ ಕಂಬದಿ ಭೂಮಿ
ಹಿಡಿಯದಾಕಾಶಕ್ಕೆ ಬೆಳೆದ್ಯೋ
ಪೊಡವಿಯೊಳಗೆ ಮಾತೆ ಕೊಂದನೆಂದಪಕೀರ್ತಿ
ಬಿಡು ನಿನ್ನ ಪೋಕಬುದ್ಧಿಗಳ ೨೬

1 ಕ್ಕಯರ್ಂ

ಹಿಂದ್ವನವಾಸವ ತಿರುಗಿದ ಸೀತೆಗೆ
ನಿಂದೆ ಯಿಟ್ಟಡವಿಗಟ್ಟಿದೆಯೊ
ಕೊಂದೆ ಕಂಸನ ನಾಚಿಕಿಲ್ಲದೆ ತಿರುಗುವಿ
ಇಂದ್ಯಾವ ಕಲಿಭಯ ನಿನಗೆ ೨೭

ಹೀನಗೊಲ್ಲರ ಎಂಜಲುಂಡು ನೀ ಬೆಳೆದೆಯೊ
ಧೇನು ಕಾಯುತ ತಿರುಗಿದೆಯೊ
ಮಾನಿನಿಯರ ಸೀರೆ ಕದ್ದ ಪುರುಷಗಿನ್ನು
ಮಾನಾಭಿಮಾನಗಳುಂಟೆ ೨೮

ಭಾಳನಂಬಿದ ಭಕ್ತರ ಬಡವರ ಮಾಡಿದ್ದ
ಧನಗಳ ಸೆಳಕೊಂಡು
ಪಾನ ಅಶನ ಅಭಿಮಾನವ ತೊರೆಸಿ ನಿನ್ನೊ-
ರೊಳು ಸೆರೆಯ ಹಾಕುವಿಯೊ ೨೯

ನಂಬದೆ ನಿನ್ನ ಬಿಟ್ಟವರ ನರಕದೊಳು
ಕುಂಭೀಪಾಕದಿ ಕುದಿಸುವಿಯೊ
ಒಂದೆರಡೇನೋ ನಿನ್ನಯ ಗುಣ ವರಣಿಸ-
ಲೆಂದೆಂದೆನಗೆ ವಶವಲ್ಲ ೩೦

ಹಡೆದ ಮಾತೆಯು ಬಿಟ್ಟು ಪಡೆದ ಮಾತೆಯು ಮುಂದೆ
ತುಡುಗತನದಿ ಗಡಿಗೆಯನ್ನು
ಕಡಗೋಲಿಂದೊಡೆಸು ಕಾಲುಗಳ ಕಟ್ಟಿಸಿಕೊಂಡು
ಹುಡುಗತನವೆ ಎನ್ನಕೂಡ ೩೧

ವಿಷದ ಹಾಸಿಕೆ ವಿಷಪೂತಣಿಮೊಲೆನುಂಡು
ವಿಷಮುಡುವನು ಹಾರಿ ಕಲಕಿ
ವಿಷಕಂಠನೆದುರು ಸ್ತ್ರೀರೂಪವ ತೋರಿದಿ
ಪಶುಪತಿ ಭಯ ನಿನಗುಂಟೆ ೩೨

ದಧಿಚೋರೆಂದ್ಹೆಸರಾಗಿ ಡೊಂಕಸತಿಯ ಕೂಡಿ
ವಿಜಯನ ಮನೆ ಬಂಟನೆನಿಸಿ
ಪದುಮನಾಭಿಲಿ ಮಕ್ಕಳ್ಹಡದ ಪುರುಷಗಿನ್ನು
ಮದುವೆ ಹೆಂಡಿರು ನಿನಗ್ಯಾಕೊ ೩೩

ಭಾಳ ಮಾತುಗಳ್ಯಾತಕಾಳುಹೋಗ್ಹದಿ-
ನಾರು ಸಾವಿರ ಮಂದಿ ಮಂದಿರಕೆ
ಏಳೆನ್ನಮನೆಲಿರಸಲ್ಲ ಹೋಗೆನುತಲಿ
ಪಾದಕ್ಕೆ ಬಂದೆರಗಿದಳು ೩೪

ನಿಂದ್ಯ ಸ್ತುತಿಗಳಿಂದ ನಿಂತ ಸತಿಯು ನೋಡಿ
ಅಂಬುಜಾಕ್ಷನು ನಸುನಗುತ
ಇಂದ್ಹೋಗಿ ಇಂದ್ರಲೋಕದ ಪಾರಿಜಾತವ
ತಂದೇನೆ ನಿನ್ನ ಮಂದಿರಕೆ ೩೫

ವನಿತೆ ಸತ್ಯಭಾಮೆಕೂಡಿ ಶ್ರೀಕೃಷ್ಣನು
ವಿನತೆಸುತನ ಹೇಗಲೇರಿ
ಘನತರವಾದೇಳು ದುರ್ಗ ಭೇದಿಸಿ ನರ್ಕಾಸು-
ರನ ಸಂಹಾರ ಮಾಡಿದನು ೩೬

ಹದಿನಾರು ಸಾವಿರ ಚೆದುರೆಚೆಲುವೆಯರ
ಪದುಮಾಕ್ಷ ನೋಡಿ ಸಂಭ್ರಮದಿ
ಗಜಗಮನೇರನೆಲ್ಲ ಗಜದ ಮ್ಯಾಲೇರಿಸಿ
ಮುದದಿಂದ ಕಳುಹೆ ದ್ವಾರಕೆಗೆ ೩೭

ವಜ್ರಮಾಣಿಕ್ಯದ್ವಾಲೆ ಒಯ್ದು ಮಾತೆಗೆ ಕೊಟ್ಟು
ಸ್ವರ್ಗಾಧಿಪತಿ ಪೂಜೆಗೊಂಡು
ಮುದ್ದು ಸತ್ಯಭಾಮೆ ಕೂಡಿ ಶೋಭಿಸಿದ ಅನಿ-
ರುದ್ಧ ನಂದನವನದಲ್ಲಿ ೩೮

ಟೊಂಕಕ್ಕೆ ಜರದ ಶಾಲನೆ ಸುತ್ತಿ ಶ್ರೀಕೃಷ್ಣ
ಕಂಠಿಪದಕ ಹೊಳೆಯುತಲಿ
ಚಂಚಲಾಕ್ಷಿ ಭಾಮೆ ಕೂಡಿ ಸಂಚರಿಸಿದ
ಮಿಂಚು ಮೇಘವು ಕೂಡಿದಂತೆ ೩೯

ಹೊಳೆವೊ ಮಾಣಿಕ್ಯದ್ವಜ್ರಹರಳಿನಂಥ ಪುಷ್ಪ
ಇಳೆಯೊಳಗಿಲ್ಲ ನೋಡೆನುತ
ನಳಿನಾಕ್ಷ ತನ್ನ ಸತಿಗೆ ತೋರಿ ಕರದಿಂದ
ಗರುಡನ ಹೆಗಲಲ್ಲೇರಿಸಿದ ೪೦

ಸುರಲೋಕದ ವೃಕ್ಷ ಧರೆಯು ಮ್ಯಾಲೊಯ್ವಂಥ
ಮುರಹರನ್ಯಾಪಾರ ನೋಡಿ
ಸುರಪತಿಸಹಿತಷ್ಟದಿಕ್ಪಾಲಕರೆಲ್ಲ ಒದಗಿ ಬಂ-
ದರು ಯುದ್ಧಕೆನುತ ೪೧

ಗಜವಾಹನನು ಇಂದ್ರ ಕದನಕ್ಕೆ ಬರುತಿರೆ
ಗಜವರದನು ನೋಡಿ ನಗುತ
ಮುಡದಿ ಸತ್ಯಭಾಮೆ ಮಾಡಲಿನ್ಯಾಗೆಂದು
ಇದಕೆ ಉಪಾಯ ಹೇಳೆಂದ ೪೨

ಏ ಪರಮಾತ್ಮ ಕೇಳಪಾರಮಹಿಮ ನಿನ್ನ
ಶ್ರೀಪಾದಪದ್ಮಕ್ಕೆರಗುವೆನು
ಈ ಪಾರಿಜಾತ ಒಯ್ದೆನ್ನ ಅಂಗಳದಲ್ಲಿ
ಸ್ಥಾಪನೆ ಮಾಡೊ ಶ್ರೀಕೃಷ್ಣ ೪೩

ಪಾರಿಜಾತವ ಬಿಟ್ಟು ಪರಾಜಿತನಾಗಿ ನೀ
ದ್ವಾರಕೆಯನು ಹೊಕ್ಕ ಕ್ಷಣದಿ
ನಾರಿ ರುಕ್ಮಿಣಿ ನಿನ್ನ ಮೋರೆ ನೋಡುತ ಹಾಸ್ಯಮಾಡಿ
ತಾ ನಗದೆ ಬಿಡುವಳೆ ೪೪

ಪದ್ಮನಾಭನೆ ನಿನ್ನ ಕರುಣವೊಂದಿದ್ದರೆ ವಜ್ರ-
ಪಾಣಿಯು ಎನಗೆದುರೆ
ಮುದ್ದು ಸತ್ಯಭಾಮೆ ಎದುರು ಬಾಣವ ಬಿಟ್ಟು
ಗೆದ್ದಳು ದಿಕ್ಕುಪಾಲಕರ ೪೫

ಓಡುವೊ ಇಂದ್ರನ ನೋಡಿ ನಗುತ ಭಾಮೆ
ಮಾಡುತ ಮಂದಹಾಸ್ಯಗಳ
ಮಾಡಿ ಯುದ್ಧವ ವೃಕ್ಷ ಒಯ್ಯದಿದ್ದರೆ ಶಚಿ
ನೋಡಳು ನಿನ್ನ ಮುಖವನು ೪೬

ವತ್ಸ ಆಕಳ ಮೊಲೆಕಚ್ಚೆ ಒದಿವೋದಿನ್ನು
ಶಿಕ್ಷೆ ಮಾಡುವರೆ ಮಾತೆಯರು
ಸಾಕ್ಷಾತ ಶ್ರೀ ಜಗನ್ಮಾತೆಯೆನ್ನಪರಾಧ
ರಕ್ಷಿಸ ಬೇಕೆಂದನಾಗ ೪೭

ಅಸುರ ಆವೇಶವ ಕಳೆದು ದೇವೇಂದ್ರಗೆ
ಶಚೀದೇವಿ ಗರುವವನೆ ಮುರಿದು
ಎಸೆವೊ ರತ್ನದ ಕಟ್ಟೆಸಹಿತಾಗಿ ವೃಕ್ಷವ
ವಸುಧೆಯು ಮ್ಯಾಲಿಳುಹಿದನು ೪೮

ಅದಿತಿಸುತಗೆ ಅನುಗ್ರಹಮಾಡಿ ಶ್ರೀಕೃಷ್ಣ
ಅತಿಬ್ಯಾಗದಲಿ ವನ ಬಿಟ್ಟು
ಸತಿ ಸತ್ಯಭಾಮೆಯು ಸಹಿತಾಗಿ ತಾನಾಗ
ಪೃಥ್ವಿಯು ಮಾರ್ಗವ ಹಿಡಿದ ೪೯

ಪಕ್ಷಿವಾಹನವೇರಿ ಸತ್ಯಭಾಮೆಯು ಕೂಡಿ
ವೃಕ್ಷವ ತಂದ ದ್ವಾರಕೆಗೆ
ಮತ್ತಾಗ ಪಾರಿಜಾತದಹೂವು ಭೀಮೇಶ
ಕೃಷ್ಣ ತಾ ಮುಡಿಸಿದ ಸತಿಗೆ ೫೦

೧೭

*

ಉಡಿಯ ತುಂಬಿರೆ ನಮ್ಮ ಉಡುರಾಜಮುಖಿಗೆ–
ಉಡಿಯ ತುಂಬಿರೆ ನಮ್ಮ
ಕಡಲೆ ಕೊಬ್ಬರಿಬಟ್ಟಲೊಳು ಬಾಳೆಫಲಗ–
ಳ್ಪುಡಿಯ ತುಂಬಿರೆ ನಮ್ಮ ಪ.

ಜಂಬುನೇರಲ ಗೊನೆ ಜಾಂಬೂಫಲಗಳು
ನಿಂಬೆ ದಾಳಿಂಬ್ರ ಔದುಂಬ್ರ ಫಲಗಳು ೧

ಉತ್ತತ್ತಿ ದ್ರಾಕ್ಷಿ ಕಿತ್ತಳೆ ಸೀತಾಫಲವು
ಅಕ್ಕಿ ಅಂಜೂರ ಉತ್ತತ್ತಿ ಫಲಗಳು ೨

ಶ್ರೇಷ್ಠ ಭೀಮೇಶ ಕೃಷ್ಣನ ಪಟ್ಟದರಸಿ–
ಗ್ಹಚ್ಚಿ ಕುಂಕುಮ ವೀಳ್ಯ ಕೊಟ್ಟು ರುಕ್ಮಿಣಿಗೆ ೩

---

* ಉಡಿ ತುಂಬಿದ್ದು.

೧೮

*

ಎಲ್ಲಾ್ಯಡಿಲ್ಲಿಗೆ ಬಂದನೆ ಈತನು ಕೌ-
ಸಲ್ಯಾದೇವಿಯ ಕಂದನೆ
ಎಲ್ಲಾ್ಯಡಿಲ್ಲಿಗೆ ಬಂದ ಚೆಲ್ವೆ ಕೌಸಲ್ಯೆಕಂದ
ಫುಲ್ಲಲೋಚನೆ ಜಾನಕಿ ಲಕ್ಷ್ಮಣರನೆ ಕೂಡಿ ಪ.

ಸನಕಾದಿ ಸುರರ್ವಂದಿತ ಮಾಣಿಕ್ಯ ರತ್ನ ಪದಕ ಪಚ್ಚದಿ ಭೂಷಿತ
ಜನಕ ಜಾನ್ಹವಿ ಜಾನಕಿ ರಾಮರಿಬ್ಬರು
ವನಕೆ ಬಂದ್ವಾರಿಧಿ ಕಟ್ಟಿ ವಾನರನ ಕೂಡೆಲ್ಯಾಡಿಲ್ಲಿಗೆ ಬಂದನೆ ೧

ಕಂಡು ಶೂರ್ಪಣಖಿಯ ನಾಸಿಕ ಭಂಗ ಮಾಡಿ ಮಾರೀಚನ್ವಧೆ
ಮಂಡೋದರೀಪತಿ ಮರ್ದಕನಾಗಿದ್ದ
ಬಂದಯೋಧ್ಯವನಾಳಿ ಭಕ್ತರ ಸಲಹೊ ದಾತ್ಯೆಲ್ಲಾ್ಯಡಿಲ್ಲಿಗೆ ಬಂದನೆ ೨

ಬಿಲ್ಲುಹಿಡಿದು ನಿಂತನೆ ಭೀಮೇಶಕೃಷ್ಣ ಬಲ್ಲಿದ ಬಲವಂತನೆ
ಕಲ್ಲ್ಹೆಣ್ಣು ಮಾಡಿದ ಕರುಣಕೃಪಾಳೋ ಕೈ-
ವಲ್ಯದಾಯಕ ಸೀತಾವಲ್ಲಭೆಂದೆನಿಸುವ್ನೋನೆಲ್ಲಾ್ಯಡಿಲ್ಲಿಗೆ ಬಂದನೆ ೩

೧೯

ಎಷ್ಟು ಹೇಳಲಿ ವೆಂಕಟಗಿರಿಯ
ದೃಷ್ಟಿಗೆ ಬಹು ಸಿರಿಯ
ಬೆಟ್ಟವನೆ ಮನಸಿಟ್ಟೇರಲು ಬೇಡಿದ
ಇಷ್ಟಾರ್ಥಗಳ ಈಡಾಡುವ ದೊರೆಯು ಪ.

ಚಿತ್ರ ವಿಚಿತ್ರದ ಮಹಾದ್ವಾರ
ಚಿನ್ನದ ಗೋಪುರ
ಸ್ವಚ್ಛವಾದ ಸ್ವಾಮಿಪುಷ್ಕರಣಿಯ ತೀರ
ಸುತ್ತಲು ಪ್ರಾಕಾರ
ಹೆಚ್ಚಿನತೀವ್ರತವೆ ಮನೋಹರ

* ತಿಮ್ಮಲಾಪುರದ ದೇವರ ಮೇಲಿನದು.

ಮೂರುವ ವಿಸ್ತಾರ
ಚಿತ್ತಜನಯ್ಯನ ಶೈಲವೆ ದೂರದಿಂ-
ದ್ಹತ್ತಿ ಬರುವುದೀತನ ಪರಿವಾರ ೧

ರತ್ನ ಮಾಣಿಕ್ಯದ ಕೇಯೂರ
ಕಟ್ಟಿದ ಉಡಿದಾರ
ಉಟ್ಟಿದ್ದ ನಿರಿಜರಪೀತಾಂಬರ
ಕೌಂಸ್ತುಭ ಮಣಿಹಾರ
ಗಟ್ಟಿ ಕರಕಂಕಣಕುಂಡಲಧರ
ಚತುರ್ಭುಜದಲಂಕಾರ
ವಕ್ಷಸ್ಥಳದಲ್ಲಿ ಹೊಂದಿದ ಶ್ರೀಮಹಾ-
ಲಕ್ಷ್ಮೀದೇವಿಯರಿಂದೊಲಿವ ಶೃಂಗಾರ ೨

ಆಕಾಶರಾಜನ ಕಿರೀಟ
ಚಿತ್ರವು ಬಹುಮಾಟ
ಹಾಕಿದ್ದ ಹರಿ ಕಡೆಗಣ್ಣಿನ ನೋಟ
ಭಕ್ತರ ಕುಣಿದಾಟ
ಬೇಕಾದ ಭಜಕರ ಭವ ಪಡಿಪಾಟ
ಬಿಡಿಸುವ ಯಮಕಾಟ
ಕೋಟಿಜನರ ಓಡ್ಯಾಟವೆ ನಮ್ಮ ಕಿ-
ರೀಟಿಯ ಸಖ ಕೇಶವನ ಮಂದಿರದೊಳ್ ೩

ತಪ್ಪುಗಾಣಿಕೆಯ ಬೇಡುವ ಸರ್ಪ
ಶೈಲದ ತಿಮ್ಮಪ್ಪ
ಕಪ್ಪವ ಕಾಸು ಕವಡೆ ಮುಡುಪು
ಹಾಕದೆ ತಾನೊಪ್ಪ
ಜಪ್ಪಿಸಿ ನೋಡುವ ಜನರ ತಪ್ಪ
ಹುಡಿಕ್ಯಾಡುತಲಿಪ್ಪ
ಅಪ್ಪ ಮಹಿಮಾನಂತ ಮೂರುತಿ ತಾ-
ನೊಪ್ಪಿದರೊಲಿದುಕೊಡುವ ಸಾರೂಪ್ಯ ೪

ದೇಶದೇಶದೊಳು ಈತನ ವಾರುತೆಯು
ತುಂಬಿದ ಕೀರುತಿಯು

ಆಸೆಯ ದೈವ ಈ ಮೂರುತಿಯು
ಫಲ್ಗುಣ ಸಾರಥಿಯು
ಲೇಸಾಗಿ ಜನರ ನೋಡುವ ರತಿಯು
ಕರ್ಪೂರದಾರತಿಯು
ವಾಸವಾಗಿರುವ ಈ ಶೇಷಾದ್ರಿಯಲಿ ಭೀ-
ಮೇಶ ಕೃಷ್ಣ ಶ್ರೀನಿವಾಸ ಕೃಪಾಳು ೫

೨೦

ಎಂಥ ಮಹಿಮ ಬಲವಂತ ನಮ್ಮ ಹನುಮಂತ
ನಿಂತು ನೀ ಸಲಹೊ ನಿರಂತರದಲ್ಲೆನ್ನ ಪ.

ರಾಮರುಂಗುರ ಸೀತೆಗಿಟ್ಟು ಮರವ ಕಿತ್ತಿ ಸೂ-
ರೆಮಾಡ್ಯಕ್ಷ ಕುಮಾರನ್ನ ಮುರಿದು
ರಾವಣೇಶನ ಲಂಕಾದ್ವೀಪಕೆ ದೀಪಗಳ್ಹಚ್ಚಿ
ಹಾರಿದ್ವಾರಿಧಿ ವಾರ್ತೆ ಹರಿಗೆ ಬಂದರುಹಿದ ೧

ಭೀಮಸೇನವತಾರ ಮಾಡಿ ತಾ ಪಾಂಚಾಲಿ
ಕೂಡಿಕೊಂಡ್ವನವಾಸ ಚರಿಸಿ ಬಂದು
ಕ್ರೂರ ಕುರುಪತಿ ಕುಲಕಂತಕನೆಂದರಸನ ಪಟ್ಟ-
ರಾಜ್ಞಿ ದ್ರೌಪದಿಧರ್ಮರಾಜಗ್ವಂದಿಸಿದನು ೨

ಮಾಯಾವಾದಿಯ ಮುರಿದೊತ್ತಿದ ತಾ ಮಧ್ವ-
ರಾಯರಾಗಿ ರಜತಪೀಠಪುರದಲ್ಲೆ
ಭೀಮೇಶ ಕೃಷ್ಣನ್ನ ನಿಲಿಸಿ ಬಂದೀ ಜೊಮ್ಮ
ಗ್ರಾಮದಿ ನಿಂತನೆ ಸೀತಾರಾಮರ ಸಹಿತವಾಗಿ ೩

೨೧
*

ಎಂಥ ರಾಸಿಯೊ ಶ್ರೀಕಾಂತನ ಮುಖಸೂನು
ನಿಂತು ಏರುವೋ ರಾಶಿನ್ಯಾವುದೊ ಇದನೆಲ್ಲರು ಪೇಳಿರಿ ೧

* ರಾಸಿಹಾಡು.

ರಂಗಮೂರುತಿ ಸುತನೊವ್ವೈರಿ ಏರಿಪ್ರೋ ಹೆಸ-
ರೆಂದುಕೊಂಬುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೨

ಹರಿಸುತನಟ್ಟುಳಿಯಿಂದ ಪುಟ್ಟುವುದೇನು
ಪರಮ ಗುಪ್ತದ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೩

ಇರುಳು ಹಗಲು ಮೈಯ್ಯ ತೊಳೆಯುತ ಮಣ್ಣನ
ಲ್ಲೊರಳುತಿಪ್ಪುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೪

ಒದ್ದು ಮಾತಂಗನ ಗದ್ರಿಸ್ತಮುರಿದ ಪ್ರ-
ಸಿದ್ಧನೆಸಿಪ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೫

ಜೋಡು ವಂಶುದ್ಧಾರ ಮಾಡುವುದೀ ರತ್ನೆಂ-
ದಾಡಿಕೊಂಬುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೬

ಜಗದೊಳಗೆಲ್ಲ ಭಾರಕರ್ತನಾಗಿ
ಏರಿಸಿಳುಹೋ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೭

ಅಂಧಕಾರದಲಿದ್ದು ಬಂದ ಜನರ ಮುಟ್ಟಿ
ದುಂದೆಬ್ಬಿಸುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೮

ದೊರೆಸುತ ತಾ ಬಂದು ಸರುವ ಜನರ ಮುಂದೆ
ಮುರಿದುಬಿಸ್ಟುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೯

ಭರದಿ ಬಂದು ಕಾಲಕೆದರುತ ತನ್ಹಲ್ಲು
ಮುರಿಸಿಕೊಂಬುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೧೦

ರುಂಡ ಮಾಲೆಗಳೆಲ್ಲ ಗುಂಡಿನಂಥದೇಹ-
ಕ್ಕೊಳ್ಳಂಪೇರಿಳಿವೊ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೧೧

ಹತ್ತರೊಳಗೆ ಒಂಬತ್ತು ಬಿಟ್ಟ ಹೆಸ-
ರಿಟ್ಟು ಕೊಂಬುವ ರಾಸಿನ್ಯಾವುದೊ ಇದನೆಲ್ಲರು ಪೇಳಿರಿ ೧೨

ಯೋಚನೆ ಮಾಡಿ ಆಲೋಚಿಸಿ ನೋಡದರನೇಕ
ಮೂಢಜ್ಞಾನಿಗೆ ತಿಳಿವೊದೆ ಇದನೆಲ್ಲರು ಪೇಳಿರಿ ೧೩

ಈಸು ರಾಶಿಗಳು ಭೀಮೇಶಕೃಷ್ಣನ ದಯ–
ದೀಕ್ಷಣದಲ್ಲಿ ತಿಳಿದು ಪೇಳಿ ಇದನೆಲ್ಲರು ಪೇಳಿರಿ ೧೨

## ೨೨

ಎಂದು ನಿನ್ನ ದಯವು ಆಗೊದೋ ಇಂದಿರೇಶ
ಬಂದ ದುರಿತ ಹಿಂದಕ್ಹೋಗೊದೊ
ಮಂದ ಬುದ್ಧಿಯಿಂದ ನಾಲಿಗೆ ಹಿಂಪೆ ಮುಂಪೆ ನೋಡುತಿಹುದು
ಸಂಪೇಹ ಬಿಟ್ಟು ಗೋಪಿಂದನ್ನ ನೆನೆಯಲಿಕ್ಕೆ ಪ.

ಅರಿಯು ತನಯು ಹರಿಯು ಹರಿಯೆಂದು ಒರೆಯುತಿರಲು
ಗಿರಿಯನ್ಹತ್ತಿಸಿ ಉರಿಗೆ ಕೆಡುಹಿದ
ಕರುಣವಿಲ್ಲದ ಹಿರಣ್ಯಕನು ಪರಮ ಬಾಧೆಬಡಿಸುತಿರಲು
ಕರೆಯೆ ಕಂಬದಿ ಬಂದು ನರ–
ಹರಿಯು ನಾಮ ಕಾಯ್ತು ಅವನ ೧

ಕಂತುಪಿತನೆ ನಿನ್ನ ಭಜಿಸದೆ ದ್ವಿಜನು ಕೆಟ್ಟು
ಅಂತ್ಯಜ ಸ್ತ್ರೀಯಳ ಕೂಡಿ ಮೆರೆಯಲು
ಅಂತ್ಯಕಾಲದಲ್ಲಿ ಏಕಾಂತದಿಂದ ಮಗನ ಕರೆಯೆ
ಕಂತುನಯ್ಯ ನಿನ್ನನಾಮ
ಎಂಥಗತಿಯ ಕೊಟ್ಟಿತವಗೆ ೨

ದುಷ್ಟಪತ್ನಿ ನುಡಿಗೆ ಉತ್ತಾನಪಾದ ತನ್ನ
ಪುತ್ರನಿಂದ ರಹಿತನಾಗಲು
ಅಚ್ಯುತನ ಧ್ಯಾನದಲಾಸಕ್ತನಾಗೆ ಉಗ್ರತಪಕೆ
ಮೆಚ್ಚಿಕೊಟ್ಟ ನಮ್ಮ ಸ್ವಾಮಿ
ಹೆಚ್ಚಿನ ಲೋಕ ಪದವಿ ಧ್ರುವಗೆ ೩

ಬಂದು ಭರದಿ ಮಡುವ ಕಲಕುವೋ ಮದಪಗಜವ
ಕಂಡು ಮಕರಿ ಕಾಲು ಹಿಡಿಯಲು
ಬಂಧುಗಳಿಂದ ರಹಿತವಾಗಿ
ಒಂದು ಸಾವಿರ್ವರುಷ ಬಾಳಲು
ಇಂದಿರೇಶ ನಿನ್ನ ಸ್ಮರಣೆಯಿಂದ ಶಾಪ ವಿಮೋಚಿತನಾದ ೪

ಸೃಷ್ಟಿಗಧಿಕ ನಿನ್ನ ದಯವಿರೆ ಪಾಂಡುಸುತರ
ಪಟ್ಟದ ರಾಣಿ ಸಭೆಗೆ ಎಳೆಯಲು
ವಸ್ತ್ರಹರಣ ಕಾಲದಲ್ಲಿ ಭಕ್ತಿಯಲಿ ಭೀಮೇಶ-
ಕೃಷ್ಣನ ಮುಟ್ಟಿ ಭಜಿಸೆ
ಕೃಷ್ಣೆಗಾಕ್ಷಣ ತೃಪ್ತನಾಗಿ ಕೊಟ್ಟೆಯೊ ವಸನ ೫

೨೩

*

ಏನಂತಿ ಕಮಲನಾಭನ ಪ್ರಿಯಳೆ ಜಗ-
ದಾನಂತ ಪದುಮನಾಭನ ಭಾರ್ಯಳೆ ಪ.

ಕ್ಷೀರಸಾಗರತನುಜೆ ಸಿರಿ ಎನ್ನ ಮೊರೆ ಕೇಳೆ
ಸಿದ್ಧವಾಗೆನಗ್ಹೇಳೆ ಶುದ್ಧ ಮಾರ್ಗವ ತೋರೆ
ಬುದ್ಧಿಪೂರ್ವಕವಾಗಿ ಭುವನದೊಡೆಯನ ಪಾದ-
ಪದ್ಮದಲ್ಲಾಸಕ್ತಿ ಬುದ್ಧಿ ಕೇಳುವೆ ಶಾಂತಿ ೧

ಜನಕಾತ್ಮಜಳೆ ನೀ ಜಗದೇಕ ಸುಂದರಿ
ಜಗದಾಧಿಪತಿ ವಕ್ಷಸ್ಥಳ ಆಶ್ರಯಳೆ ಕೃತಿ
ಸರ್ವಮಂಗಳಕಾರಿ ಪರಮ ಕರುಣದಿ ನೋಡೆ
ವರಲಕ್ಷ್ಮಿ ದಯಮಾಡೆ ವರಗಳನೀಡ್ಯಾಡೆ ೨

ಭೀಷ್ಮಕನ ಪುತ್ರಿ ಜಿರುದೇನೆ ಸರಸಿಜನೇತ್ರೆ
ವೃಡ ಬ್ರಹ್ಮರೊಡೆಯ ಭೀಮೇಶಕೃಷ್ಣನ ಮಿತ್ರೆ
ಪೊಡವಿಗಧಿಕಳೆ ಜಯ ಮೂಡಲಗಿರಿವಾಸಿ
ಬಿಡವೆ ಕೈಹಿಡಿದೆನ್ನ ಕಡೆಹಾಯ್ಸಿ ಕಮಲಾಕ್ಷಿ ೩

೨೪

*

ಏನಂತೊಲಿದೆ ಸತ್ಯಭಾಮೆ ನೀ ಅಂವಾ
ದಾವ ಚೆಲುವ ರುದ್ರ ಕಾಮಿನಿ
ಏನಂತೊಲಿದೆ ರುದ್ರಕಾಮಿನಿ ಪ.

* ಕೊಲ್ಲಾಪುರ ಲಕ್ಷ್ಮೀದೇವಿಯ ಮೇಲಿನದು.
* ಸತ್ಯಭಾಮಾ ಪಾರ್ವತೀ ವಾದ.

ಕೃಷ್ಣ ಜೋಡುಕಂಗಳ ತೆರೆದಿರುವೋನೆ
ಸೀರೊಳಾಡಿ ನಾರುತ ಪೈಯ್ಯಲ್ಲ್ಹೊಳೆವೋನೆ
ಏನಂತೊಲಿದೆ ಸತ್ಯಭಾಮೆ ನೀ ೧

ಮೂರು ನೇತ್ರದಿ ನೋಡುತಿರುವೋನೆ ತನ್ನ
ಬೂದಿ ಬಳಿದ ಮೈಯ್ಯ ಲ್ಹೊಳೆವೋನೆ
ದಾವ ಚೆಲುವ ರುದ್ರ ಕಾಮಿನಿ ೨

ಸತಿರೂಪದಿಂದಾಸುರರನೆಲ್ಲ ಭಾಳ
ಮತಿಗೆಡಿಸಿದ ಮಂದರೋದ್ಧಾರ ಏ-
ನಂತೊಲಿದೆ ಸತ್ಯಭಾಮೆ ನೀ ೩

ಸತಿಪುರುಷರ ರೂಪ ತಿಳಿಯದೆ
ಮತಿಗೆಟ್ಟು ಮನ್ಮಥನ ಬಾಧೆಗೆ ಸಿಲುಕಿ
ದಾವ ಚೆಲುವ ರುದ್ರ ಕಾಮಿನಿ ೪

ದಾಡಿಂದ ಧರಣಿ ಪೊತ್ತಿರುವೋನೆ ಇಂಥ
ಕ್ರೋಡ ರೂಪನು ನಿನಗ್ವರನೇನೆ
ಏನಂತೊಲಿದೆ ಸತ್ಯಭಾಮೆ ನೀ ೫

ಮಸ್ತಕದಲ್ಲಿಟ್ಟ ಚಂದ್ರನ ಕಪಾ-
ಲ್ಹಸ್ತದವನು ನಿನಗೊಪ್ಪುವನೆ
ದಾವ ಚೆಲುವ ರುದ್ರ ಕಾಮಿನಿ ೬

ಕೊರಳಲ್ಲಿ ಕರುಳಾಭರಣವೇನೆ ಬಾಯಿ
ತೆರೆದುನೋಡಲು ಭಯವಿಲ್ಲವೇನೆ
ಏನಂತೊಲಿದೆ ಸತ್ಯಭಾಮೆ ನೀ ೭

ಹಾವಿನ ಸರ ಹಾರ ಗೊ(ಒ?)ಲಿತೇನೆ ರುಂಡ-
ಮಾಲೆಯು ಕಂಡಂಜಿಕಿಲ್ಲವೇನೆ
ದಾವ ಚೆಲುವ ರುದ್ರ ಕಾಮಿನಿ ೮

ಬಲಿಯಜ್ಞ ಕೆಡಿಸಿದ ಬಲವಂತ ಭಾಳಾ
ವರಹೀನನಲ್ಲನೆ ನಿನಕಾಂತ
ಏನಂತೊಲಿದೆ ಸತ್ಯಭಾಮೆ ನೀ ೯

ದಕ್ಷನ್ಯಜ್ಞವ ಧ್ವಂಸ ಮಾಡಿದ ಇಂಥ
ಮುಪ್ಪಿನವನ ಮತ್ತೆ ಕೂಡಿದೆ
ದಾವ ಚೆಲುವ ರುದ್ರ ಕಾಮಿನಿ ೧೦

ಮಾತೆಯ ಶಿರವ ಮದ್ರಿ(ರ್ದಿ?)ಸಿದನೆ ತಾ ಪ್ರ–
ಖ್ಯಾತಿಂದೆ ಚರಿಸಿದ ಚರಣೇನೆ
ಏನಂತೊಲಿದೆ ಸತ್ಯಭಾಮೆ ನೀ ೧೧

ಸುತನ ಶಿರವನೆ ಛೇದನ ಮಾಡಿ ಮಾಲೆ
ಜಪಿಸಿದರಿನ್ನಿಂಥ ಫಲವೇನೆ
ದಾವ ಚೆಲುವ ರುದ್ರ ಕಾಮಿನಿ ೧೨

ನೀತದಿಂದ್ವನವಾಸ ತಿರುಗೋನೆ ಹಿಂಡು
ಕೋತಿ ಕೋಡಗ ದಂಡು ಬಲವೇನೆ
ಏನಂತೊಲಿದೆ ಸತ್ಯಭಾಮೆ ನೀ ೧೩

ನಿರುತ ಸ್ಮಶಾನ ಮಂದಿರವೇನೆ ಭೂತ–
ಗಣ ನಿಮ್ಮ ಬಂಧು ಬಳಗವೇನೆ
ದಾವ ಚೆಲುವ ರುದ್ರ ಕಾಮಿನಿ ೧೪

ನೀಲವರಣ ನಿನ್ನ ಪುರುಷನೆ ವಿಷ–
ದ್ಹಾಲು ಕುಡಿದ ನಿಮ್ಮರಸನೆ
ಏನಂತೊಲಿದೆ ಸತ್ಯಭಾಮೆ ನೀ ೧೫

ವಿಷಪಾನ ಮಾಡಿ ಮಾರುದ್ರನೆ ಕಂಠ–
ಕ್ಕೆಸೆವೊ ಕಪ್ಪಿನಲ್ಲಿ ಪ್ರಸಿದ್ಧನೆ
ದಾವ ಚೆಲುವ ರುದ್ರ ಕಾಮಿನಿ ೧೬

ಅಂಬರವಿಲ್ಲ ದಿಗಂಬರ ತ್ರಿಪು–
ರಾಂಗನೆರೊಲಿದಿಹ ಬಹುಜಾರ ಏ–
ನಂತೊಲಿದೆ ಸತ್ಯಭಾಮೆ ನೀ ೧೭

ಸಾಪುಜನ ಚರ್ಯ ನಿನಪತಿ ಹೊದ್ದ
ಕಾಮುಕರೊಳು ಶ್ರೇಷ್ಠ [illegible]ರ್ವ
[illegible]ವ ಚೆಲುವ ರುದ್ರ ಕಾಮಿ[illegible]ನಿ ೧೮

ಮುದ್ದು ತೇಜಿಯನೇರಬಾರದೆ ಮುದಿ
ಹದ್ದನೇರಲು ಕಾಲು ಜಾರದೆ
ಏನಂತೊಲಿದೆ ಸತ್ಯಭಾಮೆ ನೀ ೧೯

ಉತ್ತಮ ರಥಕೆ ಗತಿಯಿಲ್ಲದೆ ಮುದಿ
ಎತ್ತನೇರುವೋದು ಸಲ್ಲಪೆ
ದಾವ ಚೆಲುವ ರುದ್ರ ಕಾಮಿನಿ ೨೦

ಮಾತುಳಾಂತಕ ನಿನ್ನ ಸಲ್ಲನೆ ಕುಲ
ಜಾತಿ ಬಿಟ್ಟಿರುವಂಥ ಗೊಲ್ಲನೆ ಏ–
ನಂತೊಲಿದೆ ಸತ್ಯ ಭಾಮೆ ನೀ ೨೧

ಹೋತನ ಶಿರ ಮಾವಗಿಟ್ಟನೆ ಸದ್ಯೋ–
ಜಾತರೂಪಾದಿ ಲಿಂಗ ಶ್ರೇಷ್ಠನೆ
ದಾವ ಚೆಲುವ ರುದ್ರ ಕಾಮಿನಿ ೨೨

ಪದುಮಾಕ್ಷ ಭಾಳ ಪ್ರೀತಿಂದಲಿ ಲಕ್ಷ್ಮಿ
ಎದೆಯ ಮ್ಯಾಲ್ಪದಕದಂತಿಟ್ಟಾನೆ
ಏನಂತೊಲಿದೆ ಸತ್ಯಭಾಮೆ ನೀ ೨೩

ಫಾಲಾಕ್ಷ ಪರಮ ಆದರದಿಂದ ಗಂಗೆಯ
ಮಾಣಿಕ್ಯ ಮುಕುಟದಂತಿಟ್ಟಾನೆ
ದಾವ ಚೆಲುವ ರುದ್ರ ಕಾಮಿನಿ ೨೪

ರಕ್ಕಸಾಂತಕ ಅಜನನು ತನ್ನ
ಪೊಕ್ಕುಳಿಂದ ಪಡೆದ ಪಡಿಪಾಟೇನೆ
ಏನಂತೊಲಿದೆ ಸತ್ಯಭಾಮೆ ನೀ ೨೫

ಕಡುಕೋಪದಿಂದ್ವೀರಭದ್ರನ ತನ್ನ
ಜಡೆಯಿಂದ ಪಡೆದ ಕಾರಣವೇನೆ
ದಾವ ಚೆಲುವ ರುದ್ರ ಕಾಮಿನಿ ೨೬

ಭಾಳ ನಂಬಿದ ತನ್ನ ಭಕ್ತರ ನಿಜ–
ವಾಗಿ ವೈಕುಂಠದಿ ಸೆರೆ ಇಟ್ಟಿರುವ
ಏನಂತೊಲಿದೆ ಸತ್ಯಭಾಮೆ ನೀ ೨೭

ಶಂಭುನಮಗೆ ಗತಿ ಎಂಬೋರೆ
ಕುಂಭೀನರಕದೊಳಗೆ ಫಲ ಉಂಬೋರೆ
ದಾವ ಚೆಲುವ ರುದ್ರ ಕಾಮಿನಿ ೨೮

ಈಶಾನೀಶ್ವರರಿಬ್ಬರೊಂದೇನೆ ಜಗ-
ದೀಶಗೆ ನಾ ಭಕ್ತಲಂದೇನೆ
ಏನಂತೊಲಿದೆ ಸತ್ಯಭಾಮೆ ನೀ ೨೯

ಮುಖ್ಯ ಭೀಮೇಶ ಕೃಷ್ಣನ ನಿಜ-
ಭಕ್ತಳೆನಿಸಿ ಬಾಳುವಿ ಭಾಳ ಮಾತೇನೆ
ದಾವ ಚೆಲುವ ರುದ್ರ ಕಾಮಿನಿ ೩೦

## ೨೫

*

ಓಡ್ಯಾಡುತ ನೀ ಒಲಿದೊಲಿದು ಮನೆಗೆ ಬಾರೊ ಮುಕುಂದ
ನೋಡೆನ್ನನು ದಯಮಾಡದಿರುವುದೇನು ಚೆಂದ ಪ.

ನೀಲವರ್ಣನೆ ನೀರಜಾಕ್ಷ ನಿನ್ನಪಾರ
ಗುಣವ ನಾ ಏನುವರ್ಣಿಸಲ್ಲೋ ಸಾಕ್ಷ
ಇಂದಿರಾಪತಿ ನಿನ್ನ ಆಕಾರ ನೋಡುವೆ-
ನೆಂದ್ಹುಟ್ಟಿತೆನಗೆ ಮಹಾಪೇಕ್ಷ ೧

ಹಸ್ತಿವರದ ಕೇಳು ನಿನ್ನ ಚರಣಾಬ್ಜಗಳಿಗೆ ನಾ
ಮಸ್ತಕ ಬಾಗುವೆ ಮುನ್ನ ತಿಳಿ
ಭೃತ್ಯನೆಂದೆನ್ನ ಚಿತ್ತಕೆ ತಂದು ನೀ-
ನಾಗ ಬೇಕೆನಗೆ ಪ್ರಸನ್ನ ೨

ಉಟ್ಟಾಂಬರಸಿರಿಜರವು ಭೂಷಣ ಹೊಸ ಪರಿಯು
ವಕ್ಷಸ್ಥಳದಿ ನೋಡೋ ಸಿರಿಯು
ಇಷ್ಟಿರೋ ಬಾಪುರಿಯು ಶ್ರೇಷ್ಠ ಭೀಮೇಶ-
ಕೃಷ್ಣನೆ ಲೋಕನಾಳುವ ದೊರೆಯು ೩

* ತಿಮ್ಮಲಾಪುರದ ದೇವರ ಮೇಲಿನದು.

೨೬

*

ಅಂಗಜಪಿತನರ್ಧಾಂಗಿ ನೀ ಏಳು
ಶೃಂಗಾರದಂಥ ಶುಭಾಂಗಿ ನೀ ಏಳು
ಕಂಗಳ ನೋಟದ ಕಡು ಚೆಲ್ವೆ ನಿನ್ನ ಪಾ-
ದಂಗಳಿಗೆರಗುವೆ ಎನುತ ಮಾಲಕ್ಷುಮಿ [ಯು?]
ಅಂಗನೆಯರ್ಹಸೆಗೆ ಕರೆದರು ೧

ಅಜನಜನಕನರಗಿಳಿಯೆ ನೀ ಏಳು
ಪದುಮನಾಭನ ಪಟ್ಟದರಸಿ ನೀ ಏಳು
ತ್ರಿಜಗಭೂಷಿತನೆದೆಮ್ಯಾಲೆ ಹೊಂದಿರುವಂಥ
ಮದಗಜಗಮನೆ ಮಾಲಕ್ಷ್ಮಿ ಬಾರೆನುತಲಿ
ಮುದದಿಂದಲಿ ಹಸೆಗೆ ಕರೆದರು ೨

ಸೋಮವದನೆ ಸುಗುಣೆ ಜಾಣೆ ನೀ ಏಳು
ಕೋಮಲ ಕೋಕಿಲವಾಣಿ ನೀ ಏಳು
ಹೇಮಮಾಣಿಕ್ಯ ನಾಗವೇಣಿಯೆ ನಮ್ಮ
ಭೀಮೇಶಕೃಷ್ಣನ ನಿಜರಾಣಿ ಮಾಲಕ್ಷುಮಿ
ಪಟ್ಟದ ರಾಣಿ ಬಾ ಹಸೆಗೆ ಕರೆದರು ೩

೨೭

ಅಂಗಳ ದೊಳಗಾಡಬಾರಯ್ಯ ಮುದ್ದು-
ರಂಗ ನಿನ್ನಯ ಮುಖ ತೋರಯ್ಯ ಪ.

ಅರ್ಧರಾತ್ರಿಯಲ್ಲವತರಿಸಿದ್ಯೊ ಹೋಗಿ
ಮುದ್ದುಗೋಪಿಯ ಸುತನೆನಿಸಿದ್ಯೊ
ಭದ್ರದೇವಿಯರ ನೀ ಕಳಿಸಿದ್ಯೊ ಬಂ-
ದಿದ್ದ ಪೂತಣಿಯ ಸಂಹರಿಸಿದ್ಯೊ ೧

ವತ್ಸಕಾಯುತಲ್ಹೋಗಿ ವನದೊಳು ಬಂದ
ಕಿಚ್ಚನುಂಗಿದೆ ನಿಸ್ಪದನ[illegible]

* ಲಕ್ಷ್ಮಿದೇವಿ[ಯನ್ನು] ಹಸೆ[ಗೆ] ಕರೆದ ಹಾಡು.

ಸ್ವಚ್ಛಮಾಡಿದಿ ಕಾಳಿಜಲಗಳು ತೋರೆ
ಕುಕ್ಷಿಯೊಳಗೆ ತ್ರಿಜಗಂಗಳು ೧

ದೇವಕ್ಕಿದೇವಿ ಯಶೋದಾನೆ, ವಸು
ದೇವ ನಂದ ಬಲರಾಮಗೆ ಎದುರು
ಬಾರೊ ಭೂದೇವಿರಮಣನೆ
ಭೀಮೇಶ ಕೃಷ್ಣನೆ ಶ್ಯಾಮವರಣನೆ ೩

೨೮

ಅಂಬಾ ನೀ ಹೂವ ಪಾಲಿಸೆ ವರ ನೀಡೆ ಶ್ರೀ ಜಗ-
ದಂಬಾ ನೀ ಹೂವ ಪಾಲಿಸೆ
ಅಂಬಾ ನೀ ಹೂವ ಪಾಲಿಸೆ ಶಂಭು ಶಂಕರನ ರಾಣಿ
ರಂಭೆ ಪಾರ್ವತಿ ನಿನ್ನ ಪಾದಾಂಬುಜಕ್ಕೆರಗುವೆ ಪ.

ಬಳೆಯು ಕರಿಯಮಣಿ ಕೊರಳ ಮಂಗಳ ಸೂತ್ರ
ಸ್ಥಿರವಾಗಿಯಿರುವಂತೆ ಸರ್ವಸಂಪತ್ತು ನೀಡಂಬಾ ೧

ಮಕ್ಕಳು ಮನೆ ಭಾಗ್ಯ ತೊಟ್ಟಿಲು ತೂಗುವಂತೆ
ಮೃಷ್ಟಾನ್ನ ದಾನ ಮಾಡಲಿಷ್ಟಾರ್ಥದ್ವರಗಳ ಅಂಬಾ ೨

ರುದ್ರನ ಸತಿಯಳೆ ಬುದ್ಧ್ಯಾತ್ಮಳೆನಿಸುವಿ
ಭದ್ರೆ ನಿನ್ನಯ ಮುಡಿಯಲ್ಲಿದ್ದ ಮಲ್ಲಿಗೆಯ ನೀಡಂಬಾ ೩

ಇಂತು ಬೇಡುವೆ ನಿನ್ನ ಸಂಪಿಗೆ ಮುಡಿಮ್ಯಾಲಿ--
ದ್ದಂಥ ಕುಸುಮದೊಳು ಶಾವಂತಿಗೆ ಸರವ ೪

ಭೀಮೇಶಕೃಷ್ಣನ ನಿಜ ಪಾದಭಜಕಳೆ ನೀ
ದಯದಿಂದ ಧರ್ಮಕಾಮ್ಯಾರ್ಥದ್ವರಗಳ ೫

೨೯

*

ಕಡಲಶಯನ ಹರಿಯ ತೊಡೆಯಲ್ಲಿ
ಮಡದ್ಯೇರಿಬ್ಬರು ಕುಳಿತು

* ರುಕ್ಮಿಣಿ ಸತ್ಯಭಾಮೆಯರ ಸಂವಾದ.

ಪನ್ನಂಗಶಯನ ಕೇಳೊ ಸ್ವಾಮಿ ನೀ
ಎನ್ನ ಮನೆಗೆ ಏಳೊ
ನಿನ್ನ ಪಾದಕ್ಕೆ ಎರಗುವೆನೆಂದು ಭಾಮೆ ಕೈ-
ಯನ್ನು ಮುಗಿದಳಾಗ ೨

ಎನ್ನ ಮನೆಯಲ್ಲಿದ್ದ ಶ್ರೀಹರಿ-
ಯನ್ನು ಕರೆಯಲವರ
ಕಣ್ಣೀಸೆಸುತಲಿ ಕರ್ಣೆ(ಸ್ತ್ಯ?)ರುಕ್ಮಿಣಿ ಕೋಪ-
ವನ್ನು ಧರಿಸಲಾಗ ೩

ಎಷ್ಟು ಹಣವ ನೀನು ಕೃಷ್ಣಗೆ
ಕೊಟ್ಟು ಕೊಂಡಿ ಹೇಳೆ
ದಿಟ್ಟತನದ ಮಾತಾಡೋ ರುಕ್ಮಿಣಿ ನಿನ್ನ
ಶ್ರೇಷ್ಠತನವೇನ್ಹೇಳೆ ೪

ಹತ್ತು ಆರು ಸಾವಿರದಷ್ಟು
ಭಾರ್ಯೇರವೊಳಗೆ
ಸತ್ಯಭಾಮೆ ಉತ್ಕೃಷ್ಟ ಚೆಲುವೆಯೆಂದು
ಕೃಷ್ಣ ನಿನ್ನಲ್ಲಿಹನೆ ೫

ಹದಿನಾಲ್ಕು ಲೋಕದಲಿ ಹರಿ
ಪಾದಾಂಬುಜವ ಕಾಂಬುವೋರಿಲ್ಲೆ
ಯದುನಾಥನ ಎದೆ ಮ್ಯಾಲ್ಹತ್ತಿರುವೋದು
ಇದು ಸೋಜಿಗವಲ್ಲೆ ೬

ಇಷ್ಟೆ ಸೋಜಿಗವೆಂದು ಆಡಲು
ದಿಟ್ಟೆ ನಿನಗೆ ಅರಿದೆ
ಅಷ್ಟದಿಕ್ಪಾಲಕರನೆ ಓಡಿಸಿ ವೃಕ್ಷ
ಕಿತ್ತು ಒದರು(ರುವು?)ದಲ್ಲೆ ೭

ಜಲಪ್ರಳಯ ಕಾಲದಲಿ ಜನರಿಲ್ಲದ
ಅಂಧಕಾರದಲಿ
ಎಲೆಯಾಗಾ ಪರಮಾತ್ಮನ ಮನವ ನೀ ಮೊ-
ದಲೆ ಒಲಿಸಿಕೊಂಡೆ ೮

ಕಾದು ಸೇವಿಸೆ ಹರಿಯ ಪಾದದ–
ಲ್ಲಾದರವಿಲ್ಲಪಲೆ
ದಾನ ಮಾಡುತ ಮುನಿಹಿಂದಟ್ಟಿದರ್ಹರಿ
ಹ್ಯಾಗೆ ಬರುವನ್ಹೇಳೆ ೯

ಮೂರುಲೋಕದ ದೊರೆಯ
ಮೂರೆಲೆ ತುಳಸಿ–
ಸರಿಯು ಮಾಡಿ ಮುಕುತಿದಾಯಕ ಕೈವಶವಾ–
ಗಿರಲು ನೀ ಸಕಲ ಮಾಯುವ ಬಲ್ಲೆ ೧೦

ಪಟ್ಟದ್ವೊಲ್ಲಭೆ ನಾನು ಕೃಷ್ಣಗೆ
ಮೆಚ್ಚಿ ಬಂದೆಯೆ ನೀನು
ಅಚ್ಚುತ ತಾ ಪರಮಾನುಗ್ರ[ಹ]ವ ಮಾಡಿ ಬಂ–
ದಿಚ್ಛೆಲಿರುವ ತಾನು ೧೧

ಮಾತಾಪಿತರು ಅನುಜನನ್ವಂಚಿಸಿ
ಈತಗ್ವಾಲೆಯ ಬರೆದು
ಯಾತಕಂಜಿಕೆ ವಲಿಸ್ಯೋಡಿ ಬಂದವಳೆಂದು
ಕೀರ್ತ್ಯೊಗಳುವುದಲ್ಲೆ ೧೨

ತಂದು ಕೊಡಲು ಮಣಿಯ ಸಭೆಯೊಳು
ಅಂದು ತಗ್ಗಿಸಿ ತಲೆಯ
ನಿಂದ್ಯದ ಮಾತಿಗೆ ತಂದು ಸಿಮ್ಮಯ್ಯ
ಮುಂದಿಟ್ಟು ಪೋದನೆ ನಿನ್ನ ೧೩

ಕೇಳೊ ಕೇಳೊ ನುಡಿಯ ನೀನೀ–
ರೇಳು ಲೋಕದ ಒಡೆಯ
ಹೇಳೋಬುದ್ಧಿ ನಿನ್ನಯ ವಲ್ಲಭೆ ಮಾತಾ–
ಡೋಳೊ ನಿರ್ಭಿಡೆಯು ೧೪

ರಕ್ಕಸಾಂತಕ ಕೇಳೊ ನಿನ್ನ
ಚಿಕ್ಕವಲ್ಲಭೆ ಮ[ಹಿ]ಮೆ

ಉಕ್ಕಿ ಉಕ್ಕಿ ಎನ್ನಮ್ಯಾಲೆ ಬರಲು ನಿನ-
ಗಕ್ಕರ ತೋರುವುದೆ ೧೫

ಆರ್ಯಳೆಂದು ನಾನು ತಾಳಿದೆ-
ನಕ್ಕ ರುಕ್ಮಿಣಿ ಮಾತ
ಏರಿ ಏರಿ ಎನ್ನಮ್ಯಾಲೆ ಬರಲು ಇದು
ನ್ಯಾಯವೇನೊ ನಿನಗೆ ೧೬

ನಾಲ್ಕು ತೋಳಿನಿಂದ ಆಲಂಗಿಸಿ
ಕಾಂತೆಯರಿಬ್ಬರನು
ಯಾತಕಿಂಥ ಕದನವು ಘನವಾಯಿತು
ಸಾಕು ಸಾಕುಯೆನುತ ೧೭

ವಾರಿಜಾಕ್ಷ ಕೇಳೊ ನಾರದ-
ರ್ಹೂಡಿದರೀ ಜಗಳ
ಪಾರಿಜಾತ ಸರಿಸವತಿಗೆ ಕೊಟ್ಟ-
ರಿನ್ಯಾರು ಸೈರಿಸೋರ್ಹೇಳೊ ೧೮

ನಂದನವನ ತರುವ ನಾ
ತಂದಿಟ್ಟೆನಂಗಳದಲ್ಲೆ
ಅಂದಿಬ್ಬರನಾನಂದವಬಡಿಸಿದ
ಚೆಂದದಿಂದಲಿ ನಗುತ ೧೯

ಭಾಮೆ ರುಕ್ಮಿಣಿ ಸಹಿತ ನಡುವೆ
ಭೀಮೇಶ ಕೃಷ್ಣನು ಕುಳಿತ
ಕಾಮನಯ್ಯನ ಚರಿತ್ರೆಯು ಪಾಡ-
ಲಮೃತ ಪಾನವು ನಿರುತ ೨೦

೩೦

*

ಕದವನಿಕ್ಕಿದ ಕಾರಣೇನೆ ಮುದದಿ ಕೇಳೆ ಮೋಹನಾಂಗಿ
ಸದನಕ್ಕಾಗಿ ಬಂದೆ ನಾನು ಸರಸವ್ಯಾತಕೆ ಸುಂದರಾಂಗಿ ಪ.

---

* ಅರ್ಜುನನು ತನ್ನ ಹತ್ತು ಅವತಾರದಿಂದ ದ್ರೌಪದಿಗೆ ಬಾಗಿಲು ಕಟ್ಟಿದಾಗ ಹೇಳಿದ್ದು.

ಇಂದು ನಾನು ಬಂದೆ ದ್ರೌಪದಿ
ಬಂದು ಬಾಗಿಲನ್ಯಾಕುವೋದು
ಚೆಂದವೇನೆ ಚಂದ್ರಮುಖಿಯೆ
ಬಂದು ಬಾಗಿಲು ತೆಗೆಯೆ ನೀನು ೧

ಅಂಧಕಾರ ರಾತ್ರಿಯಲಿ
ಬಂದವರ್‍ಯಾರೆಂದು ಅರಿಯೆ
ನಿಂದು ಗುರುತೇನೆಂದು ಪೇಳಲು
ಬಂದು ಬಾಗಿಲು ತೆಗೆವೆ ನಾನು ೨

ಕಂಡರಿಯೆ ಎನ್ನ ಪರಾಕ್ರಮ
ಖಾಂಡವ ವನವ ದಹಿಸಿದೆನೆ
ಅಂಬುಧಿಯಲ್ಲಾಡೊ ಮಚ್ಛನ್ವಲಿಸಿದ
ಗಾಂಡೀವಾರ್ಜುನರಾಯ ನಾನು ೩

ಗಾಂಡೀವಾರ್ಜುನರಾಯನಾದರೆ
ದುಂಡುಬಳೆ ಕಂಕಣಗಳಿಟ್ಟು
ಗೊಂಡ್ಯ ರಾಗಟೆ ಹೆರಳಲ್ಯಾಕೆ ನೀ
ಷಂಢರೂಪವ ಧರಿಸ್ಯೋಗೊ ೪

ಕ್ಷೀರಸಾಗರದಲ್ಲಿ ತಾ ಮಂ-
ದರ ಪೊತ್ತಮೃತವನೆ ತಂದ
ಧೀರ ಕೂರ್ಮಗೆ ಮೈದುನಾದಂಥ
ಶೂರ ಫಲ್ಗುಣರಾಯ ನಾನೆ ೫

ಫಲ್ಗುಣರಾಯನಾದರೇನೊ
ಸದ್ಗುಣ ಸಂಪನ್ನ ಬಿರುದು
ಭದ್ರದೇವಿಯು ಕದ್ದು ತರುವಾಗ
ಬುದ್ಧಿ ದಾರಲ್ಲಿಟ್ಟಿದ್ದಿರ್‍ಯೋಳೊ ೬

ಪರಮೇಶ್ವರನ ಒಲಿಸಿಕೊಂಡು
ಪಾಶುಪತಾಸ್ತ್ರ ಪಡೆದೆ ನಾನು
ಪರಮ ಆಪ್ತ ವರಾಹನ ಕರುಣಕ್ಕೆ
ಪಾತ್ರನಾದಂಥ ಪಾರ್ಥರಾಯನೆ ೭

ಪಾಶುಪತಾಸ್ತ್ರ ಪಡೆದರೇನು ದೇಶ-
ದೇಶ್ಯಾತ್ರೆತೀರ್ಥ ಚರಿಸಿ
ಆಸೆ ಬಿಡದೆ ಸನ್ಯಾಸಿಯಾದಂಥ
ಮೋಸಗಾರನೆ ಮನೆಗೆ ಪೋಗು ೮

ಕೋಟಿ ದೈತ್ಯರ ಕೊಂದೆ ಎನ್ನಸರಿ-
ಸಾಟಿಯಾರೀ ಲೋಕದೊಳಗೆ ಆ-
ರ್ಭಟದವತಾರ ನಾರಸಿಂಹಗೆ
ನೀಟಾದ ಭಕ್ತ ಕಿರೀಟಿಯಲ್ಲವೆ ೯

ಕೋಟಿ ದೈತ್ಯರ ಕೊಂದು ಜೂಜಿ-
ನಾಟ ಸೋತ್ವನ ತೋಟ ತಿರುಗಿ
ಪಾಟುಬಟ್ಟು ವಿರಾಟನಲ್ಲಿ
ನಾ(ನ?)ಟರಾಟಕೆ ನಿಂತಿರ್ಯಾಕೊ ೧೦

ಮಾತಿಗೆ ಮಾತಾಡೋರೇನೆ ಅ-
ಜಾತ ಶತ್ರುನನುಜ ನಾನು
ಭೂತಳವ ಬೇಡಿದ್ವಾಮನಗೆ
ದೂತ ನಾ ಶ್ವೇತೂವಾಹನನೆ- ೧೧

ಶ್ವೇತೂವಾಹನ ನಿಮ್ಮ ಸತಿಗೆ
ನಾಥರಿದ್ದೂ ಅನಾಥಳಂತೆ ಅ-
ಜ್ಞಾತದಲ್ಲಿ ಸುದೇಷ್ಣೆ ಸೇವೆಗೆ
ದೂತಿಯಾದ ಪ್ರಖ್ಯಾತಿ ದಾರದೊ ೧೨

ಹೆತ್ತತಾಯಿ ಶಿರವನಳಿದ ಕ್ಷತ್ರೇ-
ರಂತಕ ಭಾರ್ಗವಗೆ
ನಿತ್ಯದಲಿ ನಿಜಸೇವಕ ಭೀ-
ಭತ್ಸರಾಯ ನಾನಲ್ಲವೇನೆ ೧೩

ಧೀರ ಭೀಭತ್ಸರಾಯ ನಿನ್ನ
ನಾರಿಯು ಸಭೆಗೆಳೆದು ತಂದು
ಸೀರೆ ಸೆಳೆವಾಗ ಶೂರರಾದರೆ
ದಾರದಾರಂತೆ ನೋಡಿರ್ಯಾಕೊ ೧೪

ಕಾಮ ಮೋಹಗಳಿಂದ ನಿನ್ನಲ್ಲಿ
ಪ್ರೇಮದಿ ನಾ ಬಂದೆನೀಗ
ರಾಮರಾಜ್ಞೆಗೆ ನಿಜ ಸೇವಕ-
ನಾದ ವಿಜಯರಾಯ ನಾನೆ ೧೫

ವಿಜಯರಾಯ ನೀನ್ಯಾದೊ ತೇಜಿದಿ-
ಗ್ವಿಜಯಕೆನುತದರ್ಹಿಂದೆ ಪೋಗಿ
ಮಗನ ಕೈಯಿಂದ ವಧೆಯು ನೀತವೆ
ಮೊದಲೆ ಪರಾಜಿತನಾದಿರ್ಯಾಕೊ ೧೬

ಶ್ರೇಷ್ಠರೊಳು ಮಹಾಶ್ರೇಷ್ಠ ನಾನೆ
ಅಸ್ತ್ರವಿದ್ಯದಲ್ಲಧಿಕನೆಂದು
ಕೃಷ್ಣಮೂರುತಿ ಒಲಿಸಿಕೊಂಡಂಥ
ಕೃಷ್ಣೆನಲ್ಲನೆ ಕೃಷ್ಣೆ ಕೇಳೆ ೧೭

ಶ್ರೇಷ್ಠರೊಳು ಮಹಾಶ್ರೇಷ್ಠ ನಮ್ಮಣ್ಣ
ಕೃಷ್ಣ ಸಾರಥಿ ಆದ್ದರಿಂದ
ಹಸ್ತಿನಾವತಿ ಪಟ್ಟಣಾಳ್ವುದು
ಇಷ್ಟು ದಾರ ದಯದಿಂದ್ಹೇಳೊ ೧೮

ಅಂಗನಾಮಣಿ ನಿನ್ನ ಅಂಗ-
ಸಂಗ ಬಯಸಿ ನಾ ಬಂದೆನೀಗ
ಅಂಗದ್ವಸ್ತ್ರವಬಿಟ್ಟ ಬೌದ್ಧಗೆ
ಸಖನು ನಾ ಸವ್ಯಸಾಚಿ ಅಲ್ಲವೆ ೧೯

ಭುಜ ಪರಾಕ್ರಮಿ ಸವ್ಯಸಾಚಿ
ನಿನ್ನೆರಡು ಕೈದಡ್ಡಿನ್ಯಾತಕ್ಹೇಳೊ
ದ್ವಿಜರ ಸುತರ ತಂದುಕೊಡದೆ
ಮೊದಲೆ ಮಾಡಿದ ಪ್ರತಿಜ್ಞವೇನೊ ೨೦

ಅಂಜೋನಲ್ಲ ನಾನರಿಗಳಿಗೆ ಕಲಿ-
ಭಂಜನ ಕಲ್ಕ್ಯಾವತಾರಗೆ
ಕಂಜಚರಣಕ್ಕೆ ವಂದಿಸುವ ಧ-
ನಂಜಯ ನಾನಲ್ಲವೇನೆ ೨೧

ಸೈಯೊ ನೀ ಧನಂಜಯರೇಯು
ಸುರಪತಿಗೆ ಪತ್ರವನೆ ಬರೆದು
ಶರದ ಪಂಜರ ಕಟ್ಟಿ ನೀ ಕುಂ-
ಜರವನಿಳಿಸಿದ ಕಾರಣೇನೊ ೨೨

ನಿನ್ನ ಸರಿ ಮಾತಾಡುವೋರ
ಧನ್ಯರ ನಾ ಕಾಣೆನೆಲ್ಲು
ಪನ್ನಂಗವೇಣಿ ಎನ್ನ ನಾಮುಗ-
ಳನ್ನು ಕೇಳಿದಿನ್ಯಾಕೆ ತಡೆವೆ ೨೩

ದಶ ನಾಮುಗಳ ಕೇಳಿ ದ್ರೌಪದಿ
ಕುಶಲದಿಂದ ಕದವ ತೆಗೆದು
ನಸುನಗುತಲೆ ಎರಗಿ ತಾ
ವಾಸವಿಯ ಒಳಿಯಕೆ ಕರೆದಳಾಗ ೨೪

ಪಟ್ಟೆ ಮಂಚದಿ ಕುಳಿತು ಭೀಮೇಶ-
ಕೃಷ್ಣನ ಭಕ್ತಳು ನಗುತ ಬು-
ಕ್ಕಿಟ್ಟು ಗಂಧ ಪರಿಮಳ ಕುಸುಮ-
ಹಚ್ಚಿ ವೀಳ್ಯವ ಕೊಟ್ಟಳಾಗ ೨೫

೩೧

ಕಮಲನಾಭ ಹರುಷದಿಂದ ಖಗವಾಹನನ್ಹೆಗಲನೇರಿ
ಬಗೆಬಗೆ ಶೃಂಗಾರವಾಗಿ ಬಂದ ರಂಗನು ೧

ಅಂಬರ ಜರಸಿರಿಗಳಲಿ ಕುಂದಣದುಡಿದಾರವ ಕಟ್ಟಿ
ಚೆಂದುಳ್ಳ ಭುಜಕೀರ್ತಿ ಕರ್ಣಕುಂಡಲನಿಟ್ಟು ೨

ಶಂಖ ಚಕ್ರ ಕರಗಳಲ್ಲಿ ಕಂಕಣ ಭೂಷಣಗಳಿಂದ
ಕಿಂಕಿಣಿ ನೂಪುರಗಳಿಂದ ಅಲಂಕಾರವಾಗಿ ೩

ಕಸ್ತೂರಿ ಕೇಸರಿಯು ಗಂಧ ಬುಕ್ಕಿಟ್ಟು ಪರಿಮಳದ ಚೆಂದ
ಕರ್ಪೂರ ತಾಂಬೂಲ ಬಾಯೊಳೊಪ್ಪುವ ರಂಗ ೪

ನೀಲವರ್ಣ ನಿತ್ಯ ಕೋಟಿಸೂರ್ಯಪ್ರಕಾಶ ಮಲ್ಲಿಗೆ-
ಮಾಲೆ ಮುಡಿದು ಹೊರಟ ಜಗದಮೋಹನ ರಂಗ ೫

ಸಾಲು ಸಾಲು ಮನೆಗಳಲಿ ಮೇಲುಮೇಲುಪ್ಪರಿಗೆನೇರಿ
ಬಾಲಕೃಷ್ಣ ಬರುವ ಭರವ ನೋಡುತ್ತಿದ್ದರು ೬

ವಾರಿಗೆ ಸತಿಯೇರ ತನ್ನ ಪಾರೆನೋಟದಿ ನೋಡುತ
ಮಾರನಯ್ಯನು ಬಂದನು ತಾ ಬಜಾರ ಮಧ್ಯದಿ ೭

ಜಿಲ್ಲೆಯವರೆಲ್ಲರು ಅರಳುಮಲ್ಲಿಗೆ ಕರದಲ್ಲಿ ಹಿಡಿದು
ಫುಲ್ಲಾಕ್ಷನ ಮ್ಯಾಲೆ ನಗುತ ಚೆಲ್ಲುತಿದ್ದರು ೮

ಯಾದವರೇಶನೆ ನಿನಗೆ ಭೇದವ್ಯಾಕೆನ್ನ ಮ್ಯಾಲೆ
ನೀ ದಯಮಾಡೆನ್ನ ಮನೆಗೆನುತ ರಾಧೆ ಕರೆದಳು ೯

ವಜ್ರದ ಗೊಂಬೆಯಂದದಿ ಮೈಯಾರಿ ಮಿಲ್ಲನೆ ಬಂದು
ಪದ್ಮನಾಭ ಬಾ ನಮ್ಮನೆಗೆನುತ ಭದ್ರೆ ಕರೆದಳು ೧೦

ಅಂತರಂಗದಲ್ಲಿ ಕೋಟಿ ಸಂಧವ್ಯಾತಕೆನ್ನಮ್ಯಾಲೆ
ಸಂತೋಷದಿ ಬಾರೆನುತ ಜಾಂಬವಂತಿ ಕರೆದಳು ೧೧

ಸತ್ಯಭಾಮೆ ರುಕ್ಮಿಣಿದೇವಿ ಮಿತ್ರೆನೀಲಾ ಜಾಂಬವಂತಿ
ಲಕ್ಷಣಾ ಕಾಳಿಂದಿ ಭದ್ರೆ ಕರೆಯುತಿದ್ದರು ೧೨

ಇಷ್ಟುಮಂದಿ ಸತಿಯರೊಳಗೆ ನಿಷ್ಠುರವಾಗುವೆನೆಂದು
ಎತ್ತ ಕಡೆಗೆ ಪೋಗಲೆಂದು ಶ್ರೀಕೃಷ್ಣ ನುಡಿದನು ೧೩

ಹರಿಯ ಮಾತುಗಳನೆ ಕೇಳಿ ನರುವರು ಸುಮ್ಮನೆ ನಿಲ್ಲೆ
ಕರದಿ ವೀಣೆಯ ಪಿಡಿದು ಬಂದನು ಭರದಿ ನಾರದ ೧೪

ರಂಗ ನಿನ್ನ ಸತಿಯರಿಂದ ಭಂಗ ಬಂದಿತೇನೊ ನಿನಗೆ
ಇಂದೆನ್ನ ಹಿಂದೆ ಬಾರೆನುತ ನಾರದ ಕರೆದನು ೧೫

ಕೇಳಿ ನಾರದರ ಮಾತು ತಾಳಲಾರದೆ ರುಕ್ಮಿಣಿಯು
ದಾನ ಒಯ್ಯು ದಕ್ಕಿಸಿಕೊಂಡಿರೆಂದು ನುಡಿದಳು ೧೬

ಅಕ್ಕನ ಮಾತಿನ ಬಾಣ ನೆಟ್ಟಿತು ಎನ್ನೆದೆಗೆ ಬಂದು
ಕೃಷ್ಣ ನೀ ಕೇಳೊ ಕೇಳೆಂದು ನುಡಿದಳು ಭಾಮೆ ೧೭

ಬಿಟ್ಟು ಬಾಣವ ಮಾಡಿ ಯುದ್ಧ ದಿಟ್ಟಳೆನಿಸುವುದೆ ಸಿದ್ಧ
ಪೃಥಿವಿಯೊಳಗೆ ಬಾಣನಂದಿ ಎಂದು ಪ್ರಸಿದ್ಧಿ ೧೮

ದಾರಿಗೆ ತೆಗೆಸಿದೆ ನೀನು ಮೋರೆಗಡ್ಡ ಮುಂಡಿ ಸನ್ನಿ
ಹೀನ ಕಾರ್ಯವ ಮಾಡಲು ನೀ ಅರಿಯೇನೆ ರುಕ್ಮಿಣಿ ೧೯

ಗುಣನಿಧಿ ಗೋಪಾಲ ಹರಿಗೆ ನುಡದಿ ಎನಿಸುವುದೆ ಸರಿಯೆ
ಮನೆಯು ಕಳವು ಇಟ್ಟಿದ್ದು ನಿಮ್ಮ ಗುಣವ ನಾನರಿಯೆ ೨೦

ಮಾಯಕಾರ್ತಿ ಮಾತುಗಳ ಅನ್ಯಾಯವೋ ನ್ಯಾಯವೋ ನಾನು
ಬಾಯಬಿಟ್ಟರೇನುಳಿದೀತೆ ನಿನ ಮರ್ಯಾದೆ ರುಕ್ಮಿಣಿ ೨೧

ಸಾಕು ಸತ್ಯಭಾಮೆ ನಿನಗೆ ಯಾಕೆ ಕೋಪ ಬಂದಿತೆಂದು
ನಾಲ್ಕು ತೋಳಿಂದಪ್ಪಿಕೊಂಡನು ಶ್ರೀಕಾಂತ ನಗುತ ೨೨

ಎಲ್ಲ ಸತಿಯರನು ತಾನಿದ್ದಲ್ಲಿಗೇ ಕರೆಸಿದ ಕೃಷ್ಣ
ವಲ್ಲಭೆ ರುಕ್ಮಿಣಿಯ ಚರಣಕ್ಕೆ ಎರಗಿಸಿದನಾಗ ೨೩

ರುಕ್ಮಿಣಿದೇವೇರ ತೊಡೆಯ ವಿಚಿತ್ರದ್ದುಲಿಗೆಮಂಚಮಾಡಿ
ನಕ್ಷತ್ರ ಪೋಲ ಚಂದ್ರನಂತೆ ಹೊಳೆಯುತ್ತಿದ್ದನು ೨೪

ಆರ್ಯಳು ಎನ್ನ ಪಟ್ಟದ ಭಾರ್ಯಳು ರುಕ್ಮಿಣಿಯು ಮಾತು
ವಿಚಾರಬ್ಯಾಡಿರೆಂದೆನುತ ಸಾರಿ ಹೇಳಿದ ೨೫

ಹಚ್ಚಿದ್ದಗಲು ಬತ್ತಿಯಂತೆ ಹದಿನಾರು ಸಾವಿರ ಮಂದಿ
ಭೀಮೇಶಕೃಷ್ಣನ ಚರಣಕ್ಕೆರಗಿ ನಗುತ ಕುಳಿತಿರಲು ೨೬

## ೩೨

*

ಕರಿಮುಖದ ಗಣಪತಿಯ ಚರಣಕ್ಕೆಯೆರಗಿ
ಶಾರದೆಗೆ ಸೆರಗೊಡ್ಡಿ ವರವನು
ವರವ ಬೇಡಿಕೊಂಡೆ ಸ್ಥಿರವಾದ ಭಕುತಿ ಕೊಡುಯೆಂದು ೧

* ಸ್ತುತಿಮಣಿ ಮಾಲಿಕೆ.

ವಾಯು ಬ್ರಹ್ಮ ಭಾರತಿಗೆ ಭಾಳ ಬೇಡಿಕೊಂಡ್ವೇ-
ದವ್ಯಾಸರಿಗೆ ನಮೋಯೆಂಬೆನ-
ಮೋಯೆಂದು ನಾರದರ ಪಾದಪದ್ಮಗಳಿಗೆರಗುವೆ ೨

ಅತ್ರಿ ಅಂಗೀರಸ ವಸಿಷ್ಠ ಗೌತಮ ವಿಶ್ವಾ-
ಮಿತ್ರ ಮಾರ್ಕಾಂಡೇಯ ಚ್ಯವನರು ಚ್ಯವನ
ಭಾರದ್ವಾಜ ಬಕದಾಲ್ಭ್ಯರಿಗೆ ನಮಿಸುವೆ ೩

ಮಾಂಡವ್ಯ ಸೌಭರಿ ಶಾಂಡಿಲ್ಯಗಾಲವರು
ಪಂಡಿತ್ವಾಲ್ಮೀಕಿ ಕೌಂಡಿಣ್ಯ
ಕೌಂಡಿಣ್ಯ ಅಗಸ್ತ್ಯ ಮುನಿ ಮರೀಚರಿಗೆ ನಾನು ನಮೋಯೆಂಬೆ ೪

ಶೇಷಗಿರಿವಾಸ ಆಕಾಶನಳಿಯನೆ ವೆಂಕ-
ಟೇಶ ನೀ ನಮ್ಮನೆ ದೈವ ಮನೆದೈ-
ವ ಸಲಹೆನ್ನ ಪದ್ಮಾವತೀಶ ಪರಮಾತ್ಮ ೫

ಮಂಗಳಾಂಗನೆ ನೀನು ಮಂಗಳಮಹಿಮನೆ
ಮಂಗಳ ದೇವಿ ರಮಣನೆ ನೀನೆಮಗೆ ಜಯ
ಮಂಗಳವ ಕೊಟ್ಟು ಸಲಹೆನ್ನ ೬

ವಾಸುದೇವನೆ ನೀನು ವಾಸುಕಿಶಯನನೆ
ವಾಸವಿಯ ರಥವ ನಡೆಸಿದೆ ನಡೆಸಿದಂಥ ಶ್ರೀನಿ-
ವಾಸ ನೀನೆಮಗೆ ದಯಮಾಡು ೭

ಎನ್ನಲ್ಲಿ ನೀನಿದ್ದು ನಿನ್ನಗುಣ ಬಹುರೂಪ-
ವನ್ನು ತಿಳಿಸವಲೆ ಇರುವ್ಹೋರೆ ಇರುವ್ಹೋರೆ ನೀನು ಪ್ರ-
ಸನ್ನನಾಗೆನಗೆ ದಯಮಾಡು ೮

ಕಾಲ ಕಾಲಕೆ ನಿನ್ನ ನಾಮವನು ನಾಲಿಗೆ
ವ್ಯಾಲಿಟ್ಟು ನಿನ್ನ ನೆನೆವಂತೆ ನೆನೆವಂತೆ
ಮಾಡಯ್ಯ ಆನಂದವರದ ಅನಿರುದ್ಧ ೯

ಕಾಮಕ್ರೋಧವು ಮದ ಮಾತ್ಸರ್ಯ ಲೋಭಗಳು
ಮೋಹ ಮಡುವಿನಲಿ ಮುಣುಗಿದೆ ಮುಣುಗಿದೆನೊ
ಎನ್ನ ಕೈ ನೀನೆ ಪಿಡಿದೆತ್ತಿ ಕರೆದೊಯ್ಯೊ ೧೦

ಐದು ಮಂದ್ಯೆನ್ನಲ್ಲಿ ಐದಾರೆ ಮಾರಾಯ
ಬೈದರು ಬಿಡರೋ ಎನ್ನೀಗ ಎನ್ನೀಗ ಕಟ್ಟಿ
ಕೊಂಡೊಯ್ದು ಹಾಕುವರೊ ಯಮುನಲ್ಲಿ ೧೧

ಆರು ಮಂದ್ಯರಿಗಳು ಕ್ರೂರ ಶತ್ರುಗಳುಂಟು
ಘೋರಬಡಿಸುವರೊ ಅನುಗಾಲ ಅನುಗಾಲ
ದುರ್ವಿಷಯ ತಾವೆನಗೆ ಕಲಿಸಿ ದಣಿಸೋರು ೧೨

ಹತ್ತು ಮಂದಿ ಯೆನ್ನ ಸುತ್ತಮುತ್ತಿರುವರೊ
ಕತ್ತಲು ಕೂಪ ಭವದೊಳು ಭವದೊಳಗೆ ಬಳಲುವೆನು
ಚಿತ್ತಕ್ಕೆ ತಂದು ದಯಮಾಡು ೧೩

ಸಂಚಿತಾಗಾಮಿಗಳ ಮುಂಚೆ ದಹಿಸಿ ಈ ಪ್ರ-
ಪಂಚವನು ಬಿಡಿಸೊ ಪರಮಾತ್ಮ ಪರಮಾತ್ಮ ನೀಯೆನ್ನ
ವಂಚನಿಲ್ಲದಲೆ ಸಲಹೈಯ್ಯ ೧೪

ಜ್ಞಾನ ಭಕ್ತಿ ಗಾನ ವೈರಾಗ್ಯ ಭಾಗ್ಯಗಳು
ಜಾನಕಿರಮಣ ಜಗದೀಶ ಜಗದೀಶ ಜನಕನ
ಜಾಮಾತ ನೀನೆ ತಿಳಿಸಯ್ಯ ೧೫

ದ್ವಾಸುಪರುಣನಂತೆ ಈ ಶರೀರದೊಳಿದ್ದು
ಏಸೇಸು ಜನ್ಮಕ್ಕಗಲವೆ ಅಗಲವಂತಿದ್ದು ಉ-
ದಾಸೀನವ ಮಾಡೋದೊಳಿತಲ್ಲ ೧೬

ಇಂದುಕುಲಜಾತ ನಿನ್ನೊಂದಿಕೊಂಡಿದ್ದು
ಎಂದೆಂದಿಗು ಬಿಡವೆ ಗೆಳೆತನ ಗೆಳೆತನವಿದ್ದಲ್ಲಿ
ಸಂದೇಹವ್ಯಾಕೊ ಸಲಹಲು ೧೭

ಮುಕ್ತಿದಾಯಕ ನಿನ್ನ ಭಕ್ತರೇಸುಮಂದಿ
ಹೆತ್ತಾಯಿಸುತರೇನವರೆಲ್ಲ ನಾ ಹುಟ್ಟದೆನೆ
ಮತ್ತೆ ಮಲತಾಯಿ ಉದರದಿ ೧೮

ಶ್ರೀಶನೆ ಕೇಳ್ ನಿನ್ನ ದಾಸರಂಗಳದಲ್ಲಿ
ಬೀಸಿ ಬಿಸಾಕೊ ಎನ್ನನು ಎನ್ನ ಹರಿದಾಸರ
ದಾಸತ್ವಯೆನಗೆ ಕೊಡಿಸಯ್ಯ ೧೯

ಅಂಬರೀಷ್ವರದ ನಿನ್ನ್ಹಂಬಲೆನಗಿರಲಯ್ಯ
ಬಿಂಬ ಮೂರುತಿಯೆ ಬಿಡದೆನ್ನ ನಿನ್ನೂರಲ್ಲಿ
ಇಂಬುಕೊಟ್ಟೆನ್ನ[ಅ]ಲ್ಲಿರಿಸಯ್ಯ ೨೦

ಕಡಿದು ಹೊಡೆದು ಬಯ್ದು ಬಂದು ಕಾಲಿಂದೊದ್ದ-
ರ್ಬಿಡಿಯದೆ ಅವರ ಅಪರಾಧ ಅಪರಾಧವೆಣಿಸದಿರೆ
ನಡೆದರೊ ನಿನ್ನ ಪುರಕಾಗ ೨೧

ಪುಟ್ಟ ಪ್ರಹ್ಲಾದ ಧ್ರುವ ಕೊಟ್ಟರೆಷ್ಟು ಭಾಗ್ಯ
ಕಷ್ಟಕ್ಕೆ ಬಂದು ಒದಗಿದೆ ಒದಗಿ ಬಂದವರ
ಆಪತ್ತು ಬಂಧನ ಬಿಡಿಸಿದೆ ೨೨

ತನ್ನ ಮಗನ ಕರೆಯೆ ಎನ್ನ ಕರೆದನೆಂದು
ನಿನ್ನ ದೂತರನು ಕಳಿಸಿದೆ ಕಳಿಸಿದ್ಯಜಮಿಳಗೆ
ಮನ್ನಿಸಿ ಕೊಟ್ಟ್ಯೊ ನಿನಲೋಕ ೨೩

ತಿರುಕ ತಂದವಲಕ್ಕಿ ಕರಕರನೆ ನೀ ಮುಕ್ಕಿ
ದೊರೆತನವ ಕೊಟ್ಟ್ಯ ದಾರಿದ್ರ್ಯ ದಾರಿದ್ರ್ಯ ಕಳೆದದ್ದು
ಅರಿಕಿಲ್ಲವೇನೊ ಜನಕೆಲ್ಲ ೨೪

ನಿಲ್ಲಬೇಕೆಂದಿಟ್ಟ ಕಲ್ಲು ಕೊಟ್ಟವಗೆ ಕೈ-
ವಲ್ಯವನು ಕೊಟ್ಟ್ಯೆ ಕರುಣಾಳು ಕರುಣಾಳು ಬುಕ್ಕಿಟ್ಟ
ಮಲ್ಲಿಗೆಯ ಮಾಲೆಗೊಲಿತೀಯೊ ೨೫

ಕರೆದು ಕಂಸಗೆ ಕೊಟ್ಟು ಕೊಲಿಸಬಂದ-
ಕ್ರೂರ[ಗೆ] ನದಿಯಲ್ಲಿ ನಿನ್ನ ನಿಜರೂಪ ನಿಜರೂಪ
ತೋರಿದ್ದು ಇದುಯೇನು ನಿನ್ನ ಮಹಿಮೆಯು ೨೬

ಗಂಧಕ್ಕೆ ಒಲಿದು ಕುಬ್ಜೆಯ ಡೊಂಕನೆ ತಿದ್ದಿ
ಸುಂದರಿಯ ಮಾಡಿ ಸುಗುಣನೆ ಸುಗುಣನೆ ನೀನಾಕೆ-
ಯಂಗಸಂಗ್ಯಾಕೆ ಬಯಸಿದಿ ೨೭

ಕಲ್ಲಾದಹಲ್ಯೆಯನು ಕಡು ಚೆಲ್ವೆಯನು ಮಾಡಿ
ಎಲ್ಲಿ ಮಲಗಿದ್ದ ಮುಚುಕುಂದ ಮುಚುಕುಂದನ ಗುಹೆ-
ಯಲ್ಲೆ ಕೈವಲ್ಯ ಕೊಡಹೋದ್ಯೊ ೨೮

ಮಗ್ಗವನೆ ಹಾಕಿ ಮಾರುಬಟ್ಟೆ ನೇದಿಲ್ಲ
ರೊಕ್ಕವನೆ ಕೊಟ್ಟು ತರಲಿಲ್ಲ ತರಲಿಲ್ಲ ದ್ರೌಪದಿಗೆ
ಲೆಕ್ಕಿಲ್ಲದ್ವಸ್ತ್ರ ಉಡಿಸಿದಿ ೨೯

ಸಂಗ್ರಾಮದಿ ಬಂದಂಥ ಸರ್ಪಬಾಣವ ನೋಡಿ
ಉಂಗುಷ್ಟದಿಂದ ರಥವನು ರಥವ ನೆಲಕೊತ್ತಿ
ಧನಂಜಯನ ಪ್ರಾಣ ಉಳುಹಿದಿ ೩೦

ತಂಬೂರಿ ವೀಣಾಗಾಯ್ನ(ಯನ?)ದಲಿ ಕ್ಷಣಬಿಡದಂತೆ
ಸಂಭ್ರಮದಿಂದ ಪಾಡುತ್ತ ಪಾಡಿ ಕೊಂಡಾಡಿ ನಾರಂದ-
ರಾನಂದ ಪಡೆದರು ೩೧

ತರಳ ರೂಪದಿ ಕಾಲಿಗ್ಸರಳ ಕಟ್ಟಿಸಿಕೊಂಡು
ಎಳೆದುಕೊಂಡ್ಹೋಗಿ ಯಮಳರ ಯಮಳಾರ್ಜುನ-
ನರ ಕಿತ್ತಿ ಕಳುಹಿದೆಯೊ ನಿನ್ನ ಪುರಕಾಗ ೩೨

ಆನೇನು ಕೊಡುವೆನೊ ನಾನೇನು ಬಿಡುವೆನೊ
ನೀನೇನು ಕರುಣಾನಿಧಿಯಲ್ಲಿ ನಿಧಿಯಲ್ಲವೆ ಭಕ್ತಾ-
ಧೀನೆಂದು ನಿನ್ನ ಹೊಗಳುವೆ ೩೩

ಅಡಿಗೆ ಮಾಡುವನ ಕೈಹಿಡಿದ ಹುಟ್ಟಿಸಂತೆ
ನಡೆಯದೊ ನಮ್ಮ ಸ್ವಾತಂತ್ರ್ಯ ಸ್ವಾತಂತ್ರ್ಯ ಮೂಲೋಕ-
ದೊಡೆಯ ನೀ ಕರ್ತೃ ಜಗಕೆಲ್ಲ ೩೪

ಆದಿಪುರುಷನೆ ನೀನನಾದಿಕಾಲದಿ ಓರ್ವ
ವೇದವೇದಾಂತ ಯದುನಾಥ ಯದುನಾಥ ಎನ್ನ ಯಮ-
ಬಾಧೆ ಬಿಡಿಸೋದಕೆ ನೀ ಬಾಧ್ಯ ೩೫

ಆರ್ಯ ನೀನೊಬ್ಬ ನಿನಗಾರ್ಯರಿನ್ನುಂಟೇನೊ
ಆರಾರು ನಿನ್ನ ಅರಿಯರು ಅರಿಯರೊ ಜಗನ್ನಾಥ
ದಾರ ಸುತ ದಾರ ರೂಪಾದಿ ೩೬

ಅಣುವೊಳಗು ನೀನೆ ಪರಮಾಣುವಿನೊಳಗೂ ನೀನೆ
ಘನವಾದ ರೂಪ ಗಗನಕ್ಕೆ ಗಗನಕ್ಕೆ ಬೆಳೆದದ್ದು ಬಲಿ ಬಲ್ಲ
ನಿನ್ನ ಮಹಿಮೆಯ ೩೭

ಘಟದ ಒಳಗಿದ್ದೆ ವಟಬೀಜದೊಳು ನೀಸಿದ್ದು
ಪಟ ತಂತಿಯೊಳಗೆ ನೀ ವ್ಯಾಪ್ತ ನೀ ವ್ಯಾಪ್ತ ಕಂಬದ
ಜಠರದೊಳಗಿದ್ದ್ಯೊ ಜಗದೀಶ ೩೮

ಲೋಕಪಾವನೆ ಗಂಗೆ ನಖದಿಂದ ಉದಿಸಲು
ನಾಲ್ಕುಮುಖ ಬ್ರಹ್ಮ ನಾಭಿಂದ ನಾಭಿಂದ ಹದಿನಾಲ್ಕು
ಲೋಕ ಸಾಕುವೊ ಸರ್ವೇಶ ೩೯

ಅಂತರಾತ್ಮಕ ನಿನ್ನಂಥ ಗುಣಮಹಿಮೆ
ಎಂಥೆಂಥವರು ನೋಡಿ ತಿಳಿಯರು ತಿಳಿಯರೊ ನಿನ್ನ ನ-
ಮ್ಮಂಥ ಮೂಢರಿಗೆ ವಶವೇನೊ ೪೦

ಮೂರು ಕಣ್ಣಲಿ ರುದ್ರ ನೋಡಿ ನಿನ ತಿಳಿಯದೆ ಹೋಗಿ
ಶರಧಿಯಲಿ ತಪವಿದ್ದು ತಪವಿದ್ದು ಪಡೆದನೊ ತಾನು
ಪರ್ಯಂಕ ಪದವಿಯ ೪೧

ಸಾಸಿರ ಮುಖದಿಂದ ಶೇಷ ತಿಳಿಯದೆ ನೋಡಿ
ಪಾತಾಳಕ್ಹೋಗಿ ನಿನಪಾದ ನಿನಪಾದ ಪದ್ಮದ
ರೇಕುಗಳ ಎಣಿಸುತ್ತಿರುವೋನು ೪೨

ಒಂದೆರಡು ಕಣ್ಣು ಸಾಲದು ಎಂದು
ಇಂದ್ರ ವೈತುಂಬ ನೇತ್ರಗಳ ಪಡೆದನು ಪಡೆದು ಸ್ವರ್ಗದಲಿ ಉ-
ಪೇಂದ್ರ ನಿನ್ನ ನೋಡುತ್ತಿರುವೋನು ೪೩

ಎಂಟು ಕಣ್ಣಲಿ ಬ್ರಹ್ಮ ನೋಡಿ ನಿನ ತಿಳಿಯದೆ
ಕಂಡ ಎಡೆಯಲ್ಲಿ ಕೌಸ್ತುಭ ಕೌಸ್ತುಭವಾಗಿ ವೈ-
ಕುಂಠ ಪತಿ ನಿನ್ನ ಒಲಿಸುವ ೪೪

ಪ್ರಳಯ ಕಾಲದಿ ಜನರ ಸುಳಿವಿಲ್ಲದಲ್ಲಿ ಕಿರು ಜೆ-
ರಳ ನಖ ಗುಣಗಳೆಣಿಸುತ್ತ ಎಣಿಸುತಲಿ ಮಾಲಕ್ಷ್ಮಿ
ತಿಳಿಯದಲೆ ನಿನ್ನ ಗುಣಗಳ ೪೫

ಅನಂತಾಸನ ಶ್ವೇತದ್ವೀಪ ಭೂವೈಕುಂಠ ಮೂರು
ಸ್ಥಾನದಲಿ ಮುರವೈರಿ ಮುರವೈರಿ
ನಿನ ಸೇವೆ ಮಾಡಿ ಮಾಲಕ್ಷ್ಮಿ ದಣಿಯದೆ ೪೬

ಶ್ರೀಭಾಗ ಭೂಭಾಗ ದುರ್ಗಾ ಭಾಗದಲಿ
ಶ್ರೀಭೂದೇವಿ ನಿನ್ನ ಸರ್ವಾಂಗ ಸರ್ವಾಂಗದಲ್ಲಿ ಕೊಟ್ಟಾ-
ಲಿಂಗನಿಂದ ಒಲಿಸೋಳು ೪೭

ಎಲ್ಲ ಪದಾರ್ಥದೊಳಗಲ್ಲಲ್ಲಿ ತಾನಿದ್ದು
ಮಲ್ಲರಂತಕನ್ನ ಮನೆ ಸೇವೆ ಮನೆಯ ಸೇವಕಳಂತೆ
ಘಲ್ಲು ಘಿಲ್ಲೆಂದೋಡಾಡುತ್ತ ೪೮

ಸಿರಿದೇವಿ ನಿನ್ನ ಪಟ್ಟಣದಲಿ ಭಕ್ತಿಯಿಂ-
ದ್ವಿರಜನದಿಯಾಗಿ ಹರಿದಳೊ ಹರಿದಳೊ ಛತ್ರ ಚಾ-
ಮರವು ತಾನಾಗಲ್ಲಿರುವೋಳು ೪೯

ಜೋಲಿ ಮಂಚಗಳಾಗಿ ಶಾಲು ಶಾಕೂತ್ಯಾ-
ಗಿ ಲೋಡು ತಲೆಗಿಂಬು ತಾನಾಗಿ ತಾನಾಗಿ ಸಿರಿ ನಿಂತು
ಕಾಲಸೇವೆಯಲಿ ಕಮಲಾಕ್ಷಿ ೫೦

ರತ್ನ ವೈಜಯಂತಿ ಮುತ್ತು ಮಾಣಿಕ್ಯದ್ವಜ್ರ-
ದ್ವಸ್ತ್ರ ಶ್ರೀತುಳಸಿ ಕಮಲವು ಕಮಲಮಾಲ್ಯಾಗಿ ಶ್ರೀ-
ವತ್ಸದಲಿ ನಲಿಯುತ್ತಿರುವೋಳು ೫೧

ದೇಶಕಾಲಕೆ ಸಮಳು ಗುಣಕೆ ಅಸಮಳು ನಿಜ-
ದಾಸಿಯಂತಿದ್ದು ನಿನಸೇವೆ ನಿನಸೇವೆ ಮಾಡಿ ಉ-
ಲ್ಲಾಸದಲಿ ನೋಡುತಿರುವೋಳು ೫೨

ಲಕ್ಷ್ಮಿಯೆರಡಕ್ಷ ಸಾಲದಲೆ ಶ್ರೀ ಭೂ ದುರ್ಗೆ
ಸಾಕ್ಷಾತ ಮೂರುರೂಪಾಗಿ ರೂಪಾಗಿ ನಿಂತು ಅ-
ರಕ್ಷದಲಿ ನೋಡುತ್ತಿರುವೋಳು ೫೩

ಎಷ್ಟು ನೋಡಿದರು ಮನ ತೃಪ್ತಿಯಾಗದಲೆ
ನಿನ್ವಕ್ಷಸ್ಥಳದಲ್ಲಿ ತಾ ಹೊಂದಿ ತಾ ಹೊಂದಿಕೊಂಡಿದ್ದು
ನಿತ್ಯಸುಖಪೂರ್ಣಳೆನಿಸೋಳು ೫೪

ಸಾಲೋಕ್ಯ ಸಾಮೀಪ್ಯ ನಿನ್ನ ಸಾರೂಪ್ಯದಲಿ
ಸಾಯುಜ್ಯಪದವಿ ಪಡೆವಂಥ ಪಡೆವಂಥ ಮುಕ್ತರ
ಸಾಧನೆಗಳೆಷ್ಟೊ ತಿಳಿಯದು ೫೫

ತಲೆಯೂರಿ ತಪವಿದ್ದು ತರಗಿನೆಲೆಗಳ ಮೆದ್ದು
ಹರಿ ನಿನ್ನ ಧ್ಯಾನದೊಳಗಿದ್ದು ಒಳಗಿದ್ದವರ ಹೃದಯದೊಳು
ಮಿಂಚಿನಂತೆ ಹೊಳೆವೆಯೊ ೫೬

ನಿತ್ಯಮುಕ್ತನೆ ನಿನ್ನ ಮುಕ್ತಸ್ಥಾನದಲಿ ಶಿವ
ಪತ್ರದಂತಿಷ್ಟು ಸ್ಥಳವನು ಸ್ಥಳವ ಕೊಟ್ಟರೆ ಸಾಕು
ಚಿತ್ತಸೊಸ್ತಾ(ಸ್ವಸ್ಥವಾ?) ಗಲ್ಲಿರುವೆನು ೫೭

ಅಚ್ಯುತನ ಕರುಣೆಂಬೊ ನಿಚ್ಚಣಿಕೆಯನೆ ಮಾಡಿ
ಹತ್ತ್ಯೋ ಹರಿದಾಸರವರಂತೆ ಅವರಂತೆ ಜೀರಿಗೆ-
ಯಷ್ಟು ದಯ ನೀಡೊ ಎನ್ನಲಿ ೫೮

ಹೊತ್ತು ಹೋಗುತಲಿದೆ ಮೃತ್ಯು ಕೂಗುತಲಿದೆ
ವ್ಯರ್ಥವಾಗುವುದೊ ಈ ಜನ್ಮ ಈ ಜನ್ಮ ನಿನ ನಾಮ
ಎತ್ತರವು ಎನಗೆ ನಿಲುಕದು ೫೯

ಶೂರಪುತ್ರನ ಸುತಗೆ ಸೂರ‍್ಯಾಡೊ ನಿನ್ನ ದಯ
ಸಾರ‍್ಯವಾಗುವುದೊ ನಿನಲೋಕ ನಿನಲೋಕ ಸಾಮ್ರಾಜ್ಯ
ದಾರಿನ್ನು ಬಯಸದಿರುವೋರು ೬೦

ವಸುದೇವಸುತ ಭಕ್ತರೊಶವಲ್ಲ ನಿನ್ನ ಮುತ್ಯ-
ನ್ನೆ ಸರುಮಾತ್ರಕ್ಕೆ ಎನ್ನಲ್ಲಿ ಎನ್ನಲ್ಲಿ ಮಾಡದಿರು
ಹಸುಗೂಸಿನಂತೆ ನೋಡೆನ್ನ ೬೧

ಶಂಬರಾರಿಯ ಜನಕ ನಂಬಿದ್ದೆ ನಾ ನಿನ್ನ
ಡೊಂಬ ತನಸುತನ ಭರದಿಂದ ಭರದಿಂದ ತೂಗುವನು
ಕುಂಭಿಣಿಗೆ ಬೀಳೋತೆರನಂತೆ ೬೨

ಕುತ್ತಿಗೆಯ ಕೊಯ್ದುಲಗು ಹೊಟ್ಟೆಯೊಳಗ್ಹಾಕಿ
ನೆತ್ತರವ ಸೆರೆದಿದ್ದ ಜನರಿಗೆ ಜನರಿಗೆ ತೋರುವನು
ಅತ್ಯಂತ ಕರುಣ ಅವಗಿಲ್ಲೆ ೬೩

ಮಾಯಾವಿದ್ಯವ ಮಾಡಿ ತೋರುವನು ಉ-
ದರಕ್ಕೆ ನೀನಲ್ಲೊ ಸ್ವಾಮಿ ಅವನಂತೆ ಅವನಂತೆ ಅಲ್ಲೆನ್ನ
ಕಾರ‍್ಯಾಭಿಮಾನ ನಿನದಲ್ಲೆ ೬೪

ಹುಟ್ಟಿಸ್ಹುಟ್ಟಿಸಿ ತಾಯಿ ಹೊಟ್ಟಿಯೊಳಗ್ಹಾಕೆನ್ನ
ಕಷ್ಟ ಬಡಿಸುವ್ಹೋರೆ ಕರುಣಾಳು ಕರುಣಾಳು ನಿನಗೆ ಪು-
ರುಷಾರ್ಥವೇನ್ಹೇಳೊ ಇದರಿಂದ ೬೫

ತಂದೆ ತಾಯಿ ಬಂಧು ಬಳಗ ಬಾಂಧವರೆಲ್ಲ
ಹಿಂದೆಷ್ಟೊ ಮುಂದೆ ಎಣಿಕಿಲ್ಲ ಎಣಿಕಿಲ್ಲದವರ ನನ್ನವ-
ರೆಂದು ತಿಳಿದು ಫಲವಿಲ್ಲ ೬೬

ಜೀವ ಜೀವಕು ಭೇದ ಜೀವ ಜಡಕೂ ಭೇದ
ಜಡಜಡಕೆ ಭೇದ ನಿನಗಿನ್ನು ನಿನಗೆ ಭೇದಾದ್ಯೆನ್ನೊಳು
ಭೇದಬುದ್ಧಿ ಬ್ಯಾಡಿನ್ನು ೬೭

ಅನ್ನಮಯ ಪ್ರಾಣಮಯ ಆನಂದಮಯ ನೀನೆ
ನಾನೆಂದ ಮಾತು ನಿಜವೆಂದು ನಿಜವೆಂದು ತಿಳಿದು
ಜ್ಞಾನಾನಂದ ಕೊಟ್ಟು ಸಲಹಯ್ಯ ೬೮

ಎಂಬತ್ತುಕೋಟಿ ನಾಲ್ಕುಲಕ್ಷ ಜೀವಿಗ-
ಳಿಂಬ್ಹ್ಯಾಗೆ ನಿನಗೆ ದೊರಕಿತೊ ದೊರಕಿತೊ ಸ್ಥಾವರ
ಜಂಗಮದಲ್ಹ್ಯಾಗಿರುವೆಯೊ ೬೯

ಜನನ ಮರಣವು ಶುಕ್ಲ ಶೋಣಿ ಸಂಬಂಧ ಜರೆ
ಜನ್ಮಕರ್ಮಗಳು ನಿನಗಿಲ್ಲ ನಿನಗಿಲ್ಲ ಸಂಸಾರ ಬವಣೆ
ನಿನಗುಂಟೆ ಬಹು ದೂರ ೭೦

ವಿಷದ್ಹಾಲು ಕುಡಿದು ನೀ ವಿಷದ ಮಡುವನು ಕಲಕಿ
ವಿಷದನುಜೆಕೂಡ ವಿನಯದಿ ವಿನಯ ಸಂಭ್ರಮದಿಂದ
ವಿಷಮಂಚದಲ್ಲೆ ಮಲಗುವಿ ೭೧

ಸತ್ಯ ಸಂಕಲ್ಪನೆ ಸತ್ಯ ಪ್ರತಿಜ್ಞನೆ
ಸತ್ಯಭಾಮೆಯರ ಅರಸನೆ ಅರಸು ನಿನ್ನಲಿ ಜ್ಞಾನ
ಸತ್ಯವಾಗೆನಗೆ ಕೊಡುಕಂಡ್ಯ ೭೨

ನಾರಾಯಣನೆಂಬೊ ನಾಲ್ಕು ಅಕ್ಷರಗಳು
ನಾಲಿಗೆಲ್ಲೈನಗೆ ಬರೆವರೆ ಬರೆದರೋದಿಕೊಂಬೆ
ಬಾರೊ (ಬರ್‍ಯೋ ?) ಬಾಯಲ್ಲಿ ಭಗವಂತ ೭೩

ಹರದಾರಿ ನಡೆವುದಕೆ ಎನಗೆ ಸಾಮರ್ಥಿಲ್ಲ
ಹರಿದಾರಿ ಹ್ಯಾಗೆ ಹಿಡಿಯಲಿ ಹಿಡಿಯಲಿ ನೀ ಮುಂದೆ
ನಡೆಯೆನ್ನ ಸಂಗ ಬಿಡದಂತೆ ೭೪

ಕಾಲಿದ್ದು ನಿನಯಾತ್ರೆ ಕರವಿದ್ದು ನಿನಸೇವೆ
ಬಾಯಿದ್ದು ನಿನ್ನ ಭಜನೆಯು ಭಜನೆಮಾಡದಲಿದ್ದ-
ರ್ಹಾಳುಬಾವಿಗೆ ಸರಿಯಲ್ಲೆ ೭೫

ಕಣ್ಣು ಕಿವಿಯು ನಾಲಿಗ್ಯಿನ್ನಿದ್ದರೇನು ಫಲ
ನಿನ್ನ ಮಹಿಮೆಗಳ ತಿಳಿಯದೆ ತಿಳಿದು ನೋಡದಲಿದ್ದು
ಮಣ್ಣುಗೊಂಬ್ಯಂತೆ ನಾನಲ್ಲೆ ೭೬

ಮಣ್ಣುಗೊಂಬ್ಯಾದರು ಪುಣ್ಯ ಪಾಪಗಳಿಲ್ಲ
ಎನ್ನ ಯಮನೂತರೆಳೆವ್ರೋರು ಎಳೆವ್ರೋರೊ ನಿನ್ನೆರಡು
ಕಣ್ಣಿಂದ ನೋಡೊ ಕಮಲಾಕ್ಷ ೭೭

ಕಂಗಳಿಂದಲಿ ನೋಡು ಕರುಣದಲಿ ಮಾತಾಡು
ಲಿಂಗವನೆ ಒಡೆದು ಸೂರ್ಯಾಡು ಸೂರ್ಯಾಡು ನಿನ್ನವರ
ಸಂಗವನೆ ಕೊಟ್ಟು ಸುಖ ನೀಡು ೭೮

ಭಾಗೀರಥೀಜನಕ ಭಯನಿವಾರಣ ನಿನ್ನ
ಭಾಗಕ್ಕೆ ಬಂದು ನಾ ಬಿದ್ದೆ ನಾ ಬಿದ್ದೆ ನಿನ್ನ ಚಿತ್ತ
ಕ್ಹ್ಯಾಗೆ ಬಂದಂತೆ ಮಾಡಿನ್ನು ೭೯

ಫಾಲಲೋಚನಪ್ರಿಯನೆ ಪಾಲಾಬ್ಧಿಶಯನ ನಿನ್ನ
ಪಾಲಿಗೆ ಬಂದು ಪೊರೆಯೆಂದು ಪೊರೆಯೆಂದು ನಿನ ಕಮಲ
ಕಾಲಿಗೆ ಫಾಲ ಇಡುವೆನು ೮೦

ಸ್ವರ್ಗ ಬೇಡುವುದಿಲ್ಲನುಗ್ರ[ಹ]ದಾಪೇಕ್ಷ್ಯಂಟು
ಸುಜ್ಞಾನಿಗೊಡೆಯ ಸುರರ್‍ವಂದ್ಯ ಸುರರ್‍ವಂದ್ಯಯೆನ್ನ ಶಿರವ
ಬಗ್ಗಿಸುವೆ ನಿನ್ನ ಚರಣಕ್ಕೆ ೮೧

ಭೂರಮಣ ನಿನ್ನ ಭೂದೇವಿ ಕದ್ದೊಯ್ದ ಬಂ-
ಗಾರಲೋಚನನ ಮಡುಹಿದೆ ಮಡುಹಿ ನೀ ಅವನಲ್ಲಿ
ಮಾಡಿದಿನ್ಹ್ಯಾಗೆ ಕರುಣವ ೮೨

ಶ್ರೀರಮಣ ನಿನ್ನ ಸೀತೆಯ ಕದ್ದ ಚೋರನ್ನ
ಮೂರು ಮ್ಯಾಲೇಳು ಶಿರವನು ಶಿರವ ಚೆಂಡಾಡಿ ದಯ
ಸೂರೆ ಬಿಟ್ಟ್ಯ್ಹಾಂಗ್ಹೇಳವನಲ್ಲಿ ೮೩

ದುರ್ಗೆರಮಣನೆ ನಿನ್ನ ರುಕ್ಮಿಣಿಗೆ ಗಂಡನೆಂ-
ದ್ಹಿಗ್ಗಿಲೆ ಕುಳಿತ ಶಿಶುಪಾಲ ಶಿಶುಪಾಲನಂ(ನಹಂ?)ಕಾರ ಮರ್ದಿ-
ಸಿದೆ ಒಂದು ಕ್ಷಣದಾಗೆ ೮೪

ಮೂರು ಜನ್ಮದಿ ನಿನ್ನ ಮುದ್ದು ಸತಿಯಳ
ದ್ರೋಹ ಮಾಡಿದ್ದ ಮೂಢ ಅಸುರರ ಅಸುರರನೆ
ಕರೆದು ಮಹದ್ವಾರದಲ್ಲ್ಯಾಗೆ ನಿಲಿಸಿದೆ ೮೫

ಕನಕಕಶ್ಯಪ ಕುಂಭಕರ್ಣ ದಂತವಕ್ತ್ರ
ಎಣಿಕ್ಯಿಲ್ಲದಂಥ ಅಪರಾಧ ಅಪರಾಧ ಅವರಲ್ಲಿ
ಎಣಿಸದಲೆ ತಪ್ಪು ಕ್ಷಮಿಸಿದೆ ೮೬

ಗೋಪಸುತನಾಗಿ ಸಾಂದೀಪನ್ವಲ್ಲಭೆಗೆ ಸಂ-
ತಾಪವನು ಕಳೆದು ಸುತರನು ಸುತರ ತಂದಿಟ್ಟೆ ನಿ-
ನ್ನ ಪಾದಮಹಿಮೆಗೆಣೆಯಿಲ್ಲ ೮೭

ಮಡಿದ್ಹೋದ ಮಕ್ಕಳನೆ ಕೊಡುವೆನೆಂದಾ
ಪಾರ್ಥರೊಡಗೂಡಿ ನಿನ್ನ ಪುರದಿಂದ ಪುರದಿಂದ ತಂದು ದ್ವಿಜಗೆ
ಸಡಗರದಿ ಕೊಟ್ಟ್ಯೋ ಸುತರನು ೮೮

ಆರು ಮಂದಿ ಸುತರ ತೋರಿ ದೇವಕಿಗೆ
ನೀನುಂಡ ಮೊಲೆಯನುಣಿಸಿದೆ ಉಣಿಸಿ ಅವರಿಗೆ
ಮುಕ್ತಿ ಆನಂದ ಕೊಟ್ಟು ಕಳಿಸಿದೆ ೮೯

ಗೋಕುಲದೊಳಗ್ಹುಟ್ಟಿ ಆಕಳ್ಹಿಂಡನು ಕಾಯ್ದು
ಗೋಪಾಲರೊಡನೆ ಕೊಳಲೂದಿ ಕೊಳಲೂದಿ
ಬೆಣ್ಣೆ ಮೊಸರ ಕಳ್ಳನೆಂದು ಹೆಸರಾದೆ ೯೦

ಬಂಡಿ ಚೂರ್ಣವ ಮಾಡಿ ಪುಂಡ ಶಕಟನ
ಕೊಂದು ಹಿಂಡುದೈತ್ಯರ ಶಿರವನು ಶಿರವ ಚೆಂಡಾಡಿ ಭೂ-
ಮಂಡಲದ ಭಾರನಿಳುಹಿದ್ಯೊ ೯೧

ಬೆಟ್ಟದನ್ನವನುಂಡು ಬೆಟ್ಟಲಿ ಗಿರಿನೆತ್ತಿ
ಶಕ್ರನ್ನ ಮದವ ಮುರಿದೆಯೊ ಮುರಿದು ಋಷಿಪತ್ನಿಯರು
ಕೊಟ್ಟನ್ನ ಉಂಡು ಬಲಿತೆಯೊ ೯೨

ಬಾಲೇಯರಿಟ್ಟಂಥ ಸೀರೆ ಕುಪ್ಪಸ ಕದ್ದು
ಲೀಲಿಂ(ಲೆಯಿಂ ?)ದ ನೀನು ಮರನೇರಿ ಮರನೇರಿ ಅವರ ಮಾನವ
ಕಾಯ್ದು ಕೊಟ್ಟ್ಯೊ ಉಡುಗೊರೆ ೯೩

ಕಂಜಾಕ್ಷಿಯರು ಮನೆಯಲಿ ಕೊಳಲೂದಿ ಮೋಹಿಸುತ
ಸಂಜೆಲಿ ಬಂದ ಸತಿಯರ ಸತಿಯರನೆ ನೋಡುತಲಿ
ಅಂಜ್ಯೋಡಿಹೋದ್ಯೊ ಅಸುರಾರಿ ೯೪

ವೃತ್ತ್ಯಾಸದಿಂದ್ವಸ್ತ್ರ ಇಟ್ಟು ಶೃಂಗಾರವಾಗಿ
ಚಿತ್ತಚಂಚಲವಾಗಿ ಅವರೆಲ್ಲ ಅವರು ಬರುತಿರೆ ನೋಡಿ
ಬಿಟ್ಟೋಡಿಹೋದ ಬಗೆಯೇನು ೯೫

ಅಡವ್ಯಡವಿ ತಿರುವು(ಗು?)ತಲಿ ಗಡಗಡನೆ ಕೇಳುತಲಿ
ನಡೆದು ಬಾಯಾರಿ ಬಳಲುತ ಬಳಲುತಲಿ ಬಂದವರ
ದೃಢಭಕ್ತಿ ನೋಡಿ ಬಲಿತೆಯೊ ೯೬

ಅಕ್ಕರದಿ ಅವರ ನಿನ್ನ ತೆಕ್ಕೆಯೊಳ್ ಬಿಗಿದಪ್ಪಿ ಬಾ-
ಲಕ್ರೀಡೆನಾಡಿ ಜಲಜಾಕ್ಷ ಜಲಜಾಕ್ಷ ನೀನು ರಾ-
ಸಕ್ರೀಡೆನಾಡಿ ಸು[1][ಖನೀಡಿ][1] ೯೭

ಇಬ್ಬರಿಬ್ಬರ ನಡುವೆ ಒಬ್ಬ ಕೃಷ್ಣನು ಆಗಿ
ನಿರ್ಭಯದಿ ಕುಣಿದ್ಯೊ ನೀಲಾಂಗ ನೀಲಾಂಗ ನಿನನೋಡಿ ಕ-
ಣ್ಗಳಬ್ಬವಾಯಿತೊ ಸುರರಿಗೆ ೯೮

ಗಂಧ ಪರಿಮಳವು ಕೇಸರಿ ಕುಂಕುಮರಿಷಿಣವು
ಕುಂದ ಕೇತಕಿಯು ಕಮಲವು ಕಮಲ ಮಲ್ಲಿಗೆ ತೆಪ್ಪ-
ದಂದದಲಿ ತೇಲುತ್ತಿರಲಾಗ ೯೯

---
1 ಖುಷೀದಿ

ಅಮರಾದಿ ಸುರರು ನಿನ್ನಾಟ ನೋಡ್ಯನಕ
ಭೇರಿ ದುಂದುಭಿ ಬಡಿಸುತ ಬಡಿಸಿ ಮಂದಾರ
ಮಲ್ಲಿಗೆ ಕುಸುಮವೃಷ್ಟಿ ಕರೆದರು ೧೦೦

ಗೋಪೇರಲ್ಲಿದ್ದ್ವಿರಹತಾಪವನು ಬಿಡಿಸಿ ನಿ-
ನ್ನ ಪುರಕ್ಕವರ ಕರೆದೊಯ್ದಿ ಕರೆದೊಯ್ದಿ ಕೃಷ್ಣ ನಿ-
ನ್ನ್ವ್ಯಾಪಾರ ನನಗೆ ತಿಳಿಯದು ೧೦೧

ಸಾಧ್ಯವಲ್ಲವೊ ಭಾಳಸಾಧ್ಯ ನಿನ್ನುಪದೇಶ
ಉದ್ಧವಗೆ ಹ್ಯಾಗೆ ದೊರಕಿತೊ ದೊರಕಿತೊ ಆತನ-
ಲ್ಲಿದ್ದಂಥ ಪುಣ್ಯಫಲವೆಷ್ಟೊ ೧೦೨

ಅಹಿಶಾಯಿ ನಿನ್ನ ಅಂತಃಕರಣ ಪ್ರೇಮಗಳು
ಸಕಲರಲ್ಲಿದ್ದು ಸಮನಾಗಿ ಸಮನಾಗಿ ಇರಲು
ವೈಷಮ್ಯ ನೈರ್ಗುಣ್ಯ ನಿನಗುಂಟೆ ೧೦೩

ತಮತಮ್ಮ ಯೋಗ್ಯತೆಯ ನೋಡದಲೆ ತಾಮಸರು
ತಮಸಿಗ್ಹೋಗುವರೊ ಈ ನಿತ್ಯ ಈ ನಿತ್ಯ-
ಸಂಸಾರಿಗುಣಿಸುವಿಯೊ ಮಿಶ್ರಫಲವನು ೧೦೪

ಸತ್ವಾದಿ ಜೀವರನೆ ಹಸ್ತವಿಡಿದು ನೀನು
ಹತ್ತಿಸುವೆ ನಿನ್ನ ಸೌಪಾನ ಸೌಪಾನವೇರಿಸಿ
ಮುಕ್ತಿಮಂಟಪಕೆ ಕರೆದೊಯ್ವೆ ೧೦೫

ಪಕ್ಷಪಾತಗಳಿಲ್ಲ ಪಕ್ಷೀಂದ್ರವಾಹನನೆ ನಿನ
ಕುಕ್ಷಿಲೀರೇಳು ಜಗವನು ಜಗವ ರಕ್ಷಿಸುವಂಥ
ಸಾಕ್ಷಾತ ವಿಷ್ಣು ಸಲಹೆನ್ನ ೧೦೬

ಸನಕಾದಿವಂದ್ಯ ನಿನ್ನ ಮನಕೆ ಬಂದುದು ಮಾಡು
ದಿನಕರಕೋಟಿಪ್ರಕಾಶ ಪ್ರಕಾಶ ಎನ್ನ ಕತ್ತಲ-
ಜ್ಞಾನಾಂಧಕಾರ ಬಿಡಿಸಿನ್ನು ೧೦೭

ಎಷ್ಟೆಷ್ಟು ನಿನಗೆ ಬಾಯ್ಬಿಟ್ಟ್ಹೇಳಿಕೊಂಬೆ ಒಂ-
ದಿಷ್ಟು ಬ್ಯಾಸರದೆ ಕೇಳಿನ್ನು ಕೇಳುತಲಿ ನಾ ಬೇಡಿ-
ದಿಷ್ಟ ಫಲ ನೀಡಿಂದಿರೆಕಾಂತ ೧೦೮

ನಾವು ನವವಿಧ ಭಕ್ತಿಯಿಂದ ನಿನ್ನ ನಾಮ
ದಾವಾಗ ಬಿಡದೆ ಸ್ತುತಿಸುತ ಸ್ತುತಿಸಿ ಕೊಂಡಾಡುತಿರೆ
ದೇವಕೀ ಸುತ ತಾನೊಲಿವೋನು ೧೦೯

ಭಕ್ತರೋದ್ಧಾರನೆಂಬಂಥ ದಾರವ ಮಾಡಿ
ಮುಕ್ತಿದಾಯಕನ ಗುಣಗಳ ಗುಣಮಣಿಯ ಪೋಣಿಸಿ
ಲಕ್ಷ್ಮಿಎಂಬ ಪದಕ ನಡುವಿಟ್ಟು ೧೧೦

ಸ್ತುತಿಮಣಿಮಾಲಿಕೆ ಕಟ್ಟಿ ಕೊರಳಿಗೆ ಹಾಕೆ ಶ್ರೀ-
ಪತಿಯು ಭೀಮೇಶಕೃಷ್ಣನು ಕೃಷ್ಣ ತಾ ಒಲಿದು ಕಾ-
ಮಿತಫಲವ ಕೊಡುವ ಕರುಣದಿ ೧೧೧

೩೩

*

ಕರಿಮುಖದ ಗಣಪತಿಯು ಚರಣಕ್ವಂದನೆ ಮಾಡಿ
ಶಾರದೆಗೆ ಶಿರಬಾಗಿ ಬೇಡಿಕೊಂಬುವೆ ನಾನು
ಒಲಿದೆನಗೆ ವರವ ಕೊಡುಯೆಂದು ೧

ಅಜ ಭವ ನಾರಂದ ಸುಜನರ್ವಂದಿತ ವಾಯು
ಮುದದಿಂದ ಮುದ್ದು ಮಾಲಕ್ಷ್ಮಿ ನಾರಾಯಣರ
ಅಂಬುಜ ಪಾದಕ್ಕೆರಗಿ ನಮೋಯೆಂಬೆ ೨

ಪದುಮನಾಭ ಹರಿಗೆ ನಿಜಭಕ್ತರಾದಂಥ
ಬುಧ ಬೃಹಸ್ಪತಿಗಳ ಕಥೆಯ ಪೇಳುವೆ ನಾನು
ಮುದದಿಂದ ಕೇಳಿ ಜನರೆಲ್ಲ ೩

ಇರುತಿದ್ದ ಬಡವ ಬ್ರಾಹ್ಮಣ ಒಂದು ಪಟ್ಟಣದಿ
ಮಡದಿ ಮಕ್ಕಳು ನಾಲ್ಕುಮಂದಿ ಸುತರು
ಸೊಸೆಯರೊಡಗೂಡಿಕೊಂಡು ಸುಖದಿಂದ ೪

ಒಬ್ಬೊಬ್ಬ ಸುತಗಿಬ್ಬಿಬ್ಬರು ಗಂಡುಮಕ್ಕಳು
ವಿಧ್ಯುಕ್ತದಿಂದ ಜಾವಳ ಜುಟ್ಟು ಉಪನಯನ
ಶುದ್ಧಾತ್ಮರಾಗಿ ಇರುತಿಹರು ೫

* ಬುಧ-ಬೃಹಸ್ಪತಿ ಹಾಡು

ಪ್ರಾತಃಕಾಲದೊಳೆದ್ದು ನಾಲ್ಕುಮಂದಿ ಸುತರು
ಗೋಪಾಳ ಜೋಳ ನಾಲ್ಕು ಸೇರು ಕಾಳು
ತಂದ್ಹಾಕೋರು ಅರ್ಧಗ್ರಾಸವನು ೬

ಮೂರು ಪಾವು ಹಿಟ್ಟು ಮುಂಜಾನೆಗೆ ಇಟ್ಟು
ಮುಂದುಳಿದ ಗ್ರಾಸ ಮುದ್ದೆ ಅಂಬಲಿ
ಕಾಸಿಕೊಂಡುಂಡು ಕಾಲಕಳೆವೋರು ೭

ಒಂದಾನೊಂದಿನದಲ್ಲಿ ಬಂದರಿಬ್ಬರು ದ್ವಿಜರು
ಮಂದಿರದ ದ್ವಾರದಲಿ ನಿಂತು ಕೂಗುತಿರೆ
ಬಂದಳೊಬ್ಬ್ಹರಿಯ ಸೊಸೆ ತಾನು ೮

ದಾರು ಬಂದವರು ನಿಮ ನಾಮವೇನೆಂದೆನುತ
ಬಾಗಿ ಶಿರಗಳನೆ ಚರಣಕ್ವಂದನೆ ಮಾಡಿ
ಭಾಳ ಭಕ್ತಿಂದ ಕರೆದಳು ೯

ದಾರಾದರೇನಮ್ಮ ಬಾಯಾರಿ ಬಳಲುತಲಿ
ಮೂರು ನಿರಾಹಾರ ಮಾಡಿ ಬಂದೆವು ನಾವು
ಆಹಾರ ನೀಡಿ ಕಳಿಸೆಂದ್ರು ೧೦

ಭಿಕ್ಷಕ್ಕೆ ಹೋದವರು ಈ ಕ್ಷಣದಿ ಬರುವೋರು
ಅರೆಕ್ಷಣ ನೀವು ತಡೆದರೆ ಜೋಳದ
ಭಕ್ಷ್ಯವನೆ ಮಾಡಿ ಬಡಿಸುವೆನು ೧೧

ಹೊತ್ತು ಭಾಳಾಯಿತು ಹಸ್ತವು ಸನ್ಮೊತ್ತಿಟ್ಟು
ತುತ್ತನ್ನ ಹಾಕಿದರೆ ಈಗ ನಾವದನುಂಡು
ತೃಪ್ತರಾಗ್ಹರಸಿ ನಡೆದೇವು ೧೨

ಮಡಿವುಟ್ಟು ಮಾಡಿದೆನು ಮಂಚಿಸುನೆಗೀಗಡಿಗೆ
ತಡೆಯದೆ ಸ್ನಾನಮಾಡಿ ಬನ್ನಿರೆಂದು
ನುಡಿದಳು ಬ್ಯಾಗ ಪತಿವ್ರತೆ ೧೩

ನಾಲ್ಕು ಭಕ್ಕರಿಯೊಳಗೆ ಎಂಟರ್ಧವನು ಮಾಡಿ
ಎಂಟುಮಕ್ಕಳಿಗೆ ಬಡಿಸೋ ಗ್ರಾಸವನು
ಸಂತೋಷದಿಂದ ಬಡಿಸುವೆನು ೧೪

ಸ್ನಾನ ಸಂಧ್ಯಾನವ ಮಾಡಿ ಬಂದೇವೆನಲು
ತಾನು ಎಡೆಮಾಡಿ ಎರಡೆರಡು ಭಕ್ಕರಿಯ
ನೀಡಿದಳು ಭಾಳ ಭಕ್ತಿಂದೆ ೧೫

ಬೆಣ್ಣೆ ಬೆಲ್ಲ ತುಪ್ಪ ಕರಣೆ ಕರಣೆ ಕೆನೆಮೊಸರು
ಸಣ್ಣನೆ ತವ್ವೆ ಆರೆದಕೊಬ್ಬರಿ ಖಾರ
ಉಣ್ಣಿರೆಂದ್ಹಾಕುತಿರಲಾಗ ೧೬

ಸಡಗರದಲವನುಂಡು ಕುಡಿದು ಮ್ಯಾಲ್ ಮಜ್ಜಿಗೆಯ
ಒಡೆದಡಿಕೆಯೆಲೆ ಕೊಟ್ಟು ಕೇಳುತ ನಿಮ್ಮ
ನಡೆವೊ ನಾವೇನು ಹೇಳೆಂದ್ಲು ೧೭

ಇಂದುಸುತ ಸುರರ ಗುರುನೆಂದು ಹೇಳುವರ್ ನಮಗೆ
ಬಂದೆವು ನಾವು ಬುಧ ಬೃಹಸ್ಪತಿಗಳು ಆ-
ನಂದವಾಯಿತು ನಮಗೆಂದ್ರು ೧೮

ಅನ್ನ ಬೇಕಾದರೆ ಅಡಿಗೆ ಒಲೆಗೋಡೆಯಲಿ ನ
ಮ್ಮನ್ನ ಬರೆದು ಪೂಜೆಮಾಡಿದರೀಗ
ಅನ್ನವನು ನಾವು ಕೊಡುವೆವು ೧೯

ಭಾಗ್ಯ ಬೇಕಾದರೆ ಬರೆದು ಪೆಟ್ಟಿಗೆಮ್ಯಾಲೆ
ಭಾಳ ಭಕ್ತಿಂದ ಪೂಜೆ ಮಾಡಿದರೆ
ಭಾಗ್ಯ ಕೊಡುವೆವೆಂದ್ಹೇಳಿ ನಡೆದರು ೨೦

ಸುಣ್ಣ ಸಾರಣೆಮಾಡಿ ಬಣ್ಣ ಚಿತ್ರವ ಬರೆದು
ಚೆನ್ನಾಗಿ ಬರೆದು ಬುಧ ಬೃಹಸ್ಪತಿಗಳನೆ
ಮನ್ನಿಸಿ ಪೂಜಿಸಿದಳಾಗ ೨೧

ಹಚ್ಚಿಟ್ಟು ಗಂಧಾಕ್ಷತೆ ಪುಷ್ಪಗಳ
ಉತ್ರಾಣಿ ಅಕ್ಕಿ ಮಂತ್ರಾಕ್ಷತೆ ಮಾಡಿ
ಭಕ್ತಿಂದೆ ಪೂಜಿಸಿದಳಾಗ ೨೨

ಗೋಪಾಳಕ್ಕ್ಹೋದಲ್ಲಿ ಗೋಧಿ ಅಕ್ಕಿ ಬ್ಯಾಳೆ
ಹಾಕುವರು ನಾಲ್ಕು ಬೀದಿಯಲಿ ಅದು ಗಂಟು
ತಾವ್ ಕಟ್ಟಿ ಹೊತ್ತ್ಹೆಗಲಲ್ಲಿ ೨೩

ಒಡಿಜೋಳ ಬೇಡಿದರೆ ಪಡಿಜೋಳ ಹಾಕುವರು
ಬಡವರು ನೀವು ಬನ್ನಿರೆಂದು ಕರೆದು
ಹಿಡಿಹಿಡಿ ರೊಕ್ಕ ಕೊಡುವೋರು ೨೪

ಭರದಿಂದ ಬಂದಾಗ ಸುರುವಿದರು ಧಾನ್ಯವನು
ಬರೆದಂಥ ಗೊಂಬೆ ನೋಡಿ ಕೇಳುತ ಅದರ
ವಿವರವನು ಹೇಳಬೇಕೆನುತ ೨೫

ಇವರು ಬುಧ ಬೃಹಸ್ಪತಿಗಳೆಂಬೊ ದೇವತೆಗಳು
ಇವರು ಬಂದೆನ್ನ ಮನೆಯಲ್ಲೂಟವನುಂಡು
ಒಲಿದ್ವರವ ಕೊಟ್ಟು ನಡೆದರು ೨೬

ಇಂಥವರ ಪುಣ್ಯದಿಂದೀ ಧಾನ್ಯ ದೊರಕಿದುವು ನಿ-
ರಂತರದಿ ನಮ್ಮ ಮನೆಯಲ್ಲಿಟ್ಟವರನು
ಸಂತೋಷದಲಿ ಪೂಜಿಸುವಣೆಂದ್ರು ೨೭

ಭಾಳ ಅನ್ನವ ಮಾಡು ಜೋಳ ಭಕ್ಕರಿ ಮಾಡು
ಬ್ಯಾಳೆಯು ತವ್ವೆ ಬೆಲ್ಲ ಪಲ್ಯವು ಬೆಣ್ಣೆ
ಮಾಡಿ ನೈವೇದ್ಯಕ್ಕಿಡುಯೆಂದ್ರು ೨೮

ದಿನದಿನದಿ ಧನಧಾನ್ಯ ಘನವಾಗಿ ಬರುವೋದು
ಮನೆಯಲ್ಲೆ ಸುಖವು ಮನಕೆ ಬಂದ ದೇಶ-
ವನು ನೋಡಿ ಬರುವೆನೆಂದಾಗ ೨೯

ಅರವಟ್ಟ ಅಷ್ಟದಾರಿದ್ರ ಹಿಂದಾಯಿತು
ಸರ್ವರಾಜ್ಯವನೆ ನೋಡಿ ಬರುವೆನೆಂದು
ನಡೆದನೊಬ್ಬಿರಿಯ ಮಗ ತಾನು ೩೦

ಚಂದ್ರವತಿ ಚಂದ್ರಶೇಖರನೆಂಬೊ ರಾಜನು
ಅಂದು ಸ್ವರ್ಗಸ್ಥನಾಗಿರಲು ರಾಜ್ಯಕ್ಕೆ
ಮುಂದೊಬ್ಬ ಅರಸು ಬರಲೆಂದ್ರು ೩೧

ಆನೆ ಕೈಯಲ್ಲಿ ವನಮಾಲೆ ಕೊಟ್ಟಿರಲಾಗ
ತಾನು ನಡೆದ್ಹೋಗಿ ಆ ದ್ವಿಜನ ಕೊರಳಲ್ಲಿ
ಹಾಕಿತಾಗಾನೆ ಹರುಷದಲಿ ೩೨

ಬಡವ ಬ್ರಾಹ್ಮಣಗಿಂಥ ಪೊಡವಿಪಾಲಕತನವು
ಕೊಡಲಾಗದಿನ್ನು ನಡೆ ನಡೆಯೆಂದೆನುತ
ದೂಡಿದರು ಊರ ಹೊರಗಾಗ ೩೩

ಮತ್ತೊಂದು ಮಾಲೆಯನು ಕೊಟ್ಟರೋಡುತ ದ್ವಿಜನ
ಕುತ್ತಿಗೆಲ್ಹಾಕಿ ತನ್ನ ಸೊಂಡಿಲಿನಿಂದ
ಎತ್ತಿಕೊಂಡೊಯ್ದಿತಾ ಗಜವು ೩೪

ಲಕ್ಷ್ಮಿ ಒಲಿದವರನಾಲಕ್ಷ್ಯಮಾಡುವುವೇನು
ಸಾಕ್ಷಾತ ದೊರೆಯು ಈತನೆಂದು ತಿಳಿದು
ಕಟ್ಟಿದರು ಪಟ್ಟವನು ಬ್ಯಾಗ ೩೫

ಅರಸಾಗಿ ನಮ್ಮವರ ಕರೆಸಿಕೊಂಬುವೆನೆಂದು
ಬರೆಸಿ ಭಕ್ತಿಯಲಿ ಬುಧ ಬೃಹಸ್ಪತಿಗಳನೆ
ಹರುಷದಲಿ ಪೂಜಿಸುತಲಿದ್ದ ೩೬

ಮತ್ತವರ ಮಂದಿರಕೆ ಬಂದ್ರು ಬುಧ ಬೃಹಸ್ಪತಿಯು
ಸ್ವಸ್ಥವೇ ಕ್ಷೇಮವೆಂತೆಂಬ ವಾರ್ತೆಯನು
ಕೇಳಿದರು ಪರಮ ಕರುಣದಲಿ ೩೭

ಕರಮುಗಿದು ಕರೆತಂದು ಚರಣಕ್ವಂದನೆ ಮಾಡಿ
ಪರಮ ಆದರದಿ ಪೀಠವ ಹಾಕಿ ಕುಳ್ಳಿರಿಸಿ
ಕ್ಷೇಮವು ನಿಮ್ಮ ಕರುಣದಿಂದೀಗ ೩೮

ಬಂದಿರಿ ದಯಮಾಡಿ ಉಂಡ್ಹೋಗೀರೆಂದೆನುತಲಿ
ಮುಂಡಿಗೆ ಫೇಣಿ ಮಾಡೋದಕೆ ಮನಸೋಧಿ
ತಂದರು ಸಕಲ ಸಾಹಿತ್ಯ ೩೯

ನಮಗೇನು ಜ್ಯಾಡವ್ವ ನವಲಿ(ಹೆ?)ಪಾಕದ ಭಕ್ಷ್ಯ
ನವನೀತ ಶಾಖ ಶಂಕ್ರಿಗಂಡನ ಅಡಿಗೆ
ಸವಿಯಾಗಿ ಮಾಡಿ ಬಡಿಸೆಂದ್ರು ೪೦

ವೃಷ್ಟಾನ್ನವು ಜೋಳದ್ಹಿಟ್ಟಿನ ಭಕ್ಕರಿಯು
ತುಪ್ಪ ಕೆನೆಮೊಸರು ತುಂಬ್ಹಾಯಿ ರುಚಿಯಾದ
ಚಟ್ಟಣಿ ಶಾಖ ಸೂಪ ಶಾಲ್ಯಾನ್ನ ೪೧

ಜೋಡಿಸಿ ಮಣೆಹಾಕಿ ಜ್ಯೋತಿಗಳನ್ಹಚ್ಚಿಟ್ಟು
ಕೂಡಿಸಿದರಾಗ ಕುಡಿಬಾಳೆಯೆಲೆಯಲ್ಲಿ
ಮಾಡಿದ್ದಡಿಗೆ ಬಡಿಸಿ ಭಕ್ತಿಂದ ೪೨

ಉಂಡು ದಕ್ಷಿಣೆಯ ತಕ್ಕೊಂಡು ತಾಂಬೂಲವನು
ಸಂಭ್ರಮ್ಮದಿಂದ ಸಾಮ್ರಾಜ್ಯನಾಳಿರಿಯೆಂದು ಆ-
ನಂದದಿಂದ್ಹರಸಿ ನಡೆದರು ೪೩

ಒಂದುದಿನ ಮಕ್ಕಳು ಬಂದು ಕೋಪದಿ ಬರೆದ
ಗೊಂಬೆಯನೆ ಅಳಿಸಿ ಅಡಿಗೆಯನೆ ಎಳೆ-
ತಂದು ಉಂಡ್ರು ನೈವೇದ್ಯ ಬಿಡದ್ಹಾಗೆ ೪೪

ಅಂದಿನ ದಿನದಿಂದ ಬಂದಿತು ದಾರಿದ್ರ್ಯ
ಒಂದುಶ್ಯಾರೆ ಕಾಳು ಹುಟ್ಟದಂತಾಯಿತು
ಮುಂದೇನು ನಮಗೆ ಗತಿಯೆಂದ್ರು ೪೫

ಊರುಬಿಟ್ಟು ಪರಊರಿಗೆ ಹೋದಲ್ಲಿ
ದಾರು ನಮ್ಮನು ತಿಳಿವೋರು ಕಟ್ಟಿಗೆಯ
ಮಾರಿ ಕಾಲವನು ಕಳೆವೋಣ ೪೬

ಊರೂರು ತಿರುಗುತಲಿ ನಿಾರಿತ್ಹನ್ನೆಡ್ವರುಷ
ಮಾರುತಲಿ ಕಾಷ್ಠ ಮಗ ದೊರೆಯು ಆದಂಥ
ಸಾರ್ಯಕ್ಕೆ ಬಂದು ಸೇರಿದರು ೪೭

ಗುಡ್ಡ ಗುಡ್ಡವ ತಿರುಗಿ ಮೊಡ್ಡ ಹೊರೆಗಳ ಕಟ್ಟಿ
ದಡ್ಡ್ಯಾದವೀಗ ನಮ್ಮ ಕೈ ಉದರಕ್ಕೆ
ದುಡ್ಡುಗಳು ದೊರೆಯುವೆಂದೆನುತ ೪೮

ಅರಸನ ಮನೆಯಲ್ಲಿ ಅರೆಸುತಿದ್ದರು ಗಚ್ಚು
ಭೂರಿಸಿ ಕಟ್ಟಿಗೆಯ ದಣಿಯುಲಾರದೆ ಗಚ್ಚು
ಅರೆಸುವೊ ಕೆಲಸಕ್ಕೊಂದಿದರು ೪೯

ಒಂದು ದಿನ ಆ ರಾಜ ಬಂದ ಬಾಜಾರಕ್ಕೆ
ತಂದೆ ತಾಯಿ ತಮ್ಮಂದಿರ್ಹೆಂಡರು
ತನ್ನ ಸತಿ ಸುತರ ನೋಡಿ ಬೆರಗಾಗಿ ೫೦

ದೊರೆ ತಾನು ತನ್ನವರ ಗುರುತು ತಿಳಿದಾಕ್ಷಣದಿ
ಅರಿತುಕೋ ಅವರ ವರ್ತಮಾನವಯೆಂದು
ಕಳಿಸಿದನು ತನ್ನ ಮಂತ್ರಿಯನು ೫೧

ದಾವ ದೇಶವು ನಿಮ್ಮ ನಾಮವೇನೆಂದೆನುತ
ಹೇಳಿದರು ತಮ್ಮ ಸಕಲ ವಾರ್ತೆಗಳೆಲ್ಲ
ಕೇಳಿ ಸಂತಾಪದಿಂದಾಗ ೫೨

ಭಾಳ ಸಾಮುದ್ರಿಕ ಬಲ್ಲ ಸಿದ್ಧಾಂತಿಯನು
ಕೇಳಿದನು ಕರೆಸಿ ಮಾರಿತ್ಹನ್ನೆರಡ್ವರುಷ
ಮೋರೆ ಭೆಟ್ಟ್ಯಾಗೋತೆರನ್ಹ್ಯಾಗೆ ೫೩

ಕೊಪ್ಪರಿಗೆ ತೈಲ ತುಂಬಿಟ್ಟು ದೇವಾಲಯದಿ
ಸುತ್ತ ನಿಂತ್ರೆಲ್ಲ ಸುಮುಖವನ್ನೆ ನೋಡಿದರೆ
ಮತ್ತಿದಕೆ ದೋಷವಿಲ್ಲೆಂದ್ರು ೫೪

ದೂತರನೆ ಕಳಿಸಿ ತನ್ನ ಮಾತಾಪಿತರ ಬಳಿಗೆ
ನೀ ತಡೆಯದ್ಹೋಗಿ ಅವರಲ್ಲಿದ್ದ ಸಕಲ
ಸಂತಾಪವನು ಬಿಡಿಸಿ ಬಾರೆಂದ ೫೫

ಹಿರಿಯಮಗ ದೊರೆಯಾಗಿಯಿರುವ್ನೋನೀವೂರಲ್ಲಿ
ಪರಮಭಾಗ್ಯ ಪುಣ್ಯಶಾಲಿಗಳು ನೀವೆಂದು
ಅರುವಿ(ಹಿ?)ದನು ಅವರಿಗ್ವಾರ್ತೆಯನು ೫೬

ಮಗನ ವಾರ್ತೆಯು ಕೇಳಿ ಮನಸಲ್ಹಿ ಗ್ಗುತಲಾಗ
ಜನನಿ ಜನಕ ತಮ್ಮಂದಿರ್ಹೆಂಡರು ತನ್ನ
ಸತಿಸುತರು ಕೇಳಿ ಹರುಷದಲಿ ೫೭

ಊರು ಶೃಂಗರಿಸಿ ಬೀದಿ ತೋರಣ ಕಟ್ಟಿ
ಸಾದು ಶ್ರೀಗಂಧ ಪರಿಮಳದ ತೊಳೆಯನು ಕೊಟ್ಟು
ಭೇರಿ ನಗಾರಿ ಹೊಯಿಸುತಲಿ ೫೮

ತೇಜಿ ಗಜ ಪಲ್ಲಕ್ಕಿ ಕಾಜಿನಂದಣ ರಥವು
ಬಾಜಾರದೊಳಗೆ ಬಾಜಾಬಜಂತ್ರಿಯು
ಊದುವೊ ಕಾಳೆ ಕಡೆಯಿಲ್ಲ ೫೯

ಎರೆಸಿಯೆಲ್ಲರಿಗ್ವಸ್ತ್ರ ಉಡಿಸಿ ಪೀತಾಂಬರವ
ಕಳಿಸಿದನು ಮುತ್ತುಮಾಣಿಕ್ಯದಾಭರಣ
ಇಡಿಸಿ ಹೂಮಾಲೆ ಮುಡಿಸುತಲಿ ೬೦

ನಡೆಮುಡಿ ಹಾಸುತಲಿ ಹಿಡಿದರು ಛತ್ತರಿಗೆ
ಹಿಡಿ ಹಿಡಿ ಹೊನ್ನ ಕೊಡುತ ಬ್ರಾಂಬರಿಗೆಲ್ಲ
ಸಡಗರದಿ ನಡೆದರ್ ಗುಡಿಗಾಗ ೬೧

ಎಣ್ಣೆಯೊಳಗೆ ಬಗ್ಗಿ ಎಲ್ಲರು ಮುಖ ನೋಡಿ
ಅಣ್ಣತಮ್ಮಂದಿರು ಸತಿಸುತರೊಡಗೂಡಿ
ಮನ್ನಿಸಿದ ತಾಯಿತಂದೆಯರ ೬೨

ತುಪ್ಪದ್ ದೀವಿಗೆಯು ಕರ್ಪೂರದ ಮಂಗಳಾರತಿಯು
ದ್ರಾಕ್ಷಿ ಖರ್ಜೂರ ಕದಳಿ ನಾರಿಕೇಳ ಫಲ
ಸಮರ್ಪಣೆ ಮಾಡಿ ಹರಿಗಾಗ ೬೩

ಗಂಧ ಅರಿಷಿಣವು ಕುಂಕುಮ ಕುಸುಮ ಮಲ್ಲಿಗೆಯ
ಬಂದ ಮುತ್ತೈದೇರಿಗೆಲ್ಲ ಉಡಿತುಂಬುತಲಿ ಆ-
ನಂದವಾಗಕ್ಕ ತಂಗಿಯರು ೬೪

ಖೀರು ಮಂಡಿಗೆ ಭಕ್ಷ್ಯ ಕ್ಷೀರ ಘೃತ ಸಕ್ಕರೆಯು
ಸಾರು ಶಾಲ್ಯಾನ್ನ ಶಾಕಪಾಕಗಳೆಲ್ಲ
ಊರಜನಕುಣಿಸಿ ದಣಿಸಿದರು ೬೫

ದಕ್ಷಿಣೆ ವೀಳ್ಯ ತಕ್ಕೊಂಡು ಕೊಂಡಾಡುತಲಿ
ಲಕ್ಷಾಧಿಕಾರಿ ನೀನಾಗೆಂದು ದ್ವಿಜರೆಲ್ಲ ಮಂ-
ತ್ರಾಕ್ಷತೆಗಳ್ಹಾಕಿ ಹರುಷದಲಿ ೬೬

ಅರಸು ತನ್ನವರ ಕೂಡಾಗ ಅಂದಣವೇರಿ
ಬಿರುಸು ಬಾಣಗಳ ಬೀದಿಯಲಿ ಹೊಯಿಸುತಲಿ
ಹಿಡಿಸಿ ಹಿಲಾಲು ಬೆಳಕಲಿ ೬೭

ಬಣ್ಣ ಚ್ಯಾವುಡಿ ಚಿತ್ರ ಚಿನ್ನದ ಚೌಕಟ್ಟು
ಕನ್ನಡಿ ಮಾಲು ಕನಕದ ಕಂಬದರಮನೆಯ
ತನ್ನವರ ಕೂಡ್ಹೊಕ್ಕ ಸಂಭ್ರಮದಿ ೬೮

ಎಂಟುಮಕ್ಕಳಿಗೆ ತನ್ನ ನೆಂಟರಿಷ್ಟರ ಕೂಡಿ
ಕಂಠಪಾಭರಣ ಕಟ್ಟಿ ಮಾಂಗಲ್ಯವನು
ಸಂತೋಷದಲಿ ಮಾಡಿ ಲಗ್ನವನು ೯

ಹುಟ್ಟಿಬಡವರು ಜೋಳದ್ಹಿಟ್ಟಿನೂಟವನುಂಡು
ಕಷ್ಟ ದಾರಿದ್ರ್ಯ ಕಳೆದು ಕಾಮ್ಯಾರ್ಥವನು
ಮುತ್ತೈದೆತನಗಳನೆ ಪಡೆವೋರು ೨೦

ಮೊದಲೆ ಶ್ರಾವಣಮಾಸ ಬುಧವಾರ ದಿನದಲ್ಲಿ
ಬುಧ ಬೃಹಸ್ಪತಿಗಳ ಪೂಜೆಮಾಡಿದರಿನ್ನು
ಮುದದಿಂದೊಲಿದು ವರವ ಕೊಡುವೋರು ೨೧

ಸಂತೋಷದಿಂದ ಸರ್ವರೂ ಪೂಜೆಮಾಡಿದರೆ
ಸಂತಾನ ಸಕಲಸಂಪತ್ತು ಶ್ರೀ ಲಕ್ಷ್ಮೀಕಾಂತ
ಒಲಿದ್ವರವ ಕೊಡುವೋನು ೨೨

ನೇಮದಿಂದೀ ಕಥೆ ಹೇಳಿ ಕೇಳಿದ ಜನಕೆ
ಭೀಮೇಶಕೃಷ್ಣ ಒಲಿದು ಉದ್ಧಾರವನು
ಮಾಡೆ ಮನೋಭೀಷ್ಟ ಪಡೆವೋರು ೨೩

೩೪

ಕರೆಯೆ ಯಶೋದ ಕೃಷ್ಣನ ಕರೆಯೆ ಪ.

ನರಹರಿಯ ನಂದಗೋಪನ ಮರೆಯ ಮಾತಲಿ ಮಹಾ
ದೊರೆಯೆ ಇವನ ಗುಣ-
ವರಿಯೆವು ನೋಡಲಾಶ್ಚರ್ಯವಾಗೋದು ನಿ-
ನ್ನರಮನೆಗೀತನ ಕರೆಯೆ ೧

ನೋಡೆ ಈತಗೆ ಇನ್ಯಾರಿಡೇ ಕೋಪವ
ಮಾಡಬ್ಯಾಡೆ ಮಾತಿಗೆ ಮಾತ-
ನಾಡಿಂದಿರಾಪತಿ ಗಾಡಿಕಾರನೆಂದಾಡಿಕೊಂಬೆವೆ ನಮ್ಮ
ಕಾಡುವೋದುಚಿತವೆ ೨

ಬಾಲಗೋಪಾಲ ಕೃಷ್ಣ ಲೀಲೆಮಾಡುವೊ ದೊಡ್ಡ್ವಿ-
ಶಾಲ ಉದರಕ್ಕೆ ಬೆಣ್ಣೆ

ಪಾಲುಕುಡಿದು ನಮ್ಮಾಲಯದೊಳು ಬಂದು
ಕಾಲಂದಿಗೆಧ್ವನಿ ಆಲಿಸಿ ಕೃಷ್ಣನ ೩

ರೂಪನೋಡಿದರೆ ಸಣ್ಣ ಪೋರನೆನಿಸುವ
ಅಪಾರಮಹಿಮ ಕೃಷ್ಣನ
ವ್ಯಾಪಾರವ ನಾನಾಪರಿಯಿಂದಲಿ ಗೋಪನ ಮುಂದ್ಹೇ-
ಳೀಪುರ ಬಿಡುವೆವೆ ೪

ತುರುವ ಕಾಯುತ ಭಾಳಾತುರ ವಾರಿಜಾಕ್ಷ ನಮ್ಮ
ತುರುವ ಪಿಡಿದು ನಿಂತ
ತುರುವ ಭಾರಕೆ ಸೀರೆ ಜರಿದು ಬೀಳುತಲಿ
ಪರಿಜನರೊಳು ಮಾನ ತೊರೆದಂತಾಯಿತು ೫

ಕಾಂತರಿದ್ದಂಥ ಏಕಾಂತದೊಳಗೆ ಬಂದು
ನಿಂತರಿಬ್ಬರೊಳಗ-
ಭ್ಯಂತರ ತಿಳಿಯದೆ ಭ್ರಾಂತಳಾದೆ ಎನ್ನ
ಕಾಂತನೊ ಇವ ಶ್ರೀಕಾಂತನೊ ತಿಳಿಯದು ೬

ನಂದನಂದನ ನಿನ್ನ ಕಂದ ಮಾಡುವೋದು ಬಾ-
ಯಿಂದ ಹೇಳಿದರೆನ್ನ
ಬಂಧುಜನರು ಭೀಮೇಶಕೃಷ್ಣಗೆ-
ನ್ನೊಂದಿಸಿಬಿಡುವೋರು ಸಂದೇಹವಿಲ್ಲವೆ ೭

೩೫

ಕಲ್ಲು ನಾಯೇನೋ ಕೈವಲ್ಯದಾಯಕನೆ
ಕಲ್ಲು ಕರುಣದಿಂದ್ಹೆಣ್ಣಾಗಿರಲುದ್ಧಾರ ಕೇಳೊ ಪ.

[1][ಉಡಬಲ್ಲೆ ಉಣಬಲ್ಲೆ][1] ಉತ್ತಮ ಸಂಗ ಬಿಡಬಲ್ಲೆ
ನಡೆಯಬಲ್ಲೆನೊ ದುರ್ಮಾರ್ಗದಿಂದ
ಕಡುಕೋಪದಿಂದ ಕಠಿಣ ಮಾತನಾಡಲು ಬಲ್ಲೆ
ಕಡಲಶಯನನ್ನ ನಾಮ ನುಡಿಯಲೊಂದರಿಯೆನೊ ೧

[1] ಉಣಬಲ್ಲೆ ಉಡಬಲ್ಲೆ

ಕಾಮಕ್ರೋಧವ ಬಲ್ಲೆ ಮತ್ಸರ ಮದ ಲೋಭ
ಮೋಹ ಬಲ್ಲೆನೊ ಬಾಂಧವ ಭವದಿ
ಭೇದಬುದ್ಧಿಯು ಬಲ್ಲೆ ಆದಿಮೂರುತಿ ನಿನ್ನ
ಪಾದದಿ ಭಕುತಿ ಪರಮಾದರೊಂದರಿಯೆನೊ ೨

ನಿಷ್ಠುರಾಡುತ ಜನರ ನಿಂದಿಸುವುದು ಬಲ್ಲೆ
ಕಷ್ಟದಾರಿದ್ರ್ಯ ಬಲ್ಲೆನ್ನಬಲ್ಲೆ
ದುಷ್ಟ ಅಲ್ಪರಿಗೆ ಬಾಯ್ ತೆರೆಯುಬಲ್ಲೆ ಭೀಮೇಶ-
ಕೃಷ್ಣ ನಿನವಯ ಬೇಡಿಕೊಂಬೋದೊಂದರಿಯೆನೊ ೩

೩೬

ಕಳವು ಕಲಿಸಿದರ್ಯಾರೊ ನಿನಗೆ ಕಂಜನಾಭನೆ ಪ.

ಕೇರಿ ಕೇರಿ ಮನೆಗಳಲ್ಲಿ
ಕ್ಷೀರ ಗಡಿಗೆಯನೊಡಿವರೇನಲ್ಲಿ
ಚೋರತನವ ನೀ ಕಲಿತಿಹುದೆಲ್ಲಿ
ಜಾರನೆನಿಸಿಕೊಂಬುವುದು ಕೇಳಿ ಬಲ್ಲೆ ೧

ಅಟ್ಟದ ಮ್ಯಾಲಿಟ್ಟದ್ದ ಬೆಣ್ಣೆ-
ಚಟ್ಟಿಗಿಯು ಒಡೆದಾಕಳ ಕಣ್ಣೆ
ಕಟ್ಟ ಜುಟ್ಟ ಇವರ ಮನೆ ಹೆಣ್ಣೆ-
ಗಿಟ್ಟ ಮಾಡುವರೆ ಕಣ್ಣು ಸೊನ್ನೆ ೨

ಬಡವರ ಮನೆ ಅನ್ನದಲಿಷ್ಟು
ತುಡುಗುತನವ ನೀ ಮಾಡುವುದೆಷ್ಟು
ಪಿಡಿಯುರವರು ಬರುವುದತಿ ಸಿಟ್ಟು
ಹಿಡಿದು ಹಾಕೋರು ನಿನಗೊಂದು ಪೆಟ್ಟು ೩

ಕಡೆದ ಬೆಣ್ಣೆ ಕಾಸಿದ ತುಪ್ಪ
ಕೊಡುವೆನ್ಹಾಲು ನೀಕುಡಿಯದಲ್ಯಾಕೊ
ಮಡದಿಯರ ಸರಿ ನಿನಗೇನು ಬೇಕೊ
ಕೇಳಿ ಬ್ಯಾಸರಾದೆನು ನಿನ್ನ ವಾಕು ೪

ಬಣ್ಣದ್ವಲ್ಲಿ ಥಾದರ ಹೊದ್ದು
ಅಣ್ಣ ರಾಮರಲ್ಲ್ಯಾಡದೆ ಇದ್ದು
ಹೆಣ್ಣು ಮಕ್ಕಳುಡವ ಸೀರೆ ಕದ್ದು
ಇನ್ನು ಮರನೇರುವುದೇನು ಮುದ್ದು ೫

ನಂದ ಗೋಪನ ಮುಂದ್ಹೇಳಿ ಸಿಟ್ಟು
ಇಂದು ಬಡಿಸುವೆ ಭೀಮೇಶ ಕೃಷ್ಣ
ಮಂದಿ ಮಕ್ಕಳೊಳಗೆ ನೀನೆ ಶ್ರೇಷ್ಠ ಹಾ-
ಗೆಂದು ಬೇಡಿ ಕೊಂಬುವುದೊ ನೀಡಿಷ್ಟ ೬

೩೭

*

ಕಂಡು ಧನ್ಯನಾದೆ ನಂದ ತನಯನ ಕಣ್ಣಾರ
ಕಂಡು ಧನ್ಯನಾದೆ ನಂದ ತನಯನ
ಕಂಡು ಧನ್ಯನಾದೆ ದಣಿಯುವೆನ್ನ ಎರಡು ಕಂಗಳೀಗ
ತಿರುಗಿ ಪೋಗಲಾರೆ ತಿಮ್ಮಲಾಪುರೀಶ ದೊರೆಯ ಬಿಟ್ಟು ಪ.

ಸಾಲುದೀವಿಗೆ ಸಣ್ಣ ನಾಮ ಸರಗ ಮಧ್ಯೆ ವೈಜಯಂತಿ
ಸೂರ್ಯನಂತೆ ಹೊಳೆವ ಮುದ್ದು ಮುಖವು ಮಹಾದ್ವಾರದಲ್ಲಿ ೧

ಶಂಖಚಕ್ರ ಶ್ಯಾಮವರ್ಣ ಅಂಕಿತವುಳ್ಳ ನಾಮಗಳಿಂದ
ಪಂಕಜಾಕ್ಷ ಪರಮಪುರುಷ ವೆಂಕಟನೆಂಬೊ ನಾಮಾಂಕಿತದವನ ೨

ಆ ಮಹಾ ವೈಕುಂಠದಲ್ಲಿ ವಾಸವಾದ ನಮ್ಮ ಕುಲ-
ಸ್ವಾಮಿ ಎನಿಸಿಕೊಂಡ ಭೀಮೇಶ ಕೃಷ್ಣನ ದಯದಿಂದೀಗ ೩

೩೮

ಕಂಡು ಹಿಗ್ಗಿದಳೆ ಕಮಲಾಕ್ಷನ್ನ ಯಶೋದ ಎತ್ತಿ
ಕೊಂಡು ಮುದ್ದಿಸಿದಳೆ ಯದುನಾಥನ್ನ ಪ.

ಪಾಲವಾರಿಧಿ ಮಧ್ಯದಲ್ಲಿ ಶ್ರೀದೇವಿ ಸಹಿತ್ತೊಂ-
ದಾಲದೆಲೆಯ ಮ್ಯಾಲಾಡುತಲಿ

* ತಿಮ್ಮಲಾಪುರದ ವೆಂಕಟೇಶದೇವರಮೇಲಿನ ಹಾಡು.

ಕಾಲಬೆರಳು ಕಟಬಾಯಲಿ ಚೀಪುವ
ನೀಲವರ್ಣನು ತನ್ನ ಬಾಲನೆಂದೆನುತ ೧

ಕೋಟಿ ಸೂರ್ಯರ ಕಾಂತಿ ಹರಣಮಾಡುವ ಮುಖ ಕಿ-
ರೀಟ ಕೌಸ್ತುಭ ಮಣಿಯಾಭರಣ
ಹಾಟಕಾಂಬರನುಟ್ಟ ನಾಟಕಧಾರಿ ಕಿ-
ರೀಟ ಸಾರಥಿ ಪಕ್ಷಿರಾಟವಾಹನನ ೨

ಚಿನ್ನವಾಗೀರೇಳು ಲೋಕವನು ತನ್ನುದರದೊಳಡಗಿಸಿ
ಪನ್ನಂಗಶಾಯಿ ಪರಮಾತ್ಮನ್ನ
ಚಿನ್ನ ಮಾಣಿಕ್ಯದ ತೊಟ್ಟಿಲೊಳಿಟ್ಟು ತೂಗುತ
ಎನ್ನ ಕಂದ ನೀ ತೋಳನ್ನಾಡೆಂದೆನುತ ೩

ಕಡಗ ಕಿರುಗೆಜ್ಜೆ ಚರಣದಿಂದಲಿ ನಡೆಯುತಲಿ ಬಂದು ದಧಿ-
ಗಡಿಗೆ ತಾ ಒಡೆದನೆ
ಕಡಗೋಲಿಂದ ಹಿಡಿದು ಕಟ್ಟಲು ಒರಳೆಳೆದ್ಯಮಳಾರ್ಜುನ
ಗಿಡವ ಕೆಡಹಿ ಮುಕ್ತಿ ಕೊಡುವ ಶ್ರೀ ಕೃಷ್ಣನ ೪

ದಾಸಜನ ಪೋಷ ಭವಭಯ ನಾಶ ಮಾಡುವಾತ ಭುವ-
ನೇಶ ಹದಿನಾಲ್ಕು ಲೋಕದ ವಾಸ
ರಾಸ ಕ್ರೀಡೆಲಿ ವ್ರಜವನಿತೆಯರ ಸಂತೋಷಬಡಿಸಿದ ಭೀ-
ಮೇಶ ಕೃಷ್ಣನ ಮುಖ ೫

೩೯

ಕಂಡೆ ಕಂಡೆ ಮುಚುಕುಂದವರದ ಮು-
ಕುಂದ ಮೂಡಲಗಿರಿ ಗೋವಿಂದನ ಪ.

ಶರಧಿ ಬಿಟ್ಟು ಈ ಗಿರಿಯಲ್ಯಾಕೊ ನೀ
ತೆರೆದ ಕಣ್ಣು ನಾರುವ ಮೈಗೆ ಬಿಳಿಯ ಕರ್ಪೂರ
ಪರಿಮಳದ ಸುವಾಸನೆಗೆ
ಜರಿದು ಬಂದೆ ನಿನ್ನ ಪರಿಯ ನಾ ಬಲ್ಲೆ ೧

ಛಲನ ಮೇಲೆ ನಿನ್ನ ಛಲವು ಯಾಕೊ ನೀ
ಸುರರಸುರರ ಕೈಯಲಿ ಸಿಕ್ಕು

ಧರಿಸಿ ಭಾರ ತಿರುಗನುಪಕಾರ
ಗಿರಿರಾಜನು ನಿನ್ನ ಸರಿಯೆಂದೆನಿಸುವ ೨

ಬಲ್ಲೆ ಬಲ್ಲೆ ಕೋರ್ದಾಲ್ಲುಗಳಿಂದ
ಮೆಲ್ಲುತ ಬೇರನವಲ್ಯವನು
ಎಲ್ಲ ನೀಗಿ ದಧ್ಯಾನ್ನ ನೈವೇದ್ಯ
ಚೆಲ್ವ ಧರಣಿಪತಿ ಬಲ್ಲಿದ ವರಾಹನ ೩

ಕಂಬ ಒಡೆದು ಕರುಳ್ಹಾರವಲ್ಲದೆ
ಕಂಡು ಅಜನ ಕಂಠಾಭರಣ
ನೊಂದ ಮೈಗೆ ಪುನುಕಾಪು ಮಜ್ಜನ
ತಾಂಬೂಲ ಮಂಚ ಸುಪ್ಪತ್ತಿಗೆಶಯನ ೪

ದಾನ ಬೇಡಿದ ನೆಲ ಭೂಮಿಯ ಬಿಟ್ಟುರ–
ಗಾದ್ರಿಯಲಿರುವುದು ಉಚಿತಲ್ಲ
ಸಾಧಿಸಿ ಬಲಿಯ ಪಾತಾಳಕೆ ಮೆಟ್ಟಿದ
ಪಾದ ತೋರದಲಾಚ್ಛಾದನ ಮಾಡಿದಿ ೫

ಪೊಡವಿದಾನ ನೆಲಬಿಡದೆ ಕೊಟ್ಟು
ಅಡವಿ ಗುಡ್ಡದಲ್ಲಾವಾಸ
ಕೊಡಲಿ ಪಿಡಿದು ತನ್ನ ಹಡೆದ ಮಾತೆಶಿರ
ಕಡಿದ ಕೈ ಕೆಳಗೆ ಮಾಡ್ಡಿ ಡಿವಸುರನ ೬

ಹೆತ್ತ ಜನಕ ಮನೆಬಿಟ್ಟು ಹೊರಡಿಸೆ
ಉಟ್ಟ ನಾರ್ವಸ್ತ್ರ ಸಹಿತಾಗಿ
ಲಕ್ಷ್ಮಿ ಲಕ್ಷಿಟ್ಟು ಬಂದ್ವಕ್ಷ ಸ್ಥಳದಲ್ಲಿರೆ
ಅಷ್ಟಪದವಿಗಧಿಕಾರಿ ಎನಿಸಿದಿ ೭

ಗೊಲ್ಲರೇಶ ಎಲ್ಲರಿಗುತ್ತಮನೆಂದು
ಬಲ್ಲಿದ ಮುನಿ ಪಾದದ್ವೊದೆಯೆ
ಕೊಲ್ಹಾಪುರ ಮನೆಮಾಡೆ ಮಹಾಲಕ್ಷ್ಮಿ
ನಿಲ್ಲದೆ ಬಂದ್ವಾಲ್ಮೀಕವ ಸೇರಿದೆ ೮

ಸಾರಿ ಹೇಳಿ ನೀ ನಿಗಮವ ನಿಂದ್ಯಮಾಡಿ
ನಾರಿಯರ ವ್ರತವಳಿದು

ಮಾರಜನಕ ಅಭಿಮಾನಬಿಟ್ಟರೆ ಅ-
ಪಾರಮಹಿಮ ನಿನ್ನ ನೋಡಿ ನಗುವರೊ ೯

ದೊರೆ ನಿನ್ನ ದರುಶನಕೆ ತ್ವರಿತದಿ ಜನರು
ಮೂವತ್ತು ಗಾವುದ ಮೂರ್ಜೆಜ್ಜೆಯ ಮಾಡಿ
ತುರಗನೇರ್ಧಾರಿಸಿ ಗಿರಿಯ ಬಿಟ್ಟೊಯ್ದರೆ
ವರದ ವೆಂಕಟನಿಂದೆ ತಿರುಗುವರ್‍ಯಾರೊ ೧೦

ನಿನ್ನ ನಾಮವ ತಂದೆನ್ನ ಜಿಹ್ವಕೆ
ಚೆನ್ನವಾಗಿ ಬಂಧನ ಮಾಡೆ
ಘನ್ನಮಹಿಮ ಭೀಮೇಶಕೃಷ್ಣ ಬಂದು
ಕಣ್ಣಿಗೆ ಸುಳಿವ ಪ್ರಸನ್ನವೆಂಕಟನ ೧೧

೪೦

ಕಂಡೆ ಕಂಡೆ ಸ್ವಾಮಿಯ ಕಂಡೆ
ಕಂಡೆ ನಾ ಬ್ರಹ್ಮಾಂಡದೊಡೆಯನ
ಪಾಂಡವರ ಪರಿಪಾಲಿಸುವನ ಪ್ರ-
ಚಂಡ ಅಸುರರ ಶಿರವ ಚಕ್ರದಿ
ಚೆಂಡನಾಡಿದ್ದ ಚೆಲುವ ಕೃಷ್ಣನ ಪ.

ಪಾದನಖದಿ ಭಾಗೀರಥ್ಯುದಿಸಿದಳು
ವಿರಿಂಚರು ನಾಭಿಕಮಲದಿ
ಈರೇಳು ಲೋಕವನಿಟ್ಟ ಉದರದೊ-
ಳಾದಿ ಮೂರುತಿ ಸಾರ್ವಭೌಮ ೧

ಎಳೆದುಳಸಿ ಶ್ರೀವತ್ಸ ಕೌಂಸ್ತುಭ ಅ-
ರಳು ಮಲ್ಲಿಗೆ ಹಾರ ಪದಕವು ಕೊ-
ರಳೊಳಗೆ ವೈಜಯಂತಿ ಮಾಲೆಯಂ-
ತ್ಹೊಳೆವೊ ಮಾಣಿಕಾಭರಣ ಭೂಷಿತ ೨

ಶೀಘ್ರದಲಿ ಜರೆಸುತನ ವಧೆ ಮಾ-
ಡ್ಯಜ್ಞದಲಿ ಶಿಶುಪಾಲರಂತಕ
ರುಕ್ಮಿಣೀಪತಿ ಧರ್ಮ ಭೀಮರಿಂ-
ದಗ್ರಪೂಜೆ ತಕ್ಕೊಂಡ ಕೃಷ್ಣನ ೩

ಕಂಕಣ ಕರದಲಿ ಶಂಖ ಚಕ್ರವು ಅರ-
ವಿಂದ ರೇಖವು ಚರಣದಲಿ
ಪಂಕಜಾಕ್ಷನ ಮುಖದ ಕಾಂತಿಯು
ಶಂಕೆಯಿಲ್ಲದೆ ಸೂರ್ಯರಂದದಿ ೪

ಎಂಟು ಮಂದ್ಯೆರಡೆಂಟು ಸಾವಿರ ಸತಿಯ-
ರಿಂದ ದ್ವಾರಾವತಿಯನಾಳಿದ
ಪತಿತಪಾವನ ಪಾರಿಜಾತವ ಸತಿಗೆ
ತಂದ ಶ್ರೀಪತಿಯ ಪಾದವ ೫

ನಳಿನ ಮುಖಿ ದ್ರೌಪದಿಯು ಕರೆಯಲು
ಸೆಳೆಯೆ ವಸ್ತ್ರ ಅಕ್ಷಯವ ಮಾಡಿಸಿ
ಖಳರ ಮರ್ದನ ಕರುಣ ಸಾಗರೆಂ-
ದಿಳೆಯೊಳಗೆ ಹೆಸರಾದ ಕೃಷ್ಣನ ೬

ನಂಬಿದವರನು ಬಿಡದೆ ತಾನಿ-
ದ್ದಿಂಬಿನಲಿ ಸ್ಥಳಕೊಟ್ಟು ಕರೆವನು
ಸುಂದರಾಂಗ ತಾ ಸೋಮಕುಲದಲಿ
ಬಂದುದಿಸಿದ ಭೀಮೇಶಕೃಷ್ಣನ ೭

## ೪೧

*

ಕಂದನೆಂದೆನಿಸಿದ ಕೌಸಲ್ಯದೇವಿಗೆ ರಾಮ ಎನಬಾರದೆ
ಇಂದಿರಾಪತಿ ರಾಮಚಂದ್ರಗೆ ಶ್ರೀರಘುರಾಮ ಎನಬಾರದೆ ೧

ಶಿಶುವಾಗಿ ಅವತಾರ ಮಾಡಿದ ದಶರಥನಲಿ ರಾಮ ಎನಬಾರದೆ
ಋಷಿಯಜ್ಞ ಸಲಹಿ ರಕ್ಕಸನೆ ಕೊಂದ ಶ್ರೀರಾಮ ಎನಬಾರದೆ ೨

ನೀಟಾಗಿ ನೆಸೆ ಭಾನುಕೋಟಿತೇಜ ಶ್ರೀ ರಾಮ ಎನಬಾರದೆ
ಸಾತ್ವಿಕ ದೈವವೆ ತಾಟಕಾಂತಕ ಶ್ರೀರಾಮ ಎನಬಾರದೆ ೩

---

* ಸಂಕ್ಷೇಪ ರಾಮಾಯಣ.

ಪಾದನಖವು ಸೋಕಿ ಪಾಪನಾಶನವಾಗೆ ರಾಮ ಎನಬಾರದೆ
ಶ್ರೀಪತಿ ಕರುಣದಿ ಶಿಲೆಯು ಸ್ತ್ರೀಯಾಗಲು ರಾಮ ಎನಬಾರದೆ ೪

ಸಕಲ ಸದ್ಗುಣ ಪೋಗಿ ಮಿಥಿಲಾ ಪಟ್ಟಣದಲಿ ರಾಮ ಎನಬಾರದೆ
ತ್ರಿಪುರ ಸಂಹಾರ ತ್ರಿನೇತ್ರನ ಧನುವೆತ್ತಿ ರಾಮ ಎನಬಾರದೆ ೫

ಚೆಲ್ವೆ ಜಾನಕಿ ಮಲ್ಲಿಗೆಯ ವನಮಾಲೆಯು ರಾಮ ಎನಬಾರದೆ
ವಲ್ಲಭಗ್ಹಾಕಲು ಫುಲ್ಲಲೋಚನೆ ಸೀತಾರಾಮ ಎನಬಾರದೆ ೬

ಮಂಗಳ ಮಹಿಮೆ ಸೀತಾಂಗನೆ ಕೊರಳಿಗೆ ರಾಮ ಎನಬಾರದೆ
ಮಾಂಗಲ್ಯ ಬಂಧನ ಮಾಡಿದ ಮಹಾತ್ಮನು ರಾಮ ಎನಬಾರದೆ ೭

ಜಗದೇಕ ಸುಂದರಿ ಜಾನಕಿಯನೆ ಗೆದ್ದ ರಾಮ ಎನಬಾರದೆ
ಜಗದೀಶ ಜನಕಗೆ ಜಾಮಾತನೆನಿಸಿದೆ ರಾಮ ಎನಬಾರದೆ ೮

ಮುದ್ದು ಜಾನಕಿ ಕೂಡಿ ಅಯೋಧ್ಯಕೆ ಬರುತಿರೆ ರಾಮ ಎನಬಾರದೆ
ಮಧ್ಯ ಮಾರ್ಗದಿ ಬಂದಿದ್ದನು ಭಾರ್ಗವ ರಾಮ ಎನಬಾರದೆ ೯

ತನ್ನ ತಾನೇ ಗೆದ್ದು ಧನ್ಯನೆಂದೆನಿಸಿದಿ ರಾಮ ಎನಬಾರದೆ
ಬ್ರಹ್ಮ ಶಂಕರರಿಂದಿನ್ನು ಉತ್ತಮನಾದ ರಾಮ ಎನಬಾರದೆ ೧೦

ಪಟ್ಟಗಟ್ಟಲು ಪರಮೋತ್ಸವ ಕಾಲಕ್ಕೆ ರಾಮ ಎನಬಾರದೆ
ದುಷ್ಟ ಕೈಕೆಯು ನಿಷ್ಠುರ್ವಚನವ ಕೇಳಿದ ರಾಮ ಎನಬಾರದೆ ೧೧

ಆ ಲಕ್ಷುಮಿಯು ಮಾತಲಕ್ಷ್ಯಿಸ ಮಾಡದೆ ರಾಮ ಎನಬಾರದೆ
ಲಕ್ಷ್ಮಣ ಲಕ್ಷ್ಮಿಕೂಡ್ವನವಾಸ ತಿರುಗಿದ ರಾಮ ಎನಬಾರದೆ ೧೨

ಸೋಸಿಲಿಂದಲಿ ಸತಿ ಆದೇನೆಂದಸುರಿಯು ರಾಮ ಎನಬಾರದೆ
ನಾಶರಹಿತ ಕಿವಿ ನಾಸಿಕನಳಿಸಿದ ಶ್ರೀ ರಾಮ ಎನಬಾರದೆ ೧೩

ದಂಡಕಾರಣ್ಯದಿ ಕಂಡು ಮಾರೀಚನ್ನ ರಾಮ ಎನಬಾರದೆ
ಹಿಂದ್ಹೋಗೆ ರಾಘವ ಬಂದ ರಾವಣನಲ್ಲೆ ರಾಮ ಎನಬಾರದೆ ೧೪

ಘಾತಕ ರಾವಣ ಜಗನ್ಮಾತೆಯನೊಯ್ಯಲು ರಾಮ ಎನಬಾರದೆ
ಸೋತು ಜಟಾಯು ಯುದ್ಧವ ಮಾಡಿ ತಾ ಬೀಳಲು ರಾಮ
ಎನಬಾರದೆ ೧೫

ಒಲಿದು ಸುಗ್ರೀವಗೆ ವಾಲಿ ವಧೆಯ ಮಾಡಿ ರಾಮ ಎನಬಾರದೆ
ವಾನರಗಳ ಕೂಡಿ ವಾರಿಧಿ ಕಟ್ಟಿದ ಶ್ರೀರಾಮ ಎನಬಾರದೆ ೧೬

ಲೋಕ ಮಾತೆಯು ಲಂಕಾನಾಥ ತಾ ಒಯ್ದಾಗ ರಾಮ ಎನಬಾರದೆ
ಸೀತಾಕೃತಿಯನಿಟ್ಟ ಶೋಕವನದೊಳು ರಾಮ ಎನಬಾರದೆ ೧೭

ಮಂಡೋದರಿಯು ಗಂಡನ್ನ ದಶಶಿರಗಳ ರಾಮ ಎನಬಾರದೆ
ಚೆಂಡನಾಡಿದ ಕೋದಂಡಪಾಣಿಯು ಶ್ರೀರಾಮ ಎನಬಾರದೆ ೧೮

ಪ್ರೀತಿಂದ್ವಿಭೀಷಣಗೆ ಪಟ್ಟವಗಟ್ಟಿದ ರಾಮ ಎನಬಾರದೆ
ಸೀತಾ ಸಮೇತನಾಗಿ ಸಿಂಧು ದಾಟಿದ ರಾಮ ಎನಬಾರದೆ ೧೯

ಆದಿ ಲಕ್ಷ್ಮಿ ಕೂಡಿ ಹೋದನಯೋಧ್ಯಕೆ ರಾಮ ಎನಬಾರದೆ
ಶ್ರೀದೇವಿ ಸಹಿತ ಪಟ್ಟಣ ಹೊಕ್ಕ ಪಟ್ಟಾಭಿರಾಮ ಎನಬಾರದೆ ೨೦

ಭರತ ಸುಮಿತ್ರ ಕೌಸಲ್ಯಗೆ ಸುಖವಿಟ್ಟ ರಾಮ ಎನಬಾರದೆ
ಮುಕ್ತಿದಾಯಕ ಮುಂದೆ ಬಿಡದೆ ಕಾಪಾಡುವ ರಾಮ ಎನಬಾರದೆ ೨೧

ಪತ್ನಿ ವಾರ್ತೆಯು ತಂದ ಪವನಸುತಗೆ ಒಲಿದ ರಾಮ ಎನಬಾರದೆ
ಸತ್ಯ ಲೋಕದ ಆಧಿಪತ್ಯವ ಕೊಟ್ಟ ಶ್ರೀ ರಾಮ ಎನಬಾರದೆ ೨೨

ರಾಮರಾಮನು ಎಂದು ಕರೆಯೆ ಭಕ್ತಿಯು ನೋಡಿ ರಾಮ ಎನಬಾರದೆ
ಪ್ರೇಮದಿ ತನ್ನ ನಿಜಧಾಮವ ಕೊಡುವೋನು ರಾಮ ಎನಬಾರದೆ ೨೩

ಅರಸಾಗಯೋಧ್ಯವನಾಳಿ ಯದುಕುಲದಲಿ ರಾಮ ಎನಬಾರದೆ
ಹರುಷದಿ ಭೀಮೇಶ ಕೃಷ್ಣನಾಗ್ಯುದಿಸಿದ ರಾಮ ಎನಬಾರದೆ ೨೪

೪೨

ಕಂದ ಮಾಡುವುದೇನು ಕಂಡಿರೆ ಗೋ-
ವಿಂದನ್ನ ದೂರ್ದೇಳ ಬಂದಿರಾ ಪ.

ಏನುಮಾಡಿದನೀಗ ನಮರಂಗ
ಬೇಡಿ ಬಯಸಿದ್ದಿರವನಂಗ ಸಂಗ
ಜೋಡೇನೆ ನಿಮಗೆ ಕೋಮಲಾಂಗ
ಮರನೇರಿ ಮಾಡಿದನೆ ಮಾನವು ಭಂಗ ೧

ಅತ್ತೆ ಮಾವಂದಿರಂಜಿಕೆಯೇನೆ
ಕರ್ತೃಪತಿಯು ಪರ ಸ್ತ್ರೀಯೆಂಬೋದನು ಕಾಣೆ
ಕೃಷ್ಣ ಕೊಳಲನೂದೊ ವನಕಿನ್ನು
ಕತ್ತಲೊಳಗೆ ಬರುವ ಬುದ್ಧಿ ತರವೇನೆ ೨

ಪುರುಷ ಮಕ್ಕಳನೆಲ್ಲ ತೊರೆದಿರೆ ನಮ್ಮ
ಸರಸಿಜಾಕ್ಷನ ಹಿಂದೆ ತಿರುಗುವಿರೆ
ಸರಿಬಂದ ಕ್ರೀಡ್ಯವಗರುಹಿರೆ
ಅರಗಳಿಗೆ ಎನ್ನರಮನ್ಯಾಗಿರಗೊಡಿರೆ ೩

ಕದ್ದು ಬೆಣ್ಣೆಯ ಮೆಲ್ಲುವನೇನೆ
ಮುದ್ದು ಕೊಸಿಗೀಪರಿ ಅಂಬುವರೇನೆ
ಪದ್ಮಪಾದದ ಪರಮಾತ್ಮನೆ ಬಂ-
ದಿದ್ದಲ್ಲೆ ನಿಮಗೆ ದಯಮಾಡುವನೆ ೪

ಮಾನವಿಲ್ಲದೆ ಮಾರಸಯ್ಯನ ಕೂಡಿ ವೃಂದಾ-
ವನದೊಳಾಡುವುದೇನೆ
ದೂರಿಕೊಂಬುವುದೇನು ಕಾರಣ ಭೀ-
ಮೇಶ ಕೃಷ್ಣನು ನಿಮ್ಮನ್ಸಲಹುವನೆ ೫

೪೩

*

ಕಾಮನ ಪಿತ ಕೃಷ್ಣ ಕಾಮಿನಿಯಾದನು
ಕಾಮನ ಪಿತ ಕೃಷ್ಣ ಕಾಮಿನಿ ಆಗುವೊ ಕಾರಣ ಕೇಳಿರಿ
ಕಾಮಿಸಿ ಶ್ರೀಹರಿ ಆ ಮಹಾಸುರರಿಗೆ ಸುಧೆಯನ್ನುಂಚುಣಿಸಲು
ಶ್ರೀ ಮಾಯಾಪತಿಯು ತಾ ಸ್ತ್ರೀಯಾದ ಚೆಲುವಿಕೆ ಪ.

ರುಳಿ ಲುಲ್ಲು ಗೆಜ್ಜೆ ಪೈಜಣ ಪಾಗಡವಸಿಟ್ಟು ಚರಣದಿ
ಕಾಲುಂಗುರ ಪಿಲ್ಯ ಪೆಂಟಿಕೆ ಝುಣಝುಣ ನಾದ
ಕಾಳಿಯ ಫಣ ತುಳಿದಂಥ
ಖಳರ ಮರ್ದನ ದಿವ್ಯ ತರುಣಿ ತಾನಾದನು ೧

* ಉಡುಪಿಯ ಶ್ರೀಕೃಷ್ಣದೇವರ ಮೇಲಿನ ಹಾಡು.

ಸೆರಗು ನಿರಿಯು ಜರತಾರಿ ಪೀತಾಂಬರ
ಬಿಡಿ ಮುತ್ತಿನುಡಿಗಂಟೆ ನಡುವಿನೊಡ್ಯಾಣ
ಸಡಗರದಿಂದೊಪ್ಪೋ ತಾಳಿ ಪದಕನಿಟ್ಟು
ಮೃಡನ ಪ್ರಿಯನು ಮುದ್ದು ಮಡದಿ ತಾನಾದನು ೨

ಕಂಚುಕ ತೋಳಿನಲ್ವಂಕಿ ಬಾಜುಬಂದು
ಮಿಂಚಿನಂದದಿ ನಲಿದಾಡುತ ಗೊಂಡ್ಯವು
ಕಂಕಣ ತೋಡ್ಯ ವಜ್ರದ್ವಾರ್ಯ ಹರಡಿಯು
ಪಂಚ ಬೆರಳಿನಲ್ಲುಂಗುರನಿಟ್ಟು ಸೊಬಗಲಿ ೩

ಚಿಂತಾಕು ಸರಿಗೆ ಚಿನ್ನದ ಗುಂಡು ಹವಳವು
ಕೆಂಪು ಏಕಾವಳಿ ಮಲಕು ತಾಯಿತ ಮುತ್ತು
ಮಿಂಚುವ್ಹೋ ಪದಕ ಮುತ್ತಿನ ಕಟ್ಟಾಣಿಯು
ಪಂಚರತ್ನದ ಹಾರ ಪರಮಾತ್ಮಗಲೆಯುತ ೪

ಉಂಗುರ ಕೂದಲು ಶೃಂಗಾರ ಕ್ಯಾದಿಗೆ
ಚಂದ್ರ ಚೌರಿ ಜಡೆಬಂಗಾರ ರಾಗಟೆ
ಮುಂದೆ ಮುತ್ತಿನಂಡೆ ಮುಡಿಯಲ್ಲಿ ಒಪ್ಪಿದ
ದುಂಡು ಮಲ್ಲಿಗೆ ದೋಷದೂರನಿಗಲೆವುತ ೫

ಪಂಜಿನ ವಾಲೆ ಬುಗುಡಿ ಬಾಳ್ಯ ಚಳತುಂಬು
ಚಂದ್ರ ಮುರುವು ಚಿನ್ನದ ಕಡ್ಡಿ ಕಿವಿಯಲ್ಲಿ
ಕುಂದಣ ಕುಸುರು ವಜ್ರಗಳು ಕೆಂಪ್ಹೊಳೆವಂಥ
ದುಂಡು ಮುತ್ತಿನ ಮುಕುರ್ಯವ ಮೂಗಿನಲ್ಲಿಟ್ಟು ೬

ಅಚ್ಚ ಮುತ್ತಿನ ದಂಡೆ ಕುಚ್ಚು ತೊಂಡಿಲುಗಳು
ಹಚ್ಚಿಯು ಬೊಟ್ಟು ಕಸ್ತೂರಿ ಕುಂಕುಮನಿಟ್ಟು
ಪಚ್ಚ ಮಾಣಿಕ್ಯನರಳೆಲೆ ಚಂದ್ರ ಸೂರ್ಯರು
ನಿತ್ಯತೃಪ್ತನು ನೀಲವರ್ಣದಂತ್ಹೊಳೆಯುತ ೭

ಆ ಮಹಾವೈಕುಂಠಪುರವರಸಾದ ಈ ಮಹಾರಜತ-
ಪೀಠ ಪುರದಲಿ ಬಂದು ಪ್ರೇಮದಿ ನಿಂತು
ನೋಡುತ ಬಂದ ಜನರಿಗೆ
ಕಾಮಿತ ಫಲ ಮುಕ್ತಿ ಕೊಡುವ ಕಮಲಾಪತಿ ೮

ಅಷ್ಟಯತಿಗಳಿಂದಲಿ ಪೂಜೆಯಗೊಂಬೊ
ಲಕ್ಷ್ಮಿಯ ಪತಿಯು ಸ್ತ್ರೀರೂಪವ ಧರಿಸಿರೆ
ದೃಷ್ಟಿಂದೆ ನೋಡವಿಸ್ಸಿರುವ್ರೋರೆ ಭೀಮೇಶ-
ಕೃಷ್ಣ ನಿನ್ನ ಮನವಲ್ಲಿಟ್ಟು ಸ್ತುತಿಸುವೆನು ೬

೪೪

*

ಕಾಶೀ ವಿಶ್ವೇಶ್ವರ ಗಂಗಾಧರ ಹಿಂಗಿಸೆನ್ನ
ಲಿಂಗ ಭಂಗಬಡಿಸೊ ನರಸಿಂಹ ಭಕ್ತ ೧

ಭೂತನಾಥ ಪಾರ್ವತೀನಾಥ ತ್ರಿನೇತ್ರ ಎನ್ನ
ಭೀತಿ ಬಿಡಿಸು ಸೇತು ಶ್ರೀರಾಮ ಲಿಂಗ ೨

ಹಂಪೆಯಲ್ಲಾವಸವಾದ ಪಂಪಾ ಭೀಮೇಶ ಕೃಷ್ಣ ನಿ-
ನ್ನೆಂತೊಲಿಸುವುದೊ ಗೌರೀಕಾಂತ ಶಿವಲಿಂಗ ೩

೪೫

*

ಕೃಷ್ಣ ರುಕ್ಮಿಣಿ ವಿವಾಹಾದ್ಹೈದು ದಿನದಲ್ಲಿ
ಆರ್ಥಿ[ಯಿಂ]ಂದೋಕುಳಿಯ ನಾಡಿ
ಕುಂಕುಮ ಗಂಧ ಬುಕ್ಕಿಟ್ಟ ಲೂ(ಲುರು?) ಟಣಿಯ ಮಾಡಿ
ಆರತಿನೆತ್ತಿ ಮುತ್ತೈದೇರು ಪಾಡಿ
ವೀಳ್ಯಗಳ ನೀಡಿ ಸರ್ಪಶಯನನು ತನ್ನ ಸತಿಯ
ಎತ್ತಿ ಬರುವ್ರೋ ಕಾಲದಲ್ಲಿ
ಚಿಕ್ಕ ಸುಭದ್ರೆ ತಾ ಬಾಗಿಲು ಕಟ್ಟಿ ತಾ ನಗುತ ನುಡಿದಳು ೧

ಪಟ್ಟದರಸಿಕೂಡ ಮತ್ತೆಲ್ಲಿ ಪಯಣ ಈ
ವಾರ್ತೆ ಹೇಳುವುದೆನಗೆ
ಹೇಳದೆ ದಾರಿಬಿಟ್ಟು ಹೋಗುವಳಲ್ಲೀಗ
ರುಕ್ಮಿಣಿಯನೆತ್ತಿ ಎಷ್ಟು

* ಕಾಶಿ ವಿಶ್ವನಾಥನ ಮೇಲಿನ ಹಾಡು.
* ಶ್ರೀ ಕೃಷ್ಣಗೆ ಸುಭದ್ರೆ ಬಾಗಿಲು ಕಟ್ಟಿದ ಹಾಡು.

ಭಾರಗಳಾದರೇನೊಂದಿಷ್ಟು ಭಿಡಿಯಗಳಿಲ್ಲ
ಕೇಳುವೆ ಕೊಟ್ಟು ಎನಮನ
ಕಾಮಿತಾರ್ಥವ ದಯಮಾಡಣ್ಣಯ್ಯ ಶ್ರೀಕೃಷ್ಣಯ್ಯ ೨

ನಾರೀಮಣಿಯೆ ನವರತ್ನದ ಹೆರಳು ಬಂ-
ಗಾರ ರಾಗಟೆಯು ಗೊಂಡ್ಯ
ಕಂಕಣ ವಂಕಿ ದ್ವಾರಾ ಹರಡಿಯು ಚೆಂದ
ಒಪ್ಪುವ ಗೆಜ್ಜೆ ನಾಗಮುರಿಗೆಯು
ಚಂದ್ರ ಬಾಳ್ಯಗಳು ಬುಗುಡಿ ಕಾಲ ಪೈಜಣ
ಗೆಜ್ಜೆ ರುಳಿ ಪೈಘೂರ್ಯದೊಡ್ಯಾಣವನೆ
ಮಾಣಿಕ್ಯಪ್ಪಾಲಿ ಸೋಹನ್ಮಾಲೆ ಕೊಡುವೆನು
ಕದವ ಬಿಡು ತಂಗಿ ಕೋಮಲಾಂಗಿ ೩

ಪಚ್ಚಮಾಣಿಕದ ಗೊಂಡ್ಯಗಳು ಬಾಜುಬಂದು
ರತ್ನದ್ಹೆರಳುಬಂಗಾರ
ಕಂಕಣ ವಂಕಿ ಹಸ್ತಕಡಗವು ದ್ವಾರ್ಯ
ಕಟ್ಟಾಣಿ ಪುತ್ಥಳಿ ಏಕಾವಳಿಯು ಸರ
ಚಿಂತಾಕು ಸರಿಗೆ ತೆತ್ತಿಸಿಯುರಚಂದ್ರರಾಗಟೆ ಮುತ್ತೆ
ಎನಗವ್ವಯ್ಯ ಕೊಡುವಳು ಅರ್ಥಿಯಿಂದೀಗೆನ್ನ-
ಮನೋರಥ ದಯಮಾಡಣ್ಣಯ್ಯ ಶ್ರೀಕೃಷ್ಣಯ್ಯ ೪

ಹರದಿ ನಿನಗೆ ಹವಳದ ಕಾಲ್ವಜ್ರದ ಮಂಚ
ಜರದ ಸುಪ್ಪತ್ತಿಗೆಯು ಹಾಸಿಕೆ ಲೋಡು
ವರಪೀತ ವಸನಂಗಳು ಚ-
ಪ್ಪರ ಮಂಚಕ್ಕ್ಯಾಲೆವೋ ಮುತ್ತಿನ ಗೊಂಚಲು ರವಿಪೋ-
ಲ್ವ ರಥವು ಕರಿತುರಗ ಕರೆನೆನ್ಮ ಗೋವ್ಗಳು
ತರತರದ ಛತ್ರಗೆ ಚಾಮರ ಜರತಾರಂಚಿನ
ಸೀರೆ ಕೊಡುವೆನು ಕದವ ಬಿಡು ತಂಗಿ ಕೋಮಲಾಂಗಿ ೫

ಪನ್ನಂಗಶಯನ ಕೇಳೆನ್ನ ಗಲ್ಲವಲೊಪ್ಪೋ
ಸಣ್ಣ ಮುತ್ತಿನ ಗೊಂಚಲು
ದ್ರಾಕ್ಷಿಯ ಬಳ್ಳಿ ಹೊನ್ನಾಪ್ಪಲೆ ಸರಪಳಿಯು ಹೊಸ
ಪದಕ ಚಿನ್ನದ ಚಂದ್ರಹಾರಗಳು

ನೀ ಕೊಡುವುದೇನು ಎನ್ನ ಬಲರಾಮಣ್ಣ
ಪ್ರೀತಿಯಲಿನ್ನು ನಾ ಬೇಡಿದ್ದು ಕೊಡುವನು ಮನ್ಮಥನ ಪಿತ
ಎನ್ನ ಮನೋರಥ ದಯಮಾಡಣ್ಣಯ್ಯ ಶ್ರೀಕೃಷ್ಣಯ್ಯ ೬

ಮುದ್ದು ಸುಭದ್ರೆ ಮೇಲಾದ ಜೋತೆಯ ಮುತ್ತು
ವಜ್ರ ಕೆಂಪನು ಕೆತ್ತಿಸಿ
ಕೊಡುವೆನೀಗ ತಿದ್ದಿ ಮಾಡಿದ ಮೂಗುತಿ ಪಾರ್ಥನ
ರಥಕಿದ್ದು ಆಗುವೆ ಸಾರಥಿ
ನಡೆಸುವೆನು ಕೀರ್ತಿ ಉಗ್ರಸೇನಗೆ ಹೇಳಿ ಇದರೊಳ-
ಗರ್ಧರಾಜ್ಯವ ಕೊಡಿಸಿ ನಾ ನಿನ್ನದ್ದು ಹಣ
ಹೊನ್ನುಗಳ ಕೊಡುವೆನು ಕಪವ ಬಿಡು ತಂಗಿ ಕೋಮಲಾಂಗಿ ೭

ಅಚ್ಚುತ ಬಲರಾಮರೆಂಬೊ ಎನಗೆ ಜೋಡು
ಹೆಚ್ಚಿನ ಭುಜಗಳಿನ್ನು
ಯಶೋದ ದೇವಕ್ಕಿ ರೋಹಿಣಿದೇವೇರು ಇರಲು
ತಂದೆ ಶ್ರೇಷ್ಠನಾದ್ವಸುದೇವನು ನೀ
ಕೊಡುವುದೇನು ಮುತ್ಯನಾಗಿದ್ದುಗ್ರಸೇನನು ಮತ್ತೆ ನಾ
ಬೇಡಿದರೆ ಈ ಕ್ಷಣ ಕೊಟ್ಟು ಬಿಡನೇ-
ನರ್ಧ ರಾಜ್ಯವ ದಯಮಾಡಣ್ಣಯ್ಯ ಶ್ರೀಕೃಷ್ಣಯ್ಯ ೮

ಎಷ್ಟು ಹೇಳಿದರು ಸಮ್ಮತವಿಲ್ಲೆ ಸುಭದ್ರೆ
ಮತ್ತೇನು ಕೊಡಲೆ ನಾನು
ಮನಕೆ ಬೇಕಾದಿಷ್ಟವ ಬೇಡೆ ನೀನು
ರುಕ್ಮಿಣೀ ಭಾರ ಎಷ್ಟು
ತಡೆಯಲಾರೆನೆ ನಾನು ಕೈಬಿಟ್ಟುಬಿಡುನೆನು
ಬೆಟ್ಟವನು ಕಿರು ಬೆಟ್ಟಲಿಂದೆ ಎತ್ತಿನಿಂತಿದ್ದೇಳು ದಿವಸ
ಇಷ್ಟು ಭಾರಗಳೆಂದು ಕಾಣೆನು ಕಪವ ಬಿಡು ತಂಗಿ ಕೋಮಲಾಂಗಿ ೯

ಪಕ್ಷಿವಾಹನ ನಿನ್ನ ಚೊಚ್ಚಲಮಗಳ ಎನ್ನಚ್ಛದ
ಅಭಿಮನ್ಯುಗೆ ಮಾಡುವುದು ಅ-
ಪೇಕ್ಷವಾಗೇದೆ ಎನಗೆ ಬೇಡುವೆನು
ನಿಶ್ಚಯ ಮಾಡಿ ಜನರೊಳಗೆ

ಕೊಡು ಕೀರ್ತಿ ನಿನಗೆ ಪಟ್ಟದರಸಿಯು ಸಹಿತ ನೀ ಒಡಂಬಟ್ಟು
ಎನಗ್ವಚನವನೆ ಪಾಲಿಸು ಕಟ್ಟಿದ್ದಾದಿಯು
ಬಿಟ್ಟು ಪೋಗುವೆ ದಯಮಾಡಣ್ಣಯ್ಯ ನೀ ಕೃಷ್ಣಯ್ಯ ೧೦

ತರವಲ್ಲೆ ರುಕ್ಮಿಣಿಬೀಗತನ ಭಾಳ ಪರಿ-
ಯಾಲೋಚನೆ ಮಾಡು
ರುಕುಮನ ಗಡ್ಡ ಶಿರ ಪಟ್ಟಿ ಪನ್ನಿ ನೋಡು
ದೊರೆ ಶಿಶುಪಾಲ ವರನವಸ್ಥೆಯು
ಕೊಂಡಾಡು ಧೈರ್ಯವನೆ ಮಾಡು ಬರೆದು [ಓ]ಲೆಯು
ಕಳಿಸಿಎನ್ನ ಕರೆಸಿ ಬೆನ್ನ್ಹತ್ತೋಡಿಬಂದ ಬಿರುದನರಿಯೋ-
ನ್ನರ ಶುಭಾಂಗಿನಿ ಕದವ ಬಿಡು ತಂಗಿ ಕೋಮಲಾಂಗಿ ೧೧

ಕೃಷ್ಣ ಸುಭದ್ರೆ ಮಾತುಗಳ ರುಕ್ಮಿಣಿ ಕೇಳಿ
ಮತ್ತ್ಯಾತಕೆನ್ನ ದೂರು
ಯತಿಗಳ ಬೆನ್ನ್ಹತ್ತಿ ಹೋದವರು ದಾರು
ಕೃತ್ಯವ ನಡೆಸಿದರೆನ್ನ ನಾದಿನೇರು ಚಿತ್ರಾಂಗಿಯೇರು
ಹಸ್ತಿನಾವತಿ ಅರಸು ಧರ್ಮರು ಹೆಚ್ಚಿಸ್ಹರಿ-
ಯಣ್ಣಯ್ಯ ಭೀಮನು ಪಾರ್ಥಸುತ ಎನ್ನ
ಸೋದರಳಿಯಗೆ ಕೊಟ್ಟೇನು ತಾರಮಸಿಗ್ಹೆಣ್ಣ ೧೨

ರಂಗ ಸುಭದ್ರೆ ಮಾತಿಗೆ ಒಪ್ಪಿವಸ್ತ್ರವ ಕೊಟ್ಟು
ಚಂದ್ರಗಾವಿಯು ಕುಪ್ಪಸ ಜರದ ಪೀ-
ತಾಂಬ್ರದುಡುಗೊರೆ ಕೊಡುತ
ಮುತ್ತಿನ ಹಾರ ತಂದು ಕೊರಳಿಗೆ ಹಾಕುತ
ರುಕ್ಮಿಣಿಯು ಸಹಿತ ಬಂದ ಭೀಮೇಶ ಕೃಷ್ಣ
ಪಾರ್ಥನ ರಂಭೆ ಕನ್ಯವಗೆದ್ದಳಿಸುತಲಿ ಸಂಭ್ರಮದಿ
ದೇವೇಂದ್ರ ಬ್ಯಾಗನೆ ಚೆಂದದಲ್ಹೂಮಳೆಯ ಕರೆದರು ೧೩

೪೬

ಕೇಳೋನಂದ ಇದು ಏನು ಚೆಂದ
ಹಾಲಿನ್ಹರವಿಯ ಒಡೆದೋಡಿ ಬಂದು
ಬಾಲರನು ಕೂಡ್ಯಾಡಿ ಗೋವಿಂದ
ಬವಣೆಬಡಿಸುವ ಬಲುಬಗೆಯಿಂದ ಪ.

ಕಣ್ಣ ತೆರೆದು ಉದಕದೊಳಾಡುವನು
ಸಣ್ಣ ಮೋರೆಯ ಮಾಡಿ ಬಗ್ಗುವನು
ಮಣ್ಣ ಕೆದರುತ ಕ್ರೋಢಾಗಿ ತಾನು
ಚಿನ್ನಸುರ ಎಲ್ಲೆ ಕರುಳ್ಹಾರ್ಹಾಕುವನು ೧

ತಿರುಕನಂದದಿ ಬೇಡಿಕೊಂಬುವನೊ
ಗುರುತ ದಾರದರಿಯ ತಾಯ್ಹಂತಕನು
ದೊರೆತನವ ಬಿಟ್ಟಡವಿಲಿರುವವನು
ಶರತಮಾಡಿ ಮಾತುಳನ ಕೊಲ್ಲುವನು ೨

ಬೌದ್ಧರೂಪದಿ ಲಜ್ಜೆಗೆಡಿಸುವನು
ಎದ್ದು ತುರುಗನೇರ್ಹ್ಯೋಡಿ ಪೋಗುವನು
ಕದ್ದು ಬೆಣ್ಣೆಯ ಮೆಲ್ಲುವ ತಾನು
ಮುದ್ದು ಭೀಮೇಶಕೃಷ್ಣ ಎಲ್ಲಿಹನು ೩

೪೭

*

ಕೊಡು ಕೊಡು ವರವ ಕಿಂಕರ ನಾನಲ್ಲೆ
ಪಿಡಿ ಕೈ ಹೂವಿನ್ಹಡಗಲಿ ಹನುಮಂತರಾಯ ಪ.

ನೂರುಗಾವುದ ಶರಧಿಯ ದಾಟಿ ಲಂಕೆ
ಊರು ಸುಟ್ಟು ಬಂದ ಧೀರ ನೀನಲ್ಲೆ ೧

ಕ್ರೂರ ಕೌರವರ ಮುರುಹಿ ಕರಿಪತಿ ರಾಜ್ಯ
ರಾಯ ಧರ್ಮಗೆ ಪಟ್ಟ ಕಟ್ಟಿದೆಯಲ್ಲ ೨

ಮಾಯಾವಾದಿಗಳ ಮರ್ದಿಸಿ ಮಧ್ವಮುನಿಯೆ
ಭೀಮೇಶಕೃಷ್ಣಧಿಕೆಂಬೊ ಬಿರುದೆತ್ತಿದ್ಯಲ್ಲ ೩

---

* ಹೂವಿನ ಹಡಗಲಿ[ಯ] ಪ್ರಾಣೇಶನ ಮೇಲಿನ ಹಾಡು.

## ೪೮

*

ಕೊಳಲೂದೋ ರಂಗಯ್ಯ ರಂಗ ನೀ
ಕೊಳಲೂದೋ ಕೃಷ್ಣಯ್ಯ ಪ.

ಕೊಳಲೂದೋ ಗೋವಳರೊಡಗೂಡಿ
ಚೆಲುವ ಶ್ರೀವೇಣುಗೋಪಾಲ ಕೃಷ್ಣ ನೀ ೧

ಕಡಲೊಳಗಿದ್ದು ಬಂದ್ದುಡಗದಿಂದಲಿ
ಕಡಗೋಲ ಪಿಡಿದ ಉಡುಪಿಯ ಕೃಷ್ಣ ನೀ ೨

ಎಂಟು ಮುಂದ್ಯತಿವರ್ಯರು ನಿನ್ನ ಸೇವೆಗೆ
ಬಂಟರಾಗಿಹರ್ವೈಕುಂಠ ಪತಿ ಕೃಷ್ಣ ನೀ ೩

ನಿಜಭಕ್ತರು ಕೈಬೀಸಿ ಕರೆಯಲು
ರಜತ ಪೀಠದ ಪುರವಾಸ ಕೃಷ್ಣ ನೀ ೪

ಸತ್ಯವಾದ ಜ್ಞಾನ ಪೂರ್ಣಾನಂದ–
ತೀರ್ಥರ ಕರವಶವಾದ ಕೃಷ್ಣ ನೀ ೫

ಅಂದಿಗೆ ಕಿರುಗೆಜ್ಜೆ ಘಲ್ಲು ಘಲ್ಲೆನುತ ಕಾ–
ಳಿಂಗನ್ಹೆಡೆಯಲಿ ಕುಣಿದಾಡೊ ಕೃಷ್ಣ ನೀ ೬

ದಾಸರ ಮನದಭಿಲಾಷೆ ಪೂರೈಸಿ ಭೀ–
ಮೇಶ ಕೃಷ್ಣನೆ ದಯಮಾಡೊ ರಂಗ ನೀ ೭

## ೪೯

**

ಗಜಮುಖ ಗಣಪನಂಬುಜಪಾದಕ್ಕೆರಗುವೆ
ನಿಜವಾದ ವರವ ನಾ ಬೇಡಿಕೊಂಬೆ
ಅಜನರಸಿಗೆ ಅತಿ ಭಕ್ತಿಂದೆ ಭಜಿಸುವೆ
ತ್ರಿಜಗವಂದಿತನ ಕತೆಯ ಪೇಳ್ವೆನು ೧

---

* ಉಡುಪಿ ಶ್ರೀಕೃಷ್ಣನ ಹಾಡು.
** ಜಲಕ್ರೀಡೆ ಹಾಡು.

ಗೋಕುಲದೊಳಗೆಲ್ಲ ಗೋಪಾಂಗನೇರು ಕೂಡಿ
ಏಕವಾಗಿ ಮಾತನಾಡಿಕೊಂಡು ತಾವು ಅ-
ನೇಕ ಸಂಭ್ರಮದಿಂದ ಆಡಿ ನೀರಾಟವ
ಬೇಕಾದೂಟವನುಂಡು ಬರುವೋಣೆಂದು ೨

ಸಕ್ಕರೆ ಸೂರೆಹಾಲು ಘೃತ ಪರಮಾನ್ನವು
ಚಕ್ಕುಲಿ ಗಿಲುಗಂಜಿ ಗುಳ್ಳೋರಿಗೆ ಬುಂಧ್ಯ
ಭಕ್ಷ್ಯ ಮಂಡಿಗೆ ಫೇಣಿ ಬುತ್ತಿ ಚಿತ್ರಾನ್ನ
ಹಪ್ಪಳ ಸಂಡಿಗಂಜೋಡುಪ್ಪಿನ ಕಾಯ್ಗಳು ೩

ಕಸ್ತೂರಿ ಗಂಧ ಕೇಸರಿ ಕುಂಕುಮರಿಷಿಣ
ಅಚ್ಚ ಮಲ್ಲಿಗೆ ಶಾವಂತಿಗೆ ಸರವು ದಿವ್ಯ
ಕರ್ಪೂರದಡಿಕೆ ಯಾಲಕ್ಕಿ ಎಲೆಯು ಸುಣ್ಣ
ಪತ್ರಿ ಲವಂಗ ತಬಕಿಲೆ ತಂದರು ೪

ಹೆರಳುಬಂಗಾರ ರಾಗಟೆ ಗೊಂಡ್ಯ ಕ್ಯಾದಿಗೆ
ಅರಳುಮಲ್ಲಿಗೆ ಸಂಪಿಗೆ ಮುಡಿದು ದಿವ್ಯ
ಕೊರಳ ಕಟ್ಟಾಣಿ ಸರಿಗೆ ಚಂದ್ರಹಾರ ಪು-
ತ್ಥಳಿ ಪಚ್ಚಪದಕಗಳ್ಹೊಳೆಯುತಲಿ ೫

ಕಡಗ ಕಂಕಣ ದ್ವಾರ್ಯ ನಾಗಮುರಿಗೆ ವಂಕಿ
ಬಿಡಿಮುತ್ತಿನ ಗೊಂಡ್ಯ ಬಾಜುಬಂದು ದೊಡ್ಡ
ಎಡಬಲಕಿವಿಯಲ್ಲಿ ವಾಲೆ ಸರಪಳಿ ಮುತ್ತು ಬು-
ಗುಡಿ ಚಂದರ ಬಾಳ್ಯ ಹೊಳೆಯುತಲಿ ೬

ಮುದ್ದು ಮೋರೆಗೆ ತಕ್ಕ ಮುಕುರ‍್ಯ ಬುಲಾಕಸಿಟ್ಟು ವ-
ಜ್ರದ್ಹರಳು ಬಲಮೂಗಿನಲಿ ದಿವ್ಯ
ತಿದ್ದಿ ಮುಂಗುರುಳು ಮುತ್ತಿನ ಬೊಟ್ಟು ಕುಂಕುಮ
ಪದ್ಮದ್ಹೂವಿನ ಕುಬುಸಗಳ ತೊಟ್ಟು ೭

ಹರದಿಯರೆಲ್ಲರು ಪರಮ ಸಂಭ್ರಮದಿಂದ
ಜರದ ಪೀತಾಂಬರ್ವಜ್ಜರದ ಪಟ್ಟೆನಿಟ್ಟು
ಪರಿ ಪರಿ ಬಣ್ಣ ಸೀರೆಗಳುಟ್ಟು ಕಾಲ-
ಲಿ ರುಳಿ ಕಾಲುಂಗುರ ಗೆಜ್ಜೆ ಪೈಜಣವು ೮

ಚೆಲ್ವೆಯರೆಲ್ಲರು ಉಲ್ಲಾಸದಿಂದಲಿ
ಘಲ್ಲು ಘಲ್ಲೆಂದು ಹೆಜ್ಜೆಯನಿಡುತ ತಾವು
ಮಲ್ಲೆ ಮಲ್ಲಿಗೆ ಪುನ್ನಾಗ ಸಂಪಿಗೆ ತೋಟ
ಅಲ್ಲಲ್ಲೆ ನಿಂತು ನೋಡುತ ಬಂದರು ೯

ಕುಂದ ಮಂದಾರ ಸುಗಂಧಿಕ ದವನವು
ಬಂಗಾರದಂಥ ಕ್ಯಾದಿಗೆಯುಮಲ ಚೊಕ್ಕ
ದುಂಡುಮಲ್ಲಿಗೆ ಪಾರಿಜಾತ ತಾವರೆಮೊಗ್ಗು
ಚೆಂದ ಚೆಂದದ ಶಾವಂತಿಗೆ ವನವು ೧೦

ಹತ್ತಿ ಆಲದ ಮರ ಅಡಕೆ ತೆಂಗಿನ ಮರ ಅ–
ಶ್ವತ್ಥ ಕಪಿತ್ಥ ಕಿತ್ತಳೆ ಹಲಸು ನೋಡು–
ತ್ತತ್ತಿ ದ್ರಾಕ್ಷಿ ನೀರಲ ನಿಂಬೆ ದಾಳಿಂಬ್ರ
ಪಕ್ವಾದ ಜಂಬು ಸೀತಾಫಲವು ೧೧

ಎಲೆದೋಟದೊಳಗೆ ಯಾಲಕ್ಕಿಗೊನೆಯು ನೋಡೆ
ಕಳಿತ ಮಾವಿನ ಹಣ್ಣು ಕದಳೀ ಫಲ
ಬೋರೆ ಶ್ರೀತುಳಸಿ ವನಗಳಲ್ಲೆ
ಅರಿಷಿಣಂಜೂರಿ ಔದುಂಬ್ರ ಫಲ ೧೨

ಗಂಡ ಭೈರುಂಡ ಚಕೋರ ಚಾತಕ ಗಿಳಿ
ಹಿಂಡು ನವಿಲು ಚಕ್ರವಾಕ ಪಕ್ಷಿ ಗಿಳಿಹಿಂಡು
ಗಂಡೆರಳೆ ಗರುಡ ಹಂಸವು ನೋಡೆ ಹರಿ ಬ್ರಹ್ಮ
ತಂದೆ ಮಕ್ಕಳು ಏರೋವಾಹನವು ೧೩

ಕಸ್ತೂರಿಮೃಗ ಪುನುಗಿನ ಬೆಕ್ಕು ಪಾರ್ವಾಳ
ಜಕ್ವಕ್ಕಿ ಕೊಳಲ್ಹಕ್ಕಿ ಸಾರಂಗವು ಚಾರಿ
ಕುಕ್ಕುಟ ಭೈರುಂಡ ಎಡಖಗ ಬಲಕ್ಕಾಗಿ
ಕೊಟ್ಟವು ಶಕುನ ಜಲಕ್ರೀಡೆಗೆ ೧೪

ಕಾಳಿಮರ್ದನ ಕೃಷ್ಣ ಹಾರಿದ ಮಡುವಿದು
ಕಾಳಿಂಗನೋಡಿಸಿ ಕಳೆದ ವಿಷ ಕೆಟ್ಟ
ನೋಡೆ ಅಮೃತಕೆ ಮಿಗಿಲಾಗಿದೆ ಈ ಜಲ
ಏನು ಪುಣ್ಯ ಮಾಡಿದ್ದಳೊ ಯಮುನಾ ೧೫

ನೀಲ ಮಾಣಿಕ್ಯ ಮುತ್ತು ಕೂಡಿಸಿದಂತೆ ತ್ರಿವೇಣಿ ಆ-
ದಳು ತಾ ಪ್ರಯಾಗದಲಿ ತ್ರಿವೇಣಿ
ಭಾಗೀರಥಿ ಸರಸ್ವತಿ ಕೂಡಿ ಸಂಗಮಳಾಗಿ
ಪೋಗೋಳು ಕಾಶಿ ಪಟ್ಟಣಕೆ ೧೬

ಕಮಲಸಖನ ಪುತ್ರಿ ಕಾಮಿತ ಫಲಕೊಟ್ಟು
ವರುಣನರ್ಧಾಂಗಿ ನೀ ವರವ ಕೊಡೆ ತಾಯೆ
ಯಮಧರ್ಮರಾಯನ ಭಗಿನಿ ನಿಮ್ಮ ಸ್ನಾನ-
ಫಲಕೊಟ್ಟು ಪಾಲಿಸೀಗೆಂದೆನುತ ೧೭

ನೋಡುತ ನಗುತ ಮಾತಾಡುತ ನಿಂತರು
ಓಡುತಾವೆ ಜಲ ಸೆಳವಿನಿಂದ ಆಹ
ಮಾಡುವೋಣ್ಹ್ಯಾಗೆ ಸ್ನಾನವ ನಾವು ಎನುತಲಿ
ಜೋಡಿಸಿ ತಮ್ಮ್ಹಸ್ತ ಮುಗಿದರಾಗ ೧೮

ಉಟ್ಟ ಸೀರೆಗಳನು ಬಿಟ್ಟು ಕುಪ್ಪಸ ಕಟ್ಟಿ
ಇಟ್ಟರು ಉಸುಕಿನ ಮಿಟ್ಟಿಯಲ್ಲೇ ತಾವು
ಮಿತ್ರಿಯರೆಲ್ಲ ತಮ್ಮ ಸ್ತನಗಳ್ಹಿಡಕೊಂಡು
ಥಟ್ಟನೆ ಇಳಿದರು ನದಿಯೊಳಗೆ ೧೯

ಮಾರಿಗೆ ಗೆಳತೇರು ವರ ಮೋಹನಾಂಗೇರು
ಮೋರೆಗೆ ಅರಿಷಿಣ ಕುಂಕುಮ್ಹಚ್ಚಿ ತಮ್ಮ
ನೀರಜಾಕ್ಷಿಯರೆಲ್ಲ ನಿರ್ಮಲವಾಗಿದ್ದ
ನೀರೊಳು ನಿಂತು ಮೈ ತೊಳೆದರಾಗ ೨೦

ಭಾರಿ ಸೆಳವಿನೊಳು ಬತ್ತಲೋಲ್ಯಾಡುತ
ಸಾರಸ ಮುಖಿಯರು ಸರಸದಿಂದ ಚೆಲ್ಲಿ
ದ್ವಾರ್ಯ ಕಂಕಣಕರ ಬೊಗಸೆಲಿಂದ ನೀರು
ತೂರುತ ತುಂಬಿ ಚೆಲ್ಲ್ಯಾಡುತಲಿ ೨೧

ಸರ್ಪನಂಥ ಹೆರಳೊಲವುತ ನೀರೊಳು
ಮುತ್ತಿನ ಸರಪದಕ್ಹೊಳೆಯುತಲಿ
ಬುಕ್ಕ್ಹಿಟ್ಟು ಗಂಧ ಮಲ್ಲಿಗೆ ಪಾರಿಜಾತವು
ತೆಪ್ಪದಂದದಲಿ ತೇಲ್ಯಾಡುತಿರೆ ೨೨

ಅಂಬುಜ ಮುಖಿಯರು ಸಂಭ್ರಮದಿಂದಲಿ
ತುಂಬಿ ಸೂಸ್ತರಿವಂಥ ನದಿಯೊಳಗೆ ತಾವು
ಜಾಂಬೂನದಪ್ರತ್ಥಳೀ ಬೊಂಬೆಯಂತಾಪುತ
ಚೆಂದ ಚೆಂದದ ಜಲಕ್ರೀಡೆಗಳ ೨೩

ಲಲನೆಯರಾಡುವೊ ಜಲಕ್ರೀಡೆ ನೋಡುತ
ಜಲಜನಾಭನು ಕೃಷ್ಣ ಕಳ್ಳನಂತೆ ಬಂದ
ಛಲದಿಂದ ಇವರ ಶಿಕ್ಷೆಯ ಮಾಡಬೇಕೆಂದು
ಹಲಧರಾನುಜ ಹಾಸ್ಯ ಮಾಡುತಲಿ ೨೪

ಮಡದಿಯರಿಟ್ಟಂಥ ಸೀರೆ ಕುಪ್ಪಸ ಕದ್ದು
ಕಡಹಾಲ್ದ ಮರವ ತಾ ಏರಿಕೊಂಡ ಕೃಷ್ಣ
ಗಿಡದ ಟೊಂಗೆಗಳಿಗೆ ಕಟ್ಟಿ ಕುಪ್ಪಸ ಸೀರೆ
ಸಡಗರದಿಂದ ನೋಡುತ ಕುಳಿತ ೨೫

ಆಣಿಮುತ್ತಿನ ಗೊಂಬೆಯಂತೆ ನಾವೆಲ್ಲರು
ನೀಲದಂತ್ಹರಿವಂಥ ನೀರೊಳಗೆ ನಿಂತು
ಭಾಳ ಸಂಭ್ರಮದಿಂದ ಆಡೋ ಜಲಕ್ರೀಡೆ
ಹ್ಯಾಗೆ ನಮ್ಮನೆಗೆ ಬಿಟ್ಟೊಹೋಗುವೋಣೆ ೨೬

ಇಂಥಾ ಗೋಕುಲ ವೃಂದಾವನದಲ್ಲಾನಾವು
ಎಂಥಾ ಚೆಂದವೆ ಯಮುನಾನದಿಯು ಆಹ ಅ-
ನಂತ ಜನ್ಮದಲ್ಲಿ ಮಾಡಿದಂಥ ಪುಣ್ಯದಲಿ ಶ್ರೀ-
ಕಾಂತ ಕೃಷ್ಣನ ಕೂಡಿಲ್ಲಿದ್ದೇವಲ್ಲೆ ೨೭

ಹೊತ್ತು ಭಾಳಾಯಿತು ಹಸ್ತವು ಸಮೊತ್ರುಟ್ಟಿ
ಕಾತ್ಯಾಯಿನೀ ಪೂಜೆ ಮಾಡಬೇಕೇ ನಾವು
ಅತ್ಯಂತ ಹರುಷದಿಂದ ಸತಿಯರೆಲ್ಲ
ಹತ್ತಿ ಬಂದರು ಸೋಪಾನಗಳ ೨೮

ಎಡಗಯ್ಯ ಮರೆಮಾಡಿ ಬಲಗಯ್ಯ ತಿರುವುತ
ಹುಡುಕುತ ನೀಡುಕುತ ಹುಡುಗೇರೆಲ್ಲ ಬಂದು
ಉಡುವೋ ಸೀರೆಗಳಿಲ್ಲ ತೊಡುವೊ ಕುಪ್ಪಸವಿಲ್ಲ
ತುಡುಗ ಕಳ್ಳ್ಯಾವಾತ ಬಂದಿದ್ದನೆ ೨೯

ಗದಗ್ಹುಟ್ಟಿ ನಡುಗುತ ಎದೆ ಭುಗಲೆನ್ನುತ
ಬದಲೊಂದು ಬಟ್ಟೆಯು ತರಲಿಲ್ಲವೆ ನಾವು
ಸದನಕ್ಕೆ ಹೋದರೆ ಕದನ ಭಾಳಾಗೋದು
ನದಿ ಆಟ ನಮಗೆಲ್ಲ ವಿರ್ತಾಯಿತೆ ೨೦

ನೂರಾರು ಗೋಪಿಯರಿಟ್ಟ ಕುಪ್ಪಸ ಸೀರೆ
ಹಾರಿ ಹೋದವು ದಾವ ದಿಕ್ಕಿನಲಿ ನೋಡೆ
ಊರೂರು ತಿರುಗುವ ನಾರದಮುನಿ ಬಲ್ಲ
ನಾರಾಯಣನೊಬ್ಬ ತಾ ಬಲ್ಲನೆ ೨೧

ಗೋವ್ಗಳ ಹೊಡಕೊಂಡು ಗೋವಳರೊಡಗೊಂಡು
ಈಗ ಬರುವ ವ್ಯಾಳ್ಯವಾಯಿತಲ್ಲೆ ಕೃಷ್ಣ
ಹ್ಯಾಗೆ ಮಾಡುವ್ರೋಣ ತಾ ಬಂದರೆ ನಮ್ಮಾನ
ಹೋಗೋದು ಉಳಿಗೊಡನಲ್ಲವನು ೨೨

ಕರಿಯು ಹೂವಿನ ಸೀರೆ ಬಿಳಿಯು ಹೂವಿನ ಸೀರೆ
ಜರಕಾಟಿ ಕೆಂಪು ಹೂವಿನ ಸೀರೆಯೆ ನಂದು
ಸರಿಯಾಗಿ ಕೂಡಿಸಿಟ್ಟಿದ್ದೆವೆ ಇವು ಮೂರು
ಬರಿಮೈಯಲ್ಹೋಗುವ ತೆರನಾಯಿತೆ ೨೩

ಸಾರಾವಳಿ ಸೀರೆ ರಾಗಾವಳಿ ಸೀರೆ
ದ್ವಾರವನಿ ಸೀರೆ ನಿಂದಲ್ಲೇನೆ ಅಕ್ಕ
ಗೋಧಿಮುಗ್ಗಿ ಸೀರೆ ಗುಬ್ಬಿ ಕಣ್ಣಿನ ಸೀರೆ
ಸೋದರತ್ತೆಯರುಟ್ಟ ಸೀರೆಗಳೆ ೨೪

ಭಾಳೆಪಟ್ಟೆಸೀರೆ ಬದನೆಬಣ್ಣದ ಸೀರೆ
ಸುರುತಿ ಸುಗುತಿ ಬಣ್ಣದ ಸೀರೆಯೆ ನಂದು
ಕಾಡಿಗ್ಗಣ್ಣಿನ ಸೀರೆ ಕರಿಯ ಚಂದರಕಾಳಿ
ನಾವಕ್ಕ ತಂಗಿಯೇರಿಟ್ಟದ್ದೆವೆ ೨೫

ಸಾಸ್ವೆಚುಕ್ಕೆ ಸೀರೆ ಸರಪಳ್ಯಂಚಿನ ಸೀರೆ
ರೇಷ್ಮೆ ಚುಕ್ಕೆ ಸೀರೆ ನಿಂದಲ್ಲೇನೆ ಅಕ್ಕ
ಸೂಸಿ ತುಂಬಿದ ನೀರೊಳೀಸ್ಯಾಡಿ ನಾವೆಲ್ಲ
ಮೋಸಹೋಗಿ ಕಳಕೊಂಡೇವಲ್ಲೆ ೨೬

ಕರಿಯ ಮಧುರೆ ಸೀರೆ ಜರಮಗ್ಗಿ ಕುಪ್ಪಸ
ಕರೆಸಿ ಸೋದರಮಾವ ಉಡಿಸಿದ್ದನೆ ನನ್ನ
ರವಪಕೆ ಅಂಚಿನ ದಿವ್ಯ ಕವಳಿಹೂವಿನ ಸೀರೆ
ಕುರುಡ್ಹುವ್ವಿನ ಸೀರೆ ನಮ್ದು ಕಾಣಲಿಲ್ಲೆ ೩೭

ಕಡ್ಡಿ ಪೈಠಣಿ ಸೀರೆ ಕಡ್ಡಾಯದಿಂದ ನಾ
ಬಡ್ಡಿ ಸಾಲವ ಮಾಡಿ ತಂದಿದ್ದೆನೆ ನಾನು
ಅಡ್ಡಿ ಮಾಡಿದ ಭಾವ ನಾ ಉಟ್ಟು ಬರುವಾಗ ಕುದ್ರಿ-
ಗೇಡಿ ನೆಗೆಣ್ಣಿ ಕುದಿವ್ರೋಳಲ್ಲೆ ೩೮

ಊದಿ ಬಣ್ಣದ ಸೀರೆ ಉದ್ರಿಮಾಡ್ತಂದು ನಾ-
ನಿಂದು ಗಳಿಗೆಯ ಮುರಿದುಟ್ಟನೆ ಅಕ್ಕ
ನಾದಾರಿಗ್ಹೇಳಲೆ ನನ್ನಾಸೆ ಪಪ್ಪಳಿ
ಸೀರೆ ಎಲ್ಹೋಯಿತೆ ಸಿಗವಲ್ಲದು ೩೯

ಮಾವಿಗೆ(ನ್ಗೆ?)ರೆ ಸೀರೆ ಮಾಮುದ್ದ ಸೆರಗಿತ್ತು
ಮಾವ ತಂದು ಕೊಟ್ಟ ನನಗೆ ನಿನ್ನೆ ನೋಡೆ
ಹ್ಯಾವವಿಲ್ಲದೆ ಮನೆಗ್ಹೋದರೆ ನ-
ಮ್ಮತ್ರವ ಕೋಲು ಕೋಲಲಿ ಹೊಡೆಹ್ಯೊರಗ್ಹಾಕುವ ೪೦

ಜರತಾರಿ ಸೆರಗಿನ ಮುತ್ತಾರಿ ಪತ್ತಲ
ಅತ್ತ್ಯಿಟ್ಟ ಬಣ್ಣವ ಕೊಟ್ಟಿದ್ದಳೆ ನನಗೆ
ಬತ್ತಲೆ ನಾ ಮನೆಗ್ಹೋದರೆ ನಮ್ಮತ್ತೆ
ನೆತ್ತಿ ನೆತ್ತಿಗೆ ಹೊಡೆದಟ್ಟುವಳೆ ೪೧

ಪಚ್ಚದಂತ್ಹೊಳೆಯೋದು ಹಸುರು ಪತ್ತಲ ನಂದು
ಹಚ್ಚನ ಗಿಳಿ ಗಿಡ ಸೆರಗಿನಲ್ಲೆ ಅದ
ಇಚ್ಛೆಗೆ ಬಂದಂತೆ ಕಾಣಿಕಾಣಿದಾಡುತ
ರೊಚ್ಚಿಗೆ ನಾ ಒಳಗಾದೆನಲ್ಲೆ ೪೨

ರಂಗ್ಯದ್ದಿಸಿದ್ದೆನೆ ಚಂಗಾವಿ ಪತ್ತಲ
ಬಂಗಾರದಗೆರೆ ಸೀರೆ ನಿಂದಲ್ಲೇನೆ ಅಕ್ಕ
ಅಂಜೂರಿ ಬಣ್ಣ ನೋಡಾಚಿತ್ರ ಸೊಬಗಿನ
ಚೆಂದ ಚೆಂದದ ಸೀರ್ಯೆಲ್ಹೋದವ್ಹೇಳೆ ೪೩

ಮದುವ್ಯಾಗೆ ತಂದದ್ದು ಮಧುರೆ ಪತ್ತಲ ನಂದು
ಚದುರಂಗಮನೆ ಸೀರೆ ಚಪುರೆ ಸಿಂಪು ನೋಡೆ
ಪದುಮದ್ದೂವಿನ ಸೀರೆ ಪತಿವಶವಾಗೋದು
ಆದರಲ್ಲಿತ್ತಾವೊಾಯು ಮಂತ್ರಗಳು ೪೪

ಪ್ರಸ್ತಕ್ಕೆ ತಂದದ್ದು ಉಪ್ಪಾಡಿ ಪತ್ತಲ
ಕಸ್ತೂರಿ ಬಣ್ಣದ ಕಮಲದಪೇಟೆ ಅಂಚು
ಮುತ್ತಿನ ಬಟ್ಟಿನ ಸೀರೆ ಮೊದಲೆ ಮೈನೆರೆದಾಗ್ನ–
ಮ್ಮತ್ತಿಗ್ಯಕ್ಕರದಿಂದ ಕೊಟ್ಟದ್ದಳೆ ೪೫

ಹಾಲ್ಚಿಕ್ಕಿ ಸೀರ್ನಂದು ಗುಲಾಬ್ಜಿಕ್ಕಿ ಗೋಪೀದು
ಹಾವುರಾಣಿಗೆರೆ ಸೀರೆ ದಾರದೇನೆ ಅಕ್ಕ
ನೋಡೆ ನನ್ನುಗುಪು ಚುಕ್ಕೆ ಸೀರೆಯು ಮಟೆ
ಮಾಯಾಗಿ ಹೋಯಿತೆಲ್ಲೆ ತಿಳಿಯಲಿಲ್ಲ ೪೬

ಹಸುತಾಪ್ತಿ ಕುಪ್ಪಸ ಕಿಜಡಿ ಬಣ್ಣದ ಸೀರೆ
ಮುಸುಗ್ಹೊದ್ದು ನಾ ಮರಿಯಾದೆಯಿಂದ ಬಂದೆ
ಹಸುರು ಸಿಲಾರಿ ಸೀರೆಯು ಕಳಕೊಂಡೆ ನಾ
ರಸಕಸಿ ಭಾಳ ನಮ್ಮನೆ ಒಳಗೆ ೪೭

ಲಾಡ್ಲಾಪುರ ಸೀರೆ ನಂದು ಜೋಡು ಬುಗುಡಿ ಅಂಚಿತ್ತು
ನೋಡ್ನನ್ನ ಕರಿಯು ಮಿರಾಣಿ ಸೀರೆ ಅಕ್ಕ
ಜೋಡ್ ಪಕ್ಕಿ ಸೀರೆ ಕುಂಕುಮಗೆರೆ ಸೀರೆ ನಾ
ಜೋಡಿಸಿಟ್ಟದ್ದರೆಲ್ಲಿ ಹೋದವ್ವೋಳೆ ೪೮

ಜ್ಯೋತಿಯಂತ್ಹೊಳೆಯೋದು ಮೋತಿಚೂರಿನ ಸೀರೆ
ನಾ ತವರು ಮನೆಯಿಂದ ತಂದಿದ್ದೆನೆ ಅಕ್ಕ
ಪ್ರೀತಿಲಿ ನಮ್ಮಪ್ಪ ಕೊಟ್ಟದ್ದ ಕೇಳಿದ–
ರಾತಗಿನ್ನೆನ್ಹೇಳಲುತ್ತರವ ೪೯

ಕೋಲುಂಬ್ರ ಪೈಠಣಿ ಕೊರ್ನಾಡ ಸೀರೆಯು
ಚಾಡಗೆ (ಸಾಡಿಗೆ?) ರುಪಾಯ್ಗಳ ಕೊಟ್ಟಿಲ್ಲವೆ ಇನ್ನು
ನೀನೋಡಿದ್ದಿಲ್ಲೇನೆ ನೀಲ ಪತ್ತಲ ನಂದು
ಬಾಲಕೃಷ್ಣನ ಬಣ್ಣ ಹೋಲುವೋದೆ ೫೦

ಮೆಂತ್ಯಸಾಲಿನ ಸೀರೆ ಚಿಂತಾಕು ಪೈಠಣಿ
ಎಂಥ ಬಣ್ಣಿತ್ತ್ಹೇಳು ಮಗ್ಗಿಸೀರೆ ನಂದು
ಕಾಂತರು ತಂದಂಥ ಕಮಲದ್ಹೂವಿನ ಸೀರೆ
ಭ್ರಾಂತರಾಗಿ ಕಳಕೊಂಡೆವಲ್ಲೆ ೫೧

ವರಹಾಪ್ಹೂವಿನ ಸೀರೆ ಒಯ್ಯಾರದಿಂದುಟ್ಟು
ನಿರಿಗಳ ಕಾಲಿಂದ ಚಿಮ್ಮುತಲಿ ಬಂದೆ
ನೆರೆಮನೆಯವರ್ಕಂಡು ಬೆರಿಬೆರಿ ನೋಡುತ
ಯಿವಳ್ಯಾವಳ್ ಹೊಯ್ಮಾಲಿಯೆಂದರಲ್ಲ ೫೨

ಇರವಂತಿಗ್ಹೂವಿನ ಸೀರೆ ಕುಪ್ಪಸ ನಾ-
ವಿಟ್ಟಿರುವ್ರೋದೆಲ್ಲೋ ಈಗ ಹುಡುಕುವೆಲ್ಲೋ
ಸೆರಗೆಲ್ಲ ಜರತಾರಿ ಚಾರ್ಕಾನಿ ಪತ್ತಲ
ಸರಿಯಾಗಿ ಕೂಡಿಸಿಟ್ಟಿದ್ದೆವಲ್ಲೆ ೫೩

ಪುತಾಣ್ ಪೈಠಣಿಸೀರೆ ರತ್ನಮಾಣಿಕ್ಯದಂಚು
ಪಟ್ಟಾವಳಿ ಸೆರಗ್ಹೊದ್ದುಕೊಂಡು ನಾನು
ಕುತ್ತನಿ ಕುಬುಸ ತೊಟ್ಟೊಟ್ಟರಗೆ ನಾ ಬಂದರೆ
ದೃಷ್ಟ್ಯಾಗಿ ನನಮುಖ ಬಾಡೋದಲ್ಲೆ ೫೪

ಪಂಚಪೈಠಣಿ ನಂದು ಪಗಡೆಮನೆ ನಂದು
ಅಂಚೆಲ್ಲ ಜರತಾರಿ ಸೆರಗು ನೋಡೆ
ಮಿಂಚುತ ನಾವುಟ್ಟುಕೊಂಡರೆ ನನಗಂಡ
ಮಂಚ ಇಳಿಯುದೆ ಇಲ್ಲೆ ಕೂಡೆಂಬೋರೆ ೫೫

ಹಂಡ್ಯ ಪೈಠಣಿ ಸೀರೆ ಗೊಂಡ್ಯ ಮುತ್ತಿನ ಸೆರಗು
ಗಂಡನೊಲಿಸಿಕೊಂಬೊ ಸೀರೆ ಅದು ನೋಡೆ
ಕಂಡಕಂಡಲ್ಲೆ ನಾ ತಿರುತಿರುಗಿ ಬಂದರೆ
ಒಂದು ಮಾತಾಡುತಿದ್ದಿಲ್ಲವರು ೫೬

ಬುಟ್ಟದಾರಿ ಸೀರೆ ಬುಗುಡಿ ಜರತಾರಂಚು
ಪಟ್ಟಿಕೊಂಡಿಗೆ ವಜ್ರಪದಕನ್ಹಾಕಿ ಗೆಜ್ಜೆ
ಕಟ್ಟಾಣಿ ಸರ ನಿರಿಗಳ ಮ್ಯಾಲೋಲ್ಯಾಡುತ
ಎಷ್ಟ ಸಂಭ್ರಮದಿ ನಾ ಬಂದಿದ್ದೆನೆ ೫೭

ಭಾರಿ ಬೆಲೆಕೊಟ್ಟು ಬನಾರಸದ್ ಸೀರೆ ನಾ
ಭಾಳಪೇಕ್ಷದಲುಟ್ಟುಕೊಂಡಿದ್ದೆನೆ ನಾನು
ಭಾನುಪ್ರಕಾಶದಂತ್ಹೊಳೆವೊ ಚಂದರ ಸೀರೆ
ಬಾ ನಾನು ನೀನು ಕೂಡ್ಹುಡುಕುವೋಣ ೫೮

ಥಳಥಳ ಹೊಳೆವುದು ತಬಕದ್ಹೂವಿನ ಸೀರೆ
ನೊಳಕೊಂದು ನೂರ್‍ಹೊನ್ನು ಕೊಟ್ಟಿದ್ದೆನೆ ನಾನು
ಝುಳುಕುತ ಬಾಗುತ ಬಾಳೆಯ ಸುಳಿಯಂತೆ
ಬಳುಕುತ ಬಂದಿಲ್ಲೆ ಕಳಕೊಂಡೆನೆ ೫೯

ಝಗಝಗ ಹೊಳೆವುದು ಜಗಸ್ಮೋಹಿನಿ ಸೀರೆ
ನಗೆಮುಖದ ಗೊಂಬೆ ಸೆರಗನ್ಹೊದ್ದು ನಾನು
ವಗಲ್ ವಗಲ್ ಮಾಡುತ ಧಿಗಿಧಿಗಿ ನಾ ಬಂದೆ
ಧಿಗಲ್ ಧಿಗಲ್ಲಾಗೇದೆನ್ನೆದೆವೊಳಗೆ ೬೦

ವಂಕಿತೋಳಿಗೆ ತಕ್ಕ ಕಂಚುಕ ಹೋದರೆ
ಟೊಂಕದ ಪಟ್ಟಿ ಇನ್ಯಾತಕ್ಹೇಳೆ ನಮಗೆ ಅ-
ಲಂಕಾರ ವ್ಯಾತಕಿನ್ನು ಸೊಬಗಿನ ಸಭಾ-
ಲಂಕಾರದ ಸೀರ್‍ಯೆಲ್ಲ್ಹೋದವ್ಹೇಳೆ ೬೧

ಆಕಳ್‌ಕರಳೀ ಸೀರೆ ನಾ ಉಟ್ಟು ಬರುವಾಗ
ಗೋಪಾಲಕೃಷ್ಣ ತಾ ಕೊಳಲೂದುತ ಬಂದು
ಯಾಕೆ ಗಯ್ಯಾಳಿ ನಮ್ಮಾಕಳ ಕೊಡುಯೆಂದು
ತಾ ಕೈಯ್ಯ ಪಿಡಿದೆನ್ನ ಜಗ್ಗೇನಲ್ಲೆ ೬೨

ಖಂಬಾವತಿ ನಂದು ನೀಬಾವಳಿ ನಿಂದು
ಜಾಂಬೂನಾಜರದ ಪೀತಾಂಬರವೆ ಅಕ್ಕ
ಹೊಂಬಣ್ಣದ್ಹಳದಿ ಪೀತಾಂಬರ ಕಳಕೊಂಡು ದಿ-
ಗಂಬರರಾಗಿಲ್ಲಿ ನಿಂತೆವಲ್ಲೆ ೬೩

ವಸ್ತ್ರಗಣಿಕಿ ಸೀರೆ ಸುರ್ತಿ ಬಣ್ಣವು ನಂದು
ರತ್ನದ್‌ಪಪ್ಪಳಿ ಸೀರೆ ಉಟ್ಟಿದ್ದೆಲ್ಲೆ ನೀನು
ಕೊಟ್ಟು ಕಳ್ಳನ ಕೈಯ್ಯಾಗೆನ ಕೂಸುಂಬಿ ಸೀರೆ
ಎಷ್ಟು ಬಾಯ್ಬಿಟ್ಟರಿನ್ನೇನು ಫಲ ೬೪

ಕಳ್ಳನ್ಹೆಂಡತಿಯೇನು ಪುಣ್ಯ ಮಾಡಿದಳಾಕೆ
ಎಲ್ಲ್ಹೋಗಿ ನಮ ಸೀರೆ ಸೇರಿದಾವೆ ನ-
ಮ್ಮೆಲ್ಲರ ಸೀರೆಗಳುಟ್ಟುಕೊಂಡಾಕೆ ಭಾ-
ಳುಲ್ಲಾಸದಿಂದ ಓಡ್ಯಾಡುವೋಳೆ ೬೫

ಚೋರನ್ಹೆಂಡತಿಯಿಂಥ ಸೀರೆಯನುಟ್ಟರೆ
ನೋರೆಮ್ಯಾಲ್ಹೊಡದವ ಮಾರಿಕೊಂಬ ಆಕೆ
ದಾರುಟ್ಟರೇನೆ ನಿರ್ಭಾಗ್ಯರು ನಾವು ಕೈ-
ಮೀರಿ ಪೋದದ್ದು ಕೃಷ್ಣಾರ್ಪಣವು ೬೬

ಮಾನವ ಕಳಕೊಂಡು ಮನೆಗ್ಹೋಗಲಾರೆವೆ
ಏನೆಂಬಿರಿದಕೆ ನೀವೆಲ್ಲ ಕೂಡಿ ಬನ್ನಿರೆ
ನಾನೊಂದಾಲೋಚನೆ ಮಾಡಿದೆ ಮನದೊಳು
ಕಾನನದೊಳಗ್ಹೋಗಿ ಸೇರುವೋಣೆ ೬೭

ಕಣ್ಣೀರು ಸುರಿಸುತ ಕದಪಿಲಿ ಕರವಿಟ್ಟು
ಬಣ್ಣ ಬಣ್ಣದ ಸೀರೆ ವರ್ಣಿಸುತ ತಮ್ಮ
ಇನ್ನೀಗಿಡದ ತೊಪ್ಪಲುಟ್ಟುಕೊಂಡ್ಹೋಗಿ ಅ-
ರಣ್ಯವ ಸೇರಿಕೊಂಬುವೋಣೆಂದರು ೬೮

ಹೆಣ್ಣು ಮಕ್ಕಳು ನಾವು ಜೆಸ್ನಾರ ಜೆಲುವೇರು ಅ-
ರಣ್ಯವ ಸೇರಿಕೊಂಬುವುದು ಹ್ಯಾಗೆ ಹೋಗಿ
ಕಣ್ಣಿಟ್ಟ ಪುರುಷರು ಬಿಡುವ್ರೋರೆ ನಮ್ಮನ್ನ
ಇನ್ನೊಂದುಪಾಯ ನಾ ಹೇಳುವೆನು ೬೯

ಕೃಷ್ಣನು ಬಿದ್ದಂಥ ಕಾಳಿ ಮಡುವಿನೊಳು
ಒಟ್ಟಾಗಿ ನಾವೆಲ್ಲ ಘುಮುಕುವ್ರೋಣ ಹೋಗಿ
ಭಕ್ತವತ್ಸಲ ಸ್ವಾಮಿ ಭಯನಿವಾರಣ ಮುಂದೆ
ಮುಕ್ತಿ ಕೊಡುವೋನು ಮುಕುಂದ ಹರಿ ೭೦

ಯಮುನಾ ನದಿಯು ಕೂಡಿ ಹೋದರೆ ನಮಗಿಂಥ
ಯಮಧರ್ಮ ರಾಯನಂಜಿಕೆಯಿಲ್ಲವೆ ನಮಗೆ
ನಮ್ಮ ಶ್ರಮ ಪರಿಹಾರಮಾಡು ಓ ಭಗವಂತ
ನಮೋ ನಮೋಯೆಂದು ಕೈ ಮುಗಿದರಾಗ ೭೧

ಕೋಪ ಸಂತಾಪದಿ ಗೋಪಾಂಗನೇರೆಲ್ಲ
ಈ ಪರಿಯಿಂದ ಪ್ರಲಾಪಿಸುತ ತಾವು
ಅಪಾರಮಹಿಮನೆ ಆಪತ್ತುಬಾಂಧವ
ಶ್ರೀಪತಿ ನೀ ಗತಿಯೆಂದರಾಗ ೭೨

ಇಷ್ಟೊತ್ತು ಈ ಜ್ಞಾನ ಹುಟ್ಟಲಿಲ್ಲವರಿಗೆ
ಮತ್ತೀಗ ಸನಸ್ತುತಿ ಮಾಡುವೊರೊ ತಾವು
ಭಕ್ತವತ್ಸಲನೆಂಬೊ ಬಿರುದುಂಟು ನಮಗೀಗ
ಕೊಟ್ಟುಬಿಡುವೆ ಇವರ್‍ವಸ್ತ್ರಗಳ ೭೩

ಗಲಿಬಿಲಿ ಮಾಡುತ ಗದ್ದಲೆಬ್ಬಿಸಿದನು
ಘಿಲುಘಿಲುಘಿಲುಕೆಂದು ಕುಣಿದಾಡುತ ಕೃಷ್ಣ
ಮರದ ಟೊಂಗಿಗಳ [1][ಲುಗಾ][1] ಡಿಸಿ ಝಾಡಿಸಿ
ಎಲೆ ಕಾಯಿ ಉದುರಿಸುತಿದ್ದನಾಗ ೭೪

ಗಲಬಲ ಮರದಲ್ಲಿ ಗದ್ದಲವೇನಿದು
ಎಲೆ ಕಾಯಿ ಉದುರುವುದ್ಯಾತಕ್ಕೀಳೆ ಇಷ್ಟು
ಬಲುಭಯವಾಗುತಲೇನು ಸೋಜಿಗವೆಂದು
ಮರವ ಮೋರೆಯನೆತ್ತಿ ನೋಡಿದರು ೭೫

ನೀಲವರ್ಣಕೃಷ್ಣ ನಗುತ ನಿಂತಿರೆ ಕೋಟಿ-
ಸೂರ್ಯ ಪ್ರಕಾಶನ ನೋಡುತಲಿ ಕೋಟಿ
ಸೀರೆ ಕುಪ್ಪಸ ನೋಡೆ ಕಟ್ಟಿದ ಈ ಮರ
ಏರಲಿಕ್ಕೆ ನಮಗೆ ಬಾರದಲ್ಲೆ ೭೬

ಅಕ್ಕೊಳ್ಳಿ ನಮಕಳ್ಳ ಸಿಕ್ಕನೀ ಮರದೊಳು
ಚಕ್ಕಂದವಾಗ್ಯದೇನೊ ನಿನಗೆ ಕೃಷ್ಣ
ಚಿಕ್ಕ ಕೂಸೆಂದು ಮುದ್ದಿಸುವೋರು ನಾವಲ್ಲ
ತಕ್ಕ ಶಿಕ್ಷೆಯ ಕಲಿಸುವೆವೆಂದರು ೭೭

ಥಟ್ಟನಿಳಿದು ಬಾರೊ ಕೃಷ್ಣ ನಮ್ಮೆದುರಿಗೆ
ರಟ್ಟೆಹಿಡಿದು ಎಳೆದೊಯ್ದು ನಿನ್ನ ನಾವು ನಿ-
ಮ್ಮಪ್ಪ ಅಮ್ಮನ ಬದಿಯಲಿ ಕೊಟ್ಟು ಕಂಬಕ್ಕೆ
ಗಟ್ಟ್ಯಾಗಿ ಬಿಗಿಸಿಬಿಡುವೆವೆಂದರು ೭೮

---
1 ಗುಳಾ

ಓಡೋಡಿ ಹೋಗಿರೆ ಗಾಡಿಕಾರ್ತೆರೆ ನೀವು
ಛಾಡವ(ಚಾಡಿಯ?) ಹೇಳಿರೆ ನನ್ನ ಮ್ಯಾಲೆ ಭಾಳ
ನೋಡೆ ನಮ್ಮಪ್ಪ ಅಮ್ಮನ ಕರೆತಂದರೆ
ಜೋಡಿಸಿ ಉಡುಗೊರೆ ಕೊಡುವೆನೆಂದ ೭೯

ಕೃಷ್ಣ ಒಳ್ಳೆ[ಯ]ವನಲ್ಲ ದುಷ್ಟ ಹುಡುಗಯಿವ
ಕೆಟ್ಟಮಾತಲಿ ಕೆಲಸಾಗೋದೇನೆ ನಮಗೆ
ಅಪ್ಪ ಅಣ್ಣಯೆಂದು ಬೇಡಿಕೊಂಡರೆ ಕೂಸು
ಕೊಟ್ಟು ಬಿಡುವ ಇವ ವಸ್ತ್ರಗಳ ೮೦

ಅಪ್ಪ ಸೀರೆ ಕೊಡೊ ಅಣ್ಣ ಸೀರೆ ಕೊಡೊ ನ-
ಮ್ಮಪ್ಪನ ಮಗ ತಮ್ಮನಲ್ಲವೇನೊ ನೀ
ತುಪ್ಪಹಾಲು ಕೆನೆಮೊಸರು ಬೆಣ್ಣೆಯು ಬೇಡಿ-
ದಷ್ಟು ಕೊಡುವೆ ಕೃಷ್ಣ ಸೀರೆ ಕೊಡೊ ೮೧

ಅಪ್ಪನು ನಾನಲ್ಲ ಅಣ್ಣತಮ್ಮನು ಅಲ್ಲ
ತುಪ್ಪಹಾಲು ಬೆಣ್ಣೆ ಬ್ಯಾಡೆನಗೆ ನಿಮ್ಮ
ಅಪ್ಪನ ಅಳಿಯನೆಂದೊಪ್ಪಿಕೊಂಡರೆ ನಾನು
ಕೊಟ್ಟು ಬಿಡುವೆ ನಿಮ್ಮ ಸೀರೆಗಳ ೮೨

ಏನಂದರಂದುಕೊ ಮಾನವ ಕಾಯ್ಬೇಕೊ
ನಾವಂದ ಮಾತು ತಪ್ಪಿಡಿಯು ಬ್ಯಾಡೊ ಕೃಷ್ಣ
ಜ್ಞಾನವಿಲ್ಲದೆ ಸ್ನಾನ ಮಾಡಿದ ಅಪರಾಧ
ನೀನೆ ಕ್ಷಮಿಸಿ ನಮ್ಮ ಸೀರೆ ಕೊಡೊ ೮೩

ಮಛವತಾರನೆ ಮಂದರೋದ್ಧಾರನೆ
ಶಿಕ್ಷಿಸಿದ್ಯೊ ಹಿರಣ್ಯಾಕ್ಷನ ನೀನು
ಕುಕ್ಷಿ ಬಗೆದು ಕರುಳ್ಹಾರವ ಧರಿಸಿದ
ಸಾಕ್ಷಾತ ನರಸಿಂಹ ಸೀರೆ ಕೊಡೊ ೮೪

ಅಳೆದ್ಯೊ ನೀ ಭೂಮಿಯು ಅಳಿದ್ಯೊ ಭೂಪಾಲರ
ಕಳೆದ್ಯೊ ಸೀತಾಚೋರನ ಪ್ರಾಣವ ನೀನು
ಸೆಳೆದು ನಮ್ಮ ಸೀರೆ ಕಟ್ಟಿದ ಶ್ರೀಕೃಷ್ಣ
ನಳಿನಾಕ್ಷ ನೀ ನಮ್ಮ ಸೀರೆ ಕೊಡೊ ೮೫

ಅಂಬರ ಬಿಟ್ಟು ದಿಗಂಬರನಾಗಿ ನಿ-
ನ್ನೊಂಬತ್ತೆ ಅವತಾರ ನಮಗೆ ಕೊಟ್ಟ್ಯೋ ಸ್ವಾಮಿ
ಇಂಥ ನಿನಗೆ ಕಲಿಮನಸ್ಯಾಕೆ ಕಲಿ-
ಕ್ಯಾವತಾರ ತಾರೊ ನಮ್ಮ ಸೀರೆಗಳ ೮೬

ಅನಂತಾಸನ ಶ್ವೇತದ್ವೀಪವಾಸಿಯೆ-
ಅನಂತಮಹಿಮ ಅನಂತರೂಪ ಸ್ವಾಮಿ
ಅನಂತಾನಂತ ನೇತ್ರದಿ ನೋಡುತೀಗ ನಿ-
ನ್ನಾನಂತ್ಹಸ್ತದಿ ನಮ್ಮ ಸೀರೆ ಕೊಡೊ ೮೭

ಮುಂದಾಗಿ ಬೈದೆನ್ನ ಹಿಂದಾಗಿ ರಮ್ಮಿಸೊ-
ಪೆಂದು ಕಲ್ತಿರೆ ಈ ಸೈಯ್ಯಾಕಿತನ ನೀವು
ವಂದಿಯೊಳಗೆ ಮಾನವುಳಿಯುದೀಕಾವರೆ ಇ-
ನ್ನೊಂದು ಮಾತ್ಹೇಳುವೆ ಕೇಳಿ[ರೆಂದ][1] ೮೮

ಮರಸುತ್ತ ತಿರುಗುತ ಕರತಾಳ ಹಾಕುತ
ಸ್ವರವೆತ್ತಿ ಗಾಯ್ನ(ಯನ?)ವ ಮಾಡುತಲಿ ದೊಡ್ಡ
ಸರಿಯಾಗಿ ನಿಂತು ವಂದಿಸಿದರೆ ನಾನೀಗ
ಕೊಡುವೆನು ನಿಮ್ಮ ಸೀರೆಗಳೆಂದನು ೮೯

ಸುತ್ತ ಪ್ರದಕ್ಷಿಣೆ ಮಾಡುತ ಸತಿಯೇರು
ಒತ್ತಾಗಿ ನಿಂತರು ಮರದ ಮುಂದೆ ಬಂದು
ಮಸ್ತಕದಲ್ಲೊಂದು ಹಸ್ತಗಳಿಟ್ಟು ಶ್ರೀ-
ಕೃಷ್ಣಗೆ ನಮೋ ನಮೋಯೆಂದರಾಗ ೯೦

ಒಂದು ಕೈ ವಂದನೆ ಚೆಂದವೆ ನಿಮಗಿದು
ಇಂದ್ಯಾವ ಕುಲ ನಿಮ್ಮದ್ಹೇಳಿರೆಂದ ಕೃಷ್ಣ
ಇಂದಿರಾಪತಿಯೆ ನೀ ಗತಿಯೆಂದು ಸತಿಯೇರು
ವಂದಿಸಿ ಎರಡ್ಹಸ್ತ ಮುಗಿದರಾಗ ೯೧

ಅವರವರ ಕೈಯಲ್ಲೆ ಅವರವರ ಸೀರೆಯ
ಬದಲಾಗದಂತೆ ತಾ ಒಗೆದ ಕೃಷ್ಣ ನೋಡಿ

1 ಳೆಂದನು

ಹರವೇರೆಲ್ಲರು ಹರುಷಪಟ್ಟುಕೊಂಡರು
ಮರ ಇಳಿದ ಮಾರಜನಕ ತಾನು ೯೨

ಅರಿಷಿಣ ಕುಂಕುಮ ಹಚ್ಚಿ ಶ್ರೀ ಗೌರಿಗೆ
ತರಿಸಿ ಮಲ್ಲಿಗೆದಂಡೆ ಮುಡಿಸುತಲಿ ಕಾಯಿ
ಒಡೆಸಿ ನೈವೇದ್ಯಗಳಿಡಿಸುತಲಿ [1]+ಕೃಷ್ಣಗೆ
ಸರ ಪದಕಗಳ್ಹಾಕಿ ನಲಿಯುತಲಿ ೯೩

ಕಮಲಾಕ್ಷಿಯರು ಕಮಲಾಪತಿ ಕೊರಳಿಗೆ
ಕಮಲ ಮಲ್ಲಿಗೆ ಮಾಲೆ ಹಾಕುತಲಿ ದಿವ್ಯ
ಸುಮನಸದೊಳು ಪರಿಮಳದಂತೆ ಕೃಷ್ಣ ತಾ
ಅಮರನಾಥವರ ಗುಂಪಿನಲಿದ್ದನು ೯೪

ಕಾತ್ಯಾಯಿನೀವ್ರತ ಮಾಡಿದೆವಿಂದಿಗೆ
ಪೂರ್ತಿಯಾಯಿತು ಮನೋಭೀಷ್ಟಗಳು ನಮಗೆ
ಪಾರ್ಥಸಾರಥಿ ಕೃಷ್ಣ ಮೂರ್ತಿಗೆ ಪಾಡುತ ಮಂಗ–
ಳಾರ್ತಿ ಬೆಳಗಿದರು ಶ್ರೀಗೌರಿಗಾಗ ೯೫

ಮುಂಜಿಗೆ ಪೂರ್ವದಿ ರಂಗರಾಯರ ದಿವ್ಯ
ಅಂಗ ಸಂಗವ ಬಯಸಿದ್ದರಾಗ ಕೃಷ್ಣ
ಮಂಗಳ ಮಹಿಮ ಗೋಪಾಂಗನೆಯರಿಗೆ ಆ–
ಲಿಂಗನೆ ಕೊಟ್ಟು ಸುಖಪಡಿಸಿದನು ೯೬

ಮಂಡಿಗೆ ಫೇಣಿಯು ತಂದ ಮೃಷ್ಟಾನ್ನವು
ಪುಂಡರೀಕಾಕ್ಷನ ಸಹಿತವಾಗಿ
ಉಂಡು ತಾಂಬೂಲಗಳ ಹಾಕಿಕೊಂಡು ಸತಿಯರೆಲ್ಲ
ದುಂಡುಮಲ್ಲಿಗೆ ವನದೊಳಗಾಡುತ ೯೭

ಆಣಿ ಮುತ್ತಿನ ಗೊಂಬೆಯಂತೆ ಸತಿಯೋರೆಲ್ಲ
ನೀಲವರಣ ಕೃಷ್ಣನಂಗಸಂಗ ಬೇಡಿ
ಮಾಡಿ ಮನೋಭೀಷ್ಟ ಪಡೆದರೆಂದವರರು
ನೋಡುತ ಹೂಮಳೆ ಕರೆದರಾಗ ೯೮

---

[1] + ಸರಸಾದಿಗಂಧ ಪರಿಮಳ ಹಚ್ಚಿ

ಎಷ್ಟು ಜನ್ಮದ ಪುಣ್ಯಫಲ ಬಂದು ಒದಗಿತು
ಎಷ್ಟುಜನ್ಮದ ತಪಸ್ಸಿನ ಸಿದ್ಧಿಯೊ ನಮ-
ಗೆಷ್ಟು ಶ್ರೀವತ್ಸ ಶ್ರೀದೇವೇರೊಪ್ಪುವೊ
ವಕ್ಷಸ್ಥಳದಿಂದ ಅಪ್ಪಿ ಆಲಿಂಗನೆ ಕೊಟ್ಟ ಕೃಷ್ಣ ೯೯

ವನರುಹನೇತ್ರೇರು ವನಜನಾಭನ ಕೂಡ
ಮನಕೆ ಬಂದಂಥ ಕ್ರೀಡೆಯನಾಡುತ ತಮ್ಮ
ಮನಸಿಜಪಿತ ತನ್ನ ಮನಸೋತ ನಮಗೆಂದು
ಘನ ಹರುಷದಿ ನಗುತಿದ್ದರಾಗ ೧೦೦

ಮಂಗಳ ಮಹಿಮ ತಾ ಪೊಂಗೊಳಲೂದುತ
ಅಂಗನೆಯರ ಸಹಿತಾಗಿ ಕೃಷ್ಣ ತಾ
ಚೆಂದಚೆಂದವಲಿ ಆನಂದದಿ ನಲಿಯುಲು
ಬಂದರು ತಮ್ಮ ತಮ್ಮರಮನೆಗೆ ೧೦೧

ಸಂತೋಷದಿಂದ ಈ ಮೌನಗೌರಿಯು ಮಾಡಿ-
ದಂಥ ಪುಣ್ಯದ ಕಥೆ ಕೇಳಿದರೆ ಮಾಡಿ
ಸಂತಾನ ಸಂಪತ್ತು ಸಾಯುಜ್ಯಪದವಿ ಶ್ರೀ-
ಕಾಂತ ತಾ ಒಲಿದ್ವರಗಳ ಕೊಡುವ ೧೦೨

ನೇಮದಿಂದೀ ಕಥೆ ಕೇಳಿದ ಜನರಿಗೆ
ಕಾಮಿತಾರ್ಥಗಳು ಕೈಗೂಡುವುವು ಅವರ
ಪ್ರೇಮದಿಂದ್ವಲಿದ್ಹೋನು ಭೀಮೇಶಕೃಷ್ಣ ತಾ
ಬೇಡಿದಭೀಷ್ಟವ ಕೊಡುತಿರುವ ೧೦೩

೫೦

*

ಗಜವದನನ ಪಾದಾಂಬುಜಗಳಿಗೆರಗುವೆ
ಅಜನರಸಿಗೆ ನಮಸ್ಕರಿಸಿ
ತ್ರಿಜಗವಂದಿತ ಲಕ್ಷ್ಮೀನಾರಾಯಣ ಸ್ವಾಮಿ
ನಿಜಪತ್ನಿ ಕತೆಯ ವರ್ಣಿಸುವೆ ೧

* ಶನಿವಾರದ ಹಾಡು

ಅರಸನಾಶ್ರಯವ ಮಾಡೊಂದು ಪಟ್ಟಣದಲ್ಲಿ
ಇರುತಿದ್ದ ಸೋಮೇಜಭಟ್ಟ
ಹರುಷದಿಂದಲಿ ಸೊಸೆಯರು ಗಂಡುಮಕ್ಕಳು
ಭರಿತವಾದರು ಸುಖದಿಂದ ೨

ಆ ಮಹಾಕ್ಷೀರಸಾಗರದಲ್ಲಿ ಜನಿಸಿದ
ಶ್ರೀಮಹಾಲಕ್ಷ್ಮಿದೇವಿಯರ
ಸೇವದಿಂದಿಟ್ಟು ನಿಷ್ಠೆಯಲಿ ಸೋಮೇಜಮ್ಮ
ತಾ ಮಹಾ ಸಂಭ್ರಮದಿಂದ ೩

ಸಾದು ಪರಿಮಳ ಅರಿಷಿಣ ಗಂಧ ಕುಂಕುಮ
ಕ್ಯಾದಿಗೆ ಕುಸುಮ ಮಲ್ಲಿಗೆಯ
ಮಾಧವನರಸಿ ಮಾಲಕ್ಷ್ಮಿಗರ್ಪಿಸಿ
ಮಂಗಳಾರತಿಯನು ಬೆಳಗುವೋರು ೪

ಎಣ್ಣೋರಿಗೆ ತುಪ್ಪ ಸಣ್ಣ ಶಾವಿಗೆ ಪರ-
ಮನ್ನ ಶಾಲ್ಯಾನ್ನ ಸೂಪಗಳು
ಚೆನ್ನವಾಗಿದ್ದ ತಾಂಬೂಲನರ್ಪಿಸಿ ಅ-
ದನ್ನುಂಡರತಿ ಹರುಷದಲಿ ೫

ಸುಂದರ ಗೌರಿ ಶುಕ್ಕರವಾರಪೂಜೆ ಸಾ-
ನಂದದಿ ಶನಿವಾರದಲ್ಲಿ
ಕುಂದ ಮಂದಾರ ಮಲ್ಲಿಗೆ ಗಂಧ ಕುಂಕುಮ
ಚೆಂದುಳ್ಳಾರುತಿಯನೆತ್ತಿದರು ೬

ಪಿಷ್ಟಿನ ಕಡುಬು ಹಿಂಡಿಯ ಪಲ್ಯವನು ಮಾಡಿ
ಅಚ್ಚೆಳ್ಳು ಗಾಣದೆಣ್ಣೆಯನು
ನುಚ್ಚು ಮಜ್ಜಿಗೆಹುಳಿ ತುಳಿಯ ಕಟ್ಟಂಬಲಿ
ಇಟ್ಟರು ನೈವೇದ್ಯಗಳನು ೭

ಭೋಜನಕೆಸುತ ಕುಳ್ಳಿರುವೊ ಕಾಲದಿ ಬಂದು
ರಾಜನ ಸತಿಯು ನೋಡುತಲಿ
ಸೋಜಿಗವೆ ನಿಮ್ಮ ಗೌರಿಯ ಸಂಪತ್ತು
ಈ ಜಗದೊಳಗೆ ಕಾಣೆನೆನುತ ೮

ಬೇಕಾದರೊಂದು ಬೇಡಲು ಅರಸನ ಸತಿ
ಸಾಕು ದರಿದ್ರದಂಬಲಿಯು
ಹಾಕಿದರ್ಹರಡಿ ಕಂಕಣದೊಳು ಸಿಕ್ಕೀತು
ನಾ ಕೈಯ್ಯ ಇಡಲಾರೆನೆನಲು ೯

ತಟ್ಟನೆದ್ದಾಕಿ ಕೊಂಡಷ್ಟು ಪದಾರ್ಥವ
ತುಷ್ಟರಾಗುಂಡರಾಗವರು
ಕಟ್ಟಿದ್ದ ತೂಗುಮಣೆಯಲಿ ಕಾಲುಗಳಿಳಿ–
ಬಿಟ್ಟು ಕುಳಿತಳು ರಾಜನರಸಿ ೧೦

ಒಂದೊಂದು ಅಡಿಗೆ ನಿಂದ್ಯವು ಮಾಡಿ ನಗುತಿರೆ
ಕುಂದಿತು ಸಕಲ ಸಂಪತ್ತು
ಬಂದಿತು ಪರರಾಯರಿಂದ ಮುತ್ತಿಗೆ ದೊರೆ–
ಬಂಧನ ಮಾಡಬೇಕೆನುತ ೧೧

ದೊರೆ ತಾ ನೋಡುತಲಿರೆ ತ್ವರಿತದಿಂದಾತನ ಅನು–
ಸರಿಸಾಗ ನಡೆದರು
ದಿನತುಂಬಿದಂತೆ ಗರ್ಭಿಣಿಗಾಗ ಬಂದುವು
ಕ್ಷಣಕೊಮ್ಮೆ ಟೊಂಕ ಬ್ಯಾನೆಗಳು ೧೨

ಪುತ್ಥಳಿಗೊಂಬೆಯಂದದಿ ಜೋಡು ಮಕ್ಕಳು
ಕಿತ್ತಳಿವನದೊಳು ಜನಿಸೆ
ಹೊಚ್ಚಿದಳಾ ಬಾಳೆಲೆಯ ಹಾಸುತ ಹೊಳೆ
ತಟ್ಟನೆ ದಾಟಿ ನಡೆದರು ೧೩

ಬೇಕಾದ ಫಲಗಳನೇಕ ಪುಷ್ಪಂಗಳು
ಜೋಕೆಮಾಡುತ ವನದಲ್ಲಿ
ಕೋಕಿಲು ಗಿಳಿ ನವಿಲ್ಹಿಂಡು ನೋಡುತಲಿ ತಾವ್
ಹಾಕುತಿದ್ದರು ಕಾಲವನು ೧೪

ನಸುಕಿನೊಳಗೆ ಬಂದ ಸೋಮೋಜಭಟ್ಟನು
ಹಸು ಮಕ್ಕಳನ್ನೆ ನೋಡಿದನು
ಮುಸುಗ್ಹಾಕಿ ತಂದು ಮುದ್ದಿಸುವ್ರೋಮಕ್ಕಳ ಸತಿ
ವಶಮಾಡಿ ಕೊಟ್ಟ ಕೈ ಒಳಗೆ ೧೫

ಹುಟ್ಟಲಿಲ್ಲವೆ ಹೆಣ್ಣುಮಕ್ಕಳು ನಮಗೀಗ
ಕೊಟ್ಟನು ದೇವರೆಂದೆನುತ
ಆರ್ಥಿಯಿಂದಾಗ ಮೂಬಟ್ಟಲೀರಲು ಮಾಡಿ
ತೊಟ್ಟಲೊಳಿಟ್ಟು ತೂಗಿದರು ೧೬

ನಾಮಕರಣ ಮಾಡುತ ಹೆಸರಿಟ್ಟರು
ಸಾಯಕ್ಕ ದೇಹಕ್ಕೆಂದೆನುತ
ಪ್ರಾಯಕ್ಕೆ ಬಂದ ಮಕ್ಕಳ ನೋಡಿ ಹುಡುಕಿದ
ಸೋಮರ್ಕರಂಥ ವರಗಳ ೧೭

ಅರಸನ ಕರೆದು ಅಕ್ಕನ ಕೊಟ್ಟರಾಗಲೆ
ಕರೆಸಿ ಪ್ರಧಾನಿಯ ತಂಗಿಯನು
ಹರುಷದಿಂದಲಿ ಧಾರೆ ಎರೆದು ಹೆಣ್ಣುಮಕ್ಕಳ
ಕಳಿಸಿ ಕೊಟ್ಟಳು ಸೋಮೋಜಮ್ಮ ೧೮

ಅಕ್ಕರದಿಂದ ಹೇಳಿದಳು ಸೋಮೋಜಮ್ಮ
ಮಕ್ಕಳ ಕರೆದು ಬುದ್ಧಿಯನು
ಶುಕ್ರವಾರದ ಗೌರಿ ಮರೆಯದೆ ಮಾಡೆ ಶ್ರೀ-
ಲಕ್ಕುಮಿ ಒಲಿವೋಳೆಂದೆನುತ ೧೯

ಸಾಯಕ್ಕ ಮಾಡೊ ಸಂತಾನ ಸಂಪತ್ತಿಗೆ ಸ-
ಹಾಯವಾದಳು ಶ್ರೀಗೌರಿ
ದೇಹಕ್ಕ ಮರೆತು ದೇಹಕೆ ಗ್ರಾಸವಿಲ್ಲದೆ
ರಾಯನ ಸೆರೆಯು ಹಾಕಿದರು ೨೦

ಪೊಡವಿ ಪಾಲಕನ ಬಂದು ಹಿಡಿದುಕೊಂಡೊಯ್ಯಲು
ಉಡಿಗೆ ತೊಡಿಗೆ ವಸ್ತ್ರಾಭರಣ
ಉಡುಗಿತು ಸಕಲ ಸಂಪತ್ತು ದೇಹಕ್ಕಗೆ
ದೃಢವಾಯಿತಾಗ ದಾರಿದ್ರ್ಯ ೨೧

ಮಾತನಾಡಿದರು ಮಕ್ಕಳು ತಾಯಿ ಒಡಗೂಡಿ
ಈ ತೆರನಾಯಿತೀ ಬದುಕು
ಮಾತಾಪಿತರು ಒಡಹುಟ್ಟಿದವರು ನಿನ್ನ
ಮಾತನಾಡಿಸೋರ್ಯಾರಿಲ್ಲೆ ೨೨

ದೂರದಲ್ಲಿರೋರೆನ್ನ ತಾಯಿತಂದ್ಯೇರು
ಸಾರ್‍ಯದಲ್ಲಿರಲೊಬ್ಬ ತಂಗಿ
ಸೂರೆಹೋಯಿತು ದೊರೆತನ ಭಾಗ್ಯ ಬಡವ ಪ್ರ-
ಧಾನಿ ಹ್ಯಾಗಿರುವೊನೂ ನಾನರಿಯೆ ೨೩

ಕಂಡುಬರುವೆನೆಂದು ಚಿಂದಿವಸ್ತ್ರಯಿಗೆ ಸುತ್ತಿ
ತುಂಡು ಕೋರಿಯನುಟ್ಟುಕೊಂಡು
ಮುಂಡಿಗ್ಗಚ್ಚಿದ ತಳ ಪ್ರಣತಿಯೆಣ್ಣೆಯು ಹೊಳೆ-
ದಂಡೆಗೆ ಬಂದು ತಾ ಕುಳಿತ ೨೪

ಪೋರ ನೀನಾರೆಂದು ವಿಚಾರವ ಮಾಡಲು
ನೀರಿಗೆ ಬಂದ ನಾರಿಯರು
ದೂರದಿ ಬಂದೆ ದೇಹಕ್ಕನ ಹಿರಿಯ ಕು-
ಮಾರನೆಂದ್ಹೇಳಿ ಕಳಿಸಿದನು ೨೫

ಬಂದು ಹೇಳಿದರವನಂದ ಚೆಂದವ ಕರೆ
ತಂದರ್ಹಿತ್ತಿಲ ಬಾಗಿಲಿಂದ
ಬಂದ್ಹೇಳಿಕೊಂಡ ದರಿದ್ರ ಕಷ್ಟವನೆಲ್ಲ
ಉಂಡುಟ್ಟು ಸುಖದಿ ತಾನಿದ್ದ ೨೬

ಆಲಯಕ್ಹೋಗಿ ಬರುವೆನೆಂದಪ್ಪಣೆ ಕೇಳಿ
ಕಾಲಹರಣ ಮಾಡದಂತೆ
ಕೋಲಿನೊಳಗೆ ಹಣ ತುಂಬಿ ಕೈಯಲಿ ಕೊಟ್ಟು
ಆಲಸಿಲ್ಲದೆ ಕಳುಹಿದಳು ೨೭

ಬಾಲಕ ಸಿನಗಿಂಥ ಕೋಲ್ಯಾಕೆಂದೆನುತ ಗೋ-
ಪಾಲಕ ಸೆಳೆದು ಕೊಂಡೊಯ್ದ
ನೂಲದವರಿಗೆ ನೂತವರ್‍ಪಸ್ತ್ರ್ಯಕೆನುತಲಿ
ಆಲೋಚಿಸುತ ತಾ ಬಂದ ೨೮

ಮಿಡುಕುತ ಬಂದು ಮಾತೆಗೆ ಎರಗಿದರವ-
ರ್‍ವ್ವಡನುಡಿದ್ವಾರ್ತೆ ಹೇಳುತಲಿ
ಕೊಡುವಷ್ಟು ಕೊಟ್ಟರೆಸಗೆ ದಕ್ಕದೆನುತಲಿ
ನಡೆದ ಮತ್ತೊಬ್ಬ ತನಯನು ೨೯

ತಳಪ್ರಣತಿ ಎಣ್ಣೆ ತಲೆಗೆ ಪೂಸಿಕೊಂಡು
ಮೊಳ ಕೋರಿಯನು ಉಟ್ಟುಕೊಂಡು
ಬಳುಕುತ ಬಂದು ಭಾವಿಯ ಮೇಲೆ ಕುಳಿತ್ಹೇಳಿ–
ಕಳಿಸಿದ ಮಾತೆ ಮಂದಿರಕೆ ೩೦

ಗೊತ್ತಿಲೆ ಕರೆತಂದರ್ಹಿತ್ತಲ ಬಾಗಿಲಿಂದಷ್ಟು
ವಾರ್ತೆಗಳ ಕೇಳುತಲಿ
ಅತ್ಯಂತಃಕರಣದಿಂದಲಿ ಭಕ್ಷ್ಯ ಪಾಯಸ
ಮೃಷ್ಟಾನ್ನವ ಉಣಿಸಿದರು ೩೧

ನಿತ್ಯುಪವಾಸ ಮಾಡುವುದೆನ್ನ ಮನೆಯಲ್ಲಿ
ಅಪ್ಪಣೆಯನು ನೀಡೆಂದೆನಲು
ಬುತ್ತಿಯೊಳಗೆ ಹಣ ಕಟ್ಟಿ ಕಳುಹೆ ಕಾಗೆ
ಎತ್ತಿಕೊಂಡ್ಹೋಯಿತಾಕ್ಷಣದಿ ೩೨

ಏನು ಹೇಳಲಿ ನಾನು ಹೋದ ಕಾರ್ಯಗಳಿಂಥ
ಹೀನವಾಯಿತು ಈಗೆಂದೆನುತ
ನಾನ್ಹೋಗಿಬರುವೆನೆಂದೆನುತ ಮುತ್ತೊಬ್ಬ ಕುಮಾ–
ರನು ತೆರಳಿ ನಡೆದನು ೩೩

ಹರುಕು ಕೋರಿಯನುಟ್ಟು ಮುರುಕುತಂಬಿಗೆ ಪಿಡಿದು
ಕೆರಕು ಬುತ್ತಿಯ ಕಟ್ಟಿಕೊಂಡು
ಗುರುತ್ಹೇಳಿ ಕಳುಹೆ ಹಿತ್ತಲ ಬಾಗಿಲಿಂದಲಿ
ಕರೆತಂದರಾಗರಮನೆಗೆ ೩೪

ಎರಡುದಿನವಲ್ಲಿಟ್ಟುಕೊಂಡುಪಚರಿಸುತ
ಬುರುಡೆಯೊಳಗೆ ಹಣವನ್ನು ಕಡುಬ್ಯಾಗ
ತುಂಬಿ ಕೈಯಲಿ ಕೊಟ್ಟು ಕಳು[ಹಿ]ಸಲು
ನಡೆದ ಆತನಡವಿ ಮಾರ್ಗದಲಿ ೩೫

ಸೆಳಿದು ನಾಲಿಗೆ ಬಿಸಿಲೇರಿ ಭಾವಿಯ ಕಂಡು
ಇಳಿದು ಪಾವಂಟಿಗೆಯಲ್ಲಿಟ್ಟು ಉ–
ರುಳಿಕೊಂಡ್ಹೋಗಿ ಮಡುವ ಸೇರಲದ ಕಂಡು
ಬಳಲುತ ಬಂದ ಮಂದಿರಕೆ ೩೬

ಗತಿ ಹೀನರೊಳಗೆ ನಮ್ಮಂಥ ನಿರ್ಭಾಗ್ಯರ
ಪೃಥವಿಯೊಳಗೆ ಕಾಣೆನೆನುತ
ಅತಿಬಾಯ ಬಿಡುವೊ ಮಾತೆಯ ಕಂಡು
ಮತ್ತೊಬ್ಬ ಸುತನಾಗ ತೆರಳಿ ನಡೆದನು ೩೭

ಸೊಕ್ಕಿದ ಮೈಗೆ ಭಿನ್ವರ ಬಟ್ಟೆಯನು ಸುತ್ತಿ
ಕುಕ್ಕುತ ಹೇನು ಕೂರೆಗಳ
ಚಿಕ್ಕಮ್ಮಗ್ಹೇಳಿ ಕಳುಹೆ ಕರೆತಂದರು
ಗಕ್ಕನ್ಹಿತ್ತಿಲ ಬಾಗಿಲಿಂದ ೩೮

ಏಳೆಂಟು ದಿನವಲ್ಲಿ ಭಾಳುಪಚರಿಸುತ
ಬಾಳುವ ಕ್ರಮವ ಕೇಳಿದಳು
ಜಾಳಿಗೆ ಹೊನ್ನು ಚಮ್ಮಾಳಿಗೆಯಲಿ ತುಂಬಿ
ಕಾಲ ಮೆಟ್ಟಿಸಿ ಕಳುಹಿದಳು ೩೯

ಆದು ಮೆಟ್ಟಿ ಬರುತಿರೆ ಒದಗಿ ಬಂದಾ ಶನಿ
ಹುದಲು ಕಾಣದೆ ಸಿಗಿಬಿದ್ದು
ಎವೆಬಾಯ ಬಿಡುತ ಎತ್ತ್ಹುಡುಕಿದರಿಲ್ಲ ನಂ-
ದೆದುರಿಗೆ ಬಂದು ತಾ ನಿಂತ ೪೦

ನಾಲ್ಕು ಮಂದಿಯು ಸುದ್ದಿ ನಾನಾಪರಿಯು ಕೇಳಿ
ವ್ಯಾಕುಲವಾಯಿತೀ ಮನಕೆ
ನಾ ಕಂಡು ಬರುವೆನೆಂದೆನುತ ದೇಹಕ್ಕನು
ಆ ಕಾಲದಲಿ ತೆರಳಿದಳು ೪೧

ಉಟ್ಟಳು ಮೂರು ಸೀರೆಯನು ತೋಳಿನಲಿ
ತೊಟ್ಟಳು ಚಿಂದಿ ಕುಪ್ಪಸವ
ಕಟ್ಟಿದ್ದ ಜಡೆಗೆಣ್ಣೆ ಹಚ್ಚಿ ತಳುಪನ್ಹಾಕಿ
ಬಟ್ಟು ಕುಂಕುಮವ ತೀಡಿದಳು ೪೨

ಒಂದೊಂದು ಕರಿಯ ಕಾಜಿನ ಬಳೆ ಕೈಯಲಿ
ಕಂದಿಕುಂದಿದ ಕೂಸನೆತ್ತಿ
ಬಂದಳು ನಿಮ್ಮ ದೇಹಕ್ಕನೆಂದೆನುತಲಿ
ತಂಗಿಗ್ವಾರ್ತೆಯ ತಿಳಿಸಿದಳು ೪೩

ಅಕ್ಕನ ಕರೆತಂದರಾ ಹಿತ್ತಿಲಿಂದಲಿ
ಶುಕ್ಕರವಾರ ಶುಭದಿನದಿ
ಮಕ್ಕಳು ಸೊಸೆಯರಿಂದೊಡಗೂಡಿ ಬಂದು ದೇ-
ಹಕ್ಕನ ಚರಣಕ್ಕೆರಗಿದರು ೪೪

ಅಂದಗಲಿದ ಅಕ್ಕತಂಗಿಯರಿಬ್ಬರು
ಇಂದಿಗೆ ಕಲೆತೆವೆಂದೆನುತ
ಮಿಂದು ಮಡಿಯನುಟ್ಟು ಬಂದೆಲ್ಲ ಪರಿವಾರ್ಹಾ-
ಗೆಂದು ಭೋಜನಕೆ ಕುಳಿತರು ೪೫

ಹೋಳಿಗೆ ಹೊಸಬೆಣ್ಣೆ ಕಾಸಿದ ತುಪ್ಪವು
ಕ್ಷೀರ ಶಾವಿಗೆಯು ಮೃಷ್ಟಾನ್ನ
ಬ್ಯಾಗದಿಂದುಂಡು ಹಾಕುತಲಿ ತಾಂಬೂಲವ
ತೂಗುಮಂಚದಿ ಮಲಗಿದರು ೪೬

ಬೆಳಗಾಗಲೆದ್ದು ಹೇಳಿದಳಾಗ ಸೊಸೆಯರ
ಕರೆದು ಸಾಯಕ್ಕ ಕೆಲಸವ
ಬಿಳಿಜೋಳ ಕುಟ್ಟಿ ಬೀಸಿರೆ ನೀವು ಇಂದಿನ
ಅಡಿಗೆಯ ಕ್ರಮವ ಹೇಳಿದರು ೪೭

ಹುಳಿಸುಚ್ಟ ಮಾಡುವೆ ತುಳಿಯುಕಟ್ಟಿಂಬಲಿ
ಎಳೆಸೊಪ್ಪಿನ್ಹಿಂಡಿ ಪಲ್ಯವನು
ತಿಳಿಯಾದ ಎಳ್ಳೆಣ್ಣೆ ತರಿಸಬೇಕ್ಹಿಟ್ಟನ
ಕಡುವನು ಮಾಡಬೇಕೆನುತ ೪೮

ಆದು ಕೇಳಿ ದೇಹಕ್ಕೆ ಹೃದಯ ತಲ್ಲಣಿಸುತ
ಎದೆ ಒಳಗಲಗು ನೆಟ್ಟಂತೆ
ನದಿ ಒಳಗಲ್ಪ ಹಳ್ಳವು ಬಂದು ಸೇರಲು
ಅದು ಲಕ್ಷಿಯಾಗಿ ತೋರುವುದೆ ೪೯

ಉರಿಯು ಒಳಗೆ ಎಣ್ಣೆ ಸುರುವಿದಂತಾಯಿತು
ಸಿರಿಯು ಸಂಪತ್ತಿಲಿಂದೀಕೆ[ಯು]
ಕರಗಸದಿಂದಲಿ ಕೊರೆದುಪ್ಪು ಸಾಸಿವೆ
ಅರೆದ್ಹಚ್ಚಿದಂಥ ಮಾತುಗಳು ೫೦

ಜನರ ಮನೆಯುಲಪಹಾಸ್ಯವಾಗೋದಕಿಂತ
ವನವಾಸಗಳು ಲೇಸು ಎಂದೆನುತ
ಮನದ ಸಂತಾಪ ಸೈರಿಸಲಾರದೆದ್ದಳು
ದನವನೆ ಕಟ್ಟೋ ಮಂದಿರಕೆ ೫೧

ಎತ್ತಿನ ಗೋದಲಿ ಒಳಗೆ ಕಂದಲಿದಂಟು
ಸೊಪ್ಪುಗಳನು ಹೊದ್ದುಕೊಂಡು
ಕಚ್ಚುತಲಿರಲು ಚುಕ್ಕಾಡಿ ಕ್ರಿಮಿಗಳೆಲ್ಲ
ಅತ್ತಿತ್ತಾಗದೆ ಮಲಗಿದಳು ೫೨

ಮಧ್ಯಾಹ್ನವಾಯಿತಡಿಗೆಯು ದೇಹಕ್ಕನ
ಸದ್ದು ಸುಳಿವು ಕಾಣೆನೆನುತ
ನಿದ್ರೆಯಿಂದೆಲ್ಲಿ ಮಲಗಿದಾಳೊ ಆಕೆಯ ಇನ್ನು
ಇದ್ದಲ್ಲಿಂದಲಿ ಕರೆತನ್ನಿ ೫೩

ಬಲ್ಲಷ್ಟು ಮನೆಹುಡುಕಿದೆವತ್ತೆ ಬಾಯ
ಸೊಲ್ಲನು ಕಾಣೆವೆಂದೆನುತ
ಎಲ್ಲಿ ಹುಡುಕಿದರಿಲ್ಲವೆನುತ ಮತ್ತೀಗ ಬಂ-
ದೆಲ್ಲ ಸೊಸೆಯರು ಹೇಳಿದರು ೫೪

ಒಳಗೆಲ್ಲ ಹುಡುಕಿ ಬಂದರು ಸಂದುಗೊಂದು ಆ-
ಕಳ ಕಟ್ಟುವಂಥ ಕೋಣೆಯಲಿ
ಸೆಳೆದು ದಂಟುಗಳ್ಹಾರುತಿರಲು ಗ್ವಾದಲಿಯಲ್ಲಿ
ಸುಳಿವನೆ ಕಂಡು ನೋಡುವರು ೫೫

ಸಿಕ್ಕರು ನಮ್ಮ ಅತ್ತೆಯರೆಂದೆಬ್ಬಿಸುತಲಿ
ಹಸ್ತವ್ಹಿಡಿದು ಕರೆತಂದ್ರು
ಉಕ್ಕುವ ಉರಿ ಮೋರೆಯನು ನೋಡಿ ಮನವ
ಸಿಟ್ಟೇನ್ಹೇಳೆಂದು ಕೇಳಿದಳು ೫೬

ಹೇಳುವುದೇನು ಕೇಳುವುದೇನು ನಿನಗಿಂತ-
ವ್ಯಾಳ್ಯವಾದೆನು ನಾನೆಂದೆನುತ
ಜೋಳದನ್ನವ ಕಾಣದಂತೆ ನಾ ಬಂದೆ[ನೇ]ನು
ನಾಳೆ ಪೋಗುವೆ ನನ್ನ ಮನೆಗೆ ೫೭

ಕೆಟ್ಟ ಬಡವರು ಬರುವುದುಂಟೆ ಜಗದೊಳು
ಅಟ್ಟುಂಬ ಮನೆಯ ಬಾಗಿಲಿಗೆ
ಕಷ್ಟದಿ ಕಾಲಕಳೆಯಲಾಗದಿದ್ದರೆ
ಅಟ್ಟಡವಿಯ ಸೇರಬಹುದು ೫೮

ಬಗೆಬಗೆ ಅಡಿಗೆ ಹೇಳದೆ ಸೊಸೆಯರಿಗೆಲ್ಲ
ನಗೆಹಾಸ್ಯವಾಗಿ ತೋರುವುದೆ
ಖಗರಾಜನಲಿ ನೊಣವು ಬಂದು ಸರಿ
ಬೀಗತನ ಮಾಡೇನೆಂಬೋದುಚಿತವೆ ೫೯

ಭಕ್ಷ್ಯಪಾಯಸ ಮಾಡಿ ನಿನ್ನಿನ ದಿನ ದು-
ರ್ಭಿಕ್ಷದಡಿಗೆ ಇಂದಿನಲ್ಲಿ
ಭಿಕ್ಷಕ್ಕೆ ಬಂದೆನೆ ನಿನ್ನ ಮನೆಗೆ ಎಂದು
ಅಕ್ಷದಿ ಜಲವ ತುಂಬಿದಳು ೬೦

ಅಕ್ಕನವಚನ ಕೇಳುತವೆ ಆಲೋಚಿಸಿ
ನಕ್ಕಳು ತನ್ನ ಮನದಲಿ
ಶುಕ್ರವಾರದ ಗೌರಿಮಾಡದೆ ಈ ಕಷ್ಟ
ದುಃಖಕ್ಕೆ ಗುರಿಯಾದಿರೆನಲು ೬೧

ಬರುವ ಕಾಲಗಳಲ್ಲಿ ಕರೆದು ನಮ್ಮಮ್ಮನು
ಅರುಹಲಿಲ್ಲವೆ ಗೌರಿಯನು
ಸಿರಿಯು ಸಂಪತ್ತು ಕೊಡುವ ಶನಿವಾರವ
ಮರೆತು ಬಿಟ್ಟ್ಯೇನೆ ಅಕ್ಕಯ್ಯ ೬೨

ಲಕ್ಷ್ಮಿದೇವೇರಾಲಕ್ಷ್ಯ ಮಾಡಿದರಿಂಥ
ನಿಕ್ಷೇಪ ನಿಧಿ ತೊಲಗಿದಳು
ಈ ಕ್ಷಣ ನಿನ್ನ ಮನೆಯಲಿ ಪೂಜಿಸುವೆನೆ
ಸಾಕ್ಷಾತ ಶ್ರೀ ಗೌರಿಯನು ೬೩

ಎರೆದು ಪೀತಾಂಬರ ಉಡಿಸಿ ತಂದಿಟ್ಟರು
ಪರಿಪರಿ ವಸ್ತ್ರಾಭರಣ
ವರ ಮಣಿಮಯದ ಮಂಟಪದಲಿ ಚಟ್ಟಿಗೆ
ಬರೆದಿಟ್ಟರಾಗ ಪೀಠದಲಿ ೬೪

ಹಾಕಿದರೈದು ಫಲಗಳಕ್ಕಿ ಆದರೊಳು
ನಾಲ್ಕೆಂಟು ನಂದಾದೀವಿಗೆಯು
ಶ್ರೀ ಕಮಲೆಯು ಮಧ್ಯದಲ್ಲಿ ಸ್ಥಾಪನೆ ಮಾಡ್ಯ-
ನೇಕ ಭಕ್ತಿಂದ ಕುಳಿತಳು ೧೫

ಮುಂದೆ ಕಟ್ಟಿಸಿದರು ಮಕರ ತೋರಣಗಳ
ದುಂದುಮಿ ಭೇರಿ ಬಡಿದುವು
ಬಂದು ಮುತ್ತೈದೇರ ಸಹಿತ ಬ್ರಾಹ್ಮಣರೆಲ್ಲ
ಅಂದರ್ವೇದೋಕ್ತ ಮಂತ್ರಗಳ ೧೬

ಅರಿಷಿಣ ಪಿಡಿದು ಹಚ್ಚುತಲೆ ಹಿಂದಕೆ
ಗೌರಿ ಸರಕಾನೆ ತಿರುಗೆ
ಮೋರೆಯನು ಎಡಕ್ಹೋಗಿ ಎಡಮುಕೈ ಮುಗಿದ್ಹೋಕೊಂ-
ಡರೆ ಬಲಕೆ ಬಂದಳು ಭಾಗ್ಯಲಕ್ಷ್ಮಿ ೧೭

ಮಕ್ಕಳು ಮಾಡೋ ಮಹಾತಪ್ಪು ಅಪರಾಧ
ಹೆತ್ತ ಮಾತೆಯರೆಣಿಸುವರೆ
ಸತ್ಯವಂತಳು ಈಕೆ ಸಮರಿಲ್ಲವೆನುತಲಿ
ಭಕ್ತಿಂದ ಕರವ ಮುಗಿದಳು ೧೮

ಸಾಯುಕ್ಯಸ್ವಜನ ಕೇಳುತಲಿ ಶ್ರೀಗೌರಿಯು
ದೇಹಕ್ಕಗೆದುರಾಗಿ ಕುಳಿತು
ಕಾಯ ವಾಚಾ ಭಕ್ತಿಗೊಲಿದು ತಾ ಕಮಲದ-
ಳಾಯತಾಕ್ಷದಲಿ ನೋಡಿದಳು ೧೯

ಕುಂಕುಮ ಗಂಧ ಬುಕ್ಕಿಟ್ಟು ಮಲ್ಲಿಗೆದಂಡೆ
ಪಂಕಜ ಪಾರಿಜಾತಗಳು
ಶಂಕರ ಸುರ ಬ್ರಹ್ಮರೊಡೆಯನ ಸತಿಗೆ ಅ-
ಲಂಕಾರ ಪೂಜೆ ಮಾಡಿದರು ೨೦

ಕಡಲಾಬ್ಜಶಯನನ ಮಡದಿ ಮಾಲಕ್ಷ್ಮಿಗೆ
ಒಡೆದು ತೆಂಗಿನಕಾಯಿ ಫಲವು
ಮಡದೇರೆಲ್ಲರು ಅರಿಷಿಣ ಗಂಧ ಕುಂಕುಮ
ಕೊಡುತ ಪುಷ್ಪಗಳುಡಿ ತುಂಬಿ ೨೧

ಅಚ್ಚಮುತ್ತಿನ ಹರಿವಾಣದೊಳ್ ನೈವೇದ್ಯ
ಭಕ್ಷ್ಯಪಾಯಸ ಬಡಿಸಿರಲು
ತುಷ್ಟಳಾಗದನೆ ನೋಡುತಲಿ ದೇಹಕ್ಕಗೆ
ಅಷ್ಟ ಸೌಭಾಗ್ಯ ನೀಡಿದಳು ೭೨

ಒಟ್ಟುಮುತ್ತಿನ ಹರಿವಾಣದೊಳ್ ನೈವೇದ್ಯ
ಮೃಷ್ಟಾನ್ನವ ಬಡಿಸಿರಲು
ಅರ್ಥಿಯಿಂದದನೆ ನೋಡುತಲಿ ದೇಹಕ್ಕಗೆ
ಮುತ್ತೈದೆತನವ ನೀಡಿದಳು ೭೩

ದುಂಡಮುತ್ತಿನ ಹರಿವಾಣದೊಳ್ ನೈವೇದ್ಯ
ಮಂಡಿಗೆ ತುಪ್ಪ ಸಕ್ಕರೆಯು
ಕಂಡು ಸಂತೋಷದಿಂದಾಗ ದೇಹಕ್ಕನ
ಗಂಡಗೆ ರಾಜ್ಯ ನೀಡಿದಳು ೭೪

ಹೊಸಪ್ರೊ ಚಿನ್ನದ ಹರಿವಾಣದೊಳ್ ಒಟ್ಟಿನ
ಕಡವು ಕಟ್ಟಂಬಲಿ ಬಡಿಸಿ
ತೀವಮಾಡಿಕ್ಕೆಣ್ಣೆ ಹುಂಡಿಯ ಪಕ್ಕ ತಾಂಬೂಲ
ನಲಿನಲಿದಾಡಿ ನೋಡುತಲಿ ೭೫

ಶಿರವನಲ್ಲಾಡಿಸಿ ಸಿರಿಮುಡಿ ಮ್ಯಾಲಿನ
ಸರ ಪಾರಿಜಾತ ಪುಷ್ಪಗಳು
ಅರಳು ಮಲ್ಲಿಗೆಯು ಅನಂತ ಹಸ್ತಗಳಿಂದ
ವರವ ಕೊಟ್ಟಳು ವರಲಕ್ಷ್ಮಿ ೭೬

ಅಕ್ಕತಂಗಿಯರಾಗ ಜತ್ತಿಲಾರತಿಮಾಡೆ
ಮುತ್ತೈದೇರು ಪಾಡುತಲಿ
ಉತ್ತಮಾಂಗನೆಗೆ ಮಂತ್ರಾಕ್ಷತೆಯನು ಹಾಕಿ
ಎತ್ತಿದಾರತಿ ಇಳಿಸಿದರು ೭೭

ಉಂಡರು ಸಕಲ ಜನರು ಸಹಿತಾಗಿ ತ–
ಕ್ಕೊಂಡು ಕರ್ಪೂರದ ವೀಳ್ಯವನು
ಸಂಭ್ರಮ್ಮದಿಂದ ಕೂತಿರಲು ದೇಹಕ್ಕಗೆ
ಬಂದೆರಗಿದರು ಬಾಲಕರು ೭೮

ಅರಸು ತಾನಾಗಿ ಬಂದನು ನಮ್ಮಯ್ಯನು
ಕರೆಸಿದ ನಿಮ್ಮನೆಂದೆನುತ
ಹರುಷದಿಂದವರ ಮಾತುಗಳ ಕೇಳ್ಯಾನಂದ-
ಭರಿತವಾದರು ಸುಖದಿಂದ ೭೯

ಘಡಘಡನಾಗ ಬಂದವು ತೇಜಿ ರಥಗಳು
ಬಡಿದುವು ಭೇರಿ ನಾದಗಳು
ಸಡಗರದಿಂದುಡುಗೊರೆ ವೀಳ್ಯ ತಕ್ಕೊಂಡು
ನಡೆದರು ತಮ್ಮ ಪಟ್ಟಣಕೆ ೮೦

ಅಕ್ಕತಂಗಿಯರು ಅಂದಣವೇರಿ ಗೌರಿಯು ಪ-
ಲ್ಲಕ್ಕಿ ಒಳಗೆ ಇಟ್ಟುಕೊಂಡು
ಭಕ್ತಿಯಿಂದಾಗ ಚಾಮರವ ಬೀಸುತಲಿ ಸ-
ಮಸ್ತ ಜನರು ನಡೆತರಲು ೮೧

ಆಕಳಪಾಲ ತಂದಾಗ ಕಯ್ಯಲಿ ಕೊಟ್ಟ
ಈ ಕೋಲು ನಿಮ್ಮದೆಂದೆನುತ
ಹಾಕಿತು ಕಾಗೆ ಹಣದ ಬುತ್ತಿಗಂಟನು
ಸ್ವೀಕರಿಸಿದನೊಬ್ಬ ಸುತನು ೮೨

ಮಡುವಿನೊಳಗೆ ಮುಣುಗೇಳುತಿರಲು ಕಂಡು ಬು-
ರುಡೆ ಹಣವ ಕೈಕೊಂಡು
ನಡೆವ್ರೊ ಮಾರ್ಗದಿ ಹುದಲೊಳಗೆ ಕಂ[1][ಡ್ಯಾರಿ][1]
ಹಿಡಿದು ಕೊಂಡ್ಹಿಗ್ಗಿ ನಡೆದರು ೮೩

ಭರದಿಂದ ಬಂದ ದೊಡ್ಡ ಮಳೆ ಸುರಿಯಲು
ಸಿರಿ ತೊಯ್ಯಲಾಗದೆಂದೆನುತ
ಹರದೇರಿಬ್ಬರು ಸೆರಗನೆ ಮರೆಮಾಡುತ
ಕರೆತಂದರಾ ತೋಟದಲಿ ೮೪

ಒಂದು ಗಳಿಗೆ ಸ್ಥಳವನು ಮಾಡಿಕೊಟ್ಟರೆ
ಬಂದಿತು ಭಾಳ ಪುಣ್ಯಗಳು

1 . . .

ಅಂದಮಾತಿಗೆ ಕೋಪದಿಂದ ತಾ ನುಡಿದನು
ಇದೆಲ್ಲಿ ಸ್ಥಳವು ಹೋಗೆಂದು ೮೫

ಮೋಹದಿ ಕರೆದು ಮನ್ನಿಸಿ ಮಹಲಕ್ಷುಮಿ-
ದೇವಿಗೆ ಸ್ಥಳವನೆ ಕೊಟ್ಟು
ನೀವು ಮತ್ತೀಗ ಕೋಪಿಸಲಾಗದೀ ಗೌರಿ
ದ್ರೋಹಕ್ಕೆ ಒಳಗಾದೆ ನಾನು ೮೬

ಎತ್ತಲ ಗೌರಿ ಎಲ್ಲಿಯ ದ್ರೋಹ ನಿನಗೆಂದು
ಪತ್ನಿಯ ಕರೆದು ಕೇಳಿದನು
ಸತ್ಯವಂತಳು ಈಕೆ ಸಮರಿಲ್ಲವೆನುತಲಿ
ಭಕ್ತಿಂದ ಕರ ಮುಗಿದಳು ೮೭

ಹಿಂದಕ್ಕೆ ನಾ ಸೋಮೋಜಮ್ಮನ ಮನೆಯಲಿ
ನಿಂದ್ಯಮಾಡಿದೆ ಗೌರಿಯನು
ಬಂದಿತು ನಮಗೆ ವನವಾಸವೆಂದೆನುತಲಿ
ಗಂಡಗೆ ತಿಳಿಯ ಹೇಳಿದಳು ೮೮

ಹೋಕಿವೊ ಪ್ರತ್ಯೇಗೋಂದಿಯಾಥ ಮಕ್ಕಳ ನಾನು
ಎಳೆಎಲೆ ಹಾಸಿ ಹೊಚ್ಚಿಟ್ಟೆ
ಹೊಳೆಯದಾಟಿದೆ ಅಳಿದರೊ ಉಳಿದಿದ್ದರೊ
ತಿಳಿಯಲಿಲ್ಲೆಂದು ಹೇಳಿದಳು ೮೯

ಅಂದಮಾತನು ಕೇಳಿ ಸಂಭ್ರಮದಿಂದಲಿ
ತಂದೆತಾಯಿಗಳು ನೀವೆಂದೆನುತ
ಬಂದೆರಗಿದರು ಮಕ್ಕಳ ನೋಡಿ ಪರಮಾ-
ನಂದ ಭರಿತರಾದರವರು ೯೦

ಜಾತವಾದಿರಿ ಪಾರಿಜಾತನ(ಕಿತ್ತಳೆ?)ವನದೊಳ-
ನಾಥರ ಮಾಡಿ ನಾ ಬಂದೆ
ಪ್ರೀತಿಲಿ ನಿಮ್ಮ ಸಲಹಿದವರ್ಯಾರೆಂದು
ಆ ತಾಯಿ ಸುತರ ಕೇಳಿದಳು ೯೧

ತುಳಸಿಗೆ ಬಂದ ಸೋಮೋಜಭಟ್ಟನು ನೋಡಿ
ಗಳಿಸಿ ಕೊಂಡೊಯ್ದ ನಮ್ಮನ್ನು

ಬೆಳಿಸಿ ಧಾರೆಯನೆರೆದರಸು ಪ್ರಧಾನಿಗೆ
ಕಳಿಸಿ ಕೊಟ್ಟಳು ಸೋಮೋಜಮ್ಮ ೯೨

ಹೆಚ್ಚಿನ ತಾಯಿ ಸೋಮೋಜಮ್ಮ ಹೇಳಿದಳು
ಶುಕ್ಕರವಾರದ ಗೌರಿಯನು
ಮಕ್ಕಳು ಮನೆಯು ಸಂಪತ್ತೆಲ್ಲ ಸೋಮೋಜ-
ಭಟ್ಟನ ಪುಣ್ಯವೆಂದೆನುತ ೯೩

ಹಿಂದಾಗಲ್ಪ ಸವಾಸ ಮುಂದ್ಯಾತಕೆನುತಲಿ
ತಂದು ವಸ್ತ್ರಗಳುಡುಕೊಟ್ಟು
ಮುಂಗೈಯ ಹಿಡಿದು ಮುಪ್ಪಿನ ತಾಯಿ
ತಂದೇರ ಅಂದಣವನೆ ಏರಿಸಿದರು ೯೪

ಭೋರೆಂಬೊ ನವಿಲು ದಾಟುತಲಿ ಕಟ್ಟಿಸಿದರು
ಊರ ಬಾಗಿಲಿಗೆ ತೋರಣವ
ಭೇರಿ ತುತ್ತೂರಿ ಬಾಜಾರ ಶೃಂಗರಿಸಿ
ಸಾಲು ದೀವಟಗೆ ಸಂಭ್ರಮದಿ ೯೫

ಹಾಸುತಿದ್ದರು ನಡೆಮುಡಿ ಕದಲಾರತಿ
ಬೀಸುತ ಬಿಳಿಯ ಚಾಮರವ
ಸೋಸಿಲಿಂದಲಿ ಕರೆತಂದರಮನೆಯ ಸಿಂ-
ಹಾಸನದಲಿ ಕುಳ್ಳಿರಿಸಿ ೯೬

ವರಸಿಂಹಾಸನದಲ್ಲಿ ಒಪ್ಪಿರುವೋ ಮಾಲಕ್ಷ್ಮಿಗೆ
ಅರಳ್ಹುವ್ವ ಗಂಧ ಪುಷ್ಪಗಳು
ಪರಿಪರಿಯಲಿ ಸರ್ವಾಂಗಪೂಜೆಯು ಮಾಡಿ
ಫಲಗಳರ್ಪಿಸಿ ಕೈಯ ಮುಗಿದು ೯೭

ನಿಂತು ನೋಡ್ಹರಸು ನಿಶ್ಚಿಂತರ ಮಾಡೆಂದು
ಮಂತ್ರಾಕ್ಷತೆಯ ಹಾಕುತಲಿ ನಿ-
ರಂತರ ತಮ್ಮ ಮನೆಯಲಿಟ್ಟು ಪೂಜಿಸಿ
ಸಂತೋಷದಿಂದಿದ್ದರವರು ೯೮

ತಮ್ಮ ಸಾಕಿದ ತಾಯಿತಂದೇರ ಕರೆಸುತ
ನಿಮ್ಮದೀ ಸಕಲ ಸಂಪತ್ತು

ನಮ್ಮ ರಾಜ್ಯವೆ ನಿಮ್ಮ ರಾಜ್ಯನೆಂದೆನುತಲಿ
ಮನ್ನಿಸಿದರು ಮಾತಾಪಿತರ ೯೯

ಶ್ರೀ ಮಾಯಾ ಜಯ ಕೃತಿ ಶಾಂತಿ ಮಾಲಕ್ಷ್ಮಿ
ಆ ಮಹ ಅತಿಪುಣ್ಯಶಾಲಿ
ಕೋಮಲೆ ತನ್ನ ಕೊಂಡಾಡುವೊ ಜನರನು
ನೇಮದಿ ನಿಂತು ಕಾಯುವಳು ೧೦೦

ಭಕ್ತಿಯಿಂದಲಿ ಮಾಡೆ ಮುಕ್ತರಾಗುವರು ಧ-
ರ್ಮಾರ್ಥ ಕಾಮ್ಯವು ಫಲಿಸುವುದು
ಮುತ್ತೈದೆತನ ಧನಧಾನ್ಯ ಸಂತಾನ ಸ-
ಮಸ್ತ ಕಾರ್ಯವು ಸಿದ್ಧಿ ಉಂಟು ೧೦೧

ಕಂತುಪಿತನರಾಣಿ ಕಥೆಯನು ಪೇಳಲು
ಸಂಪತ್ತು ಶನಿವಾರದಲ್ಲಿ
ದಂಪತಿಗಳ ಸುಖದಿಂದಿಟ್ಟು ಅವರನ-
ಭ್ಯಂತರಿಲ್ಲದೆ ಸಲಹುವಳು ೧೦೨

ಅಚ್ಯುತನರಸಿ ಅನುಗ್ರ[ಹ]ವ ಪಡೆಯಲು
ಇಚ್ಛೆ ಸಂಪೂರ್ಣವಾಗುವುದು
ಸಚ್ಚಿದಾನಂದ ಭೀಮೇಶಕೃಷ್ಣನು ನೋಡಿ
ಮೆಚ್ಚಿ ಸೂರ್‍ಯಾಡುವ ದಯವ ೧೦೩

೫೧

ಗಂಗಾದೇವಿ ನಮೋನಮೋ ಗಂಗಾದೇವಿ ತರಂಗಿಣಿ
ನೀ ಮುದ್ದು ಮಂಗಳಾಂಗನ ಮುಖ ತೋರಿಸೆ ಗಂಗಾದೇವಿ ಪ.

ವಾಮನನಖದಿಂದ ಒಡೆದು ಬ್ರಹ್ಮಾಂಡ
ಬಹಿರಾವರಣದಿಂದಿಳಿದೆಯೆ
ಬಹಿರಾವರಣದಿ ಇಳಿದು ನಿರಂಜನ
ಆಲಯದೊಳು ಬಂದೆ ಭರದಿಂದ ೧

ಹರಿಪಾದೋದಕವಾಗಿ ಹರಿದು ಬಂದೆಯೆ ನೀನು
ಹರನ ಜಟೆಯಲ್ವಾಸವ ಮಾಡಿ
ಹರನ ಜಟೆಯಲ್ವಾಸವ ಮಾಡಿ ನೀ
ಮೇರುಗಿರಿಯಲ್ಲಿ ನಾಲ್ಕು ಸೀಳಾದೆಯೆ ೨

ಜಕ್ಷು ಭದ್ರಾ ಸೀತಾ ಎಂಬ ಮೂವರ ಬಿಟ್ಟು
ಭರತಖಂಡಕೆ ಬಂದೆ ಬಹುದೂರ
ಭರತಖಂಡಕೆ ಬಂದೆ ಬಹುದೂರ ಭಾಗವ್ಮು
ಪ್ರತ್ಯಕ್ಷ ಅಳಕನಂದನ ತಾಯಿ ೩

ಸಾಗರಸರಸಿ ಪ್ರಯಾಗದಿ ಮರದ ಬಾಗಿಣವನು
ಕೊಂಬೆ ವೇಣಿಯು ದಾನ
ಕೊಂಬೆ ವೇಣಿಯು ದಾನ ಮುತ್ತೈದೇ-
ರಾಗಿರೆಂದ್ಹರಸಿ ಪೂಜೆಯಗೊಂಬೆ ೪

ಸಗರನ ಮಕ್ಕಳ ಅಗಿವೆ ಕಡಿವೆನೆಂದು
ಭಗೀರಥ ನ್ಹಿಂದೆ ಬಂದೆಯೆ ನೀನು
ಭಗೀರಥನ್ಹಿಂದೆ ಬಂದೆಯೆ ಹಿಮಾಲಯ ದಾಟಿ
ಜಗವನುದ್ಧರಿಸುವ ಜಾಹ್ನವಿ ೫

ಯಮುನಾ ಸರಸ್ವತಿ ಕೂಡಿ ಗಮನ ಮಾಡುವ ಗಂಗಾ
ಸಮನಾಗಿ ಹರಿದೆ ಸಂಗಮಳಾಗಿ
ಸಮನಾಗಿ ಹರಿದೆ ಸಂಗಮಳಾಗಿ ತ್ರಿವೇಣಿ
ಯುಗಳ ಪಾದಗಳಾರು ತೋರಿಸೆ ೬

ಭೀಷ್ಮನ ಜನನಿ ಭೀಮೇಶ ಕೃಷ್ಣನ ಪುತ್ರನ(ತ್ರಿ ನೀ?)
ದೋಷವ ಕಳೆದು ಸಂತೋಷದಿ
ದೋಷವ ಕಳೆದು ಸಂತೋಷದಿ ಸಾಯುಜ್ಯ
ಬ್ಯಾಸರದಲೆ ಕೊಟ್ಟು ಸಲಹವ್ಮು ೭

೫೨

ಗಂಗಾ ಭಾಗೀರಥೀ ಮಂಗಳಾಂಗಿ ಅಳಕನಂದನ ನೀ ಮಹಾ
ಸುಂದರಾಂಗಿ ಸಿಂಧುರಾಜನ ರಾಣಿ ಸಿರಿಯು
ಸಂಪತ್ತು ಕೊಡು ಕಂಗಳಿಂದಲಿ ನೋಡಿ ಕರುಣಿಸೆನ್ನ ಪ.

ಕಾಶಿ ಪಟ್ಟಣದಲಿ ವಾಸವಾಗಿ ಸರಸ್ವತಿಯನು ಕೂಡಿ
ನೀ ಸರಸವಾಗಿ ಸೋಸಿಲಿಂದಲಿ
ಸೂರ್ಯಪುತ್ರಿ ಯಮುನೆಯನು ಕೂಡಿ ಉ-
ಲ್ಲಾಸದಿಂದ್ಹರಿದು ವಾರ್ಧಿಸಿಗ್ಹೋಗಿ ೧

ಹಾಲಿನಂತೆ ಹರಿವೊ ಗಂಗೆ ನೀನು
ನೀಲದಂತಿದ್ದ ಯಮುನೆಯನು ಕೂಡಿ
ಲೀಲೆಯಿಂದಲಿ ಸರಸ್ವತಿಯನು ಕೂಡಿ
ಓಲ್ಯಾಡುತ ಬಂದೆ ಒಯ್ಯಾರದಿಂದ ೨

ಭಗೀರಥನ ಹಿಂದೆ ನೀ ಬಂದೆ ಓಡಿ
ಸಗರನ ಸುತರ ಉದ್ಧಾರ ಮಾಡಿ
ಜಗವ ಪಾವನ ಮಾಡೋ ಜಾಹ್ನವಿಯೆ ನೀ ಎನ್ನ
ಮಗುವೆಂದು ಮುಂದಕೆ ಕರೆಯೆ ತಾಯಿ ೩

ಬಿಂದು ಮಾಧವ ವೇಣುಮಾಧವನ್ನ ಆ–
ನಂದ ಭೈರವ ಕಾಳ ಭೈರವನ್ನ
ಚಂದದಿಂದ್ವಿಶ್ವನಾಥನ್ನ ಗುಡಿಮುಂದೆ
ಹೊಂದಿ ಹರಿದ್ಹನುಮಂತ ಘಾಟನ್ಹಿಂದೆ ೪

ಧಡಧಡನೆ ಬಂದು ದಡಗಳನು ಕೊರೆದು
ಪೊಡವಿ ವ್ಯಾಲಿಂಥ ಸಡಗರದಿ ಹರಿದು
ಕಡಲಶಯನನ್ನ ಕಾಲುಂಗುಷ್ಠದ ಮಗಳು
ಕಡಲರಾಣಿಯೆ ಕಯ್ಯ ಪಿಡಿಯೆ ನೀನು ೫

ಮರದ ಬಾಗಿಣ ಕುಂಕುಮರಿಷಿಣವು ಗಂಧ
ಪರಿಪರಿಯಿಂದ ಪೂಜೆಯುಗೊಂಬುವಿ
ಸ್ಥಿರವಾದ ಮುತ್ತ್ಯೈದೆತನ ಜನುಮ ಜನುಮಕ್ಕ
ವರವ ಕೊಟ್ಟು ವೈಕುಂಠವನು ತೋರಿಸೆ ೬

ಮಧ್ಯಾಹ್ನದಲಿ ಮಣಿಕರ್ಣಿಕೆಯ ಸ್ನಾನ
ಶುದ್ಧವಾಗಿ ಪಂಚಗಂಗೆಯಲಿ
ಅದ್ದಿದ ದೇಹ ಪವಿತ್ರವನು ಮಾಡಿ ಭವಸ–
ಮುದ್ರವನು ದಾಟಿಸೆ ಭಾಗೀರಥಿ ೭

ಎಷ್ಟು ಜನ್ಮದ ಸುಕೃತ ಒದಗಿತೆಂದು ಗಂಗ
ಭೆಟ್ಟಿಯಾಗೊ ಪುಣ್ಯ ಬಂದಿತಿಂದು
ಚಕ್ರತೀರ್ಥದ ಸ್ನಾನ ಸಂಕಲ್ಪದ ಫಲವ
ಕೊಟ್ಟು ರಕ್ಷಿಸು ತಾಯಿ ತರಂಗಿಣಿ ೮

ಸಾಸಿರ ಮುಖದಿ ಶರಧಿಯನು ಕೂಡಿ
ಹೋಗಿ ಬಾ ಊರಿಗೆ ಭಕ್ತಿಮುಕ್ತಿ ನೀಡಿ
ನೀನು ಭೀಮೇಶ ಕೃಷ್ಣನಲಿ ಹುಟ್ಟಿದ್ದು
ಪಾದವನು ತೋರೆನ್ನ ಪೊರೆಯಬೇಕೆ ೬

೫೩

ಗೋದಾ ಎನ್ನೊಳ್ವಿನೋದದಿಂದ
ಮಾತಾಡಿ ತೋರಿಸೆ ನಿನ್ನ ಪಾದ ಪ.

ಸಾಧು ಸಜ್ಜನರಿಗೆ ಸ್ನಾನಫಲ ಕೊಟ್ಟು
ಬೋಧಿಸಿ ಹರಿದಯ ಸಾಧಿಸಿ ಕೊಡಿಸುವಿ ೧

ಅಕ್ಕ ತಂಗೇರು ಕೂಡಿ ಉಕ್ಕ್ಯೋ ಉಲ್ಲಾಸದಿ
ಲಕ್ಮ್ಯವಿನಾಶನ ಮುದ್ದು ಮಕ್ಕಳ ಮನೆಗೊಯ್ವೆ ೨

ದೂರದಿ ಬಂದೆ ನಾ ಗೋದಾವರಿಯೆ ನೀನು
ತೋರೆ ಭೀಮೇಶಕೃಷ್ಣಸ್ವಾಮಿ ದಾರಿಗಳ ೩

೫೪

ಚಿನ್ನದ ಚಾವಡಿ ಮ್ಯಾಲೆ ಪನ್ನಂಗ ಶಯನರು
ಮಾನ್ಯ ಮಾನ್ಯರು ಮುಕ್ತರು ಮುಕ್ತರನೆ ನೋಡುತಲಿ
ಇನ್ನ್ಯಾರ ಭಯವು ನಮಗಿಲ್ಲ ೧

ಮುತ್ತಿನ ಚಾವಡಿ ಮ್ಯಾಲೆ ಮುಕ್ತರನೆ ನೋಡುತಲಿ
ಲಕ್ಷ್ಮಿ ನಾರಾಯಣನು ಕುಳಿತಾರೆ ಕುಳಿತು ನೋಡುತಲಿರಲು
ಮತ್ತ್ಯಾರ ಭಯವೂ ನಮಗಿಲ್ಲ ೨

ಯಮಧರ್ಮರಾಯಗೆ ನಮೋನಮೋ ನಾನೆಂಬೆ
ಘನಗುಣ ಮಹಿಮ ನೀನೆಂದು ನೀನೆಂದು ಸ್ತುತಿಸೆನೊ
ಅನುಮಾನವೇಕೆ ಸಲಹೆನ್ನ ೩

ರಂಗ ರಂಗಾಯೆಂದು ರಂಗನ್ನ ನೆನೆದರೆ
ಹಿಂಗೋದು ಸಕಲ ದಾರಿದ್ರ್ಯ ದಾರಿದ್ರ್ಯ ಕಳೆವಂಥ
ಮಂಗಳಾಂಗಿಯೆ ಶ್ರೀ ಮಾಲಕ್ಷ್ಮಿ ೪

ಸಾಮಜವರದನು ಭೀಮೇಶಕೃಷ್ಣನು
ಕಾಮಿತಾರ್ಥಗಳ ಕೊಡುವ್ರೋನು ಕೊಡುವಂಥ ಶ್ರೀಹರಿಯು
ಪ್ರೇಮದಲಿ ಎನ್ನ ಸಲಹಲಿ ೫

೫೫

ಚೆಲ್ವೇರಾರತಿಯ ತಂದೆತ್ತಿರೆ [ಪ.]

ಹುಟ್ಟಿದಳಾ ಕ್ಷೀರಸಾಗರದಲಿ ಸ-
ಮಸ್ತ ಜನರಿಗೆ ಸುಖವ ನೀಡುತ
ಶ್ರೇಷ್ಠರೊಳಗೆ ಜ್ಯೇಷ್ಠಾದೇವಿ ಶ್ರೀನಾಥನ
ಪಟ್ಟದರಸಿ ಮುದ್ದು ಮಾಲಕ್ಷ್ಮಿಗೆ ೧

ಮುದ್ದು ಮೋರೆಗೆ ತಕ್ಕ ಮುಖುರ್ಯ ಬುಲಾಕ-
ನಿಟ್ಟವಜ್ರದ ಬುಗುಡಿ ವೈಯಾರದಿಂದ
ತಿದ್ದಿ ಬೈತಲು ಜಡೆಬಂಗಾರ ರಾಗಟೆ
ಪದ್ಮನಾಭನ ರಾಣಿ ಮಾಲಕ್ಷ್ಮಿಗೆ ೨

ಸಣ್ಣ ಮುತ್ತಿನ ವಾಲೆ ಸರಪಳಿ ಚಳತುಂಬು
ಚಿನ್ನದ ಸರಿಗೆ ಮೋಹನ್ನಮಾಲೆ
ಕಣ್ಣ ಕಾಡಿಗೆ ಹಚ್ಚಿ ಕಸ್ತೂರಿ ಕುಂಕುಮ
ಚೆನ್ನಾರ ಚೆಲುವೆ ಶ್ರೀ ಮಾಲಕ್ಷ್ಮಿಗೆ ೩

ಸೆಳೆನಡುವಿಗೆ ತಕ್ಕ ಬಿಳಿಯ ಪೀತಾಂಬರ
ನಳಿತೋಳಿನಲಿ ನಾಗಮುರಿಗೆ ವಂಕಿ
ಗಿಳಿಯು ಕಮಲ ಪ್ವಾರ್ಜ ಹರಡಿ ಕಂಕಣವಿಟ್ಟು
ಕಳೆಯು ಸುರಿವ ಚೆಲ್ವೆ ಮಾಲಕ್ಷ್ಮಿಗೆ ೪

ಗರುಡವಾಹನನ್ನೆಗಲಿಳಿದು ಶ್ರೀನಾಥನ
ಹರಡಿ ಕಂಕಣ ಕರಪ್ಹಿಡಿದುಕೊಂಡು
ಮುಡಿದ ಮಲ್ಲಿಗೆ ಪಾರಿಜಾತಗಳುದುರುತ
ನಡೆದು ಬರುವೊ ಮುದ್ದು ಮಾಲಕ್ಷ್ಮಿಗೆ ೫

ಪಾದದಿ ರುಳಿ ಗೆಜ್ಜೆ ನಾದ ಝೇಂಕರಿಸುತ
ಆದರದಿಂದೆನ್ನ ಮನೆಗೆ ಬಂದು

ಶ್ರೀಧರ ಭೀಮೇಶ ಕೃಷ್ಣನೆಪೆಯು ವ್ಯಾಲ್ಪಿ-
ನೋದದಿ ಕುಳಿತಿದ್ದ ಮಾಲಕ್ಷ್ಮಿಗೆ ೬

೫೬

ಜೈ ಭೀಮ ಜರೆಸುತನ್ವೈರಿ ಜೈ ಭೀಮ
ಜಯ ಜಯ ಜಯ ಮುಖ್ಯಪ್ರಾಣ
ಸೋಮ ಕುಲದೊಳುದ್ಭವಿಸಿ ಗೀರ್ವಾಣ
ಬಲು ಬಲುಮೆಯಿಂದಲಿ ದುರ್ವಾದಿಗಳನ್ನೆ
ಮೂತಿಂದ್ಪೊತ್ತಿ ಸಲಹೆನ್ನ ಶ್ರೀಮ-
ದಾನಂದತೀರ್ಥಮುನಿ ಪ.

ರೋಮ ರೋಮಕೆ ಕೋಟಿಲಿಂಗ
ಜಗತ್ಪ್ರಾಣಿಗಳಿಗೆ ಅಂತರಂಗ
ಲಂಕೆನಾಳ್ವೋ ಭೂಪತಿಗತಿ
ಭಂಗಬಡಿಸಿ ಕ್ಷೋಣಿಸುತೆಗೆ
ಉಂಗುರಿಟ್ಟು ರಾಮರಲ್ಲೆ ಪ್ರೇಮ-
ವಾರ್ತೆಯು ತಂದ ಪ್ರಾ-
ಣೇಶ ದಯವಾಗೊ ೧

ಮಧುವೈರಿ ಮಾತುಳನಾಗೆ ಬಂದು
ಮಗಧ ಮುತ್ತಿಗೆ ಹಾಕೆ ಬ್ಯಾಗ
ಶ್ರೀಧರನಿಂದ ಪರಾಜಿತನಾಗಿ
ವೃಕೋದರ ಛಲವಿಡಿದು ತಾ ಹೋಗೆ
ಅಲ್ಲೆ ದ್ವಿಜನ್ವೇಷಧರಿಸ್ವಾಸುದೇವ
ವಾಸವಿ ಕೂಡಿ ಮಗಧರಾಜನ ಮ-
ರ್ಮಗಳಿಂದ ಸೀಳಿದ್ಯೊ ೨

ಹಾಟಕಾಂಬರನಲ್ಲಿ ಭಕ್ತರೆಂದು
ಅರಿಯದೆ ಅಂತಕನ ಪುತ್ರ[ನ]
ಜೂಜಿನಾಟ[ದಿ]ಸೋಲಿಸಿ ಸೆಳೆಯೆ
ವಸ್ತ್ರ ಕೃಷ್ಣೆ ನೋಟದಿ ಭಸ್ಮ
ವಿಚಿತ್ರ ಸವ್ಯಸಾಚಿ ಸಹಿತವಾಗ್ವಿರಾಟ-
ವರ್ಗದಿ ಸತಿಗೆ ಕಾಟ ಕಳೆದ್ಯಮ-
ಪುರಿಗೆ ದಾಟಿಸ್ದ್ಯೋ ಕೀಚಕನ ೩

ಕಳೆದು ಅಜ್ಞಾತವಾಸ ಬಂದು
ಖಳರೊಳಗಧಿಕ ದುಶ್ಯಾಸ[ನ]ಅವನ
ಕರುಳ ಬಗೆಯಲತಿ ರೋಷ
ಕಾಲಕ್ಕೊದಗಲು ನರಹರಿ ಆ–
ವೇಶ ಕಂಡು ಸುರರಸುರರ ಸೈನ್ಯ
ಜರಿದು ಹಿಂದಕೆ ನಿಲ್ಲೆ ರಣಧೀರ–
ಗೆಣೆಯಿಲ್ಲ ಪರಮ ಪರಾಕ್ರಮ ೪

ಸಕಲ ಜೀವರಿಗಾಧಾರಕನೊ
ಭಾರತಿ ಪ್ರಾರಂಭಕ್ವೊಂದಿತನೊ
ಮಧ್ವಮತ ಶಾಸ್ತ್ರಗಳ ಉದ್ಧಾರಕನೊ
ತ್ರಿಗುಣ ಜೀವನು ಸಾರಪ್ರೇರಕನು
ವಾಯು ಸಕಲ ಸುರರೊಡೆಯು
ಭೀಮೇಶ ಕೃಷ್ಣನಲ್ಲಿ ಭಕುತಿ ಜ್ಞಾನವ
ದಿವ್ಯ ಮುಕುತಿ ಮಾರ್ಗವ ತೋರಿದಿ ೫

೫೭

ತಿರುವೀದಿಯಾ ನೋರೆ ತಿರುವೀದಿಯಾ ಹನುಮಾ
ತಿರುವೀದಿಯಾ ಪ.

ದಂಡಕವನ ಕೋದಂಡರಾಮರ ಪಟ್ಟ–
ದ್ದಿಂಡತಿಜೋರಸ್ಥ ತ್ತ್ರುಂಡ ನೋಡದೆ ೧

ತರಳೆ ದ್ರೌಪದಿ ಸಭೆಗೆಳೆದು ಉಟ್ವಸನವ ಸೆಳೆದ
ಕೌರವರೆಂಬೊ ದುರುಳರ ನೋಡದೆ ೨

ಮಧ್ವಮತಗಳೆಂಬೊ ಮರದ ಹಣ್ಣನು ಮೆದ್ದು
ಮುದ್ದು ಭೀಮೇಶಕೃಷ್ಣ ಎನ್ನದವರ ನೋಡಿ ೩

೫೮

ದಾರ ಕಂದನಮ್ಮ ಕೇರಿಗೆ ಬಂದು
ಗಾರುಮಾಡುವ ನೋಡಲಾರೆ ಗೋಪ್ಯಮ್ಮ
ಈರೇಳು ಲೋಕಮೊಡೆಯನೊ ದಾರಮ್ಮ ಪ.

ಪಿಡಿದಿದ್ದ ಕೊಳಲೂದುವ ಬಾಯಲಿ ಬೆಣ್ಣೆ
ಕಡಗೋಲ ಪಿಡಿದಿದ್ದ ಬೆಡಗು ನೋಡಮ್ಮ
ಬಿಡಿಮುತ್ತಿನ ಉಡಿದಾರವು ಉಡಿಗಂಟೆ
ಮುಡಿದ ಮಲ್ಲಿಗೆ ಕುಸುಮಗಳು ನೋಡಮ್ಮ
ಕುಡಿಹುಬ್ಬು ಕಡೆಗಣ್ಣನೋಟದ ಚೆಲುವ ತಾ
ಹುಡುಗರಂತಾಡುವ ತುಡುಗ ತಾನಮ್ಮ ೧

ಪೊಕ್ಕಳ ಕಮಲ ನಕ್ಷತ್ರದ ಪತಿಯಂತೆ
ಇಪ್ಪೊ ವಜ್ರದ ಪದಕಗಳ ನೋಡಮ್ಮ
ಅರ್ಕನಂತಿರಲತಿ ಕೋಮಲಪಾದಕೆ
ಶುಕ್ಲಗೆ ಮಿಗಿಲಾದ ಗುರು ಕೇಳಮ್ಮ
ಕತ್ತಲೊಳಗೆ ಕಳ್ಳತನದಿಂದೋಡಾಡುತ
ಕಟ್ಟಿದ ಪಂಜಿನಂತ್ಹೊಳೆವೊ ಕೇಳಮ್ಮ ೨

ಕಟ್ಟಿದ ನೆಲವಿನೊಳ್ ಮಕ್ಕಳ ಮಲಗಿಸಿ
ಎಷ್ಟು ಘಾತಕ ತಾ ಕೈಬಿಟ್ಟ ನೋಡಮ್ಮ
ತೊಟ್ಟಿಲೊಳಗೆ ಕೆನೆಮೊಸರಿನ ಚಟ್ಟಿಗೆ
ಇಟ್ಟು ತೂಗುತ ಮೆಲ್ಲುವನು ಕೇಳಮ್ಮ
ಕಟ್ಟಿದ್ದಾಕಳ ಕಣ್ಣ ಬಿಚ್ಚಿ ಮೊಲೆಗೆ ಬಾಯ್ಹಚ್ಚಿ
ಕ್ಷೀರವ ಸುರಿದುಂಬುವನಮ್ಮ ೩

ತೋಳ ಬಾಪುರಿ ಪಂಕೆ ತೋಡ್ಯ ಬಿಂದಲಿ ಚಕ್ರ-
ಪಾಣಿಯಲ್ಲ್ಹೊಳೆವೊ ಮುದ್ರಿಕೆಯು ನೋಡಮ್ಮ
ಆಣಿ ಮುತ್ತಿನ ಸರ ಅರಳೆಲೆ ಪದಕವು
ಕಾಲ ಕಿಂಕಿಣಿ ನಾದಗಳ ಕೇಳಮ್ಮ
ತೋರ ಮುತ್ತುಗಳೋಣಿಯುಲುಮುರುತ ಒ-
ಯ್ಯಾರದೊಲಪಿನ ಚೆದುರ್ಯಾರು ಕೇಳಮ್ಮ ೪

ಮನ್ಮಥನಿಗೆ ಮಿಗಿಲಾದ ಸ್ವರೂಪಲಾವಣ್ಯನೆ
ನೀಲದ ವರ್ಣ ಕೇಳಮ್ಮ
ಹುಣ್ಣಿಮೆ ಚಂದ್ರಮನ್ನ ಸೋಲಿಸೋಮುಖ
ಇನ್ನು ಇವನ ಸೌಂದರ್ಯ ನೋಡಮ್ಮ
ಹೆಣ್ಣು ಮಕ್ಕಳ ಸೆರಗನ್ನು ಕೈಯ್ಯಲಿ ಸುತ್ತಿ
ಬೆನ್ನು ಬೆನ್ಹತ್ತಿ ತಾ ತಿರುಗುವನಮ್ಮ ೫

ಚೀನಿ ಅಂಗಿಯು ಪ್ಯಾಲಿ ಚಿತ್ರದ ನಡುಕಟ್ಟಿ ಜಾರ
ಜರದ ಛಾದರವ ನೋಡವ್ಮ
ಸೋಗೆ ನವಿಲು ಗಿಳಿ ಕೋಗಿಲೆ ಸ್ವರದಂತೆ
ವೇಣು ಕೊಳಲ ಗಾಯನವ ಕೇಳವ್ಮ
ಮೇಘಮಂಡಲ ತಲೆತಾಕುವ ಹರಿಯುದೆ ತಾ
ಜಿಗಿದಾಡೋನಂಗಳದಿ ಕೇಳವ್ಮ ೬

ಎಷ್ಟು ಹೇಳಿದರೀ ಮಾತು ಮನಕೆ ನಿಜ
ಹುಟ್ಟವಲ್ಲದೇನೀಗ ಬಾರೆ ಗೋಪವ್ಮ
ಬಿಟ್ಟು ಕೆಲಸ ಭೀಮೇಶಕೃಷ್ಣಗೆ ಬುದ್ಧಿ
ಎಷ್ಟು ಹೇಳುವಿ ಮುಂದ್ಹೋಗಲೇಕವ್ಮ
ಬಿಟ್ಟು ಮಾಡುವರೇನೆ ಶಿರಿಪತಿ ಆಟ ನಿನ್ನ
ದೃಷ್ಟಿಂದ ನೋಡೆ ನಿಜಹುಟ್ಟುವುದವ್ಮ ೭

೫೯

ದೇವಋಷಿಗಳ ನೋಡಿದೆ ಹರಿಪಾದ
ಸೇವಕರ ಕೊಂಡಾಡಿದೆ
ದೇವಋಷಿ ಹರಿಪಾದ ಸೇವಕರು ಸನ್ಯಾಸ-
ದೇವಸುತನಂಕದಲ್ಲುದಿಸಿದುತ್ತಮರಿವರು ಪ.

ವಾಣಿಪತಿಪಿತನ ಚರಣಾಂಬುಜ ಸೇವೆ
ಮಾಡೋ ಜನರಲ್ಲೆ ಕರುಣ
ಜಾಣ ನಾರಂದ ಜಗದೀಶನ ಗುಣಮಹಿಮೆ
ವೀಣಾಪಾಣಿಗಳಿಂದ ಸ್ತುತಿಸಿ ಕೊಂಡಾಡುವರು ೧

ಪ್ರೀತಿಯಿಂದ್ಹರಿಯು ನೋಡಿ ಸುರಪಾರಿ-
ಜಾತವನು ತಂದು ನೀಡಿ
ಮಾತುಳಾಂತಕನ ಮುಂದಿ[ಯ]ರಿಗೆ ಕಲಹವನ್ಹೂಡಿ
ಭೂತಳಕೆ ಸುರತರುವ ತರಿಸಿದ್ಹರಿಕರಗಳಿಂದ ೨

ದಾಸಿಯಲ್ಲುದಿಸಿ ವಿಷಯಗಳು-
ದಾಶ(ಸೀ?)ನವ ಮಾಡಿ ಬ್ಯಾಗ

ಅಸುರಾಂತಕನ ಅತಿಭಕ್ತಿಯಿಂದಲಿ ಭಜಿಸಿ ಭೀ–
ಮೇಶಕೃಷ್ಣನ ಗುಣವ ಪಾಡಿ ಕೊಂಡಾಡುವರು ೬

## ೬೦

*

ದೇವೇಂದ್ರನ ಸೊಸೆ ದೇವಕ್ಕಿ ತನಯಳು
ಏನೇನು ಬಯಸಿದಳು ಪ.

ಒಂದು ತಿಂಗಳು ತುಂಬಲು ಸುಭದ್ರ
ಅಂಜೂರಿ ದ್ರಾಕ್ಷಿ ಕಿತ್ತಳೆ ಜಂಬುನೇರಳು ಬಯಸಿದಳು
ಅಂಬುಜಾಕ್ಷನ ತಂಗಿ ಪೈಜಣ ರುಳಿ ಗೆಜ್ಜೆ ಕಾ–
ಲುಂಗುರ ಕಿರುಪಿಲ್ಯ ಇಟ್ಟೇನೆಂಬುವಳು ೧

ಎರಡುತಿಂಗಳು ತುಂಬಲು ಸುಭದ್ರ
ಪರಡಿ ಮಾಲತಿ ಸಣ್ಣಶ್ಯಾವಿಗೆ ಬಯಸಿದಳು
ಪರಿವೇಶನ ತಂಗಿ ಹರಡಿ ಕಂಕಣ ಹಸ್ತ–
ಕಡಗ ಹಿಂಬಳೆ ದ್ವಾರ್ಯ ಇಟ್ಟೇನೆಂಬುವಳು ೨

ಮೂರುತಿಂಗಳು ತುಂಬಲು ಸುಭದ್ರ
ವಾಲ್ಯ ಪಚ್ಚದ ಚಂದ್ರ ಬಾಕ್ಯಪ ಬಯಸಿದಳು
ಮಾರಸಯ್ಯನ ತಂಗಿ ತೋಳಿಗ್ವಜ್ರದ ವಂಕಿ
ಮಾಣಿಕ್ಯದ್ಹೊಡ್ಯಾಣ ಇಟ್ಟೇನೆಂಬುವಳು ೩

ನಾಲ್ಕುತಿಂಗಳು ತುಂಬಲು ಸುಭದ್ರ
ಆಕಳ ತುಪ್ಪ ಅನಾರಸ ಬಯಸಿದಳು
ಶ್ರೀಕಾಂತನ ತಂಗಿ ತೂಕದ ಸರಿಗೆಯಿಟ್ಟು
ಏಕಾವಳಿಯು ಸರ ಹಾಕೇನೆಂಬುವಳು ೪

ಐದುತಿಂಗಳು ತುಂಬಲು ಸುಭದ್ರ
ಕೆನೆಮೊಸರ್ಹಾಕಿದ ಬುತ್ತಿ ಚಿತ್ರಾನ್ನವ ಬಯಸಿದಳು

* ಬಸಿರು ಬಣ್ಣಿಸಿದ ಹಾಡು.

ಅಸುರಾಂತಕನ ತಂಗಿ ಹಸುರುಪತ್ತಲಸುಟ್ಟು
ಕುಸುಮ ಮಲ್ಲಿಗೆಸೊಗ್ಗು ಮುಡಿದೇನೆಂಬುವಳು ೫

ಆರುತಿಂಗಳು ತುಂಬಲು ಸುಭದ್ರ
ಚೌರಿ ರಾಗಟೆ ಜಡೆಬಂಗಾರ ಬಯಸಿದಳು
ಮಾರನಯ್ಯನ ತಂಗಿ ನಾಗಮುರಿಗೆನಿಟ್ಟು
ಜಾಜಿ ಮಲ್ಲಿಗೆಸೊಗ್ಗು ಮುಡಿದೇನೆಂಬುವಳು ೬

ಏಳುತಿಂಗಳು ತುಂಬಲು ಸುಭದ್ರ
ಕ್ಷೀರ ಮಂಡಿಗೆ ಬುಂದ್ಯ ಫೇಣಿಯು ಬಯಸಿದಳು
ಕಾಳಿ ಮರ್ದನನ ತಂಗಿ ಕಮಲ ಕಸ್ತೂರಿಗೆ ಮುಡಿಯು
ನಿಂಬಾವಳಿ ಪತ್ತಲ ಸಿರಿಮುಟ್ಟೇನೆಂಬುವಳು ೭

ಎಂಟು ತಿಂಗಳು ತುಂಬಲು ಸುಭದ್ರ
ಚಿಂತಾಕು ಪದಕ ಕಟ್ಟಾಣಿಯು ಬಯಸಿದಳು
ವೈಕುಂಠ ಪತಿಯು ತಂಗಿ ಇಂಟರ್ ಪಪ್ಪಳಿಸುಟ್ಟು
ಸೀಮಂತಸುತ್ಸವ ಮಾಡೆ ಸುಖದಿಂದಿರುವಳು ೮

ಒಂಬತ್ತು ತಿಂಗಳು ತುಂಬಲು ಸುಭದ್ರಗೆ
ಬಂಗಾರದ್ಹೊರಸಿನಲ್ಲಿರಿಸಿ ಆರತಿ ಮಾಡಲು
ಮಂಗಳಮಹಿಮ ಭೀಮೇಶಕೃಷ್ಣನ ತಂಗಿ
ಕಂದ ಅಭಿಮನ್ಯು ಎಂಬುವನ ಪಡೆದಳು ೯

೬೧

*

ಧರೆಯನಾಳುವನೊಬ್ಬ ದೊರೆ ಜೈಶೀಲನಾ
ಹರದಿ ಮಂಜುಳೆಯಿರಲು ಮಕ್ಕಳಿಗಾಗಿ
ಮರುಗುತ ಸೊರಗಿರಲು ಈ ಪರಿಯ ನೋಡುತ
ಹರಸು ಬ್ಯಾಗ ತಾ ತಿಳಿದಪರ ಮನ ತಿರುಕಸಂಪದಿ
ಬರಲು ಧಾನ್ಯವ ಕರೆದು ನೀಡಿವರೊಲ್ಲದಾಗಲೆ
ತಿರುಗಿ ಪೋದನೆ ಉರಗಭೂಷಣ

* ಮಂಗಳ ಗೌರಿ ಕಥೆ.

ಮಂಗಳ ಜಯವೆನ್ನಿ ಮಂಗಳ ಶುಭವೆನ್ನಿ
ಮಂಗಳಾಂಗಿಯರು ಬ್ಯಾಗ ೧

ನಂದಿವಾಹನನ ಪೂಜಿಸಿ ಫಲಗಳ ಬೇಡೆ
ಕಂದನಿಗಾಯುಷ್ಯವು ಐದರಾ ಮ್ಯಾಲ್ ಹ-
ನ್ನೊಂದು ವರುಷವೆನಲು ವರ ನೀಡುತಿರಲು
ಮಂಜುಳೆಯು ಗರ್ಭವನೆ ಧರಿಸಲು
ಬಂಧುಗಳು ಹೂ ಮುಡಿಸಿ ಪರಮಸಂಭ್ರಮದಿ ಸೀ-
ಮಂತ ಮಾಡಲು ತುಂಬಿತಾ ನವಮಾಸವಾಗಲಿ ೨

ಜಾತವಾಗಲು ನಾಮಕರಣ ಮಾಡುತ ಚಂದ್ರ ಶೇಖರ-
ನೆಂದ್ಹೆಸರಿಡುತ ಜಾವಳ ಜುಟ್ಟು
ಪ್ರೀತಿಂದುಪನಯನ ಮಾಡುತ ವಿದ್ಯೆಗಳ ಕಲಿಸುತ
ಆತಘದಿನಾರ್ವರುಷ ಬರುತಿರೆ
ಮಾತುಳನ ಕರೆತಂದು ಬ್ಯಾಗನೆ
ಪ್ರೀತಿಯಿಂದ್ಹಣಕೊಟ್ಟು ಕಾಶಿಯಾತ್ರೆಗೆನುತಲಿ ಕಳುಹೆ ಬ್ಯಾಗನೆ ೩

ಒಂದಾಗಿ ಅಳಿಯ ಮಾವಂದಿರು ಬರುತಿರೆ
ಕಂಡಿಳಿದರು ತೋಟವ ಗೆಳತಿಯರು
ಬಂದು ಹೂವಿಗೆ ಆಟವಾಡುತಲಿ ಕೋಪಿಸೆ
ಒಂದಕ್ಕೊಂದು ಮಾತಾಡೆ ರಾಜ
ನಂದನೆಯು ತಾ ನೊಂದುಕೊಳ್ಳದೆ
ನಂದಿವಾಹನನರಸಿದಯವಿರಲೆಂದು ನಡೆದಳು ಮಂದಿರಕೆ ೪

ಬಂದ ರಾಜನ ಮಗಳಿಗೆ ನಿಬ್ಬಣವು ಕರೆ-
ತಂದರಸುಕುಮಾರನ ಧಾರೆಯನೆರೆದು
ಮಂಗಳ ಸೂತ್ರವನು ಬಂಧನವ ಮಾಡಿದ-
ರಂದದಿಂದಲಿ ಲಾಜಹೋಮವ
ಬಂಧುಗಳ ಸಹಿತುಂಡು ಭೌಮವ
ಚೆಂದದಿಂದಲಿ ಸುತ್ತಿಸಾಧ್ಯವ ಅಂದಿನಿರುಳಲಾನಂದವಾಗಿರೆ ೫

ಸತಿಪತಿಯರು ಭಾಳ ಹಿತದಿಂದ ಮಲಗಿರೆ
ಅತಿ ಹಸಿವೆನಗೆನಲು ಲಡ್ಡಿಗೆ ತಂದು

ಘೃತ ಬಟ್ಟಲೊಳು ಕೊಡಲು ತಿಂದಿಡಲು ಮುದ್ರಿಕಾ
ಸತಿ ಸಹಿತ ಸುಖನಿದ್ರೆಲಿರೆ ಪಾ-
ರ್ವತಿಯು ಬಂದಾಖದ್ರುದೇವಿಸುತ ಬರುವನೆಂದ್ಹೇಳೆ ಕಳಸವ
ಅತಿಬ್ಯಾಗದಿ ತುಂಬಿಟ್ಟಳುರಗವ ೬

ಅತ್ತೆ ಕಾಶಿಗೆ ಪೋಗಿ ಅಳಿಯ ಮಾವಂದಿರು
ಕ್ಷ್ಯಾಪ್ಪನ ಕರೆದು ತಂದು ಕುಳಿತಿರಲಾಗ್ಗ ಚಿತ್ರ-
ಭೂಷಿತಳು ಬಂದು ನೋಡುತಲಿ ನಿಂದು
ಥಟ್ಟನೆದ್ದು ತಾ ತಿರುಗಿ ಪೋಗೆನ್ನ
ಪಟ್ಟದರಸಿವನಲ್ಲವೆನುತಲಿ ಹೆತ್ತ ಜನಕ ನೀ
ಅನ್ನಕ್ಷೇತ್ರವ ಇಟ್ಟು ನಡೆಸೀಗ್ವೀಳ್ಯಗಳ ಕೊಡುವುದು ೭

ಗಂಗಾಸ್ನಾನವ ಮಾಡಿ ಬಂದರಿಬ್ಬರು ಕರೆ
ತಂದು ಭೋಜನಮಾಡುತ ಕುಳಿತಿರಲಾಗ
ತಂದು ವೀಳ್ಯವ ಕೊಡುತ ಮುಖನೋಡಿ ನಗುತ
ಸಂದೇಹಿಲ್ಲವೆ ಎನ್ನ ಪತಿ ಹೌದೆಂದು ನುಡಿದಳು
ಬಂದು ಜನರು ನಿಂದು ಗುರುತೇನೆಂದು ಕೇಳಲು
ತಂದು ತೋರಿದಂ(ದಳಂ?)ಗುರವ ಜನರಿಗೆ ೮

ನಿನ್ನ ಗುರುತು ಏನ್ಹೇಳೆನ್ನಲು ಸಭೆಯೊಳು
ಪನ್ನಂಗದ ಕಳಸವನು ತೆಗೆಯಲು ಬಾಯಿ
ರನ್ನಮುತ್ತಿನ ಸರವು ಆಗಿರಲು ಉರಗವು
ಕನ್ನೆಯರು ಹರಸ್ಹಾಕೆ ಕೊರಳಿಗೆ
ಮನ್ನಿಸುತ ಮಹಾರಾಜ ಮಗಳನು ಚಿನ್ನದಾಭರಣಗಳು
ಉಡುಗೊರೆ ತನ್ನಳಿಯಗುಪಚಾರ ಮಾಡುತ ೯

ಸತಿಪತಿಯುರು ತಮ್ಮ ಪಿತರ ಅಪ್ಪಣೆಗೊಂಡು
ರತುನದಂದಣವೇರಲು ಮಾರ್ಗದಿ ಗೌರೀ-
ವ್ರತ ಮಾಡಿ ನಡೆತರಲು
ಪಿತಗ್ಹೇಳಿ ಕಳುಹಲು ಸುತನು ಬಂದರಮನೆಗೆ ಭಾಗೀ-
ರಥಿಯು ಮಾತುಳ ಮಡದಿ ಸಹಿತ
ಹಿತದಿ ಬಂದೆರಗಿದರೆ ಸೊಸೆಮಗ
ಅತಿಹರುಷದಿಂದಪ್ಪಿ ಕೇಳುತ ೧೦

ದಾವ ಪುಣ್ಯದ ಫಲದಿಂದ ನಿನ್ನರಸನ ಪ್ರಾಣ ಪಡೆದಿಯೆನಲು
ಮಂಗಳಗೌರಿ ದೇವಿ-
ದಯವಿರಲೆಂದು ಹೇಳಲು ಶ್ರೀಗೌರಿಕಥೆಯನು
ಕಾಮಿತವನದೊಳಗೆ ದ್ರೌಪದಿಗ್ಹೇಳಿದನು
ಭೀಮೇಶಕೃಷ್ಣನು ಮಾಡಿದರೆ ಮುತ್ತೈದೆತನಗಳ
ಬೇಡಿದಿಷ್ಟಾರ್ಥಗಳ ಕೊಡುವೋಳು
ಮಂಗಳ ಜಯವೆನ್ನಿ ಮಂಗಳ ಶುಭವೆನ್ನಿ
ಮಂಗಳಾಂಗಿಯರು ಬ್ಯಾಗ ೧೧

೬೨

ನಡೆದು ಬಾರಯ್ಯ ಕೃಷ್ಣ ನಡೆದು ಪ.

ಪಕ್ಷಿವಾಹನ ಪರಪೇಕ್ಷಾರಹಿತ ನಿನ್ನ ಕುಕ್ಷಿಯೊಳಗೆ ಜಗ
ರಕ್ಷಿಸುವಾತನೆಂದು ವಕ್ಷಸ್ಥಳದಿ ಶ್ರೀಮಾ-
ಲಕ್ಷ್ಮಿ ಧರಿಸಿ ಪಾಂಡುಪಕ್ಷನೆನಿಸಿ ನೀ ಪ-
ರೀಕ್ಷಕನುಳುಹಿದಂತಕ್ಷದಿ ನೋಡುತಧೋಕ್ಷಜ ಹರಿಯೆ ೧

ಸತ್ಯವಂತನೆ ಕೇಳಸತ್ಯ ಅಜ್ಞಾನ ಭವ-
ಕತ್ತಲೊಳಗೆ ಬಹಳ ಶತ್ರು ಸಮೂಹದಲ್ಲಿ
ಸುತ್ತಿ ಬಳಲುವೆ ಕೇಳಾಪತ್ತು ಬಾಂಧವ ನಿನ್ನ
ಚಿತ್ತಕ್ಕೆ ತಂದು ಸಮಸ್ತ ಸುರೇಶ ನಿನ್ನ
ಹತ್ತಿಲೆ ಕರಿ ಸರ್ವೋತ್ತಮ ಹರಿಯೆ ೨

ಧೀರ ಗಂಭೀರ ನಿನ್ನ ಸಾರಥ್ಯ ದೊರೆಯಲ್ವಿ-
ಚಾರ ಮಾಡಿದರು ನಿನ್ನಾರು ತಿಳಿಯಲಿಲ್ಲೊ
ಶೂರ ಸುತಗೆ ಸುಕುಮಾರನೆನಿಸಿದಂಥ ಅ-
ಪಾರ ಮಹಿಮನೆ ಸಮೀರಜ ಭವ ಸುರ
ನಾರದಪ್ರಿಯನೆ ಉದ್ಧಾರಮಾಡು ಎನ್ನನು ೩

ಗಜರಾಜ ವರದನೆ ತ್ರಿಜಗದೊಡೆಯ ನಿನ್ನ
ಧ್ವಜ ವಜ್ರಾಂಕುಶ ಪಾದಭಜಕರೆನಿಸುವಂಥ
ಸುಜನರ್ವಂದಿತನಾದ ಕುಜನ ಕುಠಾರಿಯೆ ನೀ
ಅಜಮಿಳಗೊಲಿದಂಥಜಗಣೇಂದ್ರನ ಪ್ರಿಯ
ನಿಜವಾಗಿ ನೋಡೆನ್ನ ರಜ ತಮ ಕಳೆಯುತ ೪

ಕಡಲಶಯನನಾದ ಉಡುರಾಜ್ವದನ ಬಿಟ್ಟು
ಬಿಡಿಯು ಭೀಮೇಶ ಕೃಷ್ಣನ್ನೊಡೆಯನೆನುತ ಬಂದ
ಬಡವ ಸುಧಾಮಗಿಷ್ಟು ಹಿಡಿಹಿಡೀ ಎಂದು ಭಾಗ್ಯ
ತಡೆಯದೆ ನಾ ನಿನ್ನಡಿಗಳಿಗೆರಗುವೆ ಕೊಡು
ಕೊಡು ವರಗಳ ಪೊಡವಿ ಪಾಲಿಪನೆ ೫

೬೩

ನಮೋ ನಮೋ ನಂದಕುಮಾರ ನಿನ-
ಗೆದುರ್ಯಾರೊ ಯದುಕುಲ ವೀರ ಭಜಿ-
ಸುವ ಭಕ್ತಜನರುದ್ಧಾರ ಮಾಡೊ
ಪರಮ ದಯಾಳು ನೀ ಸರ್ವ ಸ್ವತಂತ್ರ
ನಿನ್ನ ಧ್ವಜ ವಜ್ರಾಂಕುಶ ರೇಖಾ
ಪದುಮ ಪಾದಗಳಿಗೆ ನಮೋನಮೋ
ವೆಂಕಟಾದ್ರೀಶ ನಮೋ ನಮೋ ಪ.

ಶ್ರೀಶ ಜಗದ್ಭರಿತ ನೀನು ಒಂದು–
ಕಾಸಿಗ್ವಿಷಯಗಳಲ್ಲ ನಾನು ನಿನ್ನ
ದ[1][ರ್ಶ][1]ನ ಹಾರೈಸುವೆನು ಪರಮ
ನುಗ್ರ[ಹ]ದಿ ಪಾಲಿಸೊ ನೀನು ಹರೇ
ದೋಷರಹಿತ ಎನ್ನ ದೋಷನಾಶನ ಮಾಡಿ
ಶೇಷಶಯನ ಶ್ರೀನಿವಾಸ ನೀ ದಯಮಾಡೊ ೧

ಬಾಯಿ ಬೀಗವನ್ಹಾಕಿ ಚರಿಯೆ ಗಂ–
ಡಾರತಿ(?) ಶಿರದ ಮೇಲ್ಹೊರಿಯೆ ನಿನ್ನ
ನಾಮವ ಕೊಂಡಾಡಲರಿಯೆ ಪಾದ–
ಚಾರ್ಯಾಗಿ ಬರುವುದೀಪರಿಯೆ ತಿಳಿದು
ಮಾನ್ಯಪೊಕ್ಕಾಲು ಎಂದು ಬಹುಮಾನದಿಂದಿಟ್ಟು
ಮರೆಯದೆ ಸಲಹೆನ್ನ ಮಾಧವ ಕರುಣದಿ ೨

ಬಾಡಿಗಿದ್ದರಾಯನ್ಹಿಡಿಯ(?) ನಿನ್ನ
ಅನುಮತಿಲ್ಲದೆ ದಾರಿ ನಡೆಯ

1 ರುಶ

ಬ್ಯಾಡ ಬಿಡು ಲೋಭಿತನವ ಎ-
ನ್ನೊಡೆಯ ಬಿಡದೆ ಕಾಡುತ ಕಾಸು
ಕವಡೆ ಕಡ್ಡಿ ಕಣಜಕ್ಕೆ ಈ ಪರಿ
ಗಳಿಕೆ ದೇಶದ ಮೇಲೆ ಕಾಣೆನು ೩

ಮುಡಿಪು ಜೇಡುವುದ್ಹೇಳೊ ಎಷ್ಟು ನಿನ್ನ
ಬಡಿತ ತಡೆಯಲಾರೆ ಪೆಟ್ಟು ಮಡಿ
ವೈಲಿಗೆಂದರೆ ಅತಿಸಿಟ್ಟು ನಾ
ಬಿಚ್ಚಾಡುವೆನೊ ಬೀಡಬಿಟ್ಟು ಪ್ರ-
ಸಾದ ತೀರ್ಥ ಬೇಕಾದರೆ ಕ್ರಯಕಟ್ಟಿ ಗಂ-
ಟ್ಯಾರಿಗೆ ಮಾಡುವಿ ಹೇಳೆನಗೊಂದಿಷ್ಟು ೪

ಸತಿಗೆ ಮಾಡುವೆ ಲಕ್ಷ್ಮೀಪತಿಯೆ ನಿನ
ಸುತ ಸತ್ಯಲೋಕದಧಿಪತಿಯೆ ಅತಿ
ಹಿತ ಭಕ್ತರಿಗೆ ಭಿಕ್ಷೆಗತಿಯೋ ನೀಡಲು
ಧನವೊಲ್ಲದೆ ಜೇಡುವರೊ ಸದ್ಗತಿಯು ನಿನ-
ಗತಿಯಾಸೆ ಘನತ್ಯಲ್ಲ ಗತಿಪ್ರದಾಯಕ ಕೇಳೊ
ಪೃಥುವೀಶ ನಿನ್ನದಲ್ಲವೆ ಸಕಲೈಶ್ವರ್ಯ ೫

ಕನಕಗಿರಿಮೊರೆಯೆಂಬೊದೆಲ್ಲೊ ಬಂದ
ಜನಕೆ ಅನ್ನವ ನೀಡಲೊಲ್ಲ್ಯೊ ಜಗ-
ಜನಕ ನಿನ್ನನು ಕಾಣಲಿಲ್ಲೋ ನಾನಿ-
ರ್ಧನಿಕನೆಂಬುವುದು ನೀ ಬಲ್ಲ್ಯೊ ಎನ-
ಗನುಕೂಲ ಧೈರ್ಯವ ಕೊಟ್ಟು ನಿನ್ನ ದಪುಶನ
ಸನಕಾದಿಗಳೊಡೆಯ ನಿನ್ನ ಮನಕೆ ಬಂದರೆ ನೀಡೊ ೬

ಶಂಕರ ಸುರರಿಂದ್ವಂದಿತನೊ ನಾ
ಕಿಂಕರ ನರರಿಂದ ನಿಂದಿತನೊ ನೀ
ಮಂಕುಜನರ ಪಾಪ ಪರಿಹಾರಕನೊ ಹರೇ
ಶಂಖ ಚಕ್ರಾಂಕಿತ ಭೀಮೇಶಕೃಷ್ಣನ ನಾಮ
ಶಂಕೆಯಿಲ್ಲದೆ ಕೊಟ್ಟು
ವೆಂಕಟ ದಯಮಾಡೊ ೭

೭೪

*

ನರಸಖ ನಾರಾಯಣಕೆರೆಪುರ ವಾಸ
ಕರದಿ ಪಿಡಿದು ಎನ್ನ ಕರಿ ಕಮಲೇಶ ಪ.

ಗರುಡಾರೂಢನು ಗಜವರದ ವೈಕುಂಠ
ಕೊಡುವ ಪಾಲಿಸಿ ಪಾಂಡವರ ಮನೆ ಭಂಟ ೧

ಪಕ್ಷಿವಾಹನ ರಾಕ್ಷಸಾರಿ ರಾವಣನ
ಶಿಕ್ಷಿಸಿ ವಿಭೀಷಣನ ರಕ್ಷಿಸಿದ ರಾಮ ೨

ವಿನುತೆಸುತನ ಏರಿ ಘನತರುತ್ಸವದಿ
ಸವರಿದಿ ಸುರವಂದ್ಯ ಸುಜನಕ್ಕಾನಂದ ೩

ಹಕ್ಕಿಯ ಪಕ್ಕದಲ್ಲ್ಯರ್ಕಕೋಟಿತೇಜ ಜಾ-
ನಕ್ಕಿ ಸಹಿತಯೋಧ್ಯನಾಳುವ ರಾಮ ೪

ನಗಧರ ಖಗನ್ಹೆಗಲೇರಿ ಉಲ್ಲಾಸ
ನಗುವ ಭೀಮೇಶಕೃಷ್ಣ ಬರುವ ಜಗದೀಶ ೫

೭೫

ನಂದನ ಕಂದ ಸುಂದರ ಕೋಮಲಾಂಗ
ಚಂದ್ರವದನ ಮುಚುಕುಂದವರದಗೆ ಮಂಗಳಂ ಮಂಗಳಂ ೧

ಮುದ್ದು ಮುಖದಲಿ ತಿದ್ದಿಟ್ಟ ತ್ರಿನಾಮವ
ಪದ್ಮಪಾದನ ಖದ್ರ(ಕದ್ರ?)ಸುತ ಫಣಿಶಯನ ಮಂಗಳಂ
ಮಂಗಳಂ ೨

ಶ್ರೀಶ ಭೀಮೇಶ ಕೃಷ್ಣನೆ ವೆಂಕಟೇಶ
ಸಾಸಿರನಾಮದೊಡೆಯ ಶ್ರೀನಿವಾಸ ಮಂಗಳಂ ಮಂಗಳಂ ೩

---

* ನಾರಾಯಣದೇವರಕೆರೆ ಪ್ರಾಣದೇವರ ಮೇಲೆ.

## ೬೬

ನಂದನಂದನ ಅರವಿಂದದಳಾಕ್ಷನೆ
ವಂದಿಸುವೆ ಪಾದಾರವಿಂದಗಳಿಗೀಗ ಪ.

ಪದುಮನಾಭನೆ ನಿನ್ನ ಪಾದಭಕುತಿಯೊಳಿಟ್ಟು
ಸುಜನ ಸಂಗತಿ ನೀಡೊ ಸುರವಂದ್ಯ ಹರಿಯೆ
ಒಪೆಗೆ ಬರುವ್ರೂ ಪ್ಪತ್ತ್ಯ ಮೊದಲೆ ಅರಿಯದೆ ನಾ
ಮದಪ ಬುದ್ಧಿಲಿ ನಿನ್ನ ಮರೆತು ಕಳೆದೆನೊ ಕಾಲ ೧

ಭೂತಳದೊಳು ಸಲಹೋ ದಾತರೆಲ್ಲಿಹರಿನ್ನು
ಮಾತುಳಾಂತಕನೆ ಈ ಮಾತ ಪೇಳೆನಗೆ
ಮಾತಾಪಿತರು ಮೊದಲಿಲ್ಲ ಇನ್ನನ್ನರಿಲ್ಲ ಅ-
ನಾಥನೆಂದೆನ್ನ ಕಯ್ಯ ಪ್ರೀತಿಂದೆ ಓಡಿ ಪ್ರಿಯ ೨

ವಾಸುಕೀಶಯನನ ವರವ ಪಡೆಯದೆ ನಾ
ಮೋಸಹೋದೆನೊ ಈ ಸಂಸಾರದೊಳು ಸಿಲ್ಕಿ
ಶ್ರೀಶ ನೀ ಸಲಹೊ ಭೀಮೇಶ ಕೃಷ್ಣನೆ ಎನ್ನ
ಘಾಸಿ ಮಾಡದೆ ಹೃಷೀಕೇಶ ಕರುಣದಿಂದ ೩

## ೬೭

*

ನಂದಪುತ್ರನ ಆಜ್ಞೆಯಿಂದಲುದ್ಧವ ಬ್ಯಾಗ
ಬಂದು ಗೋಕುಲ ಹೊಕ್ಕಾನಂದದಿಂದಲಿ ೧

ಬಾಲನ್ವಾರ್ತೆಯ ಕೇಳಿಕೊಂಡ ಗೋಪನು ಕೊಂ-
ಡಾಡಿ ಗುಣಗಳ ಮನಕೆ ತಾಳಿವರ್ಧರುಷವ ೨

ಗೋಪಸ್ತ್ರೀಯರು ಮನದ ತಾಪ ಬಿಡದಲೆ ಅಗಲಿ
ಶ್ರೀಪತಿ ಕಾಣದೆ ಸಂತಾಪದಿಂದಿರೆ ೩

ಸಖಿಯರೆಲ್ಲರು ಗೋಪಿಸುತನ ಪಾಡುತ ದಧಿಯ
ಮಥಿಸಿ ಕದವನೆ ತೆಗೆಯೆ ರಥವ ಕಂಡರು ೪

---

* ಉದ್ಧವ ಗೀತೆ.

ದಾವಕಾರಣ ನಮ್ಮ ಭಾವಭಕ್ತಿಗೆ ಸ್ವಾಮಿ
ತಾನೆ ಬಂದಾನೋ ತನ್ನ ಕ್ರೂರನ ಕಳಿಸ್ಯಾನೊ ೫

ಭದ್ರೆರೆಲ್ಲರೂ ಕೂಡಿ ಎದ್ದು ಬರುತಿರೆ
ಮಧ್ಯ ಮಾರ್ಗದಿ ಅಲ್ಲುದ್ಧವನ ಕಂಡರು ೬

ಕಾಂತೇರೆಲ್ಲರು ಕೂಡೇಕಾಂತ ಸ್ಥಳದಲ್ಲಿ
ನಿಂತು ಕಂತುನಯ್ಯನು ಲಕ್ಷ್ಮೀಕಾಂತ ಕ್ಷೇಮನೆ ೭

ಇಂದಿರೇಶನ ಬಿಟ್ಟಗಲಿ ವ್ರಜದೊಳು ಕಾಲ
ಹಿಂದೆ ಕಳೆವ್ಹೋದ್ಹ್ಯಾಗಿನ್ನುಗಲು ಇರುಳೆನೆ ೮

ಮುಂದೆ ಕಾಣದೆ ನೇತ್ರ ಅಂಧಕರಂದದಿ ಮು-
ಕ್ಕುಂದನಿಂದಲಿ ರಹಿತರೆಂದಿಗಾದೆವೊ ೯

ತೊಡಿಗೆ ಬಂಗಾರ ಶಿರದಿ ಮುಡಿವೊ ಮಲ್ಲಿಗೆ ದೇಹ-
ಕ್ಕುಡಿಗೆ ಭಾರವೊ ಬಿಟ್ಟು ಪೊಡವಿಗೊಡೆಯನ ೧೦

ಕೇಳೊ ಉದ್ಧವ ನಾವು ಜಾಳು ಸ್ತ್ರೀಯರು ಒಲ್ಲದೆ
ಕಾಳಿಮರ್ದನ ಕಾಲಲೊದ್ದು ಪೋದನು ೧೧

ಜಾರಸ್ತ್ರೀಯರುಯೆಂದು ನಗದಿರುದ್ಧವ
ಬಿಗಿದ ಮೋಹಪಾಶದಿ ಈ ವಿಚಾರ ಮಾಡಿದ ೧೨

ಬಲೆಯಗಾರಗೆ ಸಿಕ್ಕ ಬಳಲಿದಾಕ್ಷಣ ಅದರ ಕೊ-
ರಳ ಕೊಯ್ಯದೆ ಅವಗೆ ಕರುಣ ಬರುವುದೆ ೧೩

ಎಷ್ಟು ಹೇಳಲೊ ಅವನ ಗಟ್ಟಿಯೆದೆಗಳ ಒಲ್ಲದೆ
ಬಿಟ್ಟು ನಮ್ಮನು ಮಧುರಾಪಟ್ಟಣ ಸೇರಿದ ೧೪

ಭ್ರಮರಕುಂತಳೆ ಒಂದು ಭ್ರಮರಕಾಣುತ ಬ್ಯಾಡ
ಕಮಲನಾಭನ ವಾರ್ತೆ ಕಿವಿಗೆ ಸೊಗಸದು ೧೫

ಮದನಮೋಹನ ಹೋಗಿ ಮಧುರಾಪುರಿಯಲಿ ಅಲ್ಲಿ
ಚೆದುರೆರಿಂದಲಿ ಅವಗೆ ಸೊಗಸು ಸಮ್ಮತ ೧೬

ಕ್ರೂರನೆನ್ನದೆ ಇವಗಕ್ರೂರನೆನುತಲಿ
ದಾರ್ಢ್ಯಿ ಸರಿಟ್ಟರೋ ನಮಗೆ ತೋರಿಸೊ ಅವರನು ೧೭

ಯಾತಕ್ಕೆ ಹೇಳುವಿ ಅವನ ವಾರ್ತೆ ಸೊಗಸದು ಹರಿಯು
ಪ್ರೀತಿ ವಿಷಯನು ನಮಗೆ ಘಾತಕನೆನಿಸಿದ ೧೮

ಜಲನ ಭೇದಿಸಿ ಹಯನ ಕೊಂದು ವೇದವ ಹ್ಯಾಗೆ
ಸೆಳೆವ ನಮ್ಮನು ಮನಸು ಹರಣ ಮಾಡಿದ ೧೯

ಕ್ಷೀರ ಮಥನವ ಮಾಡಿ ಸ್ತ್ರೀಯರೂಪದಿಂದಸುರರ
ಮೋಹಿಸಿದ್ವಂಚನೆ ನಮಗೆ ಪೂರ್ಣ ತಿಳಿಸಿದ ೨೦

ಭೂಮಿ ಬಗಿದನು ತನ್ನ ಕ್ವಾರೆಯಿಂದಲಿ
ನಮ್ಮನ್ನ ಸೀಳಿ ಪೋದರೆ ಇನ್ನೀ ಘೋರ ತಪ್ಪುವುದು ೨೧

ಕಂದ ಕರೆಯಲು ಕಂಬದಿ ಬಂದು ಸಲಹಿದನೆಂದು
ನಂಬಿ ಕೆಟ್ಟೆವೊ ಇನ್ನಿವನ ಹಂಬಲ ಸಾಕಯ್ಯ ೨೨

ಕೊಟ್ಟ ದಾನವ ಬಲಿಯ ಕಟ್ಟಿ ಪಾಶದಿಂದವನ
ಮೆಟ್ಟಿದ ಪಾತಾಳಕಿಂಥಾ ಕೃತ್ಯವಾರುಂಟೇನೊ ೨೩

ಕೊಡಲಿ ಕೈಯೊಳು ಪಿಡಿದು ಹಡೆದ ಮಾತೆಯ ಶಿರವ
ಕಡಿದ ಪುರುಷಗೆ ನಮ್ಮೊಳು ಕರುಣ ಬರುವುದೆ ೨೪

ಬಂದ ಸತಿಯಳ ಮೋರೆ ಅಂಗ ಕೆಡಿಸಿದ ತ-
ನ್ನಂಗನೆ ಕಾಣದೆ ತಿರುಗಲಿವಗೆ ಸಮ್ಮತ ೨೫

ಪತಿಯು ಸುತರನೆ ಬಿಟ್ಟವಶನ ವಸನವ
ಅಗಲಿದ್ವಸುನಂದನಗೆ ನಮ್ಮೆಲ್ಲರುಸುರು ಮುಟ್ಟಲ್ಯೊ ೨೬

ಬೌದ್ಧ ರೂಪದಿ ಸ್ತ್ರೀಯರ ಲಜ್ಜೆಗೆಡಿಸಿದನೆಂಬೊ
ಸುದ್ದಿ ಬಲ್ಲೀವೊ ನಾವಿಲ್ಲಿದ್ದವರುದ್ಧವ ೨೭

ಕಲಿಯು ಮನಸಿರೆ ಇವಗೆ ಕಲ್ಕ್ಯನೆಂಬೋರೊ
ಕತ್ತಿ ಪಿಡಿದ ಪುರುಷಗೆ ನಮ್ಮೊಳು ಕರುಣ ಬರುವುದೆ ೨೮

ಬ್ಯಾಡವೆನುತಲಿ ಅವಗೆ ಬೇಡಿಕೊಂಡೆವೊ
ಗಾಡಿಕಾರನು ನಮ್ಮ ನೋಡದ್ಹೋದನು ೨೯

ನಮ್ಮ ವಚನವ ಹೋಗಿ ಮನ್ನಿಸುದ್ಧವ
ಪನ್ನಗಶಯನನ ಪಾದಕ್ಕೆನ್ನ ನಮಿಸೆವೊ ೩೦

ಬಿಟ್ಟ್ಯಾಗಲೊಪ್ಪೋ ಭೀಮೇಶಕೃಷ್ಣನ ನಮ್ಮ
ದೃಷ್ಟಿಗೆ ತೋರಿಸೊ ಮುಕ್ತಿ ಕೊಡುವೊ ದಾತನ ೩೧

೬೮

ನಾರಾಯಣ ಎನ್ನಿರೊ ನಾರಾಯಣ ಎನ್ನಿ
ನಾರದ ಪ್ರಿಯನಿಗೆ ನಂದನ ಸುತ ಮುಕುಂದ ಮುರಾರಿಗೆ ಪ.

ಕೆಟ್ಟ ಅಜಮಿಳನ ಬಂದು ಕ[1]ಟ್ಟಲ್ಯ[1]ವನು ಪಾಶದಿ ತಾ ಕಂ-
ಗೆಟ್ಟು ಹರಿನಾಮವ ಕರೆಯೆ ಕೊಟ್ಟ ತನ್ನ ಪಟ್ಟಣ ಪದವಿ ೧

ಕಾಲ ಕಾಲಕೆ ಗೋಪಾಲನ ನೆನೆಯದೆ ಬಿಟ್ಟ
ಕಾಲಕಳೆಯಲು ಯಮಭಟರು ಕರೆದು ಬಾಧಿಸದೆ ಬಿಡರು ೨

ಸ್ನಾನ ಜಪ ತಪಸ್ಯಾಕೆ ಮೌನ ಮಂತ್ರವ ಬಿಟ್ಟ
ದಾನವಾಂತಕ ಕೃಷ್ಣನ್ನ ಧ್ಯಾನದೊಳಿಟ್ಟರಗಳಿಗೆ ೩

ಲೆಕ್ಕವಿಲ್ಲದ ದೇಶ ತುಕ್ಕಿ ತಿರುಗಿದರಿಂದೆ
ದುಃಖವಲ್ಲದೆ ಜ್ಞಾನ ಮುಕ್ತಿ ದೊರಕುವುದೇನು ೪

ಬಿಟ್ಟ ವಿಷಯವ ಭೀಮೇಶಕೃಷ್ಣನಲ್ಲಿಟ್ಟ ಧ್ಯಾನ
ಹತ್ತು ಹರಿಪುರ ಸೋಪಾನ ರಕ್ಷಿಸುವ ಖಗವಾಹನ ೫

೬೯

*

ನಾರಾಯಣ ನಿಮ್ಮನಾಮ ನಾಲಿಗೆಲಿಂಲಿ ನಾರಾಯಣ
ಘೋರಪಾತಕವೆಲ್ಲ ಹಾರಿಹೋಗುವುದಯ್ಯ ನಾರಾಯಣ ೧

---

1 ಟ್ಟಯ

* ೧೦೮ ನಾಯಣ ನಾಮಾವಳಿ

ಸಾಧ್ಯವಾಗುವುದು ಶ್ರೀಹರಿಯು ಪುರ ಅವರಿಗೆ ನಾರಾಯಣ
ಪಾರಜನಕನ ಮೊದಲೆ ಮರೆಯದಿರೊ ಮನವೆ ನಾರಾಯಣ ೨

ಎಷ್ಟೆಷ್ಟು ದುರಿತಗಳು ನಷ್ಟವಾಗಿ ಹೋಗುವುವು ನಾರಾಯಣ
ಎಷ್ಟು ನಾಮವ ಬಿಡದೆ ನೆನೆಕೊಂಡ್ಯ ಮನವೆ ನಾರಾಯಣ ೩

ಅಂತ್ಯಜಸ್ತ್ರೀ ಕೂಡಿ ಭ್ರಾಂತನಾಗ್ಯಜಮಿಳನು ನಾರಾಯಣ
ಕಂತುನಯ್ಯನ ಮರೆತು ಕಾಲವನು ಕಳೆಯಲು ನಾರಾಯಣ ೪

ಅಂತ್ಯಕಾಲಕೆ ಹರಿಯು ಸ್ಮರಣೆ ಜಿಹ್ವೆಗೆ ಬರಲು ನಾರಾಯಣ ಲಕ್ಷ್ಮೀ-
ಕಾಂತ ಕರುಣಿಸಿ ಅವಗೆ ಕರೆದು ಮುಕ್ತಿಯ ಕೊಟ್ಟ ನಾರಾಯಣ ೫

ಲಕ್ಷ್ಮಿವಿಹಾರಮಣನೆ ಸಕಲಗುಣಪರಿಪೂರ್ಣ ನಾರಾಯಣ
ಮುಖ್ಯ ನೀ ಎನ ಮನದಿ ಹೊಕ್ಕರ್ದ್ದೊಗಳುವೆನಯ್ಯ ನಾರಾಯಣ ೬

ಘೋರ ವೇದವ ಕದ್ದು ನೀರೊಳಗಡಗಲು ನಾರಾಯಣ
ಛೇದಿಸವನಕೊಂದು ವೇದವನು ತಂದಿಟ್ಟ ನಾರಾಯಣ ೭

ಶ್ರುತಿಯ ಸುತಗೆ ಕೊಟ್ಟ ಸತ್ಯನಾಗಜನಿಂದ ನಾರಾಯಣ
ಮಚ್ಛರೂಪವ ಧರಿಸಿದಚ್ಯುತಗೆ ಶರಣೆಂಬೆ ನಾರಾಯಣ ೮

ದೇವದೈತ್ಯರು ಕೂಡಿ ಸಾಗರವ ಕಡೆಯಲು ನಾರಾಯಣ
ಮೇರು ಮಂದರವೆ ಕಡೆಗೋಲು ವಾಸುಕಿ ಸೂತ್ರ ನಾರಾಯಣ ೯

ಆಗ ಸುರಸುರರಿಬ್ಭಾಗವಾಗಿ ನಿಂತು ನಾರಾಯಣ
ಭಾಳ ತುಚ್ಛದಿ ಬಲಿಬಿಟ್ಟು ಬಾಯಿಂದೆಳೆಯೆ ನಾರಾಯಣ ೧೦

ಉಸುರು ವಾಸುಕಿ ಬಿಡಲು ಅಸುರಜನ ಮಡಿದ್ಹೋಗೆ ನಾರಾಯಣ
ಕುಸಿದು ಹೋಗಲು ಗಿರಿ ಕೂರ್ಮರೂಪಾದಿ ನಾರಾಯಣ ೧೧

ಹುಟ್ಟಲು ಅಮೃತ ದೈತ್ಯರು ಕೊಂಡೋಡಲು ನಾರಾಯಣ
ಸೃಷ್ಟಿ ಆದಿಕರ್ತ ಶ್ರೀ(ಸ್ತ್ರೀ?)ರೂಪವನು ಧರಿಸಿದಿ ನಾರಾಯಣ ೧೨

ಮುಂಚೆ ಮೋಹವ ಮಾಡಿ ವಂಚಿಸಿ ದೈತ್ಯರನೆ ನಾರಾಯಣ
ಹಂಚಿ ಸುರರಿಗೆ ಅಮೃತಪಾನ ಮಾಡಿಸಿದಯ್ಯ ನಾರಾಯಣ ೧೩

ದಿತಿಯು ಸುತನು ಬಂದು ಪೃಥಿವಿಯನೆ ಸುತ್ತೊಯ್ಯೆ ನಾರಾಯಣ
ಅತಿಬ್ಯಾಗದಿಂದ ರಸಾತಳ ಭೇದಿಸಿ ನಾರಾಯಣ ೧೪

ಕ್ರೂರ ಹಿರಣ್ಯಾಕ್ಷನ್ನ ಕೋರೆದಾಡೆಲಿ ಸೀಳಿ ನಾರಾಯಣ
ಭೂಮಿಯನು ತಂದ್ಹರಪಿ ಭುವನಾಧಿಪತಿ ವರಾಹ ನಾರಾಯಣ ೧೫

ಬ್ರಹ್ಮಸಿಂದ್ವರ ಪಡೆದು ಹಮ್ಮಿಂದ ಕೊಬ್ಬೈಸುರ ನಾರಾಯಣ
ದುರ್ವತಿಯಿಂದ್ಹರಿಯ ದೂಷಿಸುತಲಿದ್ದ ನಾರಾಯಣ ೧೬

ಮತಿಹೀನ ತನ ಸುತಗೆ ಮತಿಯ ಹಿಡಿಸುವೆನೆಂದ ನಾರಾಯಣ
ಪಾರ್ವತೀಪತಿ ನಾಮವನು ಹಿತದಿಂದ ಬರೆಯೆಂದ ನಾರಾಯಣ ೧೭

ಹರಿ ಹರಿ ಹರಿಯೆಂದು ಬರೆಯಾ(ಯಲಾ?)ಬಾಲಕ ನೋಡಿ
ನಾರಾಯಣ
ಉರಿಯ ಹೊಗಿಸುವೆನೆಂದ ಉಗ್ರಕೋಪಗಳಿಂದ ನಾರಾಯಣ ೧೮

ಪಿಟ್ಟ ಸಾಗೀಯಿಂದ ಬೆಟ್ಟದಿಂದಲಿ ಕೆಡೆವೆ ನಾರಾಯಣ
ಕಟ್ಟಿ ಶರಧಿಯಲ್ಲಾಳ್ಕಿ ವಿಷ್ಣುಭಕ್ತನು ಬದಲು ನಾರಾಯಣ ೧೯

ಪ್ರಹ್ಲಾದ ನಿನ್ನೊಡೆಯ ಎಲ್ಯಾನೆ ತೋರೆನಗೆ ನಾರಾಯಣ
ಮಲ್ಲಮರ್ದನ ಸ್ವಾಮಿ ಇಲ್ಲದೇ ಸ್ಥಳವುಂಟೆ ನಾರಾಯಣ ೨೦

ಪೃಥ್ವಿ ಪರ್ವತದಲ್ಲಿ ಸಪ್ತದ್ವೀಪಗಳಲ್ಲಿ ನಾರಾಯಣ
ಸುತ್ತೇಳು ಸಾಗರದಿ ವ್ಯಾಪ್ತನಾಗ್ಹಿಯಿರುವ ನಾರಾಯಣ ೨೧

ಅಣುರೇಣು ತೃಣದಲ್ಲಿ ಇರುವ ಆಕಾಶದಲಿ ನಾರಾಯಣ
ರವಿ ಸೋಮ ತಾರಾಮಂಡಲದಲ್ಲಿ ತಾನಿರುವ ನಾರಾಯಣ ೨೨

ಹದಿನಾಲ್ಕು ಲೋಕದಲಿ ಹರಿ ವಿಶ್ವವ್ಯಾಪಕನು ನಾರಾಯಣ
ಸರ್ವದಿಕ್ಕುಗಳಲ್ಲಿ ಸನ್ನಿಹಿತನಾಗಿರುವ ನಾರಾಯಣ ೨೩

ಅರಣಿಯೊಳಗಗ್ನಿಯಂದದಿ ಜನಕೆ ತೋರದಿರೆ ನಾರಾಯಣ
ಜನನ ಮರಣೆಲ್ಲ ಜಗಜನ್ಮಾದಿಕಾರಣಗೆ ನಾರಾಯಣ ೨೪

ನೀನರಿಯೆ ನಿನ್ನಲ್ಲಿ ಜೀವರಾಶಿಗಳಲ್ಲಿ ನಾರಾಯಣ
ಈ ಜಗತ್ತಿಗೊಬ್ಬ ಇದ್ದಾನೆ ಎನ್ನೊಡೆಯ ನಾರಾಯಣ ೨೫

ಮಂದಭಾಗ್ಯನೆಯೆನ್ನ ಮಾತು ನಿಜವೆಂದು ತಿಳಿ ನಾರಾಯಣ
ಈ ಸ್ತಂಭದಲ್ಲಿದ್ದಾನೆ ಮಂದರೋದ್ಧರ ಸ್ವಾಮಿ ನಾರಾಯಣ ೨೬

ಬಂದು ಭರದಿಂದಸುರ ಕಂಬ ಕಾಲಿಂದೊದೆಯೆ ನಾರಾಯಣ
ತುಂಬಿತಾ ಘನಘೋಷದಿಂದ ಘುಡಿಘುಡಿಸುತಲಿ ನಾರಾಯಣ ೨೭

ಸಿಡಿಲು ಗರ್ಜಿಸಿದಂತೆ ಖಡಿಖಡಿ ಕೋಪದಲಿ ನಾರಾಯಣ
ಕಿಡಿಗಳ್ಹಾರುತ ಕಂಬವೊಡೆದು ರೋಷದಿ ಬಂದ ನಾರಾಯಣ ೨೮

ಖಳನ ಸೆಳೆದಪ್ಪಳಿಸಿ ದುರುಳನುದರವ ಬಗೆದು ನಾರಾಯಣ
ಕರುಳ ವನಮಾಲೆ ತನ ಕೊರಳಲ್ಲಿ ಧರಿಸಿದ ನಾರಾಯಣ ೨೯

ತಲ್ಲಣಿಸಿ ಸುರರಾಗ ಮಲ್ಲಿಗೆಮಳೆ ಕರೆಯೆ ನಾರಾಯಣ
ಪ್ರಹ್ಲಾದಸಹಿತ ಶ್ರೀದೇವಿ ಮುಂದಕೆ ಬರಲು ನಾರಾಯಣ ೩೦

ಕರದಿ ಕಂಗಳ ಮುಚ್ಚಿ ಸಿರಿಯು ತೋಳಿಂದಪ್ಪಿ ನಾರಾಯಣ
ತೊಡೆಯನೇರಿಸಿ ತನ್ನ ತರುಣಿಗಭಯವನಿಟ್ಟ ನಾರಾಯಣ ೩೧

ಸ್ತೋತ್ರವನು ಮಾಡಲಜ ಬಿಟ್ಟ್ಯುಗ್ರಕೋಪವನು ನಾರಾಯಣ
ಕೊಟ್ಟ ಪ್ರಹ್ಲಾದ[1][ಗ್ವ][1]ರಗಳ ಲಕ್ಷ್ಮೀನರಸಿಂಹ ನಾರಾಯಣ ೩೨

ಸ್ವರ್ಗಾಧಿಪತ್ಯಕೆ ಯೋಗ್ಯನಲ್ಲದೆ ಅಸುರ ನಾರಾಯಣ
ಆಜ್ಞಾನದಿಂದ ತಾ ಯಜ್ಞ ಮಾಡುತಲಿರಲು ನಾರಾಯಣ ೩೩

ಅದಿತಿಯಲ್ಲವತರಿಸೆ ಆತಿಜ್ಯಾಗ ಕಶ್ಯಪರು ನಾರಾಯಣ
ಸುತಗೆ ಉಪನಯನ ಭಾಳ್ಹಿತದಿಂದ ಮಾಡಲು ನಾರಾಯಣ ೩೪

ಯಜ್ಞೋಪವೀತ ಕೈಪ್ರ ಕೃಷ್ಣಾಜಿನ ಧರಿಸಿ ನಾರಾಯಣ
ಶ್ರೀಘ್ರದಿಂದ ವಟು ವಾಮನ್ಯಜ್ಞಶಾಲೆಗೆ ಬರಲು ನಾರಾಯಣ ೩೫

ಬಲಿಯು ಯಜ್ಞದಿ ಬಂದು ಭಾಳ ಪೂಜಿತನಾಗಿ ನಾರಾಯಣ
ಫಲಸಿಟ್ಟು ಮನಸೊಳಗೆ ಬಲಿಯು ಯಾಚನೆ ಮಾಡೆ ನಾರಾಯಣ ೩೬

ನಾ ಕೊಡುವೆ ಬೇಡು ಬೇಕಾದಷ್ಟು ಅರ್ಥವನು ನಾರಾಯಣ
ಸಾಕಾಗದೇನಯ್ಯ ಸಲ್ಲ ಧನದಾಸ್ಯೆನಗೆ ನಾರಾಯಣ ೩೭

1 ವ

ದೃಢಮನಸಿನಲಿ ಭೂಮಿ ಕೊಡು ಮೂರು ಪಾದವನು ನಾರಾಯಣ
ಕೊಡುವೆನೆಂದಾಕ್ಷಣವೆ ಎರಡು ಚರಣವ ತೊಳೆದ ನಾರಾಯಣ ೩೮

ಒಂದು ಪಾದದಲಿ ಭೂಮಂಡಲವ ವ್ಯಾಪಿಸಿ ನಾರಾಯಣ
ಬಂದಿತಿನ್ನೊಂದು ಬ್ರಹ್ಮಾಂಡ ಮುಟ್ಟಲು ಪಾದ ನಾರಾಯಣ ೩೯

ಕಂಡು ಕಮಲಜನು ಕಮಂಡಲೋದಕ[ದಿ]ತೊಳೆಯೆ ನಾರಾಯಣ ೪೦
ಅಂಗುಷ್ಟ ನಖದಿ ಉತ್ಪನ್ನಳಾದಳು ಗಂಗೆ ನಾರಾಯಣ

ರಕ್ಕಸಾಂತಕನು ತ್ರಿವಿಕ್ರಮ ರೂಪಾಗಿ ನಾರಾಯಣ
ಆಕ್ರಮಿಸಿಕೊಂಡ ಮೂವನಾಲ್ಕು ಲೋಕವ ಸ್ವಾಮಿ ನಾರಾಯಣ ೪೧

ಕೊಟ್ಟ ವಚನವ ತಪ್ಪಿ ಭ್ರಷ್ಟನಾಗದೆ ಭೂಮಿ ನಾರಾಯಣ
ಕೊಟ್ಟರಿನ್ನೆಲ್ಲಿ ಪಾದಯಿಟ್ಟು ಬಿಡುವೆನೆಂದ ನಾರಾಯಣ ೪೨

ಕಟ್ಟಿ ಪಾಶದಲಿ ಕಂಗೆಟ್ಟಾಗ ಬಲಿರಾಯ ನಾರಾಯಣ
ಕೆಟ್ಟೆನೆನ್ನುತಲಿ ಮನಮುಟ್ಟಿ ಸ್ತೋತ್ರವ ಮಾಡೆ ನಾರಾಯಣ ೪೩

ದುಷ್ಟಜನ ಮರ್ದಕನು ಸೃಷ್ಟಿಸ್ಥಿತಿಲಯ ಕರ್ತೃ ನಾರಾಯಣ
ಸೃಷ್ಟಿಗೊಡೆಯಗೆ ದಾನಕೊಟ್ಟೆನೆಂದು ಮರುಗಿದ ನಾರಾಯಣ ೪೪

ಬಂಧನ ಬಿಡಿಸಿ ಬಲಿರಾಯಗ್ವರಗಳ ಕೊಟ್ಟ ನಾರಾಯಣ
ಇಂದ್ರನಿಗೆ ಒಲಿದ ಉಪೇಂದ್ರಗೆ ಶರಣೆಂಬೆ ನಾರಾಯಣ ೪೫

ಜಾಮದಗ್ನಿಯಲಿ ಜಾತನಾಗಲು ಸ್ವಾಮಿ ನಾರಾಯಣ
ತಾತನ್ನ ವಚನವ ಕೇಳಿ ಮಾತೆ ಶಿರವನು ತರಿದ ನಾರಾಯಣ ೪೬

ಕ್ಷಿತ್ರಿ ನೀ ಕ್ಷತ್ರಿಯರ ಲಕ್ಷ್ಮಿಲ್ಲದಲೆ ಮಾಡಿ ನಾರಾಯಣ
ಕೊಟ್ಟ ದ್ವಿಜರಿಗೆ ದಾನ ಮತ್ತೆ ತಪವನಾಚರಿಸೆ ನಾರಾಯಣ ೪೭

ದಶರಥನಲ್ಲುಟ್ಟಿ ಋಷಿಗಳ ಯಾಗವ ಕಾಯ್ದು ನಾರಾಯಣ
ಋಷಿಸತಿಯನುದ್ಧರಿಸಿ [1][ಮಿಥಿಲಾ][1] ಪಟ್ಟಣಕ್ಕೊಯ್ದಗೆ
ನಾರಾಯಣ ೪೮

1 ಮಿತುಳ

ಶಿವನ ಬಿಲ್ಲನು ಮುರಿದು ಸೀತೆಯಿಂದೊಡಗೂಡಿ ನಾರಾಯಣ
ಮಾತೆ ನುಡಿ ಕೇಳಿ ಮಾರಾಯ ವನವನು ಚರಿಸೆ ನಾರಾಯಣ ೪೯

ಕಟ್ಟಿ ಸೇತುವೆ ಕೊಂದು ದುಷ್ಟರಾವಣನನ್ನು ನಾರಾಯಣ
ಪಟ್ಟಣಕೆ ಬಂದ ಪಟ್ಟಾಭಿರಾಮ ಶರಣೆಂಬೆ ನಾರಾಯಣ ೫೦

ವಸುದೇವನಲ್ಲುಟ್ಟಿ ವಸುಧೆಭಾರವನಿಳುಹಿ ನಾರಾಯಣ
ಅಸುರ ಮರ್ದನನತ್ತೆ ಮಕ್ಕಳಿಗೆ ಸಖನಾದ ನಾರಾಯಣ ೫೧

ಅಷ್ಟದಿಕ್ಪಾಲಕರ ಸಹಿತಮಹೇಂದ್ರನ ಗೆದ್ದು ನಾರಾಯಣ
ವೃಕ್ಷ ಹರಣವ ಮಾಡಿ ಸತ್ಯಭಾಮೆಗಿರಿಗಿಟ್ಟೆ ನಾರಾಯಣ ೫೨

ಸೋಳ ಸಾವಿರ ಸ್ತ್ರೀಯರಾಳಿ ದ್ವಾರಕೆಯಲಿ ನಾರಾಯಣ
ದೇವಿರುಕ್ಮಿಣಿಗೊಲಿದ ದೇವಕಿಸುತ ಕೃಷ್ಣ ನಾರಾಯಣ ೫೩

ಬೌದ್ಧ ರೂಪದಿ ಬಂದು ಬತ್ತಲೆ ಸತಿಯರನೆ ನಾರಾಯಣ
ಬುದ್ಧಿ ಮೋಹಕ ಮಾಡಿ ಗೆದ್ದ ತ್ರಿಪುರವನ್ನು ನಾರಾಯಣ ೫೪

ಚೆಲುವ ಅಶ್ವವನೇರಿ ಕಲಿಯ ಸಂಹರ ಮಾಡಿ ನಾರಾಯಣ
ಕಲಹಪ್ರಿಯನೆ ನಿನ್ನ ಕಾಲಿಗೆರಗುವೆನಯ್ಯ ನಾರಾಯಣ ೫೫

ನಿನ್ನಲ್ಲಿ ಮನವಿಡಿಸಿ ಅನ್ಯ ವಿಷಯವ ಬಿಡಿಸಿ ನಾರಾಯಣ
ಎನ್ನ ಸಲಹುವುದೋ ಭಾರ ನಿನ್ನದಲ್ಲವೆ ಸ್ವಾಮಿ ನಾರಾಯಣ ೫೬

ಸಾಸಿರಮುಖ ಶೇಷನಲ್ಲಿ ಶಯನವ ಮಾಡೆ ನಾರಾಯಣ
ಭೀಮೇಶಕೃಷ್ಣನ ಬಿಡದೆ ನೆನೆಕಂಡ್ಯ ಮನವೆ ನಾರಾಯಣ ೫೭

## ೨೦

## ಉಗಾಭೋಗ

ನಿಗಮಗೋಚರ ಸ್ವಾಮಿ ನಿಂತು ನೋಡುತ ಎನ್ನ
ನಿಗಮಚೋರನ ಕೊಂದ ನೀರಜಾಕ್ಷನೆ ಕೃಷ್ಣ

ನಗವ ಧರಿಸಿದ ಸಾಗರವ ಕಡೆದು ಬಂದ
ಜಗವ ಮೋಹಿಸುವಂಥ ಖಗವಾಹನನೆ ಕೃಷ್ಣ

ಉರುಟು ನೇತ್ರನ ಕೊಂದು ಪುಣ್ಯಭೂಮಿಯ ತಂದ
ಕಿರೀಟಿಸಾರಥಿ ಕೃಷ್ಣಗೊಲಿದೋದ್ಧಾರಕ ಕೃಷ್ಣ

ಕನಕಕಶ್ಯಪನ ತಾ ಕೊಂದು ಕರುಳ ಮಾಲೆ ಧರಿಸಿ
ದಾನವಶತ್ರು ಎನಿಸಿದ್ದಾತನೆ ಕೃಷ್ಣ

ಹೆಜ್ಜೆ ತ್ರಯವ ಬೇಡಿ ಮೂರ್ಜಗ ವ್ಯಾಪಿಸಿಕೊಂಡಾ-
ವಜ್ರಪಾಣಿಗೆ ಒಲಿದ ನಿರ್ಜರೇಶನೆ ಕೃಷ್ಣ

ದಿನಕರ್ರಾಂಶದಿ ಪುಟ್ಟಿ ಜನಕಾತ್ಮಜಳ ಕೂಡಿ
ವನದೊಳಾಡುತ ಕಪಿಸೇನಾನಾಯಕ ಕೃಷ್ಣ

ಒರಳನೆಳೆದು ಪೋಗಿ ವಿಮಳಾರ್ಜುನರ ಕಿತ್ತು
ಆಕಳ ಕಾಯ್ದು ಕರಡಿಗೆ ಅಳಿಯಾದಾತನೆ ಕೃಷ್ಣ

ಇಷ್ಟದಾಯಕನೆ ಉತ್ಕೃಷ್ಟ ಜ್ಞಾನಾನಂದ
ಉಟ್ಟ ವಸ್ತ್ರವ ತೊರೆದುಬಿಟ್ಟಿದ್ದಾತನೆ ಕೃಷ್ಣ

ಕಾಮಧೇನನ(ನುವ?) ಕದ್ದ ಭೂಮಿಪಾಲರ ಗೆದ್ದ
ತಾ ಮಹಾ ತಪಸಿಲಿದ್ದ ಮಹಾತ್ಮನೆ ಕೃಷ್ಣ

ಕುಜನ ಕಲಿಗಳನೆಲ್ಲ ವಧೆಯ ಮಾಡುತಲಿದ್ದ
ಸುಜನರಕ್ಷಕ ನಮ್ಮ ಸಲಹೊ ಭೀಮೇಶಕೃಷ್ಣ

## ೭೧

*

ನಿಲ್ಲೆ ನಿಲ್ಲೆ ಕೊಲ್ಲಾಪುರದೇವಿ
ಇಲ್ಲೆ ಬಾರೆ ಗೆಜ್ಜೆ ಘಿಲ್ಲೆನುತ ಪ.

ಕರುಣಸಾಗರ ಹರಿತರುಣಿಯೆ ನೀ ಕೋಟಿ
ತರುಣ ಕಿರಣ ರತ್ನಾಭರಣನಿಟ್ಟು
ಮಣಿಕೌಸ್ತುಭ ವಕ್ಷಸ್ಥಳದಲ್ಲಿದ್ದೊಪ್ಪುಳಿಯುವ
ಸುಪರಣವಾಹನಾ ಲಕ್ಷ್ಮಿ ಚರಣ ವಂದಿತಳೆ ೧

* ಕೊಲ್ಲಾಪುರ ಲಕ್ಷ್ಮಿಯ ಮೇಲಿನದು.

ಪಂಕಜಾಕ್ಷಿ ಪಂಕಜೋದ್ಭವನ ಜನನಿ
ಪಂಕಜಮುಖಿ ಪಾಲಿಸೆ ಎನ್ನ
ಪಂಕಜನಾಭನ ಅಂಕದಲ್ಲೊಪ್ಪುವ
ಪಂಕಜೆ ನಿನ್ನ ಪಾದಪಂಕಜಕೆರಗುವೆ ೨

ಮುಗುಳುನಗೆಯ ಮುತ್ತುಗಳು ಜಡಿತ ಕ-
ರ್ಣಗಳ ವಾಲೆಯು ಕದಪಿನಲ್ಹೊಳೆಯೆ
ಬಗೆ ಬಗೆ ಸರ ಬಂಗಾರವನಿಟ್ಟು ಮೂ-
ರ್ಜಗವ ಮೋಹಿಸೊ ಜಗದಾಧಿಪತಿಯ ರಾಣಿ ೩

ಸಾಗರದೊಳಗ್ಹುಟ್ಟ ಆಗ ಶ್ರೀನಾಥನ
ಬ್ಯಾಗ ನೋಡಿ ಪರಮೋತ್ಸವದಿ
ನಾಗಶಯನ ನಾಗಾರಿವಾಹನನ-
ರ್ಧಾಂಗಿ ಎನಿಸಿದಾನಂತ ಮಹಿಮಳೆ ೪

ಶೇಷಗಿರಿಯ ಶ್ರೀನಿವಾಸನ ಎದೆಯಲ್ಲ್ಯ-
ವಾಸವಾಗಿರಲ್ಯತಿ ಪ್ರೇಮದಲಿ
ಈಶ ನಾರದ ಬ್ರಹ್ಮಾಸುರರೊಡೆಯ ಭೀ-
ಮೇಶಕೃಷ್ಣನ ನಿಜ ದಾಸರಿಗ್ವರನೀಡೊ ೫

೭೨

ನಿಂತು ಬೇಡುವೆನ್ನರವ ಪ.

ನಿಂತು ಬೇಡುವೆ ಎನ್ನಲ್ಲಂತಃಕರಣ ಮಾಡ್ಯ-
ಭ್ಯಂತರಿಲ್ಲದೆ ಲಕ್ಷ್ಮೀಕಾಂತ ನೀ ಸಲಹೆಂದು ೧

ಶಂಖ ಚಕ್ರವು ಗದಾಪದ್ಮ ಧರಿಸಿದಕ-
ಳಂಕ ಮಹಿಮ ನಿನ್ನ ಕಿಂಕರ ನಾನೆಂದು ೨

ಕಮಲನಾಭನೆ ಕಮಲಾಪತಿ ನಿನ್ನಂಘ್ರಿ-
ಕಮಲಕ್ಕ್ವಂದಿಸುವೆನು ಕಮಲಾಕ್ಷದಿ ನೋಡೊ ೩

ಆಶೀಲೆಬಂದೆನಾದಿಶೈಲವಾಸನೆ
ದಾಸರಿಗ್ವೊಲಿವ ಭೀಮೇಶಕೃಷ್ಣನೆ ನಿನ್ನ ೪

೭೩

ನೀನೆ ಸಜ್ಜನರ ಬಂಧು ಕಾರುಣ್ಯಸಿಂಧು
ನೀನೆ ಸಜ್ಜನರ ಬಂಧು ಪ.

ಕರಿಮುರಿಬಳಗ ಬಂದೊದಗಿದರೇನು
ಪರಿಪರಿ ಕ್ಲೇಶವ ಬಿಡಿಸಲಿಲ್ಲ
ಹರಿ ನೀನೆ ಗತಿಯೆಂದರೆ ಆ ಕ್ಷಣದಲ್ಲಿ
ಕರಿಬಂಧನ ಪರಿಹರಿಸಿದೆ ಕೃಷ್ಣ ೧

ಪಿತರು ಮಾತೆಯುರಿದ್ದರೇನು
ಸುತರಾಪತ್ತಿಗೊದಗಲಿಲ್ಲ
ಗತಿ ನೀನೆಂದರೆ ಧ್ರುವ ಪ್ರಹ್ಲಾದರಿ-
ಗ್ಹಿತ ಮಾಡಿದೆ ಶ್ರೀಪತಿ ಪರಮಾತ್ಮ ೨

ವಲ್ಲಭರೈವರಿದ್ದರೇನು ವಸನ-
ದ್ರೌಪದಿಗುಡಿಸಲಿಲ್ಲ
ಫುಲ್ಲಾಕ್ಷನೆ ಗತಿಯೆಂದರೆ ನೀ ತಡ-
ವಿಲ್ಲದಲಕ್ಷಯ ನೀಡಿದೆ ದೊರೆಯೆ ೩

ಮನೆ ಧನ ಧಾನ್ಯಗಳಿದ್ದರು ಧನಂಜಯ-
ನ್ವನವಾಸಗಳನು ಬಿಡಿಸಲಿಲ್ಲ
ವನಜಾಕ್ಷನೆ ವಾರಣಾವತಿ ದೊರೆತನ
ವಿನಯದಿ ಕೊಟ್ಟದ್ದಿಂದಿರಾಪತಿಯೆ ೪

ಯಾರಿದ್ದರು ಭವ ಘೋರ
ದುರಿತ ಯಮುಬಾಧೆಗಳ ತಪ್ಪಿಸುವೋರಿಲ್ಲ
ಶ್ರೀರಮಣನೆ ಭೀಮೇಶಕೃಷ್ಣನೆಂದು
ಸಾರುವರಿಗೆ ಕರುಣಾವಾರಿಧಿ ಹರಿಯೆ ೫

೭೪

*

ಕೋಲು ಕೋಲೆನ್ನಿ ಕೋಲೆ ಕೋಲು ಕೋಲೆನ್ನಿ ಮುತ್ತಿನ
ಕೋಲನ್ಹೊಯ್ದು ಪಾಡಿರಮ್ಮ ಜಾಣ ರಂಗಗೆ ೧

* ಕೋಲ್ಹಾಡು.

ನೀರೊಳಾಡಿ ನಿಗಮ ತಂದ ಶೂರನ್ಯಾರೆ ರುಕ್ಮಿಣಿ
ಮೀನರೂಪ ಧರಿಸಿದ್ವಾರಿಜಾಕ್ಷ ಭಾಮಿನಿ ೨

ಸಿಂಧುಮಥನಕಾಲಕೆ ಮಂದರ ಪೊತ್ತವನ್ಯಾರೆ ರುಕ್ಮಿಣಿ
ತಂದು ಸುಧೆಯ ಸುರರಿಗೆರೆದ ಕೂರ್ಮದೇವ ಭಾಮಿನಿ ೩

ಆದಿದೈತ್ಯನಂಗ ಸೀಳಿದವನು ದಾರೆ ರುಕ್ಮಿಣಿ
ಕಾದು ಭೂಮಿ ಸಾಧಿಸಿ ತಂದ ವರಾಹ ಭಾಮಿನಿ ೪

ತಂದೆ ಕೊಂದು ಕಂದನ ಸಲಹಿದವನದಾರೆ ರುಕ್ಮಿಣಿ
ಕಂದರಕ್ಕಾಕಿದ ಕರುಳ ನಾರಸಿಂಹ ಭಾಮಿನಿ ೫

ಇಳೆಯ ದಾನ ಬೇಡಿದಂಥ ತರಳನ್ಯಾರೆ ರುಕ್ಮಿಣಿ
ಅಳೆದು ಭೂಮಿ ತುಳಿದ ಬಲಿಯ ವಾಮನ ಭಾಮಿನಿ ೬

ಕ್ಷತ್ರೇರ್ಹತವ ಮಾಡಿದ ಸಮರ್ಥನ್ಯಾರೆ ರುಕ್ಮಿಣಿ
ಹೆತ್ತ ತಾಯಿ ಕಡಿದ ಶೂರ ಭಾರ್ಗವ ಭಾಮಿನಿ ೭

ಸೇತುಗಟ್ಟಿ ಸೀತೆಯ ತಂದಾತನ್ಯಾರೆ ರುಕ್ಮಿಣಿ
ವಾತಸುತನಿಗೊಲಿದ ಶ್ರೀರಘುನಾಥ ಭಾಮಿನಿ ೮

ಕಳ್ಳತನದಿ ಕಡೆದ ಬೆಣ್ಣೆ ಕದ್ದವನ್ಯಾರೆ ರುಕ್ಮಿಣಿ
ಗೊಲ್ಲರೊಡೆಯ ಗೋವ್ಗಳ ಕಾಯ್ದ ಕೃಷ್ಣ ಭಾಮಿನಿ ೯

ವಸನ ಬಿಟ್ಟು ನಾಚಿಕಿಲ್ಲದ ಪುರುಷನ್ಯಾರೆ ರುಕ್ಮಿಣಿ
ಅಸುರಸ್ತ್ರೈರಿ ಆದಿಪುರುಷ ಬೌದ್ಧ ಭಾಮಿನಿ ೧೦

ಕುದುರೆನೇರಿ ಎದುರು ಬರುವ ಚೆದುರನ್ಯಾರೆ ರುಕ್ಮಿಣಿ
ಮದನಮೂರುತಿ ಮುದ್ದು ಭೀಮೇಶಕೃಷ್ಣ ಭಾಮಿನಿ ೧೧

೭೫

*

ನೀಲಕಂಠನ ಸುತಗಣನಮಿಸಿ ಆದಿಬ್ರಹ್ಮನ ಸತಿಯಳ ಭಜಿಸಿ
ನೀಲವರ್ಣನು ಲಕ್ಷ್ಮೀಲೋಲನ ದಯದಿಂದ
ಪಾಲಿಸಿದರೆ ಪಾಡಿ ಪೊಗಳುವೆನು ಪ.

* ಭೀಮಸೇನದೇವರ ಉರುಟಣೆಹಾಡು.

ಜಯಜಯ ಭೀಮ ಭಾರತಿಗೆ
ಜಯಜಯ ಧರ್ಮ ಭೀಮಾರ್ಜುನರಿಗೆ
ಜಯ ದ್ರೌಪದಿ ನಕುಲ ಸಾದೇವಗೆ
.... .... .... ೧

ಉಕ್ಕುವೊಯೆಣ್ಣೆಯೊಳಗೆ ನೋಡಿ
ಮಚ್ಛ ಎಸೆಯಲು ಮಗಳ ನಾನು
ಕೊಟ್ಟೇನೆನುತ ಪರಮುತ್ಸವದಿಂದಲಿ
ಪೃಥಿವಿರಾಯರಿಗ್ವಾಲೆ ಬರೆದ ರಾಯ ೨

ದಿಕ್ಕು ದಿಕ್ಕಿನ ರಾಜರು ಬರಲು
ಕೃಷ್ಣೆ ಸ್ವಯಂವರ ನೋಡಬೇಕೆನುತ
ವಿಪ್ರವೇಷವ ಧರಿಸಿ ಹೆತ್ತಮ್ಮನ ಸಹಿತಾಗಿ
ಸತ್ಯಪಾಂಡವರು ಬಂದರು ಬ್ಯಾಗ ೩

ಬಲವಂತ ರಾಯರೆಲ್ಲರು ತಾವು
ಬಲುಮೆಯಿಂದಲಿ ಧನುವೆತ್ತಿ ಬೀಳೆ
ಹಲಧರನನುಜ ತಾ ಚೆಲುವ ಪಾರ್ಥನ ನೋಡಿ
ಬಲವಕೊಟ್ಟನು ಭೀಮಾರ್ಜುನಗೆ ೪

ಸಾದೇವನನುಜ ಸುಂದರ ಪಾರ್ಥ
ಆದಿಮೂರುತಿಯ ಪಾದಕ್ಕೆ ನಮಿಸಿ
ಕಾದಯೆಣ್ಣೆಯ ನೋಡಿ ಕಟ್ಟಿದ ಮೀನವ
ತಾ ಧನುವೆತ್ತಿ ಹೊಡೆದನಾಗ ೫

ಚೆಲ್ಲೆಗಂಗಳ ದ್ರೌಪದಿದೇವಿ
ವಲ್ಲಭ ಪಾರ್ಥಗೊಲಿದು ಬ್ಯಾಗ
ಮಲ್ಲಮರ್ದನ್ನ ಸಖನಲ್ಲಿ ನಡೆದು ಬಂದು
ಮಲ್ಲಿಗೆ ಮಾಲೆ ಹಾಕಿದಳಾಗ ೬

ವೀರ ಶೂರರೊ ವಿಪ್ರ ಕ್ಷತ್ರಿಯರೊ
ದಾವಕುಲವೊ ನೆಲೆ ಕಾಣದಲೆ
ಮಾಜವೆ ನಿಮ್ಮ ಮರ್ಮಗಳ್ಹೇಳಬೇಕೆಂದು
ಕೇಳುತಿದ್ದನು ಕಂಗೆಡುತ ರಾಯ ೭

ಮಚ್ಚಯಿಸೆಯಲು ಮಗಳ ನಾನು
ಕೊಟ್ಟೇನೆನುತ ನಿಶ್ಚಯುವ ಮಾಡಿ
ಇಷ್ಟುವಿಚಾರದಿಂದೀಗೇನು ಫಲವೆಂದು
ಸತ್ಯಧರ್ಮಜ ನುಡಿದನು ನಗುತ ೮

ಕೇಳುತ ಕುಂತಿಸುತರುಯೆಂದು
ಭಾಳ ಸಂಭ್ರಮದಿ ಪಾದವ ತೊಳೆಯೆ
ಸಾಲಾಗಿ ಐವರು ಕಾಲ ನೀಡಲು ಕಂಡು
ತಾ ಜಾರಿ ಹಿಂದಕ್ಕೆ ಸರಿದ ರಾಜ ೯

ಸತ್ಯವತಿಯ ಸುತರ್ಹೇಳುತಿರೆ
ಮತ್ತಾಗೆರೆದನು ಮಗಳ ಧಾರೆ
ಮುತ್ತು ಮಾಣಿಕ್ಯದ ಮಂಗಳಸೂತ್ರವ ಕಟ್ಟಿ
ಕೊಟ್ಟನೈವರಿಗೆ ದ್ರೌಪದಿಯನಾಗ ೧೦

ಲಾಜಾಹೋಮವು ಭೂಮಾನಂತರದಿ
ಮೂಜಗದೊಡೆಯ ಕೃಷ್ಣನ ಸಹಿತ
ರಾಜಾಧಿರಾಜರೈವರು ಕುಳಿತಿರೆ ಕೃಷ್ಣ
ರಾಜ ಧರ್ಮರ ವಾಮಭಾಗದಲಿ ೧೧

ರುಕ್ಮಿಣಿದೇವಿ ಪಾರ್ವತಿ ಗಂಗಾ
ಸತ್ಯಭಾಮೇರ ಸಹಿತಾಗಿ ಬಂದು
ಸತ್ಯ ಪಾಂಡವರಿಗೂಟಣೆ(ಉರುಟಣೆ?) ಮಾಡಬೇಕೆಂದು
ಕೃಷ್ಣೆ ನೀಯೇಳೆಯೇಳೆನುತಿದ್ದರು ೧೨

ಕಂಜನ್ನೈಯ್ಯನು ಕಡೆನೋಟದಲಿ
ತಂಗಿ ಕೃಷ್ಣೆಯ ಮುಖವನು ನೋಡಿ
ಅಂಜದಲ್ಹೇಳುತಲೈವರ ಗುಣಗಳ
ಹಂಗೀಸೂಟಾಣಿ ಮಾಡಬೇಕೆಂದನು ೧೩

ಕನ್ನೆದ್ರೌಪದಿ ಅರಿಷಿಣ ಪಿಡಿದು
ತನ್ನ ಪತಿಗೆ ಎದುರಾಗಿ ನಿಂತು
ಸುಮ್ಮನೆ ರಾಜ್ಯವ ಬಿಟ್ಟು ವನವನಾತಿರುಗೋ
ಧರ್ಮರೇಸಿಮ್ಮ ಮುಖ ತೋರಿರೆಂದಳು ೧೪

ಕಂಕಭಟ್ಟನಿಸುವೊ ದೊರೆಗಳಿಗೆ
ಕುಂಕುಮ ಹಚ್ಚುವೆ ಕುಶಲದಿಂದ
ಪಂಚಾಂಗ ಪಠಿಸುವ ಪಾಣಿಯು ಪಿಡಿದು ನಾ
ಮುಂಚೆ ಗಂಧವ ಹಚ್ಚುವೆನೆಂದಳು ೧೫

ಅಷ್ಟಪದವಿ ಲೆತ್ತದ ಪಣಕೆ-
ಯಿಟ್ಟಸತಿಯು ಅನುಜರನೆಲ್ಲ
ಗಟ್ಟಿಹೃದಯಕ್ಕೆ ಬುಕ್ಕಿಟ್ಟು ಪರಿಮಳ ಹಚ್ಚಿ
ಅಚ್ಚ ಮಲ್ಲಿಗೆ ಹಾರ ಹಾಕುವೆನೆಂದಳು ೧೬

ಶಾಂತಧರ್ಮಜರ ಚರಣಕ್ಕೆ ಎರಗಿ
ಮಂತ್ರಿ ಭೀಮನ ಮುಂಭಾಗದಲಿ
ನಿಂತು ಅರಿಷಿಣ ಕುಂಕುಮವ ಹಿಡಿಂಬಿಯು-
ಕಾಂತರ ಮುಖಕ್ಕೆ ಹಚ್ಚುವೆನೆಂದಳು ೧೭

ಬಂದೇಕಚಕ್ರನಗರದಲ್ಲಿ
ಬಂಡಿಲನ್ನವನುಂಡು ಬಕಾಸುರನ
ತುಂಡುಮಾಡ್ಯವನ ತೋರಣಕಟ್ಟಿದ ತೋಳಿಗೆ
ಗಂಧವ ಹಚ್ಚೇನೆಂದಳು ನಗುತ ೧೮

ಇಟ್ಟ ವಿಷದ ಲಡ್ಡಿಗೆಯು ಮೆದ್ದು
ಭಿಕ್ಷದನ್ನವು ಬರಿಯಾಗದಲೆ
ಹುಟ್ಟುಹಿಡಿದು ಅಟ್ಟುಂಬೋ ಪುರುಷರಿಗೆ ಬು-
ಕ್ಕಿಟ್ಟು ಪರಿಮಳ ಹಾಕುವೆನೆಂದಳು ೧೯

ಕಪಿಗಳೊಳಗೆ ಶ್ರೇಷ್ಠರುಯೆನಿಸಿ
ಅತಿಬ್ಯಾಗದಿಂದ ಕೌರವರ ಕುಲ
ಹತವ ಮಾಡ್ಯತಿಯಾಗೋ ಪತಿಗೆ ಮಾಲೆಯು ಹಾಕಿ
ಅತಿ ಭಕ್ತಿಲಿಂದೆರಗಿದಳಾಗ ೨೦

ಸರಸಿಜಮುಖಿ ದ್ರೌಪದಿದೇವಿ
ಅರಸು ಅರ್ಜುನಗೆದುರಾಗಿ ನಿಂತು
ಅರಿಷಿಣ ಕುಂಕುಮ ಪಿಡಿದು ಸ್ತ್ರೀರೂಪವ
ಧರಿಸುವ ನಿಮ್ಮ ಮುಖ ತೋ[ರಿ]ರೆಂದಳು ೨೧

ಗಾಂಧಾರಿ ಗೌರಿಪೂಜಿಸೆ ಛಲದಿ
ತಂದು ಗಜವ ತೋರಿದ ಕರಕೆ
ಗಂಧ ಪರಿಮಳ ಘಮಘಮಿಸುವೊ ಬುಕ್ಕಿಟ್ಟ
ಮಂದಾರಮಾಲೆ ಹಾಕಿದಳಾಗ ೨೨

ಅಚ್ಯುತನನುಗ್ರಾ(ಗ್ರಹ?)ದಿ ಸಭೆಯೊಳಗೆ
ಮಚ್ಛಯೆಸೆದು ಮರಿಯಾದೆಯಿಂದ
ಪಾರ್ಥ ಪರಾಕ್ರಮಿಯೆನಿಸಿದ ಪಾದಕ್ಕೆ
ಭಕ್ತಿ ಭಾವದಲೆರಗುವೆನೆಂದಳು ೨೩

ಗೆಜ್ಜೆಸರಪಳಿ ಘಿಲ್ಲು ಘಿಲ್ಲುರೆನುತ
ಮಾದ್ರಿಸುತರ ಮುಂದಕೆ ನಡೆದು
ಮುದ್ದು ದ್ರೌಪದಿ ಅರಿಶಿಣಕುಂಕುಮ ಪಿಡಿದು
ವಿಭ್ಯಕ್ತಿಯಿಂದ ಹಚ್ಚಿದಳಾಗ ೨೪

ಪತಿಗಳ ಪುರುಷ ಪರಾಕ್ರಮಿಯು
ಉಷೆಯನೊಬ್ಬಳನಾಳುವಿರೆನುತ
ಸಕಲಸದ್ಗುಣ ಸಾದೇವ ನಕುಲರಿಗೆ
ಸಮನಾಗಿ ಊಟಾಣಿ ಮಾಡಿದಳು ೨೫

ಅಷ್ಟ ಗಂಧವ ಪರಿಮಳದಿಂದ
ಹಚ್ಚಿ ನಕುಲ ಸಾದೇವರಿಗೆ
ಮುತ್ತು ಮಾಣಿಕ್ಯದ ಮಲ್ಲಿಗೆ ಹಾರವ ಪಿಡಿದು
ಎತ್ತಿ ನಕುಲರಾಯಗ್ಹಾಕಿದಳು ೨೬

ಪಚ್ಚಪದಕ ಪದ್ಮಪುಷ್ಪಗಳು
ಕಟ್ಟಿದ್ದ ಮಾಲೆ ಕೈಯ್ಯಲಿ ಪಿಡಿದು
ಒಪ್ಪಿಹಾಕಿದಳ್ವನಮಾಲೆ ಸಾದೇವಗೆ
ಉಪ್ಪಕ್ಕಿನಿಡುತ ನಡೆದಳಾಗ ೨೭

ಮುಂದಗಮನೆ ದ್ರೌಪದಿದೇವಿ
ಬಂದು ಧರ್ಮರ ಸಿಂಹಾಸನದಿ
ಇಂದ್ರ ಮಾಣಿಕ್ಯದ ಗೋಡೆಯಲಿ ವಿಸ್ತಾರದಿಂ-
ದಂಬೆ ಬರೆದಳತಿಹರುಷದಿಂದ ೨೮

ದಿಟ್ಟತನದಲೂಟಣಿ ಮಾಡಿ
ಕೃಷ್ಣೆ ದಣಿದಳೆಂದು ಕೆಳದಿಯರು
ಸತ್ಯಧರ್ಮರ ಸಿಂಹಾಸನದಿ ಕುಳ್ಳಿರಿಸಿ
ಎತ್ತಿ ಚಾಮರವ ಬೀಸಿದರಾಗ ೨೯

ಪನ್ನಂಗಶಯನ ಪರಮ್ಪುರುಷದಲಿ
ತನ್ನ ತಂಗಿಯು ಕುಳ್ಳಿರಿಸಿಕೊಂಡು
ಧನ್ಯೆ ದ್ರೌಪದಿ ಹೆಸರ್ಹೇಳುತಲೈವರು
ಸುಮ್ಮನೂಟಾಣಿ ಮಾಡಬೇಕೆಂದನು ೩೦

ಧರ್ಮ ಶ್ಯಾಮುಲ ಭೀಮ ಭಾರತ್ಯೆಂದು
ತನ್ನವಲ್ಲಭೆ ಶಚಿ ಫಲ್ಗುಣನು
ಚೆನ್ನಿಗ ನಕುಲ ಸಹದೇವರುಷಾಯೆಂದು
ಕರ್ಣೆ(ನ್ಯೆ?)ದ್ರೌಪದಿ ಹೆಸರ್ಹೇಳಿದರು ೩೧

ಅರಸು ಧರ್ಮಜ ಅರಿಷಿಣ ಹಚ್ಚೆ
ಸರಸದಿ ಭೀಮ ಕುಂಕುಮುವ ತೀಡೆ
ಪಾರ್ಥ ಗಂಧವ ಹಚ್ಚೆ ಪರಿಮಳ ನಕುಲ
ಸಾದೇವ ಮಾಲೆಯು ಮುಡಿಸಿದನಾಗ ೩೨

ಸಾಸಿರನಾಮದೊಡೆಯನ ಸಖರು
ದ್ರೌಪದಿ ಸಹಿತ ಕುಳ್ಳಿರಲಾಗ
ಸೋಸಿಲಿಂದಲಿ ಭೀಮೇಶಕೃಷ್ಣನ ಪಾಡಿ
ಆ ಸತಿಯರಾರತಿ ಬೆಳಗೆ ೩೩

೭೬

ನೀಲವರ್ಣ ಗೋಪಾಲನು ಎಲ್ಲೆ
ಕಾಣಿರೇನೇ ವ್ರಜದ ಒಳಗೆ
ಲೀಲಿ[ಲೆಇ?]ದೇನೆ ನಮ್ಮ ಸಂಗಡ
ಹೇಳೇ ಗೋಪ್ಯಮ್ಮ ೧

ಚಿಣ್ಣಿಕೋಲು ಚೆಂಡು ಬುಗುರಿ
ವೇಣುಕೊಳಲಧ್ವನಿಯು ಆಲಿಸಿ

ಓಣಿ ಓಣಿ ಹುಡುಕಲು ನಂದ-
ಸೂನು ಎಲ್ಲಿಹನೆ ೨

ಕೇಳೆ ಗೋಪಿ ಗೋಪಾಲ ಕೂಡಿ
ಥಾಳಿ ಮಾಡ್ವುದು ದಾರಿಗೆ ತರವೆ
ಗೂಳಿಮಾಡಿದಿ ಗೋಕುಲದೊಳು ನಿನ-
ಗ್ಹೇಳುವುದಿನ್ನೇನೆ ೩

ನಾ ಕಾಣೆನೆ ನವನೀತ ದಧಿ ಘೃತ
ಸುರಿದೋಡಲು ನೀ ಸುಮ್ಮನೆ ಬಿಟ್ಟು
ಯಾತಕೆ ಹಿಡಿತಾರದೆ ದೂರ್ಹ್ಹೇಳುವಿ ಈ
ಮಾತು ನಿರ್ಧಾರವೇನೆ ೪

ಹೆತ್ತತಾಯಿ ನೀ ಬಳಲುವಿ ಎಂದು
ಸಿಕ್ಕೊರಳಿಗೆ ಕಟ್ಟಿಸಿಕೊಂಡೆಳೆದು
ಮತ್ತಿಮರಗಳ ಕೆಡವಿದವನು ಕೈ-
ಸಿಕ್ಕುವುದುಂಟೇನೆ ೫

ವಜ್ರದ್ಹಾರ ಪದಕ ಹೊನ್ನರಳೆಲೆ
ಗೆಜ್ಜೆಕಾಲಂದಿಗೆ ಝುಳಿ ಝುಳಿಸುತ
ಮೂರ್ಜಗದೊಳು ಮುದ್ದಿರಲೀಕೂಸ್ಹೊರ-
ಗ್ಹೆಜ್ಜೆನಿಡುವುದೇನೆ ೬

ಶಿಶುವೇನೇ ಅಸುವ್ಹೀರಿ ಪೂತನಿ
ಕೇಶಿ ಧೇನು ತೃಣಾವರ್ತ ಶಗಟಾಸುರ
ಬಕನ ಕೊಂದವಗೆಂತು ನೀ ಅರ್ಭಕ-
ನೆಂತಾಡುವಿಯೆ ೭

ಹೆಡೆಯು ತುಳಿದ ಕಾಳಿಂಗನ
ಮಡುವ ಕಲಕಿದ ಕಡುವಿಷಕಂಜದೆ
ಹುಡುಗರ ಕಾರ್ಯವಿದೇನೆ ಬಿಡು ನಿನ್ನ
ಬಡಿವಾರವು ಸಾಕೆ ೮

ಕಾಡುಕಿಚ್ಚನು ನುಂಗಿದ ನಿನಸುತ
ಬೇಡಿಯಜ್ಞದೊಳುಂಡನ್ನವನು

ಸಾಲದೆ ಇಂದ್ರನ ಪುರವುಂಡ್ಹೊಟ್ಟೆಗಿ-
ನ್ನೀಡೆಲ್ಲಿಹುದ್ಹೇಳೆ ೯

ಶಕ್ರನ ಬಲಿಅನ್ನವ ದಕ್ಕಿಸಲವ
ಸಿಟ್ಟಲಿ ಸಪ್ತದಿನ ಮಳೆಕರೆಯೆ
ಎತ್ತಿ[ದ] ಗೋವರ್ಧನಗಿರಿ ನಮ್ಮದಾರಿ-
ಚ್ಚೆಗೆ(?)ಸಲಹುವನೆ ೧೦

ಕಾತ್ಯಾಯಿನಿ ವ್ರತಮಾಡೋ ಸ್ತ್ರೀಯರ
ವಸ್ತ್ರಗಳನೆ ಕದ್ದು ಮರನೇರಿದ
ಬತ್ತಲೆ ಚಪ್ಪಾಳಿಕ್ಕುತ ತಿರುಗಲಿನ್ನೆ-
ಷ್ಟೆಂತ್ಹೇಳುವೋಣೆ ೧೧

ಚೋರತನವೊಂದಲ್ಲದೆ ಕಲಿತಿಹ
ಜಾರತನ ಕೇಳರಿಯೆ ಯಶೋದ
ನೀರುತಿದ್ದುವ ಎಲ್ಲರ ಒಗತನಕಿವ
ಪಾರುಗಾಂಬುವುದ್ಹ್ಯಾಗೆ ೧೨

ಗಂಡರುಳ್ಳ ಗರತಿಯೇರೆನ್ನದೆ
ಪುಂಡೆಬ್ಬಿಸಿ ಬೃಂದಾವನದೊಳಗೆ
ಬಂದಮ್ಮನ ಹಿಂದಡಗಲು ನಿನಗೆ
ಮುದ್ದಿನ್ಯಾರಿಗೆ ಹೇಳೆ ೧೩

ಮಾರಜನಕ ಮಾಧವ ತಾ ಕೊಳಲೂದು-
ತಿರೆ ನಾವು ಮೋಹಿತರಾಗಿ ಹೋದ
ಸುದ್ದಿಗಳೊಂದ್ಹೇಳೆ ಲಜ್ಜೆ ಬಾ-
ಹೋದೆ ನಮಗಿನ್ನು ೧೪

ಬಳೆ ಬಾಪುರಿ ಕಂಕಣ ಚೂಡ್ಯ
ಗಳನು ತೊಡೆಗೇರಿಸಿ ಕಾಲಂದಿಗೆ
ಕರದಿ ಕಾಲುಂಗುರ ಕಿವಿಗಿಟ್ಟುಬಾವುಲಿ
ಪಾದದಿ ರಚಿಸಿದೆವೆ ೧೫

ಹೊನ್ನ್ವಾಲೆ ಹೊಸಕೊಪ್ಪು ಮೂಗುತಿ
ಚಿನ್ನದ ಒಡ್ಯಾಣದ ನಡುವಿಟ್ಟು

ಕಣ್ಣಿಗೆ ಕಸ್ತೂರಿಬಟ್ಟು ಕುಂಕುಮ ಕಾಡಿಗೆ
ನೊಸಲಿಗೆ ರಚಿಸಿ ೧೬

ಬಿಟ್ಟಮುಂದೆ ಕಟ್ಟದೆ ಕರುಗಳ
ತೊಟ್ಟಿಲೊಳಗಿಟ್ಟು ಶಿಶುವಿಗೆ
ಕಣ್ಣು(ಣ್ಣಿಹ?)ಚ್ಚಿ ನಾವೆಚ್ಚರಿಕೆಲ್ಲದೆ ಪೋವೆವೆ
ಅಚ್ಚುತನಿದ್ದೆಡೆಗೆ ೧೭

ಬಂದವರನೆ ಮನ್ನಿಸದೆ ನಿನಸುತ ಅ-
ಲ್ಲಿಂದೊಬ್ಬಳ ಹೆಗಲೇರಿಸಿ ಪೋಗೆ
ಹಿಂದಾಲ್ಪರಿದ್ವನವನಿತೆಯರ್ಕೂಡಿ
ಬಂದೆವ್ಯಮುನೆ ದಡಕೆ ೧೮

ಇಬ್ಬರಿಬ್ಬರ ನಡುವೆ ನಿನಸುತ
ಒಬ್ಬನಾಗಿ ಜಲದ ಒಳಗೆ
ಅಬ್ಬರದಿಂದಾಡಲು ಜಲಕ್ರೀಡೆ ಕ-
ಣ್ಗುಬ್ಬವಾಗಿರೆ ಜನಕೆ ೧೯

ಗೋಪಿ ಗೀತವಿದೆಂದು ನಿನಸುತ
ಖ್ಯಾತಿ ಮಾಡಿದ ಜಗದ ಒಳಗೆ
ಯಾತಕೆ ಕೂಸೆಂದಾಡುವೆ ತಿಳಿ ನಿನ್ನ
ಪ್ರೀತಿಮೋಹಗಳೆಂದು ೨೦

ಅಂಕದಲ್ಯಾರೋಪಿತನಾಗೆ
ಶಂಕಿಲ್ಲದೆ ಹಾರ ಭಾರವನೆ ತಾಳಿದೆ
ಬಿಂಕವ ಬಿಡು ಮಗನೆಂದಾಡುವುದು ಈ
ಮಂಕು ಬುದ್ಧಿಗಳಿನ್ನು ೨೧

ಮಗುವೇನೆ ಹೃದಯದೊಳ್ದಿನಾಲ್ಕು
ಜಗವ ಕಂಡು ನೀ ತೆಗೆಯದೆ ನೇತ್ರ
ಜಗಜಗಿಸುವ ಚಂದ್ರಮನಂಗೈಯಲಿ ಈ
ಬಗೆ ನಿನಗರಿಕಿಲ್ಲೆ ೨೨

ಗೋಪಾಂಗನೆಯರಾಡುವ ಮಾತು
ಕೋಪದಿ ಕೇಳುತಲೆಶೋದೆ

ಗೋಪಾಲಕೃಷ್ಣ ನಿನ್ನೆಲ್ಲಿ
ಕಳುಹಲೆಂದಳು ೨೩

ದುಷ್ಟ ಕಾಲನೇಮಿ ಕಂಸನು ನಿನ್ನ
ಕರೆಯಕಳುಹಲು ಕರಕರೆಯಾಕೋ
ನಾರಾಯಣ ನಿನ್ನಟ್ಟುವೆ[ವು] ಮಧುರೆಗೆ
ನಾವೆಲ್ಲರು ಕೂಡಿ ೨೪

ದುಷ್ಟತನವ ಬಿಡೋ ಭೀಮೇಶ–
ಕೃಷ್ಣ ನಿನ ಬಿಟ್ಟರಲಿರುಳೊಂದ್ಯುಗವೊ
ಸಿಟ್ಟಾಗದಿರೊ ಹೃದಯಾಲಯದೊಳು ಮನ
ಬಿಟ್ಟನ್ನಗಲದಿರೊ ೨೫

೭೭

*

ನೋಡಿ ದಣಿಯವೆನ್ನ ಕಂಗಳು ಈ ಸೋದೆಲಿರುವ
ಈಡು ಇಲ್ಲದುತ್ಸವಂಗಳ
ಬೇಡಿದವಗೀ ಧ್ವಜಬುತ್ತಿ(?)ನೀಡಿ ದಯಸೂರ್ಯಾಡುವರ ಪ.

ಯತಿಗಳ ಸಮೂಹವೆಷ್ಟು ಮಿತಿಯಿಲ್ಲದ ಬ್ರಾಹ್ಮಣ್ಯವೆಷ್ಟು
ಮತಿಹೀನರಿಗೆ ಗತಿಯ ಕೊಡುವ ಪೃಥ್ವಿಗಧಿಕ ಗುರುಗಳನ್ನು ೧

ಭೂತನಾಥಗೆರಗಿ ನಿಂತು ವಾತಸುತಗೆ ಕೈಯ ಮುಗಿದು
ಆತ ನಾರಾಯಣಭೂತನೆಂಬೋ ನೀತವಾದ ದೂತನಂತೆ ೨

ಕೊಳಲ ಕೃಷ್ಣ ಧವಳಗಂಗಾ ಹೊಳೆಯೊ ಮುತ್ತಿನ ಗದ್ದಿಗೆ ಮ್ಯಾಲೆ
ಕಳೆಯು ಸುರಿವೊ ಕಮಲಪಾದ ಇಳೆಯೊಳ್ ಇಲ್ಲೀಗೆಯು ಪೂಜೆ ೩

ಸನಕಾದಿ ಸುರೇಶನೆದುರು ಕಣಕ ಹ್ವಾಲಗ(ಹೋಳಿಗೆ?)ವನ್ನೆ ಮಾಡಿ
ಮನಕೆ ಬಂದ ಮೃಷ್ಟಾನ್ನವನು ಜನಕೆ ತೃಪ್ತಿಬಡಿಸುತಿರಲು ೪

* ಸೋದೆ ವಾದಿರಾಜಸ್ವಾಮಿಗಳ ಮೇಲಿನದು.

ಸುತ್ತ ವೃಂದಾವನದ ಮಧ್ಯೆ ಉತ್ತಮರಾದ ವಾದಿರಾಜರು
ಸತ್ಯವತಿಯ ಸುತರ ಎದುರು ನಿತ್ಯಾನಂದಭರಿತರಾಗಿ ೫

ಸೃಷ್ಟಿಗಧಿಕಾನಂತಾಸನವು ಶ್ವೇತದ್ವೀಪ್ವೈಕುಂಠವೆಂಬೊ
ಮುಕ್ತಸ್ಥಳದಲ್ವಾಸನಾದ ಲಕ್ಷ್ಮಿಯ ತ್ರಿವಿಕ್ರಮನ ೬

ನೇಮನಿಷ್ಠ ಸೇವಕ ಜನಕೆ ಬೇಡಿದ ಇಷ್ಟಾರ್ಥ ಕೊಡುವೊ
ಭೀಮೇಶಕೃಷ್ಣನ್ನ ದಯದಿ ನೋಡಿದೆ ಹಯವದನನಂಘ್ರಿ ೭

೭೮

*

ನೋಡಿರಿ ರಾಘವೇಂದ್ರರ ಮಾಡಿರಿ ನಮಸ್ಕಾರ
ಬೇಡಿದ ಇಷ್ಟ ವರ ನೀಡುವರು ನಮ್ಮ ಯತಿವರ ಪ.

ಮಂತ್ರಾಲಯದಿ ನಿಂತಿಹ ಚಿಂತೆಗಳ ಪರಿಹರಿಸುವ
ಕಂತುಪಿತನನಂತಗುಣ ತನ್ನಂತರಂಗದಿ ಸ್ತುತಿಸುವ
ಇಂಥ ಯತಿಗಳ ಕಾಣೆ ಹರಿಯೇಕಾಂತ ಭಕ್ತರೆನಿಸಿಕೊಂಡು
ಮಂತ್ರಾಕ್ಷತೆ ಫಲ ನೀಡಿ ತಾ ಸಂತಾನ ಸಂಪತ್ತು ಕೊಡುವರ ೧

ಭೂತ ಪ್ರೇತ ಭಯಗಳ ವಾತ ಪಿತ್ತ ವ್ಯಾಧಿಗಳ
ಸೇತು (ಶ್ವೇತ?) ಕುಷ್ಟರೋಗಗಳ ಪಾತಕಿಯರ ಪಾಪಗಳ
ಪ್ರೀತಿಯಿಂದ ಕಳೆವರೊ ಪ್ರಖ್ಯಾತರಾಗಿ ಜೀವರೊ
ಭೂತಳದಿ ಸನ್ನೀತ(ಸನ್ನಿಹಿತ?)ರಾದ ಸೀತಾಪತಿ ನಿಜ-
ದೂತರೆನಿಸೋರೊ ೨

ಭಜಿಸೆ ಭಕ್ತರ ನೋಡುವ ಸದನಕೆ ಬಂದುಕೂಡುವ
ಒದಗಿದಾಪತ್ತು ನೂಡುವ ಬಂದು ಮುದದಿ ತಾ ದಯಮಾಡುವ
ಆಜನ್ಮ್ಯಾನ ಕೊಂಡಾಡುತ ತುಂಗಾನದಿಯ ತೀರ ವಾಸವಾಗಿ
ಹೃದಯದೊಳು ಭೀಮೇಶ ಕೃಷ್ಣನ ಪದವ ಭಜಿಸಿ ಪಡೆವರಾನಂದವ ೩

೭೯

ನೋಡೆ ಗೋಪ್ಯಮ್ಮ ಕೃಷ್ಣಂಜಾಣೆಯ ನೀ
ಮಾಡಿಬಿಟ್ಟಿಯೆ ಇಂಥ ಗೋಳಿಯ ಇಂಥ ಧಾಳಿಯ ಪ.

---

* ಮಂಚಾಲೆ ರಾಯರ ಮೇಲಿನದು.

ಹಾಲುಮೊಸರ ಕೆನೆ ಬೇಡುವ ಕಡ-
ಗೋಲಿಂದ್ಹೊಡೆದು ಸಮ್ಮಸ್ಹೋಡುವ ಬಂದು ಕಾಡುವ ೧

ತುಪ್ಪದ ಕೊಡ ಧಪ್ಪನೊಡೆದಾನೆ ಕಂ-
ದರ್ಪಸಪ್ಪನು ಈತೇನ್ಹುಡುಗನೆ ಇಂಥ ತುಡುಗನೆ ೨

ಕರೆದು ಕೈಯಲಿ ಬೆಣ್ಣೆಯ ಮುದ್ದೆ ನೀ
ಕೊಟ್ಟ್ಹೇಳೆ ಭೀಮೇಶ ಕೃಷ್ಣಗೆ ಬುದ್ಧಿ ೩

೮೦

ನೋಡೊ ಮನ ಕೊಂಡಾಡೊ ಮರೆಯದಲೆ
ನೋಡೊ ಮನ ಚಿಂತಲ್ರೇವಲೇಶನ
ಪಾಡುತಿರೆ ಕೃಷ್ಣಾತೀರದ್ವಾಸನ
ಮಾಡೊ ಮಹಾತ್ಮರೆಂದೆನಿಸೊ ದಾಸರ
ಜೋಡು ಪಾದಂಗಳಿಗೆ ವಂದನೆ ಪ.

ಅಂಜನೆಯಲ್ಲುದಿಸಿ ಕೌಸಲ್ಯಾ-
ಕಂದನಂಘ್ರಿಕಮಲ ಸೇವೆಗೆ
ಅಂಗದ ಮೊದಲಾದ ಕಪಿಗಳ
ಸಂಗಬಿಟ್ವಾರಿಧಿಯನ್ಹಾರುತ
ಭಂಗಬಡಿಸುತ ರಾವಣನ ಪುರ
ಮಂಗಳಾರತಿ ಮಾಡಿ ಜಾನಕಿ
ಗುಂಗುರವನಿಟ್ಟೆರಗಿ ರಾಮರಿ-
ಗಂಗಸೆಯ ವಾರ್ತೆಗಳನರುಹಿದೆ ೧

ಕುಂತಿಸುತನಾಗ್ಯುದಿಸಿ ಬ್ಯಾಗನೆ
ಪಂಥಮಾಡುತ ಕೌರವರ ಕುಲ-
ಕಂತಕನು ನಾನೆಂದು ರಣದೊಳು
ನಿಂತು ಗದೆ ಹಾಕವರ ಸವರುತ
ಅಂತರಂಗದಿ ಹರಿಯ ದಿವ್ಯಾ-
ನಂತಗುಣಗಳ ತಿಳಿದು ದ್ರೌಪದೀ-
ಕಾಂತನೆನಿಸಿ ತಾ ಕರುನಿಣಧಿಗೇ-
ಕಾಂತ ಭಕ್ತನೆಂದೆನಿಸಿದಾತನು ೨

ಮಧ್ಯಗೇಹಭಟ್ಟರಲ್ಲಿ ಮಗನಾ-
ಗಿದ್ದ ಸುಜನರಭೀಷ್ಟದಾಯಕ
ಗೆದ್ದು ಮಾಯಾವಾದಿಗಳನೆ ಪ್ರ-
ಸಿದ್ಧನೆನಿಸಿದೆ ಸರ್ವಲೋಕದಿ
ಶುದ್ಧ ಜ್ಞಾನಾನಂದತೀರ್ಥರು
ಮಧ್ವಮತದ ಬಿರುದನೆತ್ತಿದ
ಪದ್ಮಪತಿ ಭೀಮೇಶಕೃಷ್ಣಗೆ
ಪರಮಭಕ್ತನೆಂದೆನಿಸಿದಾತನು ೩

## ೮೧

*

ಪಕ್ಷಿವಾಹನ ಸತ್ಯಭಾಮೆ ಸದನದ್ವಾರದಿ
ನಿಂತು ಸದನ ದ್ವಾರದಿ
ಮಿತ್ರೆ ಎನಗೆ ಕದವ ತೆಗೆಯೆ ಬರುವೆ ತೀವ್ರದಿ ೧

ಸಾಕೊ ಸಾಕೊ ನಿನ್ನ ಸಂಗ ಯಾಕೊ ಕೃಷ್ಣನೆ
ನಮಗಿನ್ಯಾಕೊ ಕೃಷ್ಣನೆ ಅ-
ನೇಕ ಸ್ತ್ರೀಯರಿಂದ ರಮಿಸ್ಯೋಗಾದಿ ಪುರುಷನೆ ೨

ಕೋಪವ್ಯಾಕೆ ಕಾಂತೆ ಮನದ ವಾಕು ತಿಳಿಯದೊ
ಎನಗೀ ವಾಕು ತಿಳಿಯದೊ ವಿ-
ವೇಕದಿಂದ ನಿಂತು ಪೇಳೆ ಮಾತಯೆನ್ನೊಳು ೩

ಎನ್ನಬಿಟ್ಟು ಅನ್ಯಸ್ತ್ರೀಯರ ಮನೆಗೆ ಪೋಗುವಿ
ಸ್ತ್ರೀಯರ ಮನೆಗೆ ಪೋಗುವಿ
ಘನ್ನ ಘಾತಕತನದಿಂದಿಲ್ಲಿಗಿನ್ನು ಬರುವರೆ ೪

ಅನ್ಯಸ್ತ್ರೀಯರೆಂಬುವೋರು ಇನ್ಯಾರೆನಗ್ಹೇಳೆ
ಭಾಮೆ ಇನ್ಯಾರೆನಗ್ಹೇಳೆ
ನಿನ್ನ ಸರಿಯಸವತೇರೆನಗೆ ಸತಿಯರಲ್ಲವೆ ೫

* ಸತ್ಯಭಾಮೆ ಬಾಗಿಲು ಕಟ್ಟಿದ್ದು.

ಅತ್ತಸಾಗೊ ರುಕ್ಮಿಣಿ ಒಲವು ಚಿತ್ತವಿಡಿಯದೆ
ಆಕೆ ಚಿತ್ತವಿಡಿಯದೆ
ಲಿತ್ತಪಗಡೆನಾಡಪ್ಪಿಗೆ ಇತ್ತ ಬರುವರೆ ೬

ಕಾಳಕತ್ತಲು ಪ್ರಳಯಜಲಧಿ ಕಾದುಕೊಂಡೆನ್ನ
ಇರುವ್ಹೋಳು ಕಾದುಕೊಂಡೆನ್ನ
ಆದಿಲಕ್ಷ್ಮಿ ಮುನಿಸಿದರೆನಗಿನ್ನ್ಯಾರ್ಯಗೆ ಭಾಮಿನಿ ೭

ಜಾಂಬುವಂತೇರ್ಥಂಬಲ ಬಿಟ್ಟು ಬಂದ ಕಾರಣ
ನೀನು ಬಂದ ಕಾರಣ ಆ-
ನಂದ ಬಡಿಸುತವರ ಗೃಹವಲ್ ಹೊಂದಿಕೊಂಡಿರು ೮

ಜಾಂಬುವಂತೇರಿಂದ ಬಂದ ಸಿಂದ್ಯ ಕಳೆದೆನೆ ನಾ
ಆಪನಿಂದ್ಯ ಕಳೆದೆನೆ
ತಂದು ರತ್ನತೋರಿ ನಿನ್ನ ತಂದೆ ಭಾಮಿನಿ ೯

ಕಮಲನಾಭ ಕಾಳಿಂದಿ ಕಳವಳಿಸುವಳೊ ಕಾಣದೆ
ಕಳವಳಿಸುವಳೊ ಕಾಣದೆ
ಕಾಲಕಳೆಯೊದ್ಹ್ಯಾಂಗಿನ್ನಾಕೆ ಆಲಯಕೆ ಪೋಗೊ ೧೦

ಗಾಳಿಮಳೆಯ ಸಹಿಸಿ ಕಾಳಿಂದಿತೀರದಿ ಇರೆ
ಕಾಳಿಂದಿ ತೀರದಿ ಇರೆ
ಭಾಳ ತಪಸಿಲ್ಫಲಿಸಿ ಭಾರ್ಯಳಾದ ಬಗೆ ನೀ ಅರಿಯದೆ ೧೧

ನೀಲವರ್ಣ ನೀಲಾದೇವಿ ನಿನ್ನಕಾಣದೆ
ಇರುವಳು ನಿನ್ನಕಾಣದೆ
ಸಿರಿಕ್ಷೇಲಿರಲು ನಿನ್ನ ಗಮನ ಸಲ್ಲದೆ ನೀಪೋಗೊ ೧೨

ಸಪ್ತಗೂಳಿ ಕಟ್ಟಿ ನಾ ಸಮರ್ಥನೆನಿಸಿದೆ
ಬಲು ಸಮರ್ಥನೆನಿಸಿದೆ
ಅದರಿಂದಷ್ಟೂರೊಳಗೆ ನೀಲ ನನಗೆ ಶ್ರೇಷ್ಠಳಲ್ಲವೆ ೧೩

ಪದ್ಮನಾಭ ಭಪ್ರೀಯಿಂದ ಭಾಳ ಹರುಷವೊ
ನಿಮಗೆ ಭಾಳ ಹರುಷವೊ
ಎದ್ದುಪೋಗಾಕಿಷ್ಟಳಕೆಲ್ಲಿರಲು ಸಲ್ಲವೊ ೧೪

ಅರಸರಾಕೆ ಅಗ್ರಜರೈವರು ಕರೆಸಿ ಕೇಳೋರೆ
ಎನ್ನ ಕರೆಸಿ ಕೇಳೋರೆ
ಹೋಗಿ ಹರುಷ ಬಡಿಸುವಿರಲು ಆಕೆನ್ನರಸಿ ಅಲ್ಲಿ ೧೫

ಮಿತ್ರವಿಂತಿ ಪಟ್ಟಮಂಚ ಬಿಟ್ಟು ಬರುವಾಕೆ
ಇಲ್ಲಿಗೆ ಬಿಟ್ಟು ಬರುವಾಕೆ
ಆಕೆ ಸಿಟ್ಟಿಲಿಂದ ದೃಷ್ಟಿತೆರೆದು ಎನ್ನ ನೋಡಳೆ ೧೬

ಅತ್ತೆಮಗಳು ಮಿತ್ರೆಯೆನಗತ್ಯಂತ ಪ್ರೇಮಳೆ
ಎನಗತ್ಯಂತ ಪ್ರೇಮಳೆ
ನಿನಗೆ ಇಷ್ಟು ಕ್ರೋಧ ನಿಷ್ಠೂರ ವಚನ ಬ್ಯಾಡೆ ಭಾಮಿನಿ ೧೭

ಲಕ್ಷ್ಯಏನು ಎನ್ನ ಮನೆ ಅಲಕ್ಷ್ಯವಲ್ಲವೇ
ನಾನಲಕ್ಷ್ಯವಲ್ಲವೆ ನಿನಗೆ
ಲಕ್ಷಣ ಮೀವೇರಲ್ಲಿ ಭಾಳಾಪೇಕ್ಷನಲ್ಲವೆ ೧೮

ಲಕ್ಷ್ಯಕೊಡೆದು ಮತ್ಸ್ಯಕೆಡಪ್ಯಪೇಕ್ಷೆಯಿಂದಲಿ
ಭಾಳಪೇಕ್ಷೆಯಿಂದಲಿ ನಾನು
ಲಕ್ಷಣೆಯನೆ ತಂದೆ ಕೇಳೆ ಸತ್ಯಭಾಮೆ ನೀ ೧೯

ಹತ್ತು ಆರು ಸಾವಿರ–ಶತ ಪತ್ನೇರಿಲ್ಲವೆ
ನಿನಗೆ ಪತ್ನೇರಿಲ್ಲವೆ ತಿರುಗಿ
ಸುತ್ತಿ ಸುತ್ತಿ ಹಾದಿ ಹೀಗೆ ತಪ್ಪಿಬರುವರೆ ೨೦

ದಾರಮನೆಗೆ ಹೋಗಲೆನ್ನ ದೂರು ಮಾಡೋರೇ
ಹೀಗೆ ದೂರು ಮಾಡೋರೇ ಸ್ವಾಮಿ
ಪಾರಿಜಾತಕೊಟ್ಟ ಸತಿಯಲ್ಲೋಗಿರೆಂಬರೆ ೨೧

ಸರಸವಾಡಬಿರೊ ಶ್ರೀರಮಣ ಅರಸೇರ್ಯಾತಕೊ
ನಿನಗೆ ಅರಸೇರ್ಯಾತಕೊ
ಹರುಷದಿಂದ ಎರಗಬೆನ್ನ ಶಿರಸಿದ್ಯಾತಕೊ ೨೨

ಶ್ರೀಶ ಎನ್ನ ಮನದಲಿರೊ ಭೀಮೇಶಕೃಷ್ಣನೆ
ಇರೊ ಭೀಮೇಶಕೃಷ್ಣನೆ
ನಿನ್ನ ವಿಲಾಸ ಬಯಸುವಿರುವರ್ಯಾರೊ ಇಂದಿರೇಶನೆ ೨೩

## ೮೨

ಪರಮ ಪಾವನ ವೃಂದಾವನ ಮಳಖೇಡ ಕಾಗಿನೀ ನದಿ
ತೀರದಿ ತಪವಾಚರಿಸುತ ಗುರುಗಳು ಇರುವರ್ಯತಿ
ಗಳ್ಹನ್ನೆರಡು ಮಂದಿ
ರಘುವ[1][ರ][1] ಅಕ್ಷೋಭ್ಯತೀರ್ಥರ ನಡುವೆ ಕುಳಿತಿದ್ದಂಥ
ಟೀಕೆ ಬರೆದ ಜಯ ಮಹರಾಯರಿವರು
ಪಾಲಿಸೆನ್ನನು ಜಯರಾಯ ಪ.

ಎತ್ತಿನ ಜನ್ಮದಿ ಬಂದು ಶ್ರೀಮದಾನಂದತೀರ್ಥರಲ್ಲಿದ್ದು
ಶಿಷ್ಯತ್ವ ವಹಿಸಿಕೊಂಡು
ಬಿಟ್ಟು ಹರಿದಿನ ಪೋವು ನೀರನೆ ಪುಸ್ತಕದ
ಗಂಟ್ಹೊತ್ತು ತಿರುಗುತ
ತತ್ವಜ್ಞಾನವ ತಿಳಿದು ದ್ವಾದಶ ಸ್ತೋತ್ರ ಹೇ-
ಳುತ ಪ್ರಕಟವಾದರು ೧

ಗೋವುಸುತನ ಜನ್ಮ ನೀಗಿ ಮಂಗಳವೇಡಿ
ಸಾಹುಕಾರನ ಸುತನಾಗಿ
ತೇಜಿಯನೇರಿ ಪಾ(ಮಹಾ?)ನದಿ ಮಧ್ಯದಲಿ
ಮಂಡಿಬಾಗಿ ನೀರನು ಕುಡಿಯ-
ಲಾಕ್ಷಣ ನೋಡಿ ಕರೆತರಲವರ ಗುರುಗಳ
ಪಾದಕ್ವಂದನೆ ಮಾಡಿ ನಿಂತರು ೨

ಅಕ್ಷೋಭ್ಯತೀರ್ಥರು ಆ ಮಹಿಮರ ನೋಡಿ
ಕೊಟ್ಟು ಕಾಯ್ಕರದಲಿ
ಜುಟ್ಟು ಜನಿವಾರವನು ಕಿತ್ತಿ ಕಾವಿಶಾಟಿಗಳನು
ಉಟ್ಟು ದಂಡಕಾಷ್ಟ್ಹಿಡಿದು
ಶ್ರೀಷ್ಮಯತಿ ಆಶ್ರಮದಿ ಕುಳಿತಿರೆ ಹೆತ್ತವರು
ಹುಡುಕುತ್ತ ಬಂದರು ೩

ಕಂಡಕಂಡಂತೆ ಮಾತುಗಳಾಡಿ ಗುರುಗಳಿಗೆ
ಧೋಂಡು ರಘುನಾಥನ ಕರಕೊಂಡು
ಹಿಂದಕೆ ಹೋಗಿ ಹೆಂಡತಿ ಸಹಿತೆರೆದು ಪ್ರಸ್ತ

1 ರಿಗೆ

ಮುಂಡಿಗಿ ವೃಷ್ಟಾನ್ನ ಉಣಿಸಿ
ಚಂದದ್ವಸ್ತ್ರಾಭರಣ ಕೊಟ್ಟುರುಟಣೆಯು
ಮಾಡಿಸ್ಯಾರತಿಯ ಬೆಳಗೋರು ೪

ಸುಪ್ಪತ್ತಿಗೆಯು ಮಂಚ ಕುತ್ತಣಿ ಹಾಸಿಕೆಯಲ್ಲಿ
ಇಟ್ಟು ತಾಂಬೂಲ ಬು–
ಕ್ಕಿಟ್ಟು ಪರಿಮಳ ಗಂಧ ಸಕ್ಕರೆ ಕ್ಷೀರಗಳು ಲಕ್ಷ್ಮಿಗೆ
ಅಚ್ಚಮಲ್ಲಿಗೆಮಾಲೆ ಫಲಗಳು
ರತ್ನ ಜ್ಯೋತಿ ಪ್ರಕಾಶನೋಳಗುತ್ತಮರು
ಕುಳಿತಿರಲರ್ಥಿಯಿಂದಲಿ ೫

ಮಡದಿ ಮಂಚಕೆ ಬಂದ ಸಡಗರವನು ನೋಡಿ
ಕಡುಕೋಪದಲಿ ದೊಡ್ಡ
ಹೆಡೆಯು ತೆರೆದು ಕಣ್ಣು ಬಿಡುತ ವಿಷನಾಲಿಗೆಯು
ಚಾಚುತಾರ್ಭಟಿಸಿ ಬರುತಿರಲ–
ಸಾಧ್ಯಸರ್ಪವು ಕಡಿವುದೆನುತೆದೆ ಒಡೆದು ಕೂಗಲು
ಹಡೆದವರು ಬಾಯ್ಬಿಡುತ ಬಂದರು ೬

ಹಾವಾಗ ರಿದು ಹುತ್ತವ ಸೇರಿಕೊಂಬುವೋದೀಗ
ನಾವು ಮಾಡಿದಪರಾಧ
ಕ್ಷಮಿಸಬೇಕೆನುತಲಿ ಬೇಡಿಕೊಂಡಾಕ್ಷಣದಿ ಮಗನ
ನೋಡಿ ಕರೆತಂದಾಗ
ಅಕ್ಷೋಭ್ಯರಾಯರಂಘ್ರಿಚರಣಕೊಪ್ಪಿಸಿ ನಾವು
ಧನ್ಯರಾದೆವೆಂಬರು ೭

ಅತಿಬ್ಯಾಗದಿಂದವರಿಗ್ಯತಿ ಆಶ್ರಮವಕೊಟ್ಟು ದೇ–
ವತಾಪೂಜೆಗಧಿಕಾರಮಾಡಲು
ಗುರುಗಳು ಪಾಂಡಿತ್ಯದಿ[ಇ]ವರಿಗೆ ಪ್ರತಿಯು ಇಲ್ಲ–
ವೆಂದೆನಿಸಿ ಮೆರೆವರು
ಪತಿತರನೆ ಪಾವನವ ಮಾಡಿ ಸದ್ಗತಿಯ ಕೊಡುವ
ಸಜ್ಜನ ಶಿರೋಮಣಿ ೮

ಮಧ್ವರಾಯರು ಮಾಡಿದಂಥ ಗ್ರಂಥಗಳಿಗೆ
ತಿದ್ದಿ ಟೀಕೆ ಟಿಪ್ಪಣಿ ಮಾಡಿ

ಇಷ್ಟು ಮಹಾತ್ಮರು ಪದ್ಮನಾಭ ಭೀಮೇಶಕೃಷ್ಣಗೆ
ಪರಮ ಭಕ್ತರೆನಿಸಿ ಮೆರೆವರು
ವಿದ್ಯಾರಣ್ಯರ ಗುರುವ ಮಾರಿದು ಪ್ರಸಿದ್ಧರೆನಿಸೋರು
ಸರುವ ಲೋಕದಿ ೯

## ೮೩

ಪಂಢರಪುರವಾಸ ಪಾಲಿಸೊ ಶ್ರೀಶ ಪ.

ಶ್ರೇಷ್ಠಭಕ್ತನು ಕೊಟ್ಟ ಇಟ್ಟಿಕಲ್ಲಿನ ಮ್ಯಾಲೆ
ಗಟ್ಯಾಗಿ ನಿಂತಿದ್ದ ವಿಠೋಬ ದಯಮಾಡೊ ೧

ಪಾಂಡುರಾಯನ ಸುತ ಗಾಂಡೀವರ್ಜುನ ದೂತ
ಬಂಡಿ ನಡೆಸಿದಾತ ಪುಂಡರೀಕ್ವರದನೀತ ೨

ಮುಕುತಿದಾಯಕ ಮುದ್ದು ರುಕುಮಿಣಿ ರಮಣನೆ
ಭಕುತವತ್ಸಲಯೆನಗೆ ಸಕಲಾಭೀಷ್ಟವ ನೀಡೊ ೩

ಬುಕ್ಕಿಟ್ಟು ತುಳಸಿಮಾಲೆ ಕಟ್ಟಿ ಕೊರಳಿಗೆ ಹಾಕಿ
ಅಪ್ಪಿಕೊಂಡರೆ ಸಾರೂಪ್ಯ ಕೊಡುವ ದಾತ ೪

ಲೋಕಲೋಕದೊಳಗಿದ್ದಾನೇಕ ಜೀವರನೆಲ್ಲ
ಸಾಕಿ ಸಾಕಾಯ್ತು ಕರನೇಕೆ ಟೊಂಕದಲ್ಲಿಟ್ಟೆ ೫

ಸೃಷ್ಟಿಸ್ಥಿತಿಯು ಜನಸಂರಕ್ಷಣೆ ಮಾಡಿ ನಿನ್ನ
ರಟ್ಟೆ ಸೋತವೆ ಟೊಂಕಕಿಟ್ಟು ಕಯ್ಯನು ನಿಂತೆ ೬

ಕಂಬದೊಳಗೆ ನಿಂತ ಪುರಂದರದಾಸರು
ವಂದನೆ ಮಾಡೆ ಇವರೆ ನಾರಂದರೆಂದು ನಾ ತಿಳಿದೆ ೭

ರುಕ್ಮಿಣಿ ಸತ್ಯಭಾಮೆ ರಾಧೆ ಲಕ್ಷ್ಮಿಯೋರ
ಹತ್ತಿಲೆ ನಿಂತ ನಮ್ಮಪ್ಪ ವೆಂಕಟರಮಣ ೮

ಭೀಮರಥಿಯ ಸ್ನಾನ ಸ್ವಾಮಿ ನಿಮ್ಮ ದರುಶನ
ಭೀಮೇಶಕೃಷ್ಣಸಧ್ಯಾನಮಾಡುವೋದ್ವೈಕುಂಠಸ್ಥಾನ ೯

ಆಳಿ

ಪಾರ್ಥಸಾರಥಿ ಪಾಲಿಸೆನ್ನ ಶ್ರೀಹರಿಯೆ [ಪ].
ಅಂದು ಗಜನು ತಾನು ಬಂದು ತಾ
ಬಂಧು ಬಳಗವ ಕೂಡಿ ಸೊಂಡಿ-
ಲಿಂದ ನೀರನು ಕಲಕಲಾಕ್ಷಣ
ಒಂದು ಮಕರ್‍ಥಲ್ಲಿಂದ ಪಿಡಿಯೆ ಮು-
ಕುಂದ ನೀನೆ ಗತಿಯೆಂದರಾಕ್ಷಣ
ಬಂದು ಒದಗಿದ್ಯೊ ಸಿಂಧುಶಯನನೆ ೧

ದುರುಳಾಸುರನು ತನ್ನ ಕರುಳ ತನ
ಕರುಳನಿಟ್ಟುರಿಯಲ್ಲಿ
ಗರಳ ಹಾಕಿ ಬಾಧಿಸಲು ಖಳನು
ಕಾರಣ ಕಂಬದಲಿ ಬಂದೆಳೆದು ಅವನುರ
ಕರುಳ ಮಾಲೆಯು ಕರಾ<sup></sup>ವದನವ ತೆರೆದು ತನ್ನಯು
ಕೊರಳಲ್ಲಿರಿಸಿದ ಕೋಮಲಾಂಗನೆ ೨

ಪಿತನ ತೊಡೆಯಲಿದ್ದ ಸುತನ ಕಂಡು
ಸುತನ ಸುರುಚಿಯು ತಾನಾಗ
-ಹಿತದಂತ್ವಾಕ್ಯಗಳನು ನುಡಿಯಲು
ಅತಿಬ್ಯಾಗದಲಜಸುತನ ನುಡಿ ಕೇ-
ಳುತಲಿ ತಪವನು ಚರಿಸಲಾಕ್ಷಣ
ಪತಿತಪಾವನ ಪರಮ ಕರುಣದಿ
ಸುತ ಧ್ರುವಗೆ ಸುಖವಿಟ್ಟ ಶ್ರೀಹರಿ ೩

ಬಾಡಿ ಬಳುಕುವ ದ್ವಿಜನ ನೋಡಿ ತಾ
ನೋಡಿ ತಂದವಲಕ್ಕಿ ಬೇಡಿ
ಆಡಿ ಭಕ್ತನ ಕೂಡ ನಯನುಡಿ
ಮಾಡಿ ಕರುಣವ ತನ್ನ ದಯ ಸೂ-
ರ್‍ಯಾಡಿ ಸಖಗೀಡಿಲ್ಲದರ್ಥವ
ನೀಡಿದ್ಯೊ ಬಹು ರೂಢಿಗಧಿಕನೆ ೪

ಕಡುಚೆಲ್ವೆಕರೆಯಲುಟ್ಟುಡುಗೆ ಉಟ್ಟ
ಉಡುಗೆ ಸೆಳೆಯಲು ಕೃಷ್ಣೆ[ಯಿ]ದ್ದೆಡೆಗೆ

ನಡೆದಸುರ ಪಿಡಿದೆಳೆಯೆ ಸೀರೆಯು
ಕಡೆಯ ಕಾಣದೆ ಖಳನು ಧರೆಯೊಳು
ಬಳಲಿ ಬೀಳಲು ಭೀಮನ್ವಲ್ಲಭೆ–
ಯುಡುಗೆಗಕ್ಷಯ ನುಡಿದ ಕೃಷ್ಣನೆ ೫

ಸಿಂಧುಶಯನಾರವಿಂದನಯನಾರ–
ವಿಂದ ನಯನ ಅಸುರರಿಗತಿ ಭಯಂಕರನಾ–
ಗೆಂದಿಗಾದರು ನಿನ್ನ ನಾಮಸುಧೆ
ಯಿಂದ ಸುಖ ಸುರಿವಂತೆ ಮಾಡು ಮು–
ಕುಂದ ಭೀಮೇಶಕೃಷ್ಣ ನಿನ್ನ ಪ–
ದಾಂಬುಜವ ತೋರಾನಂದದಿಂದಲಿ ೬

೮೫

ಪಾಲಿಸೊ ಶ್ರೀಹರಿ ಎನ್ನ ಪಾಲಿಸೊ
ಪಾಲಿಸೊ ನಾ ನಿನ್ನ ಕಾಲಿಗೆ ಎರಗುವೆ
ಶ್ರೀಲೋಲ ನೀ ಕೃಪಾಲಯದೊಳು ಬಂದು ಪ.

ಸುರಮುನಿಗಳಿಗಿತ್ತ ಪರಿ ನಾಮಾಮೃತವನ್ನು
ಪರಮ ಔಷಧವೆಂದು ಸುರಿದು ಸುಖಿಸುವಂತೆ ೧

ಸುಂದರ ಸುಗುಣನೊಂದೊಂದು ಗುಣವ ಮಾತ್ರೆ
ಸಂದೇಹವಿಲ್ಲದಾನಂದದಿಂದರೆದ್ಹಾಕಿ ೨

ಭವರೋಗವೈದ್ಯ ಈ ಭವಬಂಧಬಿಡಿಸಿನ್ನು
ಅನುಮಾನವ್ಯಾತಕಾನಂತ ಹಸ್ತಗಳಿಂದ ೩

ಲಕ್ಕುಮಿರಮಣನೆ ಲೆಕ್ಕಿಸೊ ಎನ ಮಾತು
ದುಷ್ಟ ಜ್ವರವ ನಿನ್ನ ಚಕ್ರದಿಂದ್ಹತಮಾಡಿ ೪

ಭೀತಿ ಬಡುವೆನಯ್ಯ ಭೀಮೇಶಕೃಷ್ಣನೆ
ಯಾತಕೆ ತಡವಿನ್ನು ಪ್ರೀತಿಮಾಡೆನ್ನಲ್ಲಿ ಪಾಲಿಸೊ ೫

## ೮೬

*

ಪಾಹಿ ಕೃಷ್ಣ ಮಹಿಪತಿ ಮಧುರೆಗೆ
ಪೋಗೋದೇನೊ ಕಾರಣ
ಯದುಕುಲನಾಥ ಪಾಹಿ ಕೃಷ್ಣಮಹಿಪತಿ ಪ.

ಉದಯಕಾಲದಲೆದ್ದು ಮಧುರ್ಯೈರಿ ತಾ ಬ್ಯಾಗ
ಮಧುರಾಪಟ್ಟಣದಾಂ ಹಿಡಿದಿರೆ ೧

ಮದಗಜಗಮನೇರು ದಧಿ ಮಥನವ ಮಾಡಿ
ಕದವ ತೆಗೆದು ಕಂಡರು ಬ್ಯಾಗ ೨

ಮಿಂಚಿನಂತ್ಹೊಳೆವೊ ವಿರಿಂಚನಯ್ಯನ ರಥ
ಚಂಚಲಾಕ್ಷಿಯರು ನೋಡುತಲಾಗ ೩

ಬನ್ನಿರೆ ಬನ್ನಿರೇ ಪನ್ನಂಗಶಯನನ
ಚೆನ್ನ್ಹ್ಯತ್ತಿ ನಾವು ಹೋಗುವೊಣೀಗ ೪

ಫುಲ್ಲನಾಭನೆ ಮತ್ತೆಲ್ಲಿಗೆ ಪಯಣವೊ
ಎಲ್ಲ ವಾರ್ತೆಗಳ್ಹೇಳೊ ನಮುಮುಂದೆ ೫

ನಂದಗೋಪನ ಬುದ್ಧಿ ಮಂದವಾಯಿತೇನೊ
ವೃಂದಾವನವ ಬಿಟ್ಟು ಕಳಿಸುವ ೬

ಕೂಸೆಂದು ನಿನ್ನ ಮುದ್ದಿಸುವೊ ಮೋಹಗಳಿಲ್ಲ
ಬ್ಯಾಸರಿಕ್ಯಾಯ್ತೇನೆಶೋದೆಗೆ ೭

ಸಾಧುಗೋಪ್ಗಳನೆಲ್ಲ ಕಾಮಕೊಂಡಿಸುವೋದು
ಶ್ರೀಧರ ನೀದಾರಿಗ್ಹೇಳಿದ್ಯೊ ೮

ವತ್ಸಕಾಯುವುದು ಮನಕಿಚ್ಛಿಲ್ಲದಿರಲು ಶ್ರೀ-
ವತ್ಸಧರನೆ ಸುಮ್ಮನಿರೊ ನೀನು ೯

ನಮ್ಮನೆಯಲಿ ಪಾಲ್ ಬೆಣ್ಣೆ ಕದ್ದನೆಂದು
ನಿಮ್ಮಮ್ಮನಲ್ಲಿ ದೂರಿದೆವೇನೊ ೧೦

* ಶ್ರೀಕೃಷ್ಣನು ಮಧುರಾಪಟ್ಟಣಕ್ಕೆ ಹೋದದ್ದು.

ಕ್ಷೀರಗಡಿಗೆ ಒಡೆದೋಡಿ ಪೋದನೆಂದು
ದೂರಿಕೊಂಡವರಲ್ಲೋ ನಿನ್ನನು ೧೧

ಊರೊಳಗೊಬ್ಬಳು ದೂರಿಕೊಂಡರೆ ನಾವು
ಭಾರಿ ಶಿಕ್ಷೆಯ ಮಾಡಿ ಬಂದೆವೊ ೧೨

ಎಂದಾದರೊಂ[ದು] ದಿನ ಅಂದ ಮಾತುಗಳೆಲ್ಲ
ಇಂದೆ ತಪ್ಪ್ಹಿಡಿಯದೆ ಕ್ಷಮಿಸಯ್ಯ ೧೩

ಕದವ ತೆಗೆಯದ ಮುಂಚೆ ಸದನದ್ವಾರದಿ ಬಂದು
ಯದುನಾಥ ಎದುರೆ ನಿಂತಿರುವ್ಯಲ್ಲೊ ೧೪

ಕಂಗಳಿಂದಲಿ ನೋಡ್ಯಾಲಿಂಗನೆ ಮಾಡುತ
ಸಂಗಸುಖದಿ ಬೆಳೆದಿದ್ದೆವೊ ೧೫

ನಿನ್ನ ನೋಡದ ಕಂಗಳಿನ್ನ್ಯಾತಕಿರಲು ಕೇ(ಗೇ?)-
ರೆಣ್ಣೆಯ ತೀಡಿಕೊಂಬುವೋಣೇನೊ ೧೬

ಮಾರನಾಟಕೆ ಮನಸೋತು ನಿನ್ನನೆ ನಾವು
ಜಾರಪುರುಷನೆಂದು ತಿಳಿಯದೆ ೧೭

ಇರುಳೇಯಿ ಮನೆಯಲ್ಲಿ ಕೊಳಲೂದೋ ಕಾಲಕ್ಕೆ
ನಳಿನಾಕ್ಷ ನಾವ್ಹ್ಯಾಗೆ ಬಂದೆವೊ ೧೮

ಕಾಲಿಗಿಡುವ ವಸ್ತ್ರ ಕರದಲ್ಲಿಟ್ಟುಕೊಂಡು
ವಾಲೆ ಮೂಗುತಿ ಹೆರಳಿಗೆ ಚುಚ್ಚಿ ೧೯

ಹರಡಿ ಕಂಕಣ ಪಾದಪ್ಬಡಿನ ಮ್ಯಾಲಿಟ್ಟು
ಮುಡಿವ ಮಲ್ಲಿಗೆ ಕಿವಿಯಲಿ ಸುತ್ತಿ ೨೦

ಹಾರ ಪದಕವ ಟೊಂಕಕೆ ಕಟ್ಟಿ ನಾವುಉಟ್ಟ
ಸೀರೆ ಕುಪ್ಪುಸ ಪಾರವಿ(ಪರಿವೆಯಿ?)ಲ್ಲದೆ ೨೧

ಗಂಡಮಕ್ಕಳಿಗುಣಬಡಿಸಿ ಮಂಡಿಯ ಮ್ಯಾಲೆ
ಸಂಡಿಗ್ಹುಳಿಯನ್ಹಾಕಿ ಬಂದೆವೊ ೨೨

ಎಲೆಯ ಮ್ಯಾಲ್ಹಾಕೋ ಪದಾರ್ಥವೆಚ್ಚರವಿಲ್ಲ
ತಲೆಯ ಮ್ಯಾಲ್ಹಾಕಿ ಬಂದೆವು ನೋಡೊ ೨೩

ಬೆಣ್ಣೆ ಚಟ್ಟಿಗೆಯ ಚಿಕ್ಕಿನ ಮುಂದೆ ಸರಿಸೇವೊ
ಸಣ್ಣಕೂಸಿನ ನೆಲವಿನೊಳಿಟ್ಟು ೨೪

ಅಳುವೊ ಮಕ್ಕಳನೆ ಆಕಳ ಕಣ್ಣಿಗೆ ಕಟ್ಟಿ ಕರು-
ಗಳ ತೊಟ್ಟಿಲೊಳಗೆ ಇಟ್ಟು ೨೫

ಮಂಗನ ಮರಿಗೆ ನಾವಂಗಿ ಟೊಪ್ಪಿಗೆ ಹಾಕಿ
ಬಂಗಾರದ್ಹಾರ ಪದಕನ್ಹಾಕಿ ೨೬

ಅಚ್ಛದಿಂವೆತ್ತಿ ಮುದ್ದಿಡುತಿರೆ ಸಮಗಲ್ಲ ಕಿ-
ತ್ತಿ ಚಿವರಿಕೊಂಡ್ಹೋಯಿತು ೨೭

ಬಂಗಾರ ಕಳಕೊಂಡು ಮಂಗನಂತಾದೆವೊ
ಮಂಗಳಾಂಗನೆ ಇಷ್ಟು ಮರುಳಾಗಿ ೨೮

ವ್ಯತ್ಯಾಸದಿಂದ್ವಸ್ತ್ರ ಇಟ್ಟು ಬಂದೆವೊ ನಾವು
ಬಿಟ್ಹೋದನೆಂಬೊ ಸಿಟ್ಟಿಲ್ಲವೊ ೨೯

ಅಡಅಡವಿಲಿ ನಿನ್ನ ಹುಡುಕುತ ತಿರುಗೇವೊ
ಕಡಲಶಯನ ಕರುಣದಿ ಬಂದ್ಯೊ ೩೦

ರಾಸಕ್ರೀಡೆ ಜಲಕ್ರೀಡೆನಾಡಿದ ವಾರ್ತೆ
ರಾ(ರಹ?)ಸ್ಯ ಒಬ್ಬರಿಗೆ ನಾವ್ ತಿಳಿಸದೆ ೩೧

ಅತ್ತೆ ಮಾವಂದಿರೀ ವರ್ತಮಾನವ ಕೇಳಿ
ನೆತ್ತಿ ಮ್ಯಾಲ್ಹೊಡದ್ಹೊರಗ್ಹಾಕೋರೊ ೩೨

ಪತಿಗಳು ನಮ್ಮನ್ನು ಬಿಟ್ಟರೂ ಬಿಡಲೊ ಶ್ರೀ-
ಪತಿ ನಿನ್ನ ಬಿಟ್ಟು ಪೋಗುವರಲ್ಲ ೩೩

ಮನೆ ಧನ ಧಾನ್ಯ ಮಕ್ಕಳು ಪತಿಗಳು ಬ್ಯಾ-
ಡ ನಮಗೊಂದು ಸ್ಥಾನ ತೋರಿಸೊ ನೀನು ೩೪

ಕಟ್ಟಿದ್ದ ಕುಸುಮ ಮಲ್ಲಿಗೆ ಒಣಗಿದ ದಾರ
ಮತ್ಯಾವ ಕೆಲಸಕ್ಕೆ ಬರುವುದೊ ೩೫

ಎಲ್ಲಿ ಬಿಲ್ಲ್ಹಬ್ಬ ಮತ್ತೆಲ್ಲಿ ಸೋದರಮಾವ
ಎಲ್ಲಿಂದ ಕರೆಯಬಂದನು ಈತ ೩೬

ಕ್ರೂರನೆನ್ನದಲೆ ಅಕ್ರೂರನೆಂಬುವೋ ಹೆ-
ಸರ್ಯಾರಿಟ್ಟರ್ಹೇಳೊ ಈ ಪುರುಷಗೆ ೩೭

ನಮ್ಮ ನಿಮ್ಮನು ಅಗಲಿಸುವ್ರೋನು ನಮ್ಮಂಥ ಹೆ-
ಣ್ಣುಮಕ್ಕಳು ಇವಗಿಲ್ಲವೆ ೩೮

ಇಳಿಯಿಳಿ ಇಳಿಯಲ್ಹೇಳಿಗೆಯ ಕೊಟ್ಟೇವ್ರೊ ನಮ್ಮ ಕೊ-
ರಳ ಕೊಯ್ದು ಮುಂದಕ್ಹೋಗೋ ನೀ ೩೯

ವಾಸುದೇವನೆ ನಿನ್ನ ರಥದ ಗಾಲಿಗೆ ನಾವು
ಹಾಸಿಕ್ಯಾಗಿ ಅಡ್ಡಬಿದ್ದೆವೊ ೪೦

ಮಥುರಾಪಟ್ಟಣದಲ್ಲಿ ಇದ್ದ ಸತಿಯರೆಲ್ಲ
ಮದನಮೋಹನ ನಿನ್ನ ಬಿಡುವೋರೆ ೪೧

ಪ್ರವುಢ(ಪ್ರೌಢ?) ಜೆದಾರ ಚಪಲೇರ ಬಿಟ್ಟು ಈ ಪಳ್ಳಿ
ಮದಡ ಗೊಲ್ಲತಿಯರಿನ್ಯಾತಕೊ ೪೨

ಕರುಣಾಸಾಗರನೆಂಬೋ ಬಿರುದೆಲ್ಲಿ ಹೋಯಿತೊ
ಕರಗದೆ ಮನಸೆಲ್ಲಿ ಹೋಯಿತೊ ೪೩

ಹಿಂದೆ ಮಾಡಿದ ನಮ್ಮ ಪಾಪರಾಶಿಗಳೆಲ್ಲ
ಬಂದೊದಗಿದವೊ ಈ ಕಾಲಕ್ಕೆ ೪೪

ಶಂಬರಾರಿಯಜನಕನ ಗುಣ ತಿಳಿಯದೆ
ನಂಬಿ ಕೆಟ್ಟ್ಹಂಬಲಿಸುವರೇನೊ ೪೫

ಸರಸಿಜಾಕ್ಷನು ರಥ ಸರಸರ ಇಳಿದು ಬಂ-
ದೊರೆಸಿದ ಅವರ ಕಣ್ಣುದಕವ ೪೬

ಕಾಮ ಮೋಹಗಳಿಂದ ಕಲೆತಂತಃಕರಣಕ್ಕೆ
ನೀವೀಗ ಕ್ಷೇಮ ಚಿಂತಿಸಬೇಕು ೪೭

ಕುತ್ತಿಗೆ ಶಿರವುಬ್ಬಿ ತೊದಲು ನುಡಿಗಳಿಂದ
ಮತ್ತೊಂದುಮಾತನಾಡಿದರಾಗ ೪೮

ಕರದಲ್ಲಿ ಕರವಿಟ್ಟು ಬರುವೋನು ನಿಜವೆಂದು
ಸ್ಥಿರವಾದ ಭಾಷೆ ಕೊಡೊ ನೀನು ೪೯

ಮಾತಾಪಿತರ ಸೆರೆ ಬಿಡಿಸಿ ಮಾವನ ಕೊಂದು
ಆತುರದಿಂದೋಡಿ ಬರುವೆನು ೫೦

ವಿರಹತಾಪವ ಬಿಡಿಸಿ ಆಲಿಂಗನೆ ಕೊಟ್ಟು
ಸರ್ವರ ಸಂತೋಷಬಡಿಸಿದ ೫೧

ಸರಸರ ರಥವೇರಿ ನಡೆಸಿ ಯಮುನೆ ದಾಟಿ
ದಡವೇರಿ ನಡೆದನಾಕ್ಷಣದಲ್ಲಿ ೫೨

ಕೃಷ್ಣನ ರಥದ ಧೂಳಿಗಳ ನೋಡುತ ಅಲ್ಲೆ
ಚಿತ್ತ ಚಂಚಲವಾಗಿ ನಿಂತರು ೫೩

ಪುಂಡರೀಕಾಕ್ಷನ ಬಂಡ್ಯೋಡಿದ ಮಣ್ಣಲ್ಲಿ
ದಿಂಡುರುಳಿಕೆ ಉರುಳುತಲಾಗ ೫೪

ಮನಸಿಜನಾಥನ್ನ ಮನದಲ್ಲಿ ನೆನೆಸುತ
ಘನಕ್ಲೇಶದಿಂದ ನಡೆದರಾಗ ೫೫

ಇಂಥ ಭಕ್ತರ ಬಿಟ್ಟು ಬಂದೆನೋ ನಾನಪರಂತ-
ರಂಗದಲಿರಬೇಕೆಂದ ೫೬

ನದಿಯಲಕ್ರೂರಗೆ ನಿಜರೂಪ ತೋರಿದ
ಮಧುರಾಪಟ್ಟಣಕೆ ಬಂದೊದಗಿದ ೫೭

ಬಿಲ್ಲ ಮುರಿದು ರಜಕನ ಕೊಂದು ಶ್ರೀಗಂಧ
ಮಾಲೆ ಧರಿಸಿ ಮಲ್ಲರನು ಸೀಳಿ ೫೮

ಕುವಲಯ ಪೀಡಯೆಂಬಂಥ ಆನೆಯ ಕೊಂದು
ಪರಮಾತ್ಮ ರಂಗಸ್ಥಳಕೆ ಬಂದ ೫೯

ಗುರುಹಿರಿಯರು ನಾರದಮುನಿಗಳಿಗೆಲ್ಲ
ಪರಮಾತ್ಮನಂತೆ ತೋರಿದ ಸ್ವಾಮಿ ೬೦

ಮನ್ಮಥನಂತೆ ಮೋಹಿಸುವ ರೂಪವು ಚಿಕ್ಕ
ಹೆಣ್ಣುಮಕ್ಕಳಿಗೆ ತೋರಿದ ಸ್ವಾಮಿ ೬೧

ತಂದೆ ತಾಯಿಗೆ ಮುದ್ದು ಕೂಸಾಗಿ ತೋರಿದ
ಕಂಗಳಿಗ್ಹರುಷಬಡಿಸಿದನು ೬೨

ಕಾಲನೇಮಿ [1]+ಕಂಸ[ರಿ]ಗೆ ಬಂದು ಒದಗಿದ
ಕಾಲಮೃತ್ಯಾಗಿ ತೋರಿದ ಕೃಷ್ಣ ೬೩

ದೃಷ್ಟಿಯಾದವ ಜನರಿಗೆ ಬಂದು ತಾ ಪರ-
ಮಿಷ್ಟದ ಸಖನಂತೆ ತೋರಿದ ೬೪

ಮಂಚಿಕೆಯಲ್ಲ್ಹರಿ ಮಾವನ್ನ ಮಡುಹಿದ
ಮುಂಚೆ ಮುತ್ಯಗೆ ಪಟ್ಟಗಟ್ಟಿದ ೬೫

ಬಂದಾಗ ತಂದೆ ತಾಯರ ಸೆರೆ ಬಿಡಿಸಿದ
ಅಂದೆ ಕೊಟ್ಟಾವರಿಗಾನಂದವ ೬೬

ವಸುದೇವ ದೇವಕ್ಕಿ ಕೂಡಿ ಭೀಮೇಶ-
ಕೃಷ್ಣನ ಸುಖದಿಂದಿರುತಿದ್ದರು ೬೭

೮೭

*

ಪುಣ್ಯ ಪಡೆಯೆ ನೀನು ಪೂರ್ಣೇಂದುವದನೆ
ಪುಣ್ಯ ಪಡೆಯೆ ನೀನು ಪ.

ಕುಂದಣದಾರತಿ ಬೆಳಗಿ ಅಕ್ಷತೆನಿಟ್ಟು ಆ-
ನಂದವಾಗಾಶೀರ್ವಾದ ಮಾಡ್ಹರಸುತಲಿ ೧

---

1 +ಯು

* ಆಶೀರ್ವಾದದ ಹಾಡು.

ಅತಿ ಹರುಷದಿ ಗಂಡು ಸುತರನೆ ಪಡೆದು ನೀ
ಪೃಥ್ವಿನಾಳೆನುತ ದ್ರೌಪದಿ ಹರಸಿದಳು ೨

ಅಕ್ಕರದಿಂದ್ಹೆಣ್ಣುಮಕ್ಕಳ ಪಡೆದು ಪ-
ಲ್ಲಕ್ಕಿ ನೇರೆನುತ ದೇವಕ್ಕಿ ಹರಸಿದಳು ೩

ಕಟ್ಟಿದ್ದ ಮಾಂಗಲ್ಯ ಕರಿಯ ಕಾಜಿನ ಬಳೆ
ಮುತ್ತೈದೆತನಕೆ ಸಾವಿತ್ರಿ ಹರಸಿದಳು ೪

ಅನ್ನ ಗೋವ್ಗಳು ಕನ್ಯಾದಾನ ಮಾಡೆನುತ ಸಂ-
ಪನ್ನ್ಯಾಗಿರೆನುತ ಅರುಂಧತಿ ಹರಸಿದಳು ೫

ಆಯುಷ್ಯ ಆರೋಗ್ಯ ಶ್ರೀಯಶಸ್ಸು ಸೌಭಾಗ್ಯ
ನೀ ಪಡೆ ಸುಖ ಶ್ರೀಮಹಲಕ್ಷ್ಮಿ ಹರಸಿದಳು ೬

ಕಾಮಿತ ಫಲ ಇಷ್ಟದಾಯಕನಾದ ಶ್ರೀ
ಭೀಮೇಶಕೃಷ್ಣರಾಯನ ಕರುಣದಲಿ ೭

೮೮

*

ಪುರುಷರೈವರು ಕೂಡಿ ಹರುಷದಿ ಬರುತಿರೆ
ಸರಸದಿ ಕೃಷ್ಣೆ ಕದವಿಕ್ಕೆ
ಸರಸದಿ ಕೃಷ್ಣೆ ಕದವಿಕ್ಕೆ ೧

ನಾಗವೇಣಿಯೆ ನೀನು ಸಾಗಿ ಮುಂದಕ್ಕೆ ಬಂದು
ಬಾಗಿಲಿಕ್ಕಿದ ಬಗೆ ಪೇಳೆ
ಬಾಗಿಲಿಕ್ಕಿದ ಬಗೆ ಪೇಳೆ ೨

ದಾರು ಬಂದವರೆಂದು ಹೇಳದೆ ನಿಮ್ಮ ಹೆ-
ಸರ್ಹ್ಯಾಗೆ ತೆಗೆಯಲಿ ಕದವನು
ಹ್ಯಾಗೆ ತೆಗೆಯಲಿ ಕದವನು ೩

* ಪಾಂಡವರ ಬಾಗಿಲು ಕಟ್ಟಿದ ಹಾಡು.

ಹರದಿ ದ್ರೌಪದಿ ಕೇಳೆ ದೊರೆಯು ಧರ್ಮರು ನಾವು
ತ್ವರಿತದಿ ಬಂದೆವು ತೆಗೆ ನೀನು
ತ್ವರಿತದಿ ಬಂದೆವು ತೆಗೆ ನೀನು ೪

ದೊರೆಗಳಾದರೆ ರಾಜ್ಯ ಪರರಿಗೆ ಕೊಟ್ಟು ಕಾ-
ನಡವಿ ಯಾತಕೆ ತಿರುಗೀರಿ
ಅಡವಿ ಯಾತಕೆ ತಿರುಗೀರಿ ೫

ಪಟ್ಟದರಸನ ಕೂಡ ಇಷ್ಟುಮಾತುಗಳ್ಯಾಕೆ
ಶ್ರೇಷ್ಠ ಭೀಮನು ನಾ ಬಂದೀನೆ
ಶ್ರೇಷ್ಠ ಭೀಮನು ನಾ ಬಂದೀನೆ ೬

ಶ್ರೇಷ್ಠನಾದರೆ ಕೈಯೊಳ್ಸಟ್ಟು ಹಿಡಿದು ರಾಜ-
ಗಟ್ಟ ಅಡಿಗೆ ಉಣಿಸ್ಹೋಗೋ ರಾಜ-
ಗಟ್ಟ ಅಡಿಗೆ ಉಣಿಸ್ಹೋಗೊ ೭

ಪುಂಡಕೌರವರಿಗೆ ಗಂಡನೆನಿಸುವಂಥ
ಗಾಂಡೀವರ್ಜುನ ನಾ ಬಂದೀನೆ
ಗಾಂಡೀವರ್ಜುನ ನಾ ಬಂದೀನೆ ೮

ದುಂಡು ಹರಡಿಸಿಟ್ಟು ಗೊಂಡ್ಯಪ್ಪೈರನ್ನಾ ಕಿ-
ಕೊಂಡು ವಿದ್ಯವ ಕಲಿಸ್ಹೋಗೊ ಹಾಕಿ-
ಕೊಂಡು ವಿದ್ಯವ ಕಲಿಸ್ಹೋಗೊ ೯

ಸಕಲವಿದ್ಯೆಗಳಲ್ಲಿ ಕುಶಲ ಸಂಪನ್ನನಾದ
ನಕುಲರಾಯನು ನಾ ಬಂದೀನೆ
ನಕುಲರಾಯನು ನಾ ಬಂದೀನೆ ೧೦

ಸಕಲವಿದ್ಯೆಗಳಲ್ಲಿ ಕುಶಲನಾದರೆ ತೇಜಿ
ಕೆಲಸ ರಾಯರಿಗೆ ತಿಳಿಸ್ಹೋಗೊ
ಕೆಲಸ ರಾಯರಿಗೆ ತಿಳಿಸ್ಹೋಗೊ ೧೧

ಪಾವಕತನುಜೆ ಮಹಾದೇವಹಾರದವೇಣಿ ಸ[ಹ]
ದೇವರಾಯನು ನಾ ಬಂದೀನೀಗ ಸ[ಹ]-
ದೇವರಾಯನು ನಾ ಬಂದೀನೀಗ ೧೨

ಗೋವ ಕಾಯುತಲಿ ಗೋಪಾಲಕನಾಗಿ
ಕೊಳಲೂದಿ ಗೊಲ್ಲರೊಳಾಡಹೋಗೊ
ಕೊಳಲೂದಿ ಗೊಲ್ಲರೊಳಾಡಹೋಗೊ ೧೩

ಮಾತುಳಾಂತಕನಲ್ಲಿ ಮಾತು ಕಲಿತು ಬಂದಿ[ಲ್ಲಿ]
ಸೋತೆವೆ ನಿನಗೆ ಸುಂದರಾಂಗಿ
ಸೋತೆವೆ ನಿನಗೆ ಸುಂದರಾಂಗಿ ೧೪

ಸೋತರೇನಾಯಿತು ದ್ಯೂತಪಗಡೆ ಬಿಟ್ಟು ಅ-
ಜ್ಞಾತವಾಸವನೆ ಚರಿಸ್ಹೋಗೊ ಅ-
ಜ್ಞಾತವಾಸವನೆ ಚರಿಸ್ಹೋಗೊ ೧೫

ತಿರುಗಿ ತಿರುಗಿ ಭಾಳ ಬಳಲಿಬಂದೆವೆ ನಾವು
ಕರುಣವಿಲ್ಲವೆ ಕಮಲಾಕ್ಷಿ
ಕರುಣವಿಲ್ಲವೆ ಕಮಲಾಕ್ಷಿ ೧೬

ಭಾಳ ಬಳಲಿದೆನೆಂದು ಹೇಳಿಕೊಂಡರು ಕರು-
ಣಾಳು ನಾನಲ್ಲ ಕರೆಯಲು ಕರು-
ಣಾಳು ನಾನಲ್ಲ ಕರೆಯಲು ೧೭

ಕಾಮನಯ್ಯನ ಕರುಣಕ್ಕೆ ಪಾತ್ರರೆ ನಾವು
ಸಾಮಜಗಮನೆ ಸರಸ್ಯಾಕೆ
ಸಾಮಜಗಮನೆ ಸರಸ್ಯಾಕೆ ೧೮

ಹೇಮಮಾಣಿಕ್ಯದ ಕಪ್ಪ ತೆಗೆದು ಪತಿಗಳಿಗೆ
ಪ್ರೇಮದಿಂದೆರಗಿ ಕರೆದಳು
ಪ್ರೇಮದಿಂದೆರಗಿ ಕರೆದಳು ೧೯

ಆದರದಿಂದ ಕರೆಯಲರ್ಜುನ ಭೀಮ ಧರ್ಮ
ಸಾದೇವ ನಕುಲ ಸಹಿತಾಗಿ
ಸಾದೇವ ನಕುಲ ಸಹಿತಾಗಿ ೨೦

ಪಂಚಪಾಂಡವರು ಬಂದು ಪರಮ ಸಂಭ್ರಮದಿಂದ
ಮಂಚದ ಮ್ಯಾಲೆ ಕುಳಿತಾರೊ
ಮಂಚದ ಮ್ಯಾಲೆ ಕುಳಿತಾರೊ ೨೧

ಥಳಕು ಬೆಳಕಿನಿಂದ ಝಳಕು ಮಿಂಚುಗಳಂತೆ
ಬಳುಕುತ ಬಾಳೆಸುಳಿಯಂತೆ
ಬಳುಕುತ ಬಾಳೆಸುಳಿಯಂತೆ ೨೨

ಗಂಡರೈವರ ಮುಂದೆ ಗರುವಿಲೆ ನಿಂತಳು
ದುಂಡುಮಲ್ಲಿಗೆಶಿರ ಬಾಗಿ
ದುಂಡುಮಲ್ಲಿಗೆಶಿರ ಬಾಗಿ ೨೩

ಕರಕಮಲವ ಪಿಡಿದು ಕರೆದು ಸಾಮೀಪ ಕೃಷ್ಣೆ–
ತುರುವಿಗ್ಹೂಮಾಲೆ ಮುಡಿಸಿದ ಕೃಷ್ಣೆ–
ತುರುವಿಗ್ಹೂಮಾಲೆ ಮುಡಿಸಿದ ೨೪

ಮುಖಜನರೊಪ್ಪಿಸುತ ಸಕಲರಾಯರು ಭಾಳ
ಸುಖದಿ ಮುದ್ದಿಸಿದ ಮಡದಿಯ
ಸುಖದಿ ಮುದ್ದಿಸಿದ ಮಡದಿಯ ೨೫

ಅರ್ಜುನಾಗಲೆ ಮೋಹದಿಂದ ಮುಂಗುರುಳು ತಿದ್ದಿ
ವಜ್ರದಾಭರಣನಿಡಿಸಿದ
ವಜ್ರದಾಭರಣನಿಡಿಸಿದ ೨೬

ಭೀಮ ನಗುತ ಬಿಗಿದಪ್ಪಿ ದ್ರೌಪದಿಯ ಧರ್ಮ–
ರಾಯನ ತೊಡೆಯಲ್ಲಿರಿಸಿದ ಧರ್ಮ–
ರಾಯನ ತೊಡೆಯಲ್ಲಿರಿಸಿದ ೨೭

ಧರ್ಮ ಮುತ್ತಿನ ಹಾರ ಪದಕ ಕೊರಳಿಗೆ ಹಾಕಿ
ವರಮೋಹನಾಂಗಿ ಒಲಿಸಿದ
ವರಮೋಹನಾಂಗಿ ಒಲಿಸಿದ ೨೮

ಸಿಂಧುಸುತನ ಮುಖಬಿಂಬ ಸೋಲಿಸುವಂಥ
ಚಂದ್ರವದನೆ ಮುನಿಸ್ಯಾಕೆ
ಚಂದ್ರವದನೆ ಮುನಿಸ್ಯಾಕೆ ೨೯

ಮಾತಿನರಗಿಳಿಯೆ ನೀ ಜ್ಯೋತಿ ಮುತ್ತಿನ ಗೊಂಬೆ
ಪ್ರೀತಿಪತಿಗಳ ನೀ ನೋಡೆ
ಪ್ರೀತಿಪತಿಗಳ ನೀ ನೋಡೆ ೩೦

ಪ್ರಾಣಪದಕವೆಂದು ತಿಳದಿದ್ದೈವರು ನಿನ್ನ
ಕಾಣದಿರಲಾರೆ[ವೆ]ಕ್ಷಣವೀಗ
ಕಾಣದಿರಲಾರೆ[ವೆ]ಕ್ಷಣವೀಗ ೩೧

ಕಾಂತರಾಡಿದ ಮಾತು ಕೇಳಿ ದ್ರೌಪದಿ ಭಾಳ
ಸಂತೋಷದಿಂದ ನುಡಿದಳು
ಸಂತೋಷದಿಂದ ನುಡಿದಳು ೩೨

ಲಕ್ಷ್ಯವಿಲ್ಲದೆ ನಿಮಗೆ ನುಡಿದೆ ಎನ್ನಪರಾಧ
ರಕ್ಷಿಸಬೇಕೆಂದೆನ್ನುತಲಿ
ರಕ್ಷಿಸಬೇಕೆಂದೆನ್ನುತಲಿ ೩೩

ಎಸೆವೊ ಪರಿಮಳ ಗಂಧ ಕುಸುಮಮಾಲಿಗಳಿಟ್ಟಕಿ
ವಸುಧೆಪಾಲಕರ ಕೊರಳಿಗೆ
ವಸುಧೆಪಾಲಕರ ಕೊರಳಿಗೆ ೩೪

ನೇಸಮುಖಿಯು ನಾಚಿ ನಲಿಯುತ ಒಲಿಯುತ
ಎಲೆ ಅಡಿಕೆ ಮಡಿಚುತ
ಎಲೆ ಅಡಿಕೆ ಮಡಿಚುತ ೩೫

ಕೋಮಲಾಂಗನೆ ಕುಶಲದಿಂದ ಧರ್ಮಜರ ಮುಖ
ನೋಡಿ ನಗುತ ಸುಖದಿಂದ
ನೋಡಿ ನಗುತ ಸುಖದಿಂದ ೩೬

ಸತ್ಯಪಾಂಡವರು ಕುಳಿತರರ್ಥಿಯಿಂದ ಭೀಮೇಶ-
ಕೃಷ್ಣನ ತಂಗಿ ಸಹಿತಾಗಿ
ಕೃಷ್ಣನ ತಂಗಿ ಸಹಿತಾಗಿ ೩೭

೮೯

*

ಪ್ರಾಣೇಶ ವಾಣೇಶ ತಾ ಮಣಿ ಪ್ರಕಾಶ
ವೀಣಾಪಾಣಿಯು ಪ್ರಿಯ ಜಾಣನಾರದರೀಶ
ಕಾಣಿಸದಂತಿರುವ ಸರ್ವರಲ್ಲಾವಾಸ

* ಪ್ರಾಣದೇವರಮೇಲಿನ ಮಂತ್ರ.

ಕ್ಷೀಣವಾಗೋದು ನಿನ್ನ ನಂಬಿದವರ ದೋಷ
ಕ್ಷೋಣೀಪತಿಯು ಪಾದಪದ್ಮಕ್ಕೆ ನಿಜದಾಸ ಎ-
ನ್ನಾಣೆ ನಿನ್ನಾಣೆ ಭೀಮೇಶಕೃಷ್ಣ[ನ]ಪಾದ-
ರೇಣು ತೋರಿಸು ತೋರದಿರಲಾಗದು

## ೯೦

*

ಬಂದು ಮಥುರೆಗೆ ತಾ ಕೊಂದು ಮಾತುಳನ
ಬಂಧನ ರಹಿತವಾಗಲು ಮಾತಾಪಿತರು ೧

ಜರೆಯಸುತನ ಬಾಧೆಯು ಘನವಾಗುತಿರಲು
ಜಲದೊಳು ದ್ವಾರಕಾಪುರವ ನಿರ್ಮಿಸಿದ ೨

ಯದುನಂದನ ತನ್ನಗ್ರಜ ಬಲರಾಮನ ಕೂಡ
ಮುದದಿಂದಾವಾಸ ಯಾದವರ ಸಹಿತಾಗಿ ೩

ಇರುತಿರೆ ರುಕುಮ ತನ್ನನುಜೆ ಸಹಿತಾಗಿ
ಚೆಲುವ ಸುಂದರಿಗೆ ಜ್ಯಾಗ್ವಿವಾಹದುತ್ಸವವು ೪

ಅಕ್ಕರದನುಜೆ ರುಕ್ಮಿಣೀದೇವಿಗಿನ್ನು
ಚಿಕ್ಕ ಚೆನ್ನಿಗನಾದ ತಕ್ಕ ವರನ್ಯಾರು ೫

ವಸುಧೆಪಾಲರ ಮಧ್ಯ ಶಿಶುಪಾನೀಲಗಧಿಕ
ಕುಸುಮಗಂಧಿನಿಗೆ ನಿಶ್ಚಯವ ಮಾಡಿದರು ೬

ಅಗ್ರಜನ್ವಾಕ್ಯವ ಕೇಳಿ ಮನದಲ್ಯೋಚಿಸುತ
ಘನಮಹಿಮಗೆ ಓಲೆ ಬರೆದಳು ಲಿಖಿತ ೭

ಹರಿ ನೀನೆ ಮುನ್ನೈರಿ ಸರುವಾಂತರಯಾಮಿ ನಿನ್ನ
ಸ್ಮರಣೆ ದರುಶನ ಮಾತ್ರಕೆ ಪರಮಲಾಭೆನಗೆ ೮

ಎಂದೆಂದಿಗೆನಕೂಡಾನಂದವ ಬಟ್ಟು
ಇಂದೆ ಕೈಬಿಟ್ಟು ದೂರಿಂದ ನೋಡುವರೆ ೯

---

* ರುಕ್ಮಿಣೀ ಸ್ವಯಂವರ.

ಪ್ರಾಣಪತಿ ನೀ ಪಾಣಿ ಗ್ರಾಣ(ಗ್ರಹಣ?)ಮಾಡದಲಿ ಇರೆ
ಪ್ರಾಣ ಉಳಿಯುದು ಕೇಳಿನ್ನಾಸೆ ಹುಸಿಯಲ್ಲ ೧೦

ಸರ್ವರ್ವಂದಿತ ನಿನ್ನ ಅರಮನೆದ್ವಾರ
ಕಾದಿರುವೋ ಭೃತ್ಯರಿಗೊಪ್ಪಿಸಿಕೊಡವೆ ಕರುಣಾಳು ೧೧

ದೇಶಕಾಲಕೆ ನಾ ನಿನ್ನ ಸಮುಳ್ವಾಸುದೇವ
ಗುಣಕಸಮುಳೆಂದು ಉದಾಸೀನ ಮಾಡಬ್ಯಾಡ ೧೨

ವಕ್ಷಸ್ಥಳದ ವಾಸಿಯು ತುಚ್ಛಮಾಡದಲೆ
ಲಕ್ಷೀಲೆ ಕರೆದೊಯ್ಯೊ ಪಕ್ಷಿವಾಹನನೆ ೧೩

ಎನ್ನ ಬಿನ್ನಪ ಕೇಳಿ ಮನ್ನಿಸೊ ಕೃಷ್ಣ
ಪನ್ನಂಗಶಯನ ನಿನ್ನ ಪಾದಕ್ಕೆರಗುವೆನು ೧೪

ಸುರರ್ವಂದಿತ ಪಾದ ಉರಗ ಮೆಟ್ಟಿದ ಪಾದ
ನಿನ್ನ ಧ್ವಜವಜ್ರಾಂಕುಶ ಪಾದಕ್ಕೆರಗಿ ನಮಿಸುವೆನು ೧೫

ಬರೆದ ಓಲೆಗೆ ಹಚ್ಚಿ ಅರೆದರಿಷಿಣವ
ಕರವ ಜೋಡಿಸಿ ಕೃಷ್ಣಗೆ ಕರೆದು ಬ್ರಾಹ್ಮಣನ ೧೬

ಜಗದೀಶಗೆ ಪತ್ರವ ಜಾಣೆ ತಾ ಬರೆದು
ದ್ವಿಜನ ಕೈಯಲಿ ಕೊಟ್ಟು ಕಳುಹೆ ದ್ವಾರಕೆಗೆ ೧೭

ವ್ಯಾಳ್ಯ ಮಿಾರುವುದೆಂದು ಎದ್ದಾಗ ರುಕುಮ
ಭೇರಿ ತಾಡನ ಮಾಡಿಸೆ ಘೋರೆಂದೊ ರಭಸ ೧೮

ಎರೆದು ಮುಡಿಯನ್ನಿಕ್ಕಿ ಜಡೆಯುಬಂಗಾರ
ಚೌರಿ ರಾಗಟೆ ಗೊಂಡ್ಯ ಧರೆಗೆ ಮುಟ್ಟುತಿರೆ ೧೯

ಅಚ್ಚ ಜರತಾರಿ ಹೊಳೆವಸ್ತ್ರಪತ್ರಿಕೆಯು
ಮ್ಯಾಲೊಪ್ಪುವೊ ಪಟ್ಟೆನೊಡ್ಯಾಣ ಸರಿಸಿಟ್ಟು ೨೦

ಕಂಕಣ ಚೂಡ್ಯ ಡಾಬ್ರ್ಯುರಡಿ ಕೈಕಟ್ಟು ವ್ಯಾ-
ಲ್ಯೊಂಕಿ ನಾಗಮುರಿಗೆಗೊಪ್ಪುವ ಕಂಚುಕ ತೊಟ್ಟು ೨೧

ಹರಳು ಮಾಣಿಕ್ಯದ್ವಾಲೆ ಬುಗುಡಿ ಬಾವುಲಿಯು
ಹೊಳೆವೊ ಮುತ್ತಿನ ಮೂಗುತಿ ಥಳಥಳಿಸುತಲಿ ೨೨

ಹಾರ ಪದಕದ ಪುಷ್ಪ ನೀಲಾದೇಕಾವಳಿಯು
ತೋರ ಮುತ್ತಿನ ದಂಡೆ ಲೋಲ್ಯಾಡುತಿರಲು ೨೩

ಕನ್ನಡ್ಯಂದದಿ ಗಲ್ಲ ಕಳೆಯ ಸುರಿಸುತಲಿ
ಸಣ್ಣ ಮುತ್ತಿನ ಗೊಂಚಲು ಸೆರಗಳಲೆಯುತಲಿ ೨೪

ಝಗಝಗಿಸುತ ಬಂದಳು ಜಗದ ಮೋಹಿನಿಯು
ಮುಗುಳು ನಗೆಯಿಂದ ಮೂಜಗವ ಮೋಹಿಸುತ ೨೫

ಗೆಜ್ಜೆ ಸರಪಳಿ ಅಂದಿಗೆ ಹೆಜ್ಜೆ ಸರಿಸಿಡುತ
ನಿರ್ಜರೇಶನ ಮಾರ್ಗದ ನಿರೀಕ್ಷಣದಿಂದ ೨೬

ಸುತ್ತ ಮುತ್ತೈದೇರು ಕತ್ತಿಕ್ಕೆ ಛಟೆರು
ತುತ್ತೂರಿ ವಾದ್ಯ ಭೇರಿ ತಮ್ಮಟೆ ಕಾಹಳೆ ೨೭

ನಡೆದು ರುಕ್ಮಿಣಿ ಹೊಕ್ಕಳು ಗುಡಿಯ ಮಹಾದ್ವಾರ
ಮೃಡನರಸಿಯ ಪೂಜಿಸೆ ದೃಢಭಕ್ತಿಯಲಾಗ ೨೮

ಹಿರಿಯ ಮುತ್ತೈದೇರಿಗೆ ಮರದ ಬಾಗಿನವ
ಅರಿದರಿಷಿಣ ಕುಂಕುಮ ಕರದಲ್ಲಿ ಗಂಧ ೨೯

ಕಡಲೆ ಕಬ್ಬು ಕಾಯಿ ಉಡಿಯ ತುಂಬುತಲಿ
ಕಡಲಶಯನನ ಮಾರ್ಗವ ಬಿಡದೆ ನೋಡುತಲಿ ೩೦

ಮಂಗಳಗೌರಿಯೆದುರಿಗೆ ಮುತ್ತೈದೇರು
ಅಂಗನೆ ಭೈಷ್ಮಿ ಪೀಠದಲಿ ಕುಳ್ಳಿರಿಸಿ ೩೧

ಮಂಗಳಾಂಗನು ನಿನ್ನ ಪತಿಯಾಗಲೆಂದು
ಮಂಗಳಸೂತ್ರ ಬಂಧನ ಮಾಡಲು ನಗುತ ೩೨

ಮಾರನಯ್ಯನ ಮೋರೆ ನೋಡಿದಾಕ್ಷಣದಿ ಮಹಾ-
ದ್ವಾರದಿ ಮುತ್ತು ಸೂರ್ಯಾಡೇನೀಕ್ಷಣದಿ ೩೩

ಹರಪ್ಪಲ್ಲಿಭೆ ತೋರೆ ಮುರಹರನ ಕರಿವರದನ ಭಯ-
ಹರನ ಶ್ರೀಧರನ ಕೂಡುವೆನೀ ದೇವರನು ೩೪

ಮಚ್ಛಲೋಚನೆ ಧ್ಯಾನ ಅಚ್ಚ್ಯುತನಲ್ಲೀ ಇಡೆ ಭಕ್ತ-
ವತ್ಸಲ ಬಂದನೆಂದೆಚ್ಚರಿಸಿದರು ೩೫

ಹತವಾದ ಪ್ರಾಣ ಬರಲತಿ ಹರುಷಪ್ಪ್ಯಾಗೋ
ರಥವ ಕಾಣುತ ರುಕ್ಮಿಣಿ ಕೃತಕೃತ್ಯಳಾಗ ೩೬

ಸೃಗಾಲದ ಮುಷ್ಯ ಒಂದು ಸಿಂಹ ಪೊಕ್ಕಂತೆ ಶ್ರೀನಾಥ
ರುಕ್ಮಿಣಿಯ ಸ್ವೀಕಾರ ಮಾಡಿದನು ೩೭

ರಥವು ಮುಂದಕೆ ಸಾಗೆ ಪಥವು ತೋರದಲೆ
ಅತಿ ಬಾಯ ಬಿಡುತ ಶ್ರೀಪತಿಯ ಬೆನ್ನ್ಹತ್ತಿ ೩೮

ಬಂದ ರುಕುಮನ ಗಡ್ಡ ಮಂಡಿ ಸವರುತಲಿ
ಬಂಧನ ರಥಕೆ ಮಾಡಿದ ನಂದಸುತನು ೩೯

ವಾರೆನೋಟದಿ ನೋಡಿ ಮೋರೆತಗ್ಗಿಸಿದ
ನಾರಿ ರುಕ್ಮಿಣಿಯ ಮುಖ ನೋಡಿ ಶ್ರೀಕೃಷ್ಣ ೪೦

ಕರುಣವಿರಲಿಕ್ಕೆ ನೀ ಬರೆದ್ಯಾತಕೆ ಓಲೆ
ತಿಳಿಯಲಿಲ್ಲಸೆ ಎಂದೀಪರಿ ಹಾಸ್ಯದಿ ನುಡಿದ ೪೧

ಒಡಹುಟ್ಟಿದವನಲ್ಲಿ ಕಡುಮೋಹವಿನ್ನೂ
ಹಿಡಿಯದೆನ್ನೊಳು ಕೋಪ ಬಿಡು ರುಕ್ಮಿಣಿ ಎಂದ ೪೨

ಪಂಕಜಾಕ್ಷಿಗೆ ಹೇಳಿ ಶಂಕಾರಿಷಣ(ಸಂಕರ್ಷಣ?)ನು
ಮುಂಚೆ ಬಿಡಿಸ್ಯವನ ಬಂದರು ದ್ವಾರಾವತಿಗೆ ೪೩

ಪರಮ ಸಂಭ್ರಮದಿಂದ ಹರಿಯು ರುಕ್ಮಿಣಿಗೆ
ಹರಸುತ್ಹಾಕಿದರು ಶಿರದಲಿ ಮಂತ್ರಾಕ್ಷತೆಯ ೪೪

ಕಟ್ಟಿ ಕರಿಮಣಿ ಮಂಗಳ ಸೂತ್ರ ಕೊರಳಲ್ಲಿ
ಹಚ್ಚಿದ[ಅ]ರಿಶಿಣ ಕುಂಕುಮ ಹರಿ ತಾನ್ಹರುಷದಲಿ ೪೫

ಸುರರು ಜಯಜಯವೆಂದು ಹರಿಯು ರುಕ್ಮಿಣಿಗೆ
ವಿವಾಹದುತ್ಸವಕಾಲಕೆ ಕರೆದಪ್ಹೂಮಳೆಯ ೪೬

ಪಟ್ಟವಲ್ಲಭೆ ಕೂಡಿ ಶ್ರೀಪ್ಸ ಭೀಮೇಶ-
ಕೃಷ್ಣ ದ್ವಾರಕೆಯಲ್ಲಾವಾಸ ಮಾಡಿದನು ೪೭

೯೧

*

ಬಂದೆನಿಲ್ಲಿಗೆ ಸಂದರುಶನಕ್ಕೆ ಬಂದೆನಿಲ್ಲಿಗೆನ್ನಮನದಿ
ಬಂದು ನಿಲ್ಲೆಂದು ನಿನ್ನವಂದಿಸ್ಸರವ ಬೇಡುವೆ ನಾ
ನಂದನ ಸುಂದರ ಕೃಷ್ಣ ಬಂದೆನಿಲ್ಲಿಗೆ [ಪ.]

ಪಾಲಶರಧಿ ಆಲದೆಲೆಯುಲ್ಯೋಗನಿದ್ರೆ ಮಾಡಿ ನಿನ್ನ
ನಾಭಿಕಮಲನಾಳದಿಂದ ಆಗ ಅಜನ ಪಡೆದ ಹರಿಯೆ ೧

ಸಾಗರವ ಬಿಟ್ಟು ನಾಗಶಯನ ಶೂರಸುತನಲ್ಲುದಿಸಿ
ಯೋಗಿಗಳ ಹೃದಯಕಮಲ ಆಲಯವ ಮಾಡಿದ್ದ ದೊರೆಯೆ ೨

ಕಂದನಾಗಿ ಬಂದು ಕಾಳಿಂದಿ ದಾಟಿ ನಂದಗೋಕುಲ
ವೃಂದಾವನದಿ ಗೋವುಕಾಯ್ದ ಇಂದಿರೇಶ ಅಜನಪಿತನೆ ೩

ಅಷ್ಟಮಠದ ಯತಿಗಳಿಂದ ಮುಟ್ಟಿಪೂಜೆಗೊಂಬುವಂಥ
ಶ್ರೀಪ್ಸರೊಳಗೆ ಶ್ರೇಷ್ಠ ನಿನ್ನುತ್ಕೃಷ್ಟಮಹಿಮೆ ನೋಡಲೀಗ ೪

ಕುಜನಜನರ ತುಳಿವೊ ಕಾಲಕಡಗ ಪೆಂಡೆ ಗೆಜ್ಜೆ ಸರಪಳಿ
ಧ್ವಜ ವಜ್ರಾಂಕುಶ ರೇಖೆಯುಳ್ಳ ಪದುಮಪಾದ ನೋಡಲೀಗ ೫

ಪೊಡ್ಡ ಮುತ್ತುವಜ್ರದ್ದುರಳಿನಡ್ಡಿಕೆ ಉಡಿದಾರ ಹೊಳೆಯೆ
ಒಡ್ಯಾಣವನೆಯಿಟ್ಟ ಜಂಘೆ ಜಾನುಯುಗವ ನೋಡಲೀಗ ೬

ಉದರದಲ್ಲೀರೇಳುಲೋಕ ಅಡಗಿಸಿದನಂತಶಯನ
ಪದುಮ ಪೊಕ್ಕಳಿಂದ ಬ್ರಹ್ಮನ ಪಡೆದ ಪರಮಾತ್ಮನ್ನ ನೋಡ ೭

ವಂಕಿ ಬಾಹುಪುರಿಗಳಿಂದ ಕಂಕಣ ಭೂಷಣಗಳೊಪ್ಪೆ
ಶಂಖ ಚಕ್ರ ಪಿಡಿದ ಅಕಳಂಕಮಹಿಮನ ಕರವ ನೋಡ ೮

ನೀಲವರಣ ನಿನ್ನ ಬೆರಳು ಸಾಲು ಮಾಣಿಕ್ಯ ಮುದ್ರಿಕಿಂದ್ಹೊಳೆಯೆ
ಲೀಲೆಯಿಂದ ಗಿರಿಯೆತ್ತಿದ ಗೋಪಾಲಕೃಷ್ಣ ನಿನ್ನ ನೋಡ ೯

* ಉಡುಪಿ ಶ್ರೀಕೃಷ್ಣದೇವರ ಮೇಲಿನ ಹಾಡು.

ಹಾರ ಪದಕ ವೈಜಯಂತಿ ತೋರ ಮುತ್ತಿನೆಳೆಗಳ್ಹೊಳೆವೋ
ಶ್ರೀದೇವೇರಿಗಾಶ್ರಯವಾಗಿದ್ದ ವಿಶಾಲ ವಕ್ಷಸ್ಥಳವ ನೋಡ ೧೦

ಪಚ್ಚೆಪದಕ ಪಾರಿಜಾತ ಅಚ್ಚಮಲ್ಲಿಗೆ ತುಳಸಿಮಾಲೆ ಶ್ರೀ-
ವತ್ಸ ಕೌಸ್ತುಭ ಶೃಂಗಾರ ಕೊರಳ ಸಿರಿಯುರಸು ನಿನ್ನ ನೋಡ ೧೧

ಮಧ್ವರಾಯರು ಕೈಯ ಬೀಸೆ ಎದ್ದು ಬಂದು ಹಡಗದಿಂದಿ-
ಲ್ಲಿದ್ದಾನುಡುಪಿಕ್ಷೇತ್ರದಿಯೆಂದು ಮುದ್ದುಕೃಷ್ಣನ
ಮುಖವ ನೋಡ ೧೨

ಕ್ರೂರಕಂಸನ[ಅ]ಪ್ಪಳಿಸಿ ದ್ವಾರಾವತಿಯಲ್ಲಿದ್ದ ಅಷ್ಟ ಭಾರ್ಯೇರಿಂದ್ವಿ-
ಹಾರ ಮಾಡಿದ್ವಾರಿಜಾಕ್ಷನ್ವದನ ನೋಡ ೧೩

ಚಂದ್ರನಂತೆ ಹೊಳೆವೊ ಮುಖದಿ ದುಂಡು ಮುತ್ತಿನ ಮೂಗುತಿನಿಟ್ಟು
ಕುಂದಣದ್ವಜ್ರ ಬಿಗಿದ ಕರ್ಣಕುಂಡಲವನ್ನು ನೋಡಲೀಗ ೧೪

ಕರ್ಪೂರ ಕೇಸರಿ ಗಂಧ ಕಸ್ತೂರಿಯು ನಾಮ ತಿಲಕ
ಒಪ್ಪೋವಜ್ರದರಳೆಲೆ ದೇವಕೀಸುತನ [ನೋಡ] ೧೫

ಬಾಲಭಾಸ್ಕರಕೋಟಿಲಾವಣ್ಯರೂಪನೆಲುವ ಕಾಂತಿ
ನಾಲುಮೀವಿಗೆ ಸೊಬಗು ಕಮಲದಳಾಯತಾಕ್ಷ ಹರಿಯು ನೋಡ ೧೬

ಕೆಂಪುಹರಳು ಝಗ ಝಗಿಸುವೊ ಪಂಚರತ್ನದ ಕಿರೀಟ
ಚಂಚಲಾಕ್ಷ ಹರಿಯು ಶಿರದಿ ಮುಂಚೆ ನೋಡಿ ಮುಗಿವೆ ಕೈಯ ೧೭

ಅಸುರದ್ವಂಚಿಸಮೃತ ಬೀರಿ ಪಶುಪಾಶನಗೆ ಮೋಹ ತೋರಿ
ಮೋಸದಿಂದ ಭಸ್ಮಾಸುರನ ನಾಶಮಾಡಿದ ನಾರಿ ನೋಡ ೧೮

ಲವಣಶರಧಿತೀರ ಮಧ್ವ ಸರೋವರದಲಿ ಶುದ್ಧಸ್ನಾನ
ಪರಮ ಮಂತ್ರ ಜಪಿಸೋ ನಿನ್ನ ಶರಣು ಸುಜನ ಜನರ ನೋಡ ೧೯

ಉತ್ತಮ ವೈಕುಂಠ ಬಿಟ್ಟೀ ಉಡುಪಿಯಲ್ಲಿ ವಾಸವಾಗಿ
ಭಕ್ತಜನರಭೀಷ್ಟಕೊಡುವೋ ನಿತ್ಯಮುಕ್ತ ನಿನ್ನ ನೋಡ ೨೦

ಶ್ರೀಶನೊಲಿಸಿದ್ದ ಸಮ ಭಾರತೀಶನಾದ ಮಧ್ವರಾಯರ
ದಾಸರ ದಾಸತ್ವಕೊಡು ಭೀಮೇಶಕೃಷ್ಣಂದಯದಿ ನೋಡ ೨೧

## ೯೨

ಬಾರೆ ದ್ರೌಪದಿ ಭಾಳ ಹರುಷದಿಂದ ಸುಂದರಿ
ರಾಜ ಧರ್ಮರಾಯರಿದ್ದ ಹಸೆಗೆ ಒಯ್ಯಾರಿ ಪ.

ಅರಸುಧರ್ಮಜ ಭೀಮ ಪಾರ್ಥ ನಕುಲ ಸಾದೇವ
ಸರಸವಾಗಿ ಕುಳಿತಾರೆ ಸಂತೋಷದಿಂದಲಿ ೧

ಹೇಮ ಮಾಣಿಕ್ಯ ಪುತ್ಥಳಿ ಚಂದ್ರಹಾರ ಪದಕವು
ಆಣಿ ಮುತ್ತಿನ ಸರಗಳು ಕಟ್ಟಾಣಿ ಹೊಳೆಯುತ ೨

ವಂಕಿ ನಾಗಮುರಿಗೆ ಸರಿಗೆ ಕಂಕಣ ಡ್ವಾರ್ಯವು
ಕುಂಕುಮ ಗಂಧ ಪರಿಮಳ ಅಲಂಕಾರವಾಗಿ ೩

ಹೆರಳುಬಂಗಾರ ಚೌರಿ ಚಂದ್ರ ಗೊಂಡ್ಯ ರಾಗಟಿಯು
ಅರಳು ಮಲ್ಲಿಗೆ ಪಾರಿಜಾತ ಮುಡಿಯಲ್ಲೊಳೆಯುತ ೪

ಗೆಜ್ಜೆ ಅಡ್ಡಿಕೆ ವಜ್ರದೋಲೆ ಬುಗುಡಿ ಬುಲಾಕು
ಮುದ್ದು ಮೋರೆಗೆ ಮುತ್ತು ಕೆಂಪಿನ ಮುಕುರ್ಯ ಜಾಣೆ ೫

ಜರದನಿರಿಗ್ವಜ್ಜರದ ಪಟ್ಟೆ ಥಳಕೆಂದ್ಹೊಳೆಯುತ
ಚರಣದುಂಗುರ ಪೈಜಣ ರುಳಿಯು ಘಲುಘಲಿಸ್ನುತ ೬

ಕೋಮಲಾಂಗಿ ಬಂದು ಭೀಮೇಶಕೃಷ್ಣನ ತಂಗಿ
ಭೀಮ ಧರ್ಮರ ಮುಂದೆ ಕುಳಿತಳು ಪಾರ್ಥನರ್ಧಾಂಗಿ ೭

## ೯೩

ಬಾರೊ ಬಾರೊ ಭಾಗ್ಯದ ಸಿರಿನಲ್ಲ
ಕೇಳುತಲಿನ ಸೊಲ್ಲ
ಬಾರೊ ಬಾರೆನುತಲಿ ಭಕ್ತವತ್ಸಲನೆ
ಬಾರಿ ಬಾರಿಗೆ ನಿನ್ನ ಬೇಡಿಕೊಂಬುವೆನು ಪ.

ಕಡಲೊಳು ಮುಣಿಗಜಗ್ವೇದವ ತರುವ
ಕ್ಷೀರಾಂಬುಧಿ ಕಡೆವ
ಕಡು ಕ್ರೋಡರೂಪದಿ ಬೇರನೆ ಕಡಿವ

ಅಸುರನ ಒಡಲೊಡೆವ
ಬಡವನಾಗ್ಯಜ್ಞಶಾಲೆಗೆ ನಡೆವ
ಕೊಡಲಿಯನೆ ಪಿಡಿವ
ಹೊಡೆಪ್ಪತ್ತುಶಿರ ಕಾಳಿ ಮಡುವ್ಹಾರಿ ತ್ರಿಪುರರ
ಮಡವೇರನ್ವೊಲಿಸ್ವಾಜಿ ಹಿಡಿದೇತೋರಿಸುವನೆ ೧

ಕಣ್ಣು ತೆರೆದೆವೆಯಿಕ್ಕದಲೆ ನೋಡಿ
ಬೆನ್ನಲಿ ಗಿರಿ ಹೂಡಿ
ಮಣ್ಣುಕೆದರುತಲವನ ದಾಡೆ
ಕರುಳ್ಹಾರವ ಮಾಡಿ
ಸಣ್ಣ ತ್ರಿಪಾದ ದಾನವ ಬೇಡಿ
ಮನ್ನಿಸಿ ತಪ ಮಾಡಿ ಅ-
ರಣ್ಯ ಚರಿಸಿ ದಧಿ ಬೆಣ್ಣೆಗಳನು ಕದ್ದು
ಹೆಣ್ಣುಗಳನೆ ಕೆಡಿಸ್ಹಯವನ್ನೇರಿ ಮೆರೆವನೆ ೨

ನಾರುತ್ತ ಮೈಯ ನೀರೊಳಗಿರುವ ಮಂ-
ದಾರವನ್ಹೊರುವ
ಕ್ವಾರೆ(ಕೋರೆ?)ಯಲಿ ಧರೆಯ ಮ್ಯಾಲಕೆ ತರುವ
ಕರಿ(ಕರೆಯೆ?) ಕಂಬದಿ ಬರುವ
ಘೋರ ತ್ರಿವಿಕ್ರಮನಾಗಿ ತೋರುವ
ತಾಯಿಯ ಶಿರ ತರಿವ
ನಾರ್ವಸ್ತ್ರಬಿಗಿಮಟ್ಟ ಭೀಮೇಶಕೃಷ್ಣನೆ
ನಾರೇರ ವ್ರತ ಭಂಗ ಮಾಡಿ ತುರುಗವೇರಿ ೩

೯೪

ಬಾರೊ ರಂಗ ಕೋಮಲಾಂಗ ದಾರಿಗೆ ತನ್ನಂಗಸಂಗ
ನೀಡಲ್ಹೋದ ಎನ್ನ ಕಂಗಳಿಂದ ನೋಡಪೆ ೧

ಉಂಗುರಗುರುಳ ಚೆಲ್ವೆ ಉದಯಭಾಸ್ಕರನಂತಿದ್ದ
ಜಾಂಬವಂತಿಯೇರ್ದ್ಹಂಬಲಿಸುತ್ಹೋದನೆ ಸಖಿಯೆ ೨

ರಂಗುತುಟಿ ರಜತದಾಭರಣ ಕುಂದಣದಂತಿರುವ್ರೋ ಕೋಮಲೆ
ಇಂದು ನಾ ಕರೆತಾವೇನಮ್ಮ ಸುಂದರಾಂಗನ ೩

ವೇಳ್ಯಮಾಡಿದೆನ್ನರಮಣ ಕಾಳಾದೇವಿ ಮನೆಯುಲವಳ
ತೋಳ ಪಿಡಿದು ಸೆಳೆಮಂಚದಲ್ಲಿ ಕುಳಿತಿಹನೆ ೪

ಏಳುಏಳೆಂದೆಬ್ಬಿಸುತಲಿ ಈರೇಳುಲೋಕವೊಡೆಯನ
ನಾಳೆ ನಾ ಕರೆತಾರೇನಮ್ಮ ನಾರದಪ್ರಿಯನ ೫

ಅಮ್ಮ ನಾ ಸ್ಮರಿಸಲ್ಲಾಳ್ಯಗೆ ಪನ್ನಂಗಶಯನ ನೀಲ
ರನ್ನಮಂಚದಲ್ಲಿ ಚಿತ್ತವನ್ನಾಡಹೋದ ೬

ಅನ್ನವನು ಬಿಟ್ಟು ಭಾಮೆ ತನ್ನ ಪ್ರಾಣ ತೊರೆವೋಳೆಂದು
ಮನ್ನಿಸಿ ಕರೆತಾರೇನಮ್ಮ ನಿನ್ನಾಳುವೋನ ೭

ಮುದ್ದು ಮುಖವನು ನೋಡುತಿದ್ದನಾಕೆ ಮಂದಿರದಲ್ಲಿ
ಮುದ್ದು ಮಾಡ್ವೊಲಿಸಿದ್ದಾಳೇನಾ ಭದ್ರಾ ಕೃಷ್ಣಗೆ ೮

ಸದ್ಯೋಜಾತನಯ್ಯನಯ್ಯ ಕದ್ರುಕುಮಾರನ ಶಯ್ಯ-
ನ್ನ್ಯುದ್ದೇರಿಸಿ ಕರೆತಾರೇನಮ್ಮ ಪದ್ಮನಾಭನ ೯

ಅತ್ಯಂತ ಪ್ರೀತಿ ಮೋಹದ ಮಿತ್ರವಂತೆ ಮಂದಿರದಲ್ಲಿ
ವತ್ತಿಯಿಟ್ಟಂತಾಯಿತಮ್ಮ ವಾಮಾಂಗಿ ಹರಿಯು ೧೦

ಸತ್ಯವಾಗಿ ಕೇಳೇ ಭಾಮೆ ಹೆತ್ತ ತಾಯಿ ತಂದೆಯರಾಣೆ
ಹಸ್ತ ಮುಗಿದು ಕರೆತಾರೇನರ್ಕಕೋಟಿತೇಜನ ೧೧

ಪಚ್ಚೆಪದಕ ರತ್ನದಾಭರಣ ಅಚ್ಚಮುತ್ತಿನಂತಿರುವೊಳ್ವ್ಯಾರಿ
ಮೆಚ್ಚು ಮಾಡೊಲಿಸಿದ್ದಾಳೇನೊ ಲಕ್ಷಣಾ ಹರಿಯ ೧೨

ರಕ್ಷಿಸ್ಬರಿ ರಕ್ಷಿಸೆಂದು ಇಕ್ಷು ಬಿಲ್ಲನಯ್ಯನ ಕರೆತಂದು
ಈ ಕ್ಷಣದಲ್ಲಿ ಕೂಡಿಸುವೆ ಇಂದಿರಾಪತಿಯ ೧೩

ಚೆಲ್ವೆರುಕ್ಮಿಣಿ ಮಂದಿರದಲ್ಲಿ ಮಲ್ಲಿಗೆ ಮಂಚದಲ್ಲೆಚ್ಚರಿ-
ಲ್ಲದ್ಹಾಗೆ ಕುಳಿತಿದ್ದ ಬರುವೋನಿಲ್ಲಿಗಿನ್ನ್ಯಾಳ್ಯೆಗೆ ೧೪

ಪಲ್ಲವಪಾದಗಳಿಂದ ನಿಲ್ಲದೆ ಭೀಮೇಶಕೃಷ್ಣ
ಇಲ್ಲಿಗೆ ಬಂದಿರುವ ನೋಡೆ ಫುಲ್ಲನಯ್ಯನು ೧೫

೯೫

*

ಬೇಡಿಕೊಂಬೆನೆ ವರವ ನಾ ನಿನ್ನ ಮಾಲಕ್ಷ್ಮಿ ತಾಯಿ
ಮಾಡಿ ದಯವನು ನೋಡೆ ನೀ ಎನ್ನ
ಪಾಡಿ ಕೊಂಡಾಡುವೆನು ಪಂಚಗಂಗಾ ತೀರದಲಿ
ಕರವೀರ ವಾಸಿಯೆ ಪ.

ಒದೆಯುತಿರಲು ಆ ಪಾದವ ಬಂದು ಪದುಮಾಕ್ಷ ಮುನಿಯು
ಮುದದಿ ಮನ್ನಿಸಿ ಕಳುಹುತಿರೆ ಕಂಡು
ಒದಗಿ ಬಂದ ಕೋಪದಿಂದ
ಯದುನಾಥನ ಎದೆಯಿಳಿದು ಬೇಗನೆ
ಕದನ ಮಾಡುತ ಕೊಲ್ಲಾಪುರವನು
ಸದನ ಮಾಡಿದೆ ಸುಂದರಾಂಗಿಯೆ ೧

ಬಿಟ್ಟು ನಿನ್ನ ವೈಕುಂಠವ ಹರಿಯು ಇಳಿದು ಅಂಜನಾ
ಬೆಟ್ಟದಲಿ ನಿಂತಿದ್ದನೆ ಬಂದು
ಪಟ್ಟದರಸಿಯು ನೀನು ಜನಕನ
ಪುತ್ರಿಯಾದ ಕಾಲದಲಿ
ಕೊಟ್ಟವಚನವ ನಡೆಸಿ ಪತಿಗೆ ನೀ
ಪತ್ನಿಮಾಡಿದೆ ಪದ್ಮಾವತಿಯ ೨

ರಮ್ಯವಾದ ರಜತ ಹೇಮಗಳು ಗುಡಿಗೋಪುರಗಳು
ನಿನ್ನ ಶಿರ ಶೃಂಗಾರಾಭರಣಗಳು ಅಮ್ಮ
ತ್ರಿಜಗದಂಬಾ ನಿನ್ನ
ಮುಖ ಒಮ್ಮೆ ನೋಡಲು ಧನ್ಯರಾಗೋರು
ಬ್ರಹ್ಮನಪಿತನರಸಿ ಎನಗೆ ನೀ
ರಮ್ಮೆಪತಿಪಾದಾಂಘ್ರಿ ತೋರಿಸೆ ೩

ಪಕ್ಷಿವಾಹನನ್ವಕ್ಷಸ್ಥಳದಲ್ಲಿ ಆವಾಸವಾಗಿ ಲಕ್ಷ್ಮಿ
ನೀ ಅಧ್ಯಕ್ಷಳಾಗಿದ್ದು
ಇಕ್ಷುಚಾಪನ ಜನನಿ ಕರವೀರ

---

* ಕೊಲ್ಲಾಪುರ ಲಕ್ಷ್ಮಿಯ ಮೇಲಿನ ಹಾಡು.

ಕ್ಷೇತ್ರದಲಿ ಪ್ರತ್ಯಕ್ಷಳಾಗಿ
ಮೋಕ್ಷಾಪೇಕ್ಷಿಗಳಾದ ಜನರಿಗೆ
ರಕ್ಷಿಸಿ ವರಗಳ ಕೊಡುವ ಮಾತೆಯೆ ೪

ನೇಮದಿಂದಲಿ ನಮಿಸುವೆನು ನಿನಗೆ ಮಾಲಕ್ಷ್ಮಿ ತಾಯಿ
ಪ್ರೇಮದಿಂದಲಿ ಪಾಲಿಸಿ ನೀನು
ಶ್ಯಾಮವರ್ಣನ ದಿವ್ಯ ಸಾಸಿರ
ನಾಮ ನಾಲಿಗೆಲಿರಲು ನಿಲಿಸಿ
ಭೂಮಿಗೊಡೆಯ ಭೀಮೇಶಕೃಷ್ಣನ
ಧಾಮದ ದಾರಿಗಳ ತೋರಿಸೆ ೫

೯೬

ಬೊಮ್ಮಗಟ್ಟಿಯಲ್ಲಿದ್ದ ನಮ್ಮ ಪ್ರಾಣೇಶನು ಹ-
ನುಮನೆಂಬುವ ಹರಿಭಜಕನೀತ ೧

ರಮ್ಮೆರಮಣನಾದ ರಾಮಸೇವಕನಂಘ್ರಿ
ಒಮ್ಮೆ ನೋಡಲು ದೋಷದೂರವಾಗ ೨

ನೋಡಿ ಎರಡು ಕರ ಜೋಡಿಸಿ ಮುಗಿದು ಕೊಂ-
ಡಾಡುತೀತ ನಗುವ ಮಹಿಮೆಯನು ೩

ಆಡಿದ್ವಚನ ಸತ್ಯಮಾಡುವ ಭಕುತರು
ಬೇಡಿದ್ವರಗಳ ಚೆಲ್ಲಾಡುವನು ೪

ಹರುಷದಿಂದಲಿ ತಾ ಕಿಂಪುರುಷಖಂಡದಿ ತಪಾ-
ಚರಿಸುತಿದ್ದನು ಮಹಾಪುರುಷನೀತ ೫

ಅರಸರಂತಕನಾದ ಪರಶುರಾಮನ ಗೆದ್ದ
ಆರಸನಂಘ್ರಿಗಳನು ಸ್ಮರಿಸಿಕೊಂಡು ೬

ಸುಗ್ರೀವನಲ್ಲಿ ಪರಮನುಗ್ರ[ಹ] ಮಾಡುತಲಿ ದ-
ಶಗ್ರೀವನಲ್ಲಿ ಬಂದನಾಗ್ರ[ಹ]ದಿಂದ ೭

ಶರಧಿ ಹಾರುತ ನಖ ಶಿರದಿಂದುದ್ದವ ಮಾಡಿ
ಉರಿವೀಲಂಕೆಗೆ ತಾನಂಕುರವನಿಟ್ಟ(?) ೮

ಮರನಕಿತ್ತಕ್ಷ ಕುಮಾರನ ಮುರಿದು ತಾರ
ಮರನ ಕರೆದು(?)ತಂದಮರನಾದನು ೯

ವರದಿ ಬೆಳೆದ ಕುಂಭಕರಣನ ಕೊಂದು ಕಟ್ಟಿ
ಸ್ಥಿರಪಟ್ಟವನು ವಿಭೀಷಣರಿಗಿಟ್ಟ ೧೦

ಮಾತೆಕೊಟ್ಟಂಥ ರತ್ನರಾಕಟಿಯನ್ನು ತಂದು
ಭೂತಳದೊಡೆಯಗಿಟ್ಟ ಪ್ರೀತಿಯಿಂದ ೧೧

ಜೊತೆ ಮುತ್ತಿನ ಹಾರ ಕೊಡಲು ಜಾನಕಿ ರಘು–
ನಾಥಗ್ವೊಲಿದು ಅಜಪದವಿನಿಟ್ಟ ೧೨

ಕೋತಿ ಸೈನ್ಯವ ಕೂಡಿ ಸೇತುಬಂಧನ ಮಾಡಿ
ಸೀತಾಚೋರನಪ್ರಾಣಘಾತಕನು ೧೩

ಅಂಜನಾತ್ಮಜ ದೊಡ್ಡ ಸಂಜೀವನವ ತಂದು
ಕೊಂದಕಪಿಗಳ ಪ್ರಾಣ ಪಡೆದನೀತ ೧೪

ಕಂಜಾಕ್ಷಿಯುಳ ಕರೆತಂದು ಕೂಡಿಸಿ ರಾಮ–
ಗಂಜದೆ ಎಡೆಯು ಕದ್ದೋಳ್ಹಿಂಜಲುಂಡ ೧೫

ರೋಮರೋಮಕೆ ಕೋಟಿ ಲಿಂಗ ಧರಿಸಿದ ಸು–
ಜ್ಞಾನಿಗಳೊಡೆಯ ಮುಖ್ಯಪ್ರಾಣದೇವ ೧೬

ರಾಮ ಲಕ್ಷ್ಮಣ ಸೀತಾದೇವೇರಿಂದ್ಹೊಡಗೂಡಿ
ಈ ಮಹಾಸ್ಥಳದಿ ನಿಂತ ಮಹಾತ್ಮನು ೧೭

ಭೀತಿ ಇಲ್ಲದಲೆ ಭೀಮೇಶ ಕೃಷ್ಣ[ನ] ನಿಜ
ದೂತನೆನಿಸಿದ ಪ್ರಖ್ಯಾತನೀತ ೧೮

೯೭

ಬೊಮ್ಮಗಟ್ಟಿರಾಯ ಪಾಲಿಸೊ ನಮ್ಮ ಸೀ ಮಾರಾಯ
ಧರ್ಮ ಕಾಮ್ಯಾರ್ಥ ಕೊಡುವೊ ಕರುಣಾಂಬುಧಿ ಪ.

ಸುಗ್ರೀವಗೆ ನೀ ಒಲಿದ್ವಾದಿಯನು
ನಿಗ್ರ[ಹ]ಮಾಡುತ ಪರಮಾಗ್ರ[ಹ]ದಲಿ

ಶೀಗ್ರ(ಶೀಘ್ರ?)ದಿಂದಲಿ ದಶಗ್ರೀವನ ಲಂಕ-
ದುರ್ಗದಲ್ಲಾಡಿದ್ಯಗ್ನಿಯ ಒಡಗೂಡಿ ೧

ರಾಮಪಾದಾಂಬುಜ ಸೇವಕ ಸೇತುವೆ
ಪ್ರೇಮದಿ ಕಟ್ಟಿ ನಿಂತನು ರಣದಿ
ನೇಮದಿಂದಲಿ ಸಂಜೀವನ ತಂದಾತ
ವಾಹನನಾದ ತ್ರಿಧಾಮದೊಡೆಯಗೆ ೨

ವಾತಾತ್ಮಜ ರಘುನಾಥಗೆ ನೀ ನಿಜ-
ದೂತನೆನಿಸಿ ಬಹು ಪ್ರೀತಿಯಲಿ
ಭೂತಳದೊಳು ಪ್ರಖ್ಯಾತಿಯ ಪಡೆದೆ ನಿ-
ರ್ಭೀತನಾದ ಭೀಮೇಶಕೃಷ್ಣನ ಪ್ರಿಯ ೩

೯೮

ಬ್ಯಾಗೆ ಬರುನೇನೆಂದು ಸಾಗಿ ಮಥುರೆಗೆ ಹೋದ
ಹ್ಯಾಗೆ ಮಾಡುವೊಣುದ್ಧವ
ಭಾಗವತಪ್ರಿಯಗಿಸ್ನು ಬಾಗಿ ನಮಿಸುತ ನಾವು
ಹೋಗಬ್ಯಾಡೆಂತೆಂದೆವೊ ಉದ್ಧವ ಪ.

ಗೋಕುಲವಾಸ ಬಿಟ್ಟ್ಯಾಕೆ ತೆರಳಿದ ಸ್ವಾಮಿ
ಈ ಕಾರ್ಯವನು ತಿಳುಹಿಸೊ
ಶ್ರೀಕರ ಕಮಲಾರ್ಚಿತ ಚರಣಧ್ವಜವಜ್ರ-
ರೇಖಪಾದವ ಚಲಿಸಿದ
ಪಾಕಶಾಸನಪ್ರಿಯನು ಪರಮ ನಿರ್ದಯ ಮಾಡಿ
ವ್ಯಾಕುಲರಾಗಿದ್ದೆವೊ ಉದ್ಧವ ೧

ಯಂತ್ರ ಮಾಯದಲಿ ಶ್ರೀಕಾಂತನೊಲಿಸುವುದಕ್ಕೆ
ಮಂತ್ರವನು ಮಾಡರಿಯೆವೊ
ಅಂತರಂಗದಲಿ ಅನಂತಗುಣಸ್ತುತಿಸಲೇ-
ಕಾಂತ ಭಕ್ತರಲ್ಲವೊ
ನಿಂತು ನಿತ್ಯಾನಂದಮೂರ್ತಿಯ ನೋಡದಲೆ
ಭ್ರಾಂತರಾಗಿ ಪೋದೆವಲ್ಲೊ ಉದ್ಧವ ೨

ಅತಿಕ್ರೂರನೆನಿಸುವಕ್ರೂರ ಬಂದು ನಮಗ-
ಹಿತಮಾಡಿ ಪೋದನಲ್ಲೊ

ಮತಿಹೀನರಾಗ್ಹರಿಯು ರಥವ ನಿಲಿಸವಲೆ ಮುಂ-
ದೆತನ(ಯತ್ನ?)ವರಿಯದೆ ನಿಂತೆವೊ
ಪೃಥಿವಿ ಒಳಗಿಂಥ ಗೋಪಿಕಾಸ್ತ್ರೀಯರೆಂದು ಭಾಳಪ-
ಕೀರ್ತಿಗೊಳಗಾದೆವೋ ಉದ್ಧವ ೩

ಸಕ್ಕರೆಯಂಥ ಸವಿಮಾತನಾಡುತ ನಮಗೆ
ದಕ್ಕಿದಕ್ಕದಲ್ಹೋದನೊ
ಮತ್ತೇನು ಪೇಳೋಣ ಮಂದಭಾಗ್ಯರು ಹರಿಯ
ದಕ್ಕಿಸಿಕೊಳ್ಳದ್ಹೋದೆವೊ
ಸಿಕ್ಕರೆ ಧನವು ಶತಸಾವಿರ ಕೊಪ್ಪರಿಗೆ ಅಷ್ಟ-
ಧಿಕ ಸುಖವಾದೀತೋ ಉದ್ಧವ ೪

ಮಡದಿಯರು ಕೇಳಿಗೆ ಮಧುರಾಪಟ್ಟಣದಂಥ
ಚದುರೆಯರು ನಾವಲ್ಲವೊ
ಮದನನಾಟಕೆ ಮದಗಜಗಮನೇರಿಗಿನ್ನು
ಮುದದಿ ಮರುಳಾಗಿಪ್ಪನೊ
ವಿಧಿ ಬರೆದನೇನೆಂದರೀ ನಮ್ಮ ಹಣೆಯಲ್ಲಿ
ಪದುಮಾಕ್ಷನಗಲುವಂತೆ ಉದ್ಧವ ೫

ಮಲ್ಲರನೆ ಮಡುಹಿದ್ದ ಮಾವನ್ಹೈರಿಯು ನಮ್ಮ
ಕೊಲ್ಲಿ ಪೋದಂತಾಯಿತೊ
ಸಲ್ಲ ನಡತೆಯು ಸೊಟ್ಟಕುಬ್ಜೆಗೆ ಕಡೆಯು ನಾ-
ವಲ್ಲನೆಂದವಗೆ ಪೇಳೊ
ನಿಲ್ಲಪ್ಹೋಗ್ಹಿಂದಕೆ ಸುಳ್ಳಲ್ಲೊಂದು ಜರಿಸದಲಿ
ಎಲ್ಲ ವಾರ್ತೆಗಳ ಹೇಳೊ ಉದ್ಧವ ೬

ಕಲ್ಲಾಗದೀವಿಧಿಯು ಕಾಮನಪಿತನಗಲಿ
ಸೊಲ್ಲು ಸೊಲ್ಲಿಗೆ ಬಳಲ್ದೆವೊ
ಮಲ್ಲಿಗ್ಹೂಣಗಿದ ದಾರದಂತೆ ಗೋಪ್ರಜಮೂಲಿ-
ಯಲ್ಲಿ ನಾವಿರಲಾರೆವೊ
ಎಲ್ಲಿ ಬಂದೊದಗಿತೀ ಬಿಲ್ಲುಬ್ಬಸಮಗೆ ಭೀ-
ಮೇಶಕೃಷ್ಣನ ತೋರಿಸೊ ಉದ್ಧವ ೭

೯೯

ಭಕ್ತವತ್ಸಲ ಭಯನಿವಾರಣ ಭಾಗವತರ ಪ್ರಿಯ
ನಿತ್ಯತೃಪ್ತನೆ ನೀರಜನಯನ
ಸತ್ಯಭಾಮೆಪತಿ ಸರಸಿಜವದನ ಪ.

ಮಂಗಳ ಚರಣದಿ ಗಂಗೆಯು ಪಡೆದ ಭು–
ಜಂಗನ ತುಳಿದ ಪದಾಂಬುಜಕೆ ನಮೊ ೧

ವಿನತೆಸುತನ ಹೆಗಲು ಘವಿಕಿಲಿಂದೇರಿಪ
ಕಣಕಾಲಂದಿಗೆಮಣಿಕಾಲಿಗೆ ನಮೊ ೨

ಉಟ್ಟ ಪೀತಾಂಬರ ಕಟ್ಟಿದ ಉಡಿದಾ–
ರಿಟ್ಟ ತ್ರಿಜಗ ಊರ್ಧ್ವೊಟ್ಟಿಗೆ ನಮೊ ೩

ನಾಲ್ಕುಮುಖದ ಅಜನಂದನರುದಿಸಿದ
ನಾರಾಯಣ ನಾಭಿಕಮಲಕ್ಕೆ ನಮೊ ೪

ಕರ್ಣಕುಂಡಲವು ಕಪೋಲದ್ಹೊಳೆಯುತ
ಸಣ್ಣ ನಾಮದರವಿಂದನೇತ್ರಕೆ ನಮೊ ೫

ಗಿರಿಯೆತ್ತಿದ ಕಿರುಬೆರಳ ಹೊನ್ನುಂಗುರ
ವರ ಶಂಖಚಕ್ರದ ಕರಕಮಲಕೆ ನಮೊ ೬

ನಾಸಿಕ ಚೆಲುವ ಪ್ರಕಾಶ ಕಿರೀಟ ಭೀ–
ಮೇಶಕೃಷ್ಣನ ಮುಖಪದ್ಮಕೆ ನಮೊ– ೭

೧೦೦

*

ಭಾಗೀರಥೀ ಜನಕಗೆ ಭಾಗವತಪ್ರಿಯಗೆ
ಆಗ ನೀರೆರೆದರವಿಂದಲೋಚನನಿಗೆ
ತೀಡಿ ಕಾಡಿಗೆ ಹಚ್ಚಿ ತಿದ್ದಿ ಕಸ್ತೂರಿಯಿಟ್ಟು
ಪಾಲಾಬ್ಧಿಶಯನಗೆ ಹಾಲನೆರೆದು ಗೋಪಿ ೧

* ಯಶೋದೆ ಶ್ರೀಕೃಷ್ಣನ್ನ ಆಡಿಸಿದ್ದು.

ಸಾಗರಶಯನನ ತೂಗಿ ತೊಟ್ಟಿಲೊಳಿಟ್ಟು
ನಾಗಮುರಿಗೆ ವಂಕಿ ನಂದಗೋಪನ ಸುತಗೆ
ಬೆರಳಿಗುಂಗುರ ಕೋಟಿಭಾಸ್ಕರತೇಜಗೆ
ಹೊಳೆವೊ ಬಿಂದಲಿ ಗುಂಡು ಭುಜಕೀರ್ತಿ ಭೂಷಣ ೨

ಮಲಕು ಮುತ್ತಿನ ಹಾರ ಪದಕ ಪಚ್ಚೆಯ ಕಾಂತಿ
ಯದುಕುಲೋತ್ತಮನೆದೆಯಲ್ಲಿ ಕೌಸ್ತುಭ ರತ್ನ
ಥಳಥಳಿಸುವ ಕರ್ಣದಲ್ಲಿ ಬಾವುಲಿ ಚೌಕುಳಿ
ಚಳತುಂಬು ಮುತ್ತಿನಬಟ್ಟು ಮುಂಗಲಿಗೆ ೩

ಹೊಸ ವಜ್ರದರಳೆಲೆ ಹುಲಿಯುಗುರು ತಾಯಿತ
ಕುಸುಮನಾಭಗೆ ಕಿರುಗೆಜ್ಜೆ ಕಾಲಲಂದಿಗೆ
ಮಿಸುಣಿ ಮಾಣಿಕ್ಯಮುಡಿದಾರದಡ್ಡಿಕೆ ಕಟ್ಟಿ
ಅಸುರರಂತಕನ ಅಲಂಕರಿಸುತ ಗೋಪಿ ೪

ಕಂಜನಯ್ಯನ ನೋಡೆ ಕಂಗಳಿನ್ನೆರಡಿಲ್ಲ
ಕೊಂಡಾಡಲೀ ಜಿಹ್ವೆ ಒಂದೆ ಸಾಲದೆನೆಂದು
ಅಂಗಿಟೊಪ್ಪಿಗೆ ಹಾಕ್ಯಾಲಿಂಗನೆ ಮಾಡುತ
ನಂದನ ಸತಿ ತಾನಂದಾನಂದಭರಿತಳಾಗಿ ೫

ತನ್ನ ಮಗನ ಮುದ್ದು ತಾ ನೋಡಿ ಸಾಲದೆ
ಹೊನ್ನ ಪುತ್ಥಳಿಯಂತೆ ಹೊಳೆವೊ ಕೂಸನು ಎತ್ತಿ
ನಿನ್ನ ಮಗನ ಆಟ ನೀ ನೋಡೆಂದೆನುತಲಿ
ತನ್ನ ಪತಿಯ ತೊಡೆಯಲ್ಲಿಟ್ಟು ನಲಿಯುತ ೬

ಹೊನ್ನ ಪುತ್ಥಳಿಗೊಂಜಿ ಹೊಸ ಚಿನ್ನದಗಿಳಿಯೆ
ಹೊನ್ನು ತಾ ಗುಬ್ಬಿ ತಾರಮ್ಮಯ್ಯ ಎನುತಲಿ
ಬಣ್ಣ ಬಣ್ಣದ ಆಟ ವರ್ಣಿಸುತಲಿ ನೀಲ-
ವರ್ಣನ ತನ್ನ ತೋಳಿಂದಪ್ಪಿ ನಲಿಯುತ ೭

ಸೃಷ್ಟಿಮಾಡುವರಿಲ್ಲೀ ಶಿವ ಬ್ರಹ್ಮರೊಡೆಯನ
ಸೃಷ್ಟಿಕರ್ತನಾದನನ್ಹುಟ್ಟಿಸಿದ ನಾಭಿಯಿಂದಿವನು
ಹೊಟ್ಟೆಲೀರೇಳು ಜಗವಿಟ್ಟು ಸಲಹುವ
ಎಷ್ಟು ಸರ್ವೋತ್ತಮ ಈಗಿಲ್ಲ್ಯವತರಿಸಿದ ೮

ಚತುರವದನಗೆ ವೇದ ತಂದಿಟ್ಟು ಸಾಗರ
ಮಥಿಸಿ ಮಂದರವನು ಪೊತ್ತು ಅಮೃತವ ಹೀರಿ
ಪೃಥಿವಿಯನು ತಂದ ಕೋರೆಯಲಂದ್ಹಿರಣ್ಯಾಕ್ಷನ
ಹತವ ಮಾಡಿದ ತಾ ಭೂಪತಿ ಎಂದೆನಿಸಿದಿವನು ೯

ಪರಮಭಕ್ತನು ಕರೆಯೆ ಬಿರುದು ಕಂಬದಿ ಬಂದು
ಕರುಳ ಬಗೆದ ಪುಟ್ಟ ತರಳ ರೂಪವ ನೋಡಿ
ಮರುಳಾಗಿ ಬಲಿ ಮೂರು ಚರಣ ದಾನವ ನೀಡೆ
ಬೆಳೆದು ಬ್ರಹ್ಮಾಂಡಕ್ಕೆ ಭುವನ ವ್ಯಾಪಿಸಿಕೊಂಡ ೧೦

ಕ್ಷತ್ರ ಸಂಹಾರಿ ತಾ ಎತ್ತಿ ಧನುವ ಸೀತಾ ಸೌ-
ಮಿತ್ರಿಸಹಿತ್ವನದಲ್ಲಿ ಇರುತಿರಲಾಗ
ಪತ್ನಿ ಬಯ್ಯಲು ಅಸುರನ್ಹತ್ತು ಶಿರಗಳ ತರಿವ ದುಷ್ಟ-
ರಂತಕನೆ ನಿರ್ದುಷ್ಟ ಸಜ್ಜನಪ್ರಿಯ ೧೧

ದೇವಾಧಿದೇವ ದೇವಕಿ ಜಠರದಿ ಬಂದು ಪಾಪೂ-
ಪೂತಣಿಯನ್ನು ಕೊಂದು ವಿಷಮೊಲೆನುಂಡು
ಕಾಲಲಿ ಶಕಟನ ಕೆಡವಿದ ಯದುವೀರ ತಾ-
ಗೋಪಾಲಕ ಗೋಪೀಸುತನೆಂದೆನಿಸಿಕೊಂಡ ೧೨

ವಿಪರೀತ ಮಾಯದಿ ತ್ರಿಪುರದ ಜನರಿಗೆ
ದುರ್ಮತವ ಬೋಧಿಸಿ ಅಸುರಾರಿ ಮೋಹಕ
ತೋರಿ ಚಪಲ ಚೆನ್ನಿಗ ಖಡ್ಗ ಪಿಡಿದು ತೇಜಿಯ-
ನೇರಿ ಕಪಟನಾಟಕ ಕಲಿಮರ್ದನ ಕರಿಗ್ವರಪಿತ್ತ ೧೩

ಜನ್ಮಕರ್ಮವು ಜರಾಮರಣಗಳಿವಗಿಲ್ಲ ಜಗದೋ-
ದ್ಧಾರಕ ಜಗದೀಶ ಈತನೆ ಎಂದು ವರಲಕ್ಷ್ಮೀಪತಿ
ಪರಬ್ರಹ್ಮನ ಪಾದಾಂಘ್ರಿಸ್ಮರಣೆ(ಣೆಯ?)ರೆ ಪರಮಾ-
ದರದಿ ಕರೆದೊಯ್ವ ತನ್ನ [ಬಳಿಯ]ಲ್ಲೆ ೧೪

ಏಸುಜನ್ಮದಫಲವಿನ್ನೆಷ್ಟು ಜನ್ಮದ ಸುಕೃತ
ಈ ಸಮಯದಿ ಫಲಿಸಿತೀತ ಇಲ್ಲುದಿಸಿರಲು
ದೋಷವರ್ಜಿತನೆ ಸಂತೋಷಭರಿತನಿವ ಭೀ-
ಮೇಶಕೃಷ್ಣ ಯಶೋದೆಕೂಸೆಂದೆನಿಸಿಕೊಂಡ ೧೫

## ೧೦೧

*

ಭೂಮ ಇಡುಬಾರೆ ದ್ರುಪದರಾಯನರಸಿ
ಭೀಮಧರ್ಮಾರ್ಜುನ ನಕುಲ ಸಾದೇವ
ದ್ರೌಪದಿ ಕುಳಿತ ಎಲೆಗೆ ಪ.

ಸಂಡಿಗೆ ಗುಳ್ಳೋರಿಗೆಯು ಬುಂದ್ಯ ಚಕ್ಕುಲಿ ಕರ್ಜಿಕಾಯಿ
ಚೆಂದದ ಕಾಲ್ಯಾಸ್ನ ಶಾವಿಗೆಫೇಣಿಗಳು ಎಣ್ಣೋರಿಗೆಯು ೧
ಹಪ್ಪಳ ಸಂಡಿಗೆಯು ಶಾವಿಗೆ ಬಟ್ಟಿವಿ ಮಾಲತಿಯು ಗೌಲಿ
ಬಟ್ಟಲೋಳ್ ತುಂಬಿಟ್ಟು ಪರವಿ ಪಾಯಸ ಘೃತ ಸಕ್ಕರೆಯು ೨
ಕುಂದಣದ್ವರಿವಾಣ ಹಿಡಿದು ಕುಸುಮಮಲ್ಲಿಗೆ ಮುಡಿದು ನಡೆದು
ಬಂದು ಭೀಮೇಶಕೃಷ್ಣನ ಸಖಿರ್ಯೊಂದಿ ಕುಳಿತರು ಕೃಷ್ಣೆ ಸಹಿತ ೩

## ೧೦೨

**

[ಶ್ರೀರಮಣನೆಲ್ಲಿಹ ಕರೆತಾರೆ ಸಖಿಯಳೆ ಪ.] †

ಮನು ಕಮಂಡಲ ಕೂಪದಲ್ಲಿ ಹಿಡಿದಂತೆ ಬೆಳೆದ ಅಪಾರ
ಶರಧಿ ಒಳಗೆ ಹರಿದಾಡುತಿರುವ ಕೇಳ್ ಸಖಿಯಳೆ
ಶರಧಿ ಒಳಗೆ ಹರಿದಾಡುತಲಿ ವೇದತಂದು
ತೋರಿದ್ಹೊಳೆವ ಮಚ್ಛನ್ನ ಬಲಗೊಂಬೆ ಕೇಳ್ ಸತಿಯಳೆ ೧

ಸೃಷ್ಟಿಗೆ ಅಧಿಕ ಸ್ತ್ರೀಯಳ ಸೈತ್ಯರು ಮೋಹಿಸಲು ಕಂಡು
ಹುಟ್ಟಿಸಿದ ಸುಧೆಯು ಸುರರಿಗೆರೆದ ಕೇಳ್ ಸಖಿಯಳೆ
ಹುಟ್ಟಿಸಿದ ಸುಧೆಯು ಸುರರಿಗೆರೆದು ಬೆಟ್ಟವನು ಬೆನ್ನ-
ಲಿಟ್ಟ ಕೂರ್ಮನ ಬಲಗೊಂಬೆ ಕೇಳ್ ಸತಿಯಳೆ ೨

ವಾಸುದೇವ ಕ್ರೋಢರೂಪಿಲಿಂದ ಹಿರಣ್ಯಾಕ್ಷನ
ನಾಶವ ಮಾಡಿ ಕೋರೆಯಿಂದ ಕೇಳ್ ಸಖಿಯಳೆ
ನಾಶವ ಮಾಡಿ ಕೋರೆಯಿಂದ ಧರಣೆ ತಂದು ಹರ್ವಿ(ರವಿ?)ದ
ಭೂಪತಿವರ್ಹ(ರಾಹ?)ನ್ನ ಬಲಗೊಂಬೆ ಕೇಳ್ ಸತಿಯಳೆ ೩

---

* ಭೂಮ ಇಟ್ಟಿದ್ದು.
** ಮುಯ್ಯದ ಹಾಡು ಬಲಗೊಂಡದ್ದು.
† ಮೂಲದಲ್ಲಿ ಇದು ಮೊದಲನೆಯ ನುಡಿಯ ಮೂರನೆಯ ಸಾಲು.

೯೯

ಭಕ್ತವತ್ಸಲ ಭವಾಸಿವಾರಣ ಭಾಗವತರ ಪ್ರಿಯ
ನಿತ್ಯತೃಪ್ತನೆ ನೀರಜನಯನ
ಸತ್ಯಭಾಮೆಪತಿ ಸರಸಿಜವದನ ಪ.

ಮಂಗಳ ಚರಣದಿ ಗಂಗೆಯ ಪಡೆದ ಭು-
ಜಂಗನ ತುಳಿದ ಪದಾಂಬುಜಕೆ ನಮೊ ೧

ವಿನತೆಸುತನ ಹೆಗಲು ಘಮಿಕಿಲಿಂದೇರಿಪ
ಕಣಕಾಲಂದಿಗೆಮಣಿಕಾಲಿಗೆ ನಮೊ ೨

ಉಟ್ಟ ಪೀತಾಂಬರ ಕಟ್ಟಿದ ಉಡಿದಾ-
ರಿಟ್ಟ ತ್ರಿಜಗ ಊರ್ಧ್ವೊಟ್ಟಿಗೆ ನಮೊ ೩

ನಾಲ್ಕುಮುಖದ ಅಜನಂದನರುದಿಸಿದ
ನಾರಾಯಣ ನಾಭಿಕಮಲಕ್ಕೆ ನಮೊ ೪

ಕರ್ಣಕುಂಡಲವು ಕಪೋಲದ್ಹೊಳೆಯುತ
ಸಣ್ಣ ನಾಮದರವಿಂದನೇತ್ರಕೆ ನಮೊ ೫

ಗಿರಿಯೆತ್ತಿದ ಕಿರುಬೆರಳ ಹೊನ್ನುಂಗುರ
ವರ ಶಂಖಚಕ್ರದ ಕರಕಮಲಕೆ ನಮೊ ೬

ನಾಸಿಕ ಚೆಲುವ ಪ್ರಕಾಶ ಕಿರೀಟ ಭೀ-
ಮೇಶಕೃಷ್ಣನ ಮುಖಪದ್ಮಕೆ ನಮೊ- ೭

೧೦೦

*

ಭಾಗೀರಥೀ ಜನಕಗೆ ಭಾಗವತಪ್ರಿಯಗೆ
ಆಗ ನೀರೆರೆದರವಿಂದಲೋಚನನಿಗೆ
ತೀಡಿ ಕಾಡಿಗೆ ಹಚ್ಚಿ ತಿದ್ದಿ ಕಸ್ತೂರಿಯಿಟ್ಟು
ಪಾಲಾಬ್ಧಿಶಯನಗೆ ಪಾಲನೆರೆದು ಗೋಪಿ ೧

* ಯಶೋದೆ ಶ್ರೀಕೃಷ್ಣನ್ನ ಆಡಿಸಿದ್ದು.

ಸಾಗರಶಯನನ ತೂಗಿ ತೊಟ್ಟಿಲೊಳಟ್ಟು
ನಾಗಮುರಿಗೆ ವಂಕಿ ನಂದಗೋಪನ ಸುತಗೆ
ಬೆರಳಿಗುಂಗುರ ಕೋಟಿಭಾಸ್ಕರತೇಜಗೆ
ಹೊಳೆವೊ ಬಿಂದಲಿ ಗುಂಡು ಭುಜಕೀರ್ತಿ ಭೂಷಣ ೨

ಮಲಕು ಮುತ್ತಿನ ಹಾರ ಪದಕ ಪಚ್ಚೆಯ ಕಾಂತಿ
ಯದುಕುಲೋತ್ತಮನೆದೆಯಲ್ಲಿ ಕೌಸ್ತುಭ ರತ್ನ
ಥಳಥಳಿಸುವ ಕರ್ಣದಲ್ಲಿ ಬಾವುಲಿ ಚೌಕುಳಿ
ಚಳತುಂಬು ಮುತ್ತಿನಬಟ್ಟು ಮುಂದಲೆಗೆ ೩

ಹೊಸ ವಜ್ರದೆಳಲೆ ಹುಲಿಯುಗುರು ತಾಯಿತ
ಕುಸುಮನಾಭಗೆ ಕಿರುಗೆಜ್ಜೆ ಕಾಲಲಂದಿಗೆ
ನಿಃಸಣಿ ಮಾಣಿಕ್ಯ ಸುಡಿಗಾರದಿಕ್ಕೆ ಕಟ್ಟಿ
ಅಸುರರಂತಕನ ಅಲಂಕರಿಸುತ ಗೋಪಿ ೪

ಕಂಜನಯ್ಯನ ನೋಡೆ ಕಂಗಳಿನ್ನೆರಡಿಲ್ಲ
ಕೊಂಡಾಡಲೀ ಜಿಹ್ವೆ ಒಂದೆ ಸಾಲದೆಸೆಂದು
ಅಂಗಿಟೊಪ್ಪಿಗೆ ಶಾಕ್ಯಾಲಿಂಗನೆ ಮಾಡುತ
ನಂದನ ಸತಿ ತಾನಂದಾನಂದಭರಿತಳಾಗಿ ೫

ತನ್ನ ಮಗನ ಮುದ್ದು ತಾ ನೋಡಿ ಸಾಲದೆ
ಹೊನ್ನ ಪುತ್ಥಳಿಯಂತೆ ಹೊಳೆವೊ ಕೂಸನು ಎತ್ತಿ
ನಿನ್ನ ಮಗನ ಆಟ ನೀ ನೋಡೆಂದೆನುತಲಿ
ತನ್ನ ಪತಿಯ ತೊಡೆಯಲ್ಲಿಟ್ಟು ನಲಿಯುತ ೬

ಹೊನ್ನ ಪುತ್ಥಳಿಗೊಂಬೆ ಹೊಸ ಚಿನ್ನದಗಳಿಯೆ
ಹೊನ್ನು ತಾ ಗುಬ್ಬಿ ತಾರಮ್ಮಯ್ಯ ಎನುತಲಿ
ಬಣ್ಣ ಬಣ್ಣದ ಆಟ ವರ್ಣಿಸುತಲಿ ನೀಲ–
ವರ್ಣನ ತನ್ನ ತೋಳಿಂದಪ್ಪಿ ನಲಿಯುತ ೭

ಸೃಷ್ಟಿಮಾಡುವರಿಲ್ಲೀ ಶಿವ ಬ್ರಹ್ಮರೊಡೆಯನ
ಸೃಷ್ಟಿಕರ್ತನಾದನನ್ಹುಟ್ಟಿಸಿದ ನಾಭಿಯಿಂದಿವನು
ಹೊಟ್ಟೆಲೀರೇಳು ಜಗವಿಟ್ಟು ಸಲಹುವ
ಎಷ್ಟು ಸರ್ವೋತ್ತಮ ಈಗಿಲ್ಲ್ಯವತರಿಸಿದ ೮

ಚತುರವದನಗೆ ವೇದ ತಂದಿಟ್ಟು ಸಾಗರ
ಮಥಿಸಿ ಮಂದರವನು ಪ್ರೊತ್ತು ಅಮೃತವ ಹೀರಿ
ಪೃಥಿವಿಯನು ತಂದ ಕೋರೆಯಲಂದ್ಹಿರಣ್ಯಾಕ್ಷನ
ಹತವ ಮಾಡಿದ ತಾ ಭೂಪತಿ ಎಂದೆನಿಸಿದವನು ೯

ಪರಮಭಕ್ತನು ಕರೆಯೆ ಬಿರುದು ಕಂಬದಿ ಬಂದು
ಕರುಳ ಬಗೆದ ಪುಟ್ಟ ತರಳ ರೂಪವ ನೋಡಿ
ಮರುಳಾಗಿ ಬಲಿ ಮೂರು ಚರಣ ದಾನವ ನೀಡೆ
ಬೆಳೆದು ಬ್ರಹ್ಮಾಂಡಕ್ಕೆ ಭುವನ ವ್ಯಾಪಿಸಿಕೊಂಡ ೧೦

ಕ್ಷತ್ರ ಸಂಹಾರಿ ತಾ ಎತ್ತಿ ಧನುವ ಸೀತಾ ಸೌ-
ಮಿತ್ರಿಸಹಿತ್ವನದಲ್ಲಿ ಇರುತಿರಲಾಗ
ಪತ್ನಿ ಒಯ್ಯಲು ಅಸುರನ್ಹತ್ತು ಶಿರಗಳ ತರಿದ ದುಷ್ಟ-
ರಂತಕನೆ ನಿರ್ದುಷ್ಟ ಸಜ್ಜನಪ್ರಿಯ ೧೧

ದೇವಾಧಿದೇವ ದೇವಕ್ಕಿ ಜಠರದಿ ಬಂದು ಮಾಯಾ-
ಪೂತಣಿಯನ್ನು ಕೊಂದು ವಿಷಮೊಲೆನುಂಡು
ಕಾಲಲಿ ಶಕಟನ ಕೆಡವಿದ ಯದುವೀರ ತಾ-
ಗೋಪಾಲಕ ಗೋಪೀಸುತನೆಂದೆನಿಸಿಕೊಂಡ ೧೨

ವಿಪರೀತ ಮಾಯದಿ ತ್ರಿಪುರದ ಜನರಿಗೆ
ದುರ್ಮತವ ಬೋಧಿಸಿ ಅಸುರಾರಿ ಮೋಹಕ
ತೋರಿ ಚಪಲ ಚೆನ್ನಿಗ ಖಡ್ಗ ಪಿಡಿದು ತೇಜಿಯ-
ನೇರಿ ಕಪಟನಾಟಕ ಕಲಿಮರ್ದನ ಕರಿಗ್ವರವಿತ್ತ ೧೩

ಜನ್ಮಕರ್ಮವು ಜರಾಮರಣಗಳಿವಗಿಲ್ಲ ಜಗದೋ-
ದ್ಧಾರಕ ಜಗದೀಶ ಈತನೆ ಎಂದು ವರಲಕ್ಷ್ಮೀಪತಿ
ಪರಬ್ರಹ್ಮನ ಪಾದಾಂಘ್ರಿಸ್ಮರಣೆ(ಣೆಯ?)ರೆ ಪರಮಾ-
ದರದಿ ಕರೆಮೊಯ್ವ ತನ್ನ [ಬಳಿಯ]ಲ್ಲಿ ೧೪

ಏಸುಜನ್ಮದಫಲವಿನ್ನೆಷ್ಟು ಜನ್ಮದ ಸುಕೃತ
ಈ ಸಮಯದಿ ಫಲಿಸಿತೀತ ಇಲ್ಲುದಿಸಿರಲು
ದೋಷವರ್ಜಿತನೆ ಸಂತೋಷಭರಿತನಿವ ಭೀ-
ಮೇಶಕೃಷ್ಣ ಯಶೋದೆಕೂಸೆಂದೆನಿಸಿಕೊಂಡ ೧೫

೧೦೧

*

ಭೂಮ ಇಡುಬಾರೆ ದ್ರುಪದರಾಯನರಸಿ
ಭೀಮಧರ್ಮಾರ್ಜುನ ನಕುಲ ಸಾದೇವ
ದ್ರೌಪದಿ ಕುಳಿತ ಎಲೆಗೆ ಪ.

ಮಂಡಿಗೆ ಗುಳ್ಳೋರಿಗೆಯು ಬುಂದ್ಯ ಚಕ್ಕುಲಿ ಕರ್ಜಿಕಾಯಿ
ಚೆಂದದ ಶಾಲ್ಯಾನ್ನ ಶಾವಿಗೆಫೇಣಿಗಳು ಎಣ್ಣೋರಿಗೆಯು ೧
ಹಪ್ಪಳ ಸಂಡಿಗೆಯು ಶಾವಿಗೆ ಬಟ್ಟವಿ ಪೂಲತಿಯು ಗೌಲಿ
ಬಟ್ಟಲೋಳ್ ತುಂಬಿಟ್ಟು ಪರಡಿ ಪಾಯಸ ಘೃತ ಸಕ್ಕರೆಯು ೨
ಕುಂದಣದ್ವರಿವಾಣ ಪಿಡಿದು ಕುಸುಮಮಲ್ಲಿಗೆ ಮುಡಿದು ನಡೆದು
ಬಂದು ಭೀಮೇಶಕೃಷ್ಣನ ಸಖರೊಂದಿ ಕುಳಿತರು ಕೃಷ್ಣೆ ಸಹಿತ ೩

೧೦೨

**

[ಶ್ರೀರಮಣನೆಲ್ಲಿಹ ಕರೆತಾರೆ ಸಖಿಯಳೆ ಪ.] ↑

ಮನು ಕಮಂಡಲ ಕೂಪದಲ್ಲಿ ಹಿಡಿಯುದಂತೆ ಬೆಳೆದು ಅವರ
ಶರಧಿ ಒಳಗೆ ಹರಿದಾಡುತಿರುವ ಕೇಳ್ ಸಖಿಯಳೆ
ಶರಧಿ ಒಳಗೆ ಹರಿದಾಡುತಲಿ ವೇದತಂದು
ತೋರಿದ್ಹೊಳೆವ ಮತ್ಸ್ಯನ್ನ ಬಲಗೊಂಬೆ ಕೇಳ್ ಸತಿಯಳೆ ೧

ಸೃಷ್ಟಿಗೆ ಅಧಿಕ ಶ್ರೀಯುಳ ಪೈತ್ಯರು ಪೋಷಿಸಲು ಕಂಡು
ಹುಟ್ಟಿಸಿದ ಸುಧೆಯ ಸುರರಿಗೆರೆದ ಕೇಳ್ ಸಖಿಯಳೆ
ಹುಟ್ಟಿಸಿದ ಸುಧೆಯ ಸುರರಿಗೆರೆದು ಬೆಟ್ಟವನು ಬೆನ್ನ-
ಲಿಟ್ಟ ಕೂರ್ಮನ ಬಲಗೊಂಬೆ ಕೇಳ್ ಸತಿಯಳೆ ೨

ವಾಸುದೇವ ಕ್ರೋಡರೂಪಿಲಿಂದ ಹಿರಣ್ಯಾಕ್ಷನ
ನಾಶವ ಮಾಡಿ ಕೋರೆಯಿಂದ ಕೇಳ್ ಸಖಿಯಳೆ
ನಾಶವ ಮಾಡಿ ಕೋರೆಯಿಂದ ಧರಣಿ ತಂದು ಹರ್ವಿ(ರವಿ?)ದ
ಭೂಪತಿವರ್ಹ(ರಾಹ?)ನ್ನ ಬಲಗೊಂಬೆ ಕೇಳ್ ಸತಿಯಳೆ ೩

---

* ಭೂಮ ಇಟ್ಟಿದ್ದು.
** ಮುಯ್ಯದ ಹಾಡು ಬಲಗೊಂಡದ್ದು.
↑ ಮೂಲದಲ್ಲಿ ಇದು ಮೊದಲನೆಯ ನುಡಿಯ ಮೂರನೆಯ ಸಾಲು.

# ೧೦೩

*

ಮರೆಯದೆ ಸಲಹೆನ್ನನು ಯಾದವಗಿರಿ–
ದೊರೆ ಮಂಗರಾಯ ನೀನು
ಸರ್ವಜೀವೋತ್ತಮನೆ ನಿನ್ನನು
ಮರೆಯ ಹೊಕ್ಕೆನು ಮಾರುತಾತ್ಮಜ
ಕರೆದು ಭಕುತರಿಗ್ವರವ ನೀಡುವೊ
ಬಿರುದು ನಿನ್ನದೊ ಭಾರತೀಶ [ಪ.]

ಸೀತಾವಲ್ಲಭ ರಾಮರ ಪಾದಾಂಬುಜ–
ದೂತನೆಂದೆನಿಸಿದೆಯೊ
ಮಾತೆಗಿಟ್ಟ ಮುದ್ರಿಕೆಯನು
ಘಾತಕ ರಾವಣನ ಪುರಕೆ
ಕಾರ್ತೀಕದುತ್ಸವ ಮಾಡಿ ಮಂಗ–
ಳಾರ್ತಿ ಬೆಳಗಿದೆ ಬಾಲದಿಂದ ೧

ಬಕ ಹಿಡಿಂಬಕ ಕೀಚಕ ಕಿಮ್ಮೀರ ಮಾಗಧ
ಮುಖ್ಯ ಪ್ರಮುಖರನು
ಸಕಲ ಅನುಜರ ಸಹಿತ ದುರ್ಯೋಧನನ
ಪ್ರಾಣವ ಸೆಳೆದು ಬ್ಯಾಗನೆ
ನಕುಲ ಧರ್ಮಜನಾಸಾದೇವ ದ್ರೌಪದಿಗೆ
ಸುಖ ಸಂತೋಸ ನೀಡಿದೆ ೨

ಮಧ್ಯಗೇಹರಲ್ಲಿ ಜನಿಸಿ ಸುಜನರಿಗೆ
ಶುದ್ಧ ಶಾಸ್ತ್ರವ ಬೋಧಿಸಿ
ಗೆದ್ದು ಮಾಯಾವಾದಿಗಳ ವಾದಪ್ರ–
ಸಿದ್ಧನೆನಿಸಿದೆ ಮಧ್ವಮುನಿ
ಮುದ್ದು ಭೀಮೇಶಕೃಷ್ಣನ ಪ್ರ–
ಸಿದ್ಧಿ ಮಾಡಿದೆ ಪರಮ ಗುರುವೆ ೩

---

* ಆದವಾನಿ ಮಂಗರಾಯನ ಮೇಲಿನ ಹಾಡು.

## ೧೦೪

ಮಂಗಳವೆನ್ನಿ ಮಾಲಕ್ಷುಮಿಗೀಗ ಶ್ರೀ–
ರಂಗನರಸಿ ರಮಾದೇವಿಗೆ ಬ್ಯಾಗ ಪ.

ಸಿಂಧುನಂದನೆ ನಂದನಂದನನೆದೆಯಲ್ಲಿ
ಹೊಂದಿಕೊಂಡಿರುವಂಥ ಸುಂದರ ಸಿರಿಗೆ ೧

ವರಮಣಿ ವೈಜಯಂತಿ ಹರಿಯ ಶ್ರೀವತ್ಸದಲ್ಲಿ
ಸರಸವಾಗಿರುವಂಥ ವರಮಹಾಲಕ್ಷ್ಮಿಗೆ ೨

ಹೆರಳುಬಂಗಾರ ರಾಗಟೆ ಗೊಂಡ್ಯ ಕ್ಯಾದಿಗೆ
ಅರಳು ಮಲ್ಲಿಗೆಮೊಗ್ಗು ವರವ ಕೊಡೆನಗೆ ೩

ರಂಗನರಸಿ ಬೆಳ್ಳಿ ಬಂಗಾರವೆನಗಿತ್ತು
ಕಂಗಳಿಂದಲಿ ನೋಡಿ ಮಂಗಳ ನೀಡೆ ೪

ಆದಿನಾರಾಯಣನಾನಂತಗುಣ ಪರಿಪೂರ್ಣ–
ನಾದ ಭೀಮೇಶಕೃಷ್ಣನರಸಿ ಲಕ್ಷುಮಿಗೆ ೫

## ೧೦೫

ಮಂಗಳಾರತಿ ಮಾಡಿರೆ ಮುದ್ದು ಅಂಗನೆಯರು ಪಾಡಿರೆ
ಮಂಗಳಾರತಿ ಮಾಡಿ ಅಂಗನೆಯರು ಪಾಡಿ
ರಂಗರುಕ್ಮಿಣಿ ಸತ್ಯಭಾಮೆಗೆ ಬಂಗಾರದ ಪ.

ಮಂಟಪದೊಳು ಸತಿಯರೆಂಟುಮಂದಿಯು ಕೂಡಿ
ಒಂಟಿಮುತ್ತ್ಹೊಳೆವೊ ವೈಕುಂಠಪತಿಗೆ ಬ್ಯಾಗ ೧

ವಾರಿಜಾಕ್ಷಿಯರ್ಹದಿನಾರುಸಾವಿರ ಮಂದಿ
ಮಾರನಯ್ಯನ ಮುದ್ದು ಮಕ್ಕಳ ಸಹಿತಾಗಿ ೨

ಎಡಬಲ ತೊಡೆಯಲ್ಲಿ ಮಡದಿ ರುಕ್ಮಿಣಿ ಭಾಮೆ
ನಡುವೆ ಭೀಮೇಶಕೃಷ್ಣ ನಗುತ ಕುಳಿತನಾಗ ೩

## ೧೦೬

ಮಂಗಳಾರತಿಯ ಬೆಳಗೆ ಮಧುಸೂದನಗೆ ದಿವ್ಯ
ಮಂಗಳಾರತಿಯ ಬೆಳಗೆ ಪ.

ಮಚ್ಛನಾಗಿ ವೇದವ ತಂದಿಟ್ಟ ಮಂದರಕೃಷ್ಣ
ಮಚ್ಛನಾಗಿ ವೇದವ ತಂದಿಟ್ಟ
ಪೊತ್ತ ಬೆನ್ನಿನಿಂದಲಿ ಅಮೃತ ಬೀರಿದಂಥ ಹರಿಗೆ ೧

ಎತ್ತಿ ತಂದು ಧರಣಿ ಕೃಷ್ಣ ಸುತ್ತಿ ಒಯ್ದ ಸುರುಳಿಭೂಮಿ
ಸುತ್ತಿಒಯ್ದ ಸುರುಳಿ ಭೂಮಿ
ಹೊಟ್ಟೆ ಬಗೆದು ಕರುಳ ತನ್ನ ಕುತ್ತಿಗ್ಯಲ್ಲಿ ಧರಿಸಿದಾತಗೆ ೨

ಕೂಸಿನಂತೆ ಬಂದು ಬೆಳೆದಾಕಾಶವ್ಹಿಡಿಯುವೆ ಕೃಷ್ಣ
ಕೂಸಿನಂತೆ ಬಂದು ಬೆಳೆದ
ನಾಶಮಾಡಿ ಕ್ಷತ್ರಿಯರ ಪರಶುರಾಮನೆನಿಸಿದಾತಗೆ ೩

ಕುಂಭಕರ್ಣನಣ್ಣ[ನ] ಹತ್ತು ರುಂಡ ಹಾರಿಸಿ ಕೃಷ್ಣ
ಕುಂಭಕರ್ಣನಣ್ಣ[ನ]
ಚೆಂಡನಾಡುತಲಿ ಕಾಳಿಂಗನ್ಹೆಡೆಯ ತುಳಿದ ಹರಿಗೆ ೪

ಬಟ್ಟೆ ತೊರೆದು ಬೌದ್ಧನಾಗಿ ಹತ್ತಿ ಹಯುವನೇರಿ ಕೃಷ್ಣ
ಬಟ್ಟೆತೊರೆದು ಬೌದ್ಧನಾಗಿ
ದುಷ್ಟಕಲಿಯ [1][ಕೊಂದ][1] ಭೀಮೇಶ ಕೃಷ್ಣನಂಗ ಪೂಜಿಸುತಲಿ ೫

## ೧೦೭

ಮುತ್ತಿನಾರತಿಯೆತ್ತಿ ಬೆಳಗಿರೆ
ಕೃಷ್ಣ ಮೂರುತಿಗೆ ಜಯ ಜಯ ಪ.

ಬೆಟ್ಟವನು ಕಿರುಬೆಟ್ಟಲೆತ್ತಿದ
ದಿಟ್ಟರಂಗಗೆ
ಮಧುರೆಯೊಳ್ಪುಟ್ಟಿ ಮಾವನ ಮಲ್ಲರೊಳಾಡಿದ

1 ಕೊಲ್ಲಿದ

ದಿಟ್ಟರಂತಕಗೆ
ಕೃಷ್ಣ ಕೃಷ್ಣನೆಂದು ಕರೆಯೆ ದ್ರೌಪದಿದೇವಿ
ಅಕ್ಷಯವೆಂದಾನಂತ ಮೂರುತಿಗೆ ೧

ಮಡುವಿನೊಳ್ಹಾಣಿಕುಣಿದು ಕಾಳಿಂಗ–
ನ್ಹೆಡೆಯ ತುಳಿದವಗೆ
ಗೋಪಿಯರುಡುವೊ ಸೀರೆಗಳ ಕಟ್ಟಿ ಕಡಾ(ಡಹಾ?)ಲದ
ಗಿಡವನೇರ್ದವಗೆ
ಬಡವನವಲಕ್ಕಿ ಹಿಡಿಯುತ ಮೆದ್ದು
ಹಿಡಿಹಿಡಿಯೆಂದರ್ಥಕೊಡುವ ಸಮರ್ಥಗೆ ೨

ಅಷ್ಟ ಭಾರ್ಯೇರಿಂದ ಸೋಳಸಾವಿರ
ಪತ್ನೇರಾಳ್ದವಗೆ
ರುಕ್ಮಿಣಿ ಸತ್ಯಭಾಮೇರ ಸಹಿತ ಸಂತೋಷದಿ
ಸರಸನಾಡ್ದವಗೆ
ಪಾರ್ಥನ ರಥ ಪರವ್ಹರುಷದಿ ನಡೆಸಿದ
ಭಕ್ತವತ್ಸಲ ಭೀಮೇಶಕೃಷ್ಣಗೆ ಪೊಸ ೩

೧೦೮

ಮೊದಲೆ ಪಾಲಿಸೆನ್ನ ಮೊದಲಗಟ್ಟಿ ಹನುಮನೆ
ಮುದದಿ ಜಾನಕಿಗೆ ಮುದ್ರೆ ಇಟ್ಟ ವಾನರನೆ ಪ.

ದಶರಥಾತ್ಮಜನ ಬಳಿಗೆ ವಾರಿಧಿನ್ಹಾರಿ ವಸುಧೆ
ಕುಶಲವಾರ್ತೆ ತಂದಸುರನ ದಶಶಿರಗಳ ಧ್ವಂಸಮಾಡಿದ ೧

ಕೀಚಕಾದಿ ಮಗಧ ದುಶ್ಯಾಸ[ನ] ದುರುಳ ದುರ್ಯೋಧನರ
ನಾಶಮಾಡಿದಂಥ ಭಾರತೀಶ ಭಾಳ ದಯವನಿಟ್ಟು ೨

ವಂದಿಸುವೆನು ಶ್ರೀಮದಾನಂದತೀರ್ಥರಾಗಿ ನಂದನ
ಕಂದ ಭೀಮೇಶ ಕೃಷ್ಣನರವಿಂದ ಪಾದಕ್ವಂದಿಸುವನೆ ೩

೧೦೯

ಯಾಕೆನ್ನ ದೂರುವರೆ ಪೇಳವ್ವಮ್ಮಯ್ಯ
ಪೋಕಬುದ್ಧಿಯ ಗೊಲ್ಲತಿ

ಗೋಕುಲದೊಳಗಿಂಥ ಪೋಕ ಹೆಂಗಸರಾಗಿ
ಲೋಕಲೋಕದಿ ನೋಡೆ ನಾಕಾಣೆನೆಲ್ಲಿಲ್ಲೊ ಪ.

ಅಮ್ಮಯ್ಯ ನೀನಿಡುವೊ ಪಾಲ್ಬೆಣ್ಣೆಯ
ಕಣ್ಣಿಂದ ನೋಡುವೆನೆ
ಅಣ್ಣ ರಾಮರ ಕೇಳೆ ಎನ್ನಾಣೆ ಹುಸಿಯಲ್ಲ
ಎನ್ನ ಪಣೆಯ ಲಿಖಿತ ಮುನ್ನ ಮಾಡಲಿ ಏನೆ ೧

ದುಷ್ಟಹೆಂಗಳೇರಾಡುವ್ರೊ ಮಾತೊಂದು ಸೀ-
ಗೊತ್ತು ಹಿಡಿಯ ಬ್ಯಾಡಮ್ಮ
ಚಟ್ಟಿಗೆ ಬೆಣ್ಣೆಯ ಮೆಲುವೋದುಂಟಾದರೆ
ಪುಟ್ಟಕೂಸಿನ ಹೊಟ್ಟೆಗೆ ತೃಪ್ತಾಗದು ಏನೆ ೨

ಚೆಂಡನಾಡುವಾಗ ಇವರು ಎನ್ನ
ಮುಂಗೈಯ ಪಿಡಿದುಕೊಂಡು
ಗಂಡರಂಜಿಕೆಯಿಲ್ಲ ಗಾಡಿಕಾರ್ತಿಯರೆಲ್ಲ
ಬಂಡು ಮಾತುಗಳಾಡಿ ಬಂದು ದೂರಿದರೇನೆ ೩

ಸಣ್ಣ ಮಕ್ಕಳರೊಡನೆ ಅಂಗಳದಿ ನಾ-
ಚಿಣ್ಣಿಯನಾಡುವಾಗ
ಬೆಣ್ಣೆ ಕೊಡುತ್ತೇನೆಂದು ಬಣ್ಣಬಣ್ಣದಿ ಎನ್ನ
ಕಣ್ಣು ಸನ್ನೆಯ ಮಾಡಿ ಕರೆದ್ಯಾತಕೆ ಕೇಳೆ ೪

ಗೋಲಿಗುಂಡುಗಳಾಡುತ ನಿಂತಿರಲೆನ್ನ
ಲೀಲೆಯಿಂದಲಿ ನೋಡುತ
ಭೀಮೇಶಕೃಷ್ಣ ಬಾರೆಂದೆನ್ನ ಬಿಗಿದಪ್ಪಿ
ಬಾಯ ತಂಬುಲಗಳ ಬೇಡಿ ಮಾತಾಡೋರು ೫

## ೧೧೦

*

ಯಾಕೆ ಮಲಗಿದೆಯೊ ಶ್ರೀಕಾಂತ ದ್ವಾರಕಾವಾಸ
ಸಾಕು ನಿದ್ರೆಯು ಸೂರ್ಯ ಉದಯವಾಯಿತು

---

* ಉದಯರಾಗ.

ಗೋಕುಲದೊಳಗಿದ್ದ ಗೋಮಕ್ಕಳೆಲ್ಲ ಧ್ವಜ-
ರೇಖಾ ಚರಣಕಮಲಕೆರಗಿ ಕರೆಯುತಲಾಗ ಪ.

ಅಂಬುಧಿ ಒಳಗಾಡಿ ತಂದು ವೇದವನು ಕೊಡು
ಮಂದರೋದ್ಧಾರ ಸುರರಿಗೆ ಸುಧೆಯ ನೀಡು
ತಂದು ದಾಡಿಂದ ಧರೆಯನು ಹರಸಿ ಧರಾಪತಿಯೆ
ಕೊಂದು ರಕ್ಕಸನ ನಂದನಗೆ ದಯಮಾಡದಲೆ ೧

ಬೇಡಿ ದಾನವ ಭೂಪನ ಮಾಡಿದೆಲೆ ಮೂರ್ಖಜ್ಜೆ
ಈಡಿಲ್ಲ ನಿನಗೆ ನೃಪವರ ಸೇವಕನೆನಿಸೆ
ಆಡಿದ್ವಚನವ ನಡೆಸುತಾರಣ್ಯವಾಸದಲಿ
ಆದಿಲಕ್ಷ್ಮಿಯನೆ ಕದ್ದಸುರನ್ನ ಸಂಹರನೆ ೨

ಗೊಲ್ಲ ಸತಿಯರ ಕೂಡ ಸಲ್ಲಾಪ ಸಾಲದಲೆ
ಎಲ್ಲ ತ್ರಿಪುರರ ಸತಿಯರಲ್ಲಿ ಪೋಗುವರೆ
ಬಲ್ಲೆ ಭೀಮೇಶಕೃಷ್ಣನೆ ಕುದುರೆಕುಣಿಸುತಲಿ
ಎಲ್ಲಿ ಓಡ್ಯಾಡಿದ್ದೀಳೆಲ್ಲಿ ವಾರಿಧಿಶಯನ ೩

೧೧೧

ಯಾತಕವನಿಯೊಳ್ ಜನಿಸಿದೆ ನಾನು ಸಾರ್ಥಕೇನು
ನೀತಿಯಿಲ್ಲದ ಮಾತಲಿ ಕಾಲಕಳೆದೆ ನಾನು ಕೋತಿ ಸಾರ್ಥಕೇನು ಪ.

ಶರಧಿ ಹಾರಿ ಉರಿವಿಲಂಕೆಯನರಿದೆನೇನೊ ವಾರ್ತೆ
ತಿರುಗಿ ಮಾರ್ಗವ ಮಾಡಿ ಮಾತೆಯ ತರುವೆನೇನೊ ೧

ಕಿತ್ತು ಸಂಜೀವನವ ಬೆಟ್ಟಕ್ಲಿರಿಸುವೆನೇನೊ ರಾಮ-
ರುತ್ತಿಸ್ವಾಹನನಾಗಿ ಖ್ಯಾತಿಪಡೆವೆನೇನೊ ೨

ಇಂದಿರೇಶ ಕೊಡಲು ಪದವಿ ಒಲ್ಲೆಂದೆನೇನೊ ರಾಮ-
ರೆಂಜಲೆಲೆಗ್ಹಾರೈಸಿ ಕದ್ದೊಯ್ದುಂಡೆನೇನೊ ೩

ಮುನ್ನ ಹರಿಯ ಸೇವೆಗೆಂದು ಜನಿಸಿದೆನೇನೊ ಧರೆಯೊಳ್
ಧರ್ಮ ವಿಚಾರವೆ ನಡೆದು ಖ್ಯಾತಿ ಪಡೆವೆನೇನೊ ೪

ರಾಜಸೂಯಯಾಗಾಶ್ವಮೇಧ ಸಾಧಿಸುವೆನೇನೊ ರಾಜ್ಯ

ಭೇದಿಸಿ ಶತ್ರುಗಳಿಗೆ ಭಯವ ತೋರುವೆನೇನೊ ೫

ಕ್ಲೇಶವುನಕಿಲ್ಲದೆ ವನವಾಸ ಸಹಿಸುವೆನೇನೊ ಅಜ್ಞಾತ-
ವಾಸೊಂದುಕ್ಷಣ ಪರಿಯಂತರ ಚರಿಸುವೆನೇನೊ ೬

ಭಿಕ್ಷೆತನಕೊಂಬೊ ಸಜ್ಜನರಿಗೆ ನಮಿಸುವೆನೇನೊ ಘೋರ-
ವೃಕ್ಷಮೂಲದಲ್ಲಿ ಆವಾಸ ಬಯಸುವೆನೇನೊ ೭

ಪಾವಕ್ಕೆರಗುವೆ ಪ್ರಾಣೇಶ ನೀ ಪಾಲಿಸುವ್ಯೇನೊ ಜ್ಞಾನ
ಆದಿಮೂರುತಿ ವೇದವ್ಯಾಸನ ಒಲಿಸುವೆನೇನೊ ೮

ಬಿಟ್ಟು ಚಲಿಸದೆ ನಿನ್ನಲ್ಲಿ ಮನಸಿಟ್ಟೇನೇನೊ ವಾ-
ಸಿಷ್ಠ ಭೀಮೇಶಕೃಷ್ಣನ ಭಜಿಸುತ್ತಿರುವೆನೇನೊ ೯

೧೧೨

ಯಾದವ ನಿನ್ನೆಲ್ಲ ಮರ್ಮಕರ್ಮಂಗಳ
ಸಾಧಿಸಿ ಜನರ ಮುಂದ್ಹೇಳಲ್ಯಾ ರಂಗ
ಸಾಧಿಸಿ ಜನರ ಮುಂದ್ಹೇಳಲ್ಯಾ
ಭೇದವಿಲ್ಲದೆ ಕರುಣವನಿಟ್ಟು ಮರೆ-
ಯದೆ ನೀ ದಯ ಸುಮ್ಮನೆ ಮಾಡುವ್ಯಾ ಪ.

ಮಡುವಿನೊಳಗೆ ಪೊಕ್ಕು ಬಿಡುತ ನೀ ಕಣ್ಣು
ದುಡುಕು ಮಾಡಿದ್ದೆಲ್ಲ ಹೇಳಲ್ಯಾ ರಂಗ
ದುಡುಕು ಮಾಡಿದ್ದೆಲ್ಲ ಹೇಳಲ್ಯಾ
ಮಡುಹಿದ ಸೋಮಕಾಸುರನೆಂಬ ಸುದ್ದಿಯ
ಬಿಡದೆ ಜನರ ಮುಂದ್ಹೇಳಲ್ಯಾ ೧

ಕಡೆಗೋಲನ್ಹೊತ್ತು ಮಂಡಿಯಂತೆ(?) ಕೈಕಾಲು ಮು-
ದುಡಿಕೊಂಡದ್ದೆಲ್ಲ ಹೇಳಲ್ಯಾ ರಂಗ ಮು-
ದುಡಿ ಕೊಂಡದ್ದೆಲ್ಲ ಹೇಳಲ್ಯಾ
ಹಿಡಿದು ಸುಧೆಯ ವಂಚನಿಂದ ಸುರರಿಗೆ ನೀ-
ಬಡಿಸಿದ್ದು ಭಂಗ ನಾ ಹೇಳಲ್ಯಾ ೨

ಊರುಮನೆಗಳಿಲ್ಲ ನೀ ಗಿರಿಗಂಹ್ವರ
ಸೇರಿಕೊಂಡದ್ದೆಲ್ಲ ಹೇಳಲ್ಯಾ ರಂಗ

ಸೇರಿಕೊಂಡದ್ದೆಲ್ಲ ಹೇಳಲ್ಯಾ
ಕೋರೆ ಹಲ್ಲುಗಳಿಂದ ಬೇರನು ಸವಿದುಂಡ
ದಾರಿದ್ರ್ಯವೆಲ್ಲ ನಾ ಹೇಳಲ್ಯಾ ೩

ಮುಖವ ನೋಡಲು ಮೃಗದಂತೆ ಬಾಯ್ತೆರೆದ
ನಿನ್ವಿಪರೀತ ಕೋಪಂಗಳ್ಹೇಳಲ್ಯಾ ರಂಗ
ನಿನ್ವಿಪರೀತ ಕೋಪಂಗಳ್ಹೇಳಲ್ಯಾ
ನಖದಿಂದ ಹಿರಣ್ಯಕನ ಕರುಳ ನೀ ಬಗೆದಂಥ
ಸಕಲ ವ್ಯಾಪಾರ ನಾ ಹೇಳಲ್ಯಾ ೪

ಮೂರು ಪಾದ ಭೂಮಿ ಮುದ್ದು ರೂಪಗಳಿಂದ
ಬೇಡಿ ಕೊಂಡದ್ದೆಲ್ಲ ಹೇಳಲ್ಯಾ ರಂಗ
ಬೇಡಿಕೊಂಡದ್ದೆಲ್ಲ ಹೇಳಲ್ಯಾ
ಮೂರು ಲೋಕವು ಸಾಲದಂತೆ ನೀ ಬೆಳೆದ
ಅನ್ಯಾಯ ಮಾಯಗಳ ನಾ ಹೇಳಲ್ಯಾ ೫

ಜಮದಗ್ನಿಯಲ್ಲುಟ್ಟಿ ಜನಭಯಕಂಜದೆ
ಜನನಿ ಹತವ ಮಾಡಿದ್ದ್ಹೇಳಲ್ಯಾ ರಂಗ
ಜನನಿ ಹತವ ಮಾಡಿದ್ದ್ಹೇಳಲ್ಯಾ
ಅನುಮಾನವಿಲ್ಲದೀತನು ನಿಮ್ಮ ಕುಲಕೆ
ಛೇದಕನೆಂದು ಕ್ಷತ್ರೇರಿಗ್ಹೇಳಲ್ಯಾ ೬

ದೊರೆತನಾಳುವ ತಂದೆ ಪುರವಬಿಟ್ಟೂ ರಗ್ಗಾ ಕೆ
ವನವನತಿರುಗಿದ್ದು ಹೇಳಲ್ಯಾ ರಂಗ
ವನವನ ತಿರುಗಿದ್ದು ಹೇಳಲ್ಯಾ
ಸಿರಿಯನಗಲಿ ಹತ್ತು ಶಿರ[1][ನ][1]ನು ಜೆಯು ಮೂಗು
ಮುಂದಲೆಯ ಕೊಯ್ದು ಯಿನ್ನವನೆಂದ್ಹೇಳಲ್ಯಾ ೭

ಎಳೆದು ಗೋಪ್ಯವ್ವ ನಿನ್ನೊರಳಿಗೆ ಕಟ್ಟಿದ್ದು
ಕಳವು ಜನರ ಮುಂದ್ಹೇಳಲ್ಯಾ ರಂಗ
ಕಳವು ಜನರ ಮುಂದ್ಹೇಳಲ್ಯಾ

1 ಪ

ಸೆಳೆದು ಗೋಪ್ಯೇರ ಸೀರೆಕಟ್ಟಿ [ಕಡಹಾ]ಲಕ್ಕೆ ಆ-
ಕಳಕಾಯ್ದ್ದನೆಂದು ನಾ ಹೇಳಲ್ಯಾ ೮

ಬಟ್ಟೆರಹಿತನಾಗಿ ಹೊಕ್ಕು ತ್ರಿಪುರದಲ್ಲಿ
ಬತ್ತಲೆ ತಿರುಗಿದ್ದು ಹೇಳಲ್ಯಾ ರಂಗ
ಬತ್ತಲೆ ತಿರುಗಿದ್ದು ಹೇಳಲ್ಯಾ
ದುಷ್ಟ ಕಲಿಯ ಶಿರ ಕಡಿದು ಹಾಕುವನೀ-
ದುಷ್ಟ ಗುಣಗಳ ನಾ ಹೇಳಲ್ಯಾ ೯

ಭಕ್ತ ಜನರು ಕಂಡು ಕಟ್ಟಿಹಾಕುವರೆಂ-
ದಿಷ್ಟು ಅಂಜಿಕೆ ನಿನ್ನದ್ಹೇಳಲ್ಯಾ ರಂಗ
ಇಷ್ಟು ಅಂಜಿಕೆ ನಿನ್ನದ್ಹೇಳಲ್ಯಾ
ನಿತ್ಯ ಈ ಹೃದಯಮಂದಿರದಲ್ಲಿ ಭೀಮೇಶ-
ಕೃಷ್ಣ ನೀನಡಗಿದ್ದು ಹೇಳಲ್ಯಾ ೧೦

೧೧೩

ರಂಗ ಬಾರನ್ಹ್ಯಾಗೆ ಮಾಡಲಂಬುಜಾಕ್ಷಿಯೆ
ರಂಗ ಬಾರನ್ಹ್ಯಾಗೆ ಮಾಡಲೆ ಪ.

ಈತನಿಲ್ಲದೆನ್ನ ಮನದ ತಾಪ ಹೋಗದು
ಶೀತ ಕಳೆವ್ನೊ ಸೂರ್ಯನಂತೆ ದ್ವಾರಾವತಿಯ ನಿಲಯನಮ್ಮ ೧

ಅಕ್ಕ ರುಕ್ಮಿಣಿಯಲ್ಲಿ ನಕ್ಷತ್ರಮಧ್ಯ ಚಂದ್ರನಂತೆ
ಪ್ರೋಕ್ಷಣಿಂದಲಜನ ಪಡೆದ ಚಕ್ರಧಾರಿ ಅಕ್ಕರ ಪಡುವ್ನೊ ೨

ಕರಿಮುತ್ತಾದೋರೊಬ್ಬರಿಲ್ಲ ಕರುಣಾನಿಧಿಯೆಂಬುವ್ರು ಸಲ್ಲಿ
ತರುಣಿ ಸತ್ಯಭಾಮೆಗಧಿಕ ಶೀಲೆ ತನ್ನ ರುಕ್ಮಿಣಿಯಲ್ಲಿರುವ ೩

ಉಂಗುರದ ಹರಳಿನಂತೆ ಹೊಂದಿಕೊಂಡು ರುಕ್ಮಿಣಿಯನ್ನು
ಇಂದಿರೇಶ ಬಿಟ್ಟಿನ್ನೊಬ್ಬರ ಮಂದಿರಕ್ಕೆ ಬಂದಿಹನ್ಹ್ಯಾಗೆ ೪

ಮಂದಮತಿಯು ಆದನೇನ ತಂದೆಯಾದ ಸತ್ರಾಜಿತನು
ತಂದುಕೊಟ್ಟನೆನ್ನ ಈ ಸುಂದರಿಗಾದ ಸೌ(ಸವ?)ತಿ ಕೆಳಗೆ ೫

ಅಕ್ರೂರಜಮಿಳಂಬರೀಷ ಚಿಕ್ಕಧ್ರುವ ಪ್ರಹ್ಲಾದ ಗಜನು
ಭಕ್ತಿಯಿಂದ ಕರೆದರೆ, ಕಣ್ಣೆತ್ತಿ ನೋಡನವರನೀಕಾಲಕ್ಕೆ ೬

ಗಾಯನದಿ ಗಂಧರ್ವ ಬಂದು ನಾರದ ಸುಧಾಮ ಬಂದು
ಬೇಡಿಕೊಂಡು ಕರೆಯಲವರ ನೋಡಿ ಮುಂದಕೆ ಬರುವನಲ್ಲ ೭

ಸೋಳ ಸಾವಿರ ಸತಿಯರೆಲ್ಲ ಭಾಳ ಚಿತ್ರಭೂಷಿತರಾಗಿ
ಏಳು ಕೃಷ್ಣೇಳೆಂದು ನಾಲ್ಕು ತೋಳು ಹಿಡಿದು ಕರೆವೋಣೇನೆ ೮

ಮಿತ್ರೆ ಕಾಳಿಂದಿ ಭದ್ರೆ ಲಕ್ಷಣಾ ನೀಲ ಜಾಂಬವಂತಿ
ಹಚ್ಚಿಪ್ಪಗಲು ಬತ್ತಿಯಂತೆ ಸುತ್ತುಗಟ್ಟಿ ಕರೆವೋಣೇನೆ ೯

ಪುತ್ಥಳ್ಯಂಥ ರುಕ್ಮಿಣಿ ತೊಡೆಯಲಿಟ್ಟು ಕುಳಿತನಿಂದಿರೇಶ
ಬಿಟ್ಟರಾಕೆ ನಮ್ಮನು ಕಣ್ಣೆತ್ತಿ ನೋಡೋದಷ್ಟೆ ಹೊರತು ೧೦

ಗೊಲ್ಲ ಸತಿಯರೆಲ್ಲ ತಮ್ಮಲ್ಲ ದಧಿಬೆಣ್ಣೆಗಳ ತಂದು
ಮೆಲ್ಲು ಕೃಷ್ಣಯೆಂದು ಕರೆಯೆ ಫುಲ್ಲನೇತ್ರ ತೆಗೆದುಕೊಂಡ ೧೧

ಅಷ್ಟರೊಳಗೆ ಪ್ರೀತಿಯುಳ್ಳ ಸೊಟ್ಟ ಕುಬ್ಜೆ ಕರದಿ ಗಂಧ
ಹಚ್ಚೇನೆಂದು ಕರೆಯೆ ಬೆನ್ನ್ಹತ್ತಿ ಬರುವನೇನೆ ಕೃಷ್ಣ ೧೨

ಸಾಸಿರ್ಹೆಡೆಯ ಮಂಚವಿಳಿದು ಸರಸವಾದ ವಚನದಿಂದ
ಭೀಷ್ಮೆ ಭಿಡಿಯನೇನೆ ಭೀಮೇಶಕೃಷ್ಣನ ಕರೆವೋದಕ್ಕೆ ೧೩

೧೧೪

ರಾಮ ರಾಮ ಶ್ರೀ ರಘುರಾಮ ನೀಲಮೇಘ-
ಶ್ಯಾಮ ನಿಸ್ಸೀಮ ಕಾಮಿತಾರ್ಥವಕರೆದತಿ-
ಪ್ರೇಮದಿಂದ ಪಾಲಿಸುವುದು ನಿನ್ನ ನಾಮ ಪ.

ಕಲ್ಲೋದ್ಧಾರಕ ಕರುಣಾಳು ರಾಮ
ಬಿಲ್ಲನೆತ್ತಿದ್ದ ಬಿರುದಾತ ರಾಮ
ಸೊಲ್ಲು ಸೊಲ್ಲಿಗಿರಲು ಹರಿನಾಮ
ಚೆಲ್ವ್ಯಾಡುವ ಮಯ ಅವರಲ್ಲಿ ಪ್ರೇಮ ೧

ಧೀರಪುರುಷನೆ ದಿಗ್ವಿಜಯ ರಾಮ
ವಾರಿಧಿಯ ಕಟ್ಟಿದ್ವನಜಾಕ್ಷ ರಾಮ
ಕ್ರೂರರಾಕ್ಷಸರನು ಕೊಂದು ಲಂಕಾ
ಸೂರೆಯನು ಮಾಡಿದಂಥ ನಿಸ್ಸೀಮ ೨

ದುಷ್ಟರಾವಣಶತ್ರು ಶ್ರೀರಾಮ
ಹುಟ್ಟಿ ಭಾನುವಂಶದಿ ಸೀತಾರಾಮ
ಮುಟ್ಟಿಭಜಿಸೆ ಸಜ್ಜನರಿಗೆ ಭೀಮೇಶ–
ಕೃಷ್ಣ ಕರೆದು ನೀಡುವ ತನ್ನ ಧಾಮ ೩

೧೧೫

*

ರುದ್ರ ಕುಮಾರನ ಚರಣಕ್ವಂದನೆ ಮಾಡಿ
ವಿದ್ಯಾಭಿಮಾನಿ ವಾಣಿಯ ಸು–
ಪದ್ಮಪಾದಗಳಿಗೆ ಎರಗಿ ನಾ ಪೇಳುವೆ
ಶುದ್ಧವಾಗಿ ಕೊಡು ಮತಿಯ ೧

ಶ್ರಾವಣಮಾಸ ಶುಕ್ರುವಾರ ಶುಭಮೂರ್ತ(ಮುಹೂರ್ತ?)
ಕಾಲದಿ ಕಮಲಾಕ್ಷಿಯನು
ಆಲಯದೊಳಗಿಟ್ಟಾದರದಿಂದ ಪೂಜಿಸೆ
ಬೇಡಿದಭೀಷ್ಟ ನೀಡುವಳು ೨

ಇರುತಿರಲೊಂದು ಪಟ್ಟಣದಲ್ಲಿ ರಾಜನು
ತನಯರಿಲ್ಲದ ಕಾರಣವು
ವಿವಹದುತ್ಸವಕೆಂದು ತೆರಳೋ ಪತಿಯ ಕಂಡು
ತೆಗೆದಿಟ್ಟಳಾತನಾಯುಧವ ೩

ಪಟ್ಟದ ಕತ್ತಿಯ ಬಿಟ್ಟು ಬಂದೆನೆಂದು
ಅಟ್ಟಿದ ತನ್ನ ದೂತರನು
ನೆಟ್ಟನೆರಡು ಕಾಲು ಚಾಚಿ ಕುಳ್ಳಿರಲಾಗ
ತಟ್ಟನೆ ದಾಟಿ ನಡೆದನು ೪

ಮೂರುತಿಂಗಳು ಗರ್ಭಸಾಕ್ಯ(ಪಾಸಕ್ಯಾ?) ಗಿಬಂದಿತು
ನೀನೀಗ ದಾಟಿ ಪೋಗುವರೆ
ಕೇಳಿ ಸಂಭ್ರಮದಿಂದ ಹೇಳೆ ರಾಜಗೆ ಬಂದು
ತಾಳಿದ ಪರಮ ಹರುಷವನು ೫

* ಶುಕ್ರವಾರದ ಹಾಡು.

ಸದ್ದುಮಾಡದೆ ಸೂಲಗಿತ್ತಿಕರೆಸಿ ತಾ-
ನಿದ್ದ ವಾರ್ತೆಗಳ ಹೇಳಿದಳು
ಮುದ್ದುಕೂಸಿನ ತಂದುಕೊಟ್ಟರೆ ನಿನಗೀಗ
ಮುತ್ತಿಲುತುಂಬ್ಹೊನ್ನು ಕೊಡುವೆ ೬

ಹುಡುಕುತ ಬಂದಳು ಕಡೆಯು ಬಜಾರಕ್ಕೆ
ಬಡವ ಬ್ರಾಹ್ಮಣನ ಮಂದಿರದಿ
ಮಡದಿಗೆ ಮೂರುತಿಂಗಳು ಗರ್ಭವಾಗಿದೆ
ಕಡೆಹಾಯ್ಸಲೆನ್ನ ಕರೆಸೆಂದ್ಲು ೭

ಮೂರು ತಿಂಗಳ ರಾಜನರಸಿಗೆ ಪೊಗ್ಗೆಯು
ಏಳು ತಿಂಗಳ ಹೂವ ಮುಡಿಸಿ
ಎಂಟು ತಿಂಗಳಿಗೆ ಶ್ರೀಮಂತದುತ್ಸವ ಮಾಡಿ
ಬಂತಾಗ ನವಮಾಸಗಳು ೮

ವಿಪ್ರನ ಮಡದಿಗೆ ಒತ್ತಿಬಂದವು ಬ್ಯಾನೆ
ಕಟ್ಟ ಕಣ್ಣುಗಳ ನಿಚ್ಚಣಿಕೆ
ಹತ್ತಿ ಇಳಿದು ಹಡೆದಳ ಗಂಡುಕುಮಾರನ
ಎತ್ತಿಕೊಂಡೊಯ್ದಳಾಕ್ಷಣವೆ ೯

ಕಲ್ಲು ಗುಂಡನೆ ಹಡೆದಿಯೆ ನೀನೆಂಬಂಥ
ಸೊಲ್ಲು ಕೇಳುತಲೆ ತಲ್ಲಣಿಸಿ
ಎಲ್ಲಿದ್ದರೆನ್ನ ಕುಮಾರನು ಸುಖಬಾಳಲೆಂ-
ದಲ್ಲಿ ನೇಮವ ನಡೆಸಿದಳು ೧೦

ಇತ್ತ ಕೂಸಿಗೆ ಮಧುವಿಟ್ಟು ಜಾತಕ ಬರೆಸಿ
ಸಕ್ಕರೆ ಸಗಟದಿಂದ್ಹಂಚಿ
ದಕ್ಷಿಣೆ ತಾಂಬೂಲ ಸಹಿತ ಬ್ರಾಂಬರಿಗೆಲ್ಲ
ಇಟ್ಟು ಭೋಜನವ ಮಾಡಿಸಿದ ೧೧

ನಾಮಕರಣ ಜಾವಳ ಜುಟ್ಟು ಉಪನಯನ
ಪ್ರೇಮದಿಂದ್ವಿದ್ಯವ ಕಲಿಸಿ
ಸೋಮಸಂದದಿ ಹೊರಗ್ಹೊರಟು ತ-
ಮ್ಮಮ್ಮನ ನೋಡಿ ಮೋಹಿಸಿದನಾಕ್ಷಣದಿ ೧೨

ಕತ್ತಲೊಳಗೆ ಬರುತಿರಲು ಬಾಗಿಲ ಮುಂದೆ
ಕಟ್ಟಿದ ಗೋವು ಕಾಣದಲೆ
ವತ್ಸದ ಕಾಲು ತುಳಿಯಲಾಗ ಅದು ಬಾಯಿ
ಬಿಟ್ಟೊದರಿತು ಭಯದಿಂದ ೧೩

ಅಮ್ಮ ನೀ ಬಾರೆ ತಮ್ಮಮ್ಮನರಿಯದವ
ನಮ್ಮನು ಬಲ್ಲನೆ
ಒಮ್ಮೆಲ್ಲವೆರಡು ಬಾರ್ಯಾಲಿಸ್ಯದರ ಮಾತು
ತಮ್ಮ್ಹಿರಿಯರನು ಕೇಳಿದನು ೧೪

ಮಂದಾಕಿನಿಯ ಸ್ನಾನವ ಮಾಡಿ ಬಂದರೆ
ಸಂದೇಹ ಪರಿಹಾರವಾಗುವುದು ಹಾ-
ಗೆಂದು ಹೇಳಿದ ಹಿರಿಯರ ವಾಕ್ಯವ ಕೇಳಿ
ಗಂಗಾಯಾತ್ರೆಗೆ ತೆರಳಿದನು ೧೫

ನಡೆದು ಬಂದನು ನಡುಮಾರ್ಗದಿ ಪಟ್ಟಣ
ಹಡೆದ ಮನೆಯ ಬಾಗಿಲಲ್ಲಿ
ಕೊಡಬೇಕು ನಮಗಷ್ಟಸ್ಥಳಗಳೆಂದೆನುತಲಿ
ನುಡಿದು ಪವಡಿಸಿದ ತಾನಲ್ಲಿ ೧೬

ಹೊರಗಿಂದ ಶಿಟವಿ ಬಂದಳು ಮಹಾಲಕ್ಷ್ಮಿ
ಒಳಗಿಂದ ಬಂದಳು
ಎನ್ನ ವರಪುತ್ರ ಇವನ ದಾಟಲು ನಿನ್ನ ಶಿರವು
ಸಿಡಿದು ಸಾ(ಸಹ?)ಸ್ರ್ಹೋಳಾಗೋದೆನಲು ೧೭

ಅದು ಕೇಳಿ ಶಿಟವಿ ತಾ ತಿರುಗಿ ಪೋಗುತಲಿರೆ
ಬದಿಯಲ್ಲಿ ಬದುಕಿದ್ದ ಶಿಶುವು
ಇದು ನಿನ್ನ ಪುಣ್ಯದಿಂದುಳಿವಿತೆಂದೆನುತಿರೆ
ಅಧಿಕ ಸಂತೋಷವಾಗಿ ಹೊರಟು ೧೮

ಭಾಗೀರಥಿಯ ಸ್ನಾನವ ಮಾಡಿ ತಾನು ಪ್ರ-
ಯಾಗಕೆ ನಡೆತರಲು
ಬ್ಯಾಗ ಮಾಡಿದ ದಾನಧರ್ಮಕಾರ್ಯಗಳ ತಾ-
ನಾಗ ಕಂಡನು ಚತುರ್ಹಸ್ತ ೧೯

ನಾಲ್ಕು ಹಸ್ತಗಳ ಕಂಡಕಾರಣೇನೆಂದು ನ್ಯಾ-
ಕುಲದಿಂದ ಕೇಳಿದನು
ಸಾಕಿದವರು ಹಡೆದವರುಂಟು ನಿನೆಗೆಂದ್ವಿ-
ವೇಕಬುದ್ಧಿ ಅವರು ಹೇಳಿದರು ೨೦

ಗೊತ್ತಿಲೆ ಬಂದನು ಪಟ್ಟಣದೊಳಗೊಂಡು
ಹೆತ್ತರಂದಿನದ(?) ಮಂದಿರದಿ
ಹೊಸ್ತಿಲೊಳಗೆ ಅಡ್ಡಮಲಗಿದ್ದ ಕಾಲಕ್ಕೆ
ಮತ್ತಾಗ ಬಂದಳು ಶಿಟವಿ ೨೧

ಚೊಚ್ಚಿಲ ಮಗನ ದಾಟಲು ನಿನ್ನ ಶಿರವು
ಬಿಚ್ಚಿ ಸಾಸ್ರ್ಹೋಳಾಗೋದೆನಲು
ಲಕ್ಷ್ಮಿ ಮಾತಿಗೆ ತಿರುಗಿದಳೆನ್ನ ತುತ್ತಿಗೆ
ಮಿತ್ಯಾರ್ದ ಪಾಪಿ ಎಂದೆನುತ ೨೨

ಸತ್ಯವಂತನೆ ನಿನ್ನ ಪುಣ್ಯದಿಂದಿಬ್ಬರು
ಪುತ್ರರು ಉಳುದರಂತಿಹರು
ಅರ್ಥಿಯಿಂದವರ ಮಾತುಗಳ ಕೇಳುತ
ತನ್ನ ಪಟ್ಟಣಕೆ ನಡೆತಂದ ೨೩

ಗಂಗಾ ಸ್ನಾಸವ ಮಾಡಿಕೊಂಡು ಕಾವಡಿ ಹೊತ್ತು
ಬಂದ ಶ್ರಾವಣ ಮಾಸದಲ್ಲಿ
ಅಂದಿನಾರಭ್ಯ ಬ್ರಾಂಬರಿಗೆ ಮೃಷ್ಟಾನ್ನ ಕು-
ಟುಂಬ ಭೋಜನವ ಮಾಡಿಸಿದ ೨೪

ನಿತ್ಯ ಸಿತ್ಯವಿ ಭಕ್ಷ್ಯ ತುಪ್ಪ ಮಂಡಿಗೆ ಕ್ಷೀರ
ಸಕ್ಕರೆ ಸೂರೆಮಾಡುತಲಿ
ಗೊತ್ತಾಗಪೆನ್ನ ಕಾರ್ಯಗಳು ಪಟ್ಟಣದೊಳು
ಮತ್ತ್ಯಾರೀದವರೆಂವ ೨೫

ಪಟ್ಟಣದೊಳು ಬಡ ಬ್ರಾಹ್ಮಣನರಸಿಯು
ನಿಷ್ಠೆಲಿ ವ್ರತದಿಂದಿರುವಳು
ಎಷ್ಟು ಕರೆವರು ಬಾರಳಾಕೆ ಶ್ರೀಗೌರಿಯು
ಶುಕ್ರವಾರದ ವ್ರತವಂತೆ ೨೬

ನಾನೆ ಬರಲೊ ತನ್ನ ಮಂದಿರಕಾಗಲೆ
ತಾನೆ ಬರುವಳೊ ನಮ್ಮ ಮನೆಗೆ
ಮಾಡವಪ್ಪಣೆ ಜುಲುಮಾನವ(ಜುಲ್ಮಾನೆಯು?) ಕೊಡುವ್ರೋಳೆ
ಕೇಳಿ ಬನ್ನ್ಯೆಂದು ಕಳಿಸಿದನು ೨೭

ಇಷ್ಟು ಛಲಗಳ್ಯಾತಕೀಗ ಬರುವೆನೆಂದು
ಲಕ್ಷ್ಮಿದೇವೇರ ಪೂಜೆಮಾಡಿ
ಭಕ್ತಿಯಿಂದಾರತಿ ಪಟ್ಟೆ ಗೆಮನೆ ಉಡಿಕಟ್ಟಿ
ಬಂದಳು ಭಾಗ್ಯಶಾಲಿ ೨೮

ಬರುತಿರಲಾಗ ಅಂಗನೆ ಅರಮನೆಯಿಂದ
ಹರವಕ್ಕಿಕಚ್ಚ(ಹರಿವಕ್ಕಿಕರ್ಜ?) ಕಾಣುತಲಿ
ಸ್ಥಿರವಾಗಲೆನ ಕುಮಾರಗೆ ಆಯುಷ್ಯಗಳೆಂದು
ಬದಲು ಮಾರ್ಗದಲಿ ನಡೆದಳು ೨೯

ಮೂರುಕಾಲಿನ ಮಣೆ ಮುಂದೆ ತಂದಿಟ್ಟರೆ
ಕೂಡಲಾಗದು ನಮ್ಮ ವ್ರತವು
ಹಾಗಲ್ಲುಂಪರ ಪ್ರೋಗಲು ಹಸುರುಬಳೆಯು ಬಿಟ್ಟು
ನೀಲನಿಟ್ಟಳು ಕರದಲ್ಲಿ ೩೦

ಹಸುರು ಪೀತಾಂಬರ ಹಸನಾದ ಕುಡಿಯೆಲೆ
ಹೊಸ ಮರದೊಳಗೆ ಅನ್ನವನು
ಬಿಸಿಬಿಸಿ ಸಾರು ಮೊಗೆಯಲಿ ತಂದ್ಹಾಕಲು
ಶಶಿಮುಖಿ ಅದು ಒಲ್ಲೆನೆನುತ ೩೧

ಕಂಪುಕೆಂಪಿನ ಪೀತಾಂಬರ ಉಡುಕೊಟ್ಟು
ಛಂದವಾದೆಲೆಯು ಹಾಕಿದರು
ಬಂಗಾರ ಹರಿವಾಣದೊಳಗೆ ಅನ್ನವು ಬೆಳ್ಳಿ
ತಂಬಿಗೆ ಸಾರು ಬಡಿಸಿದರು ೩೨

ಬಡವನ ಮಡದಿಯು ಬಡಿವಾರ ನೋಡಿರೆ
ಸಡಗರ ಬಂತೇನಿವತ್ತೆ
ಪಡೆದಳಾ ಅರಸಿನ ಐಶ್ವರ್ಯವೆನುತಲಿ
ನುಡಿದರು ಜನರು ಹಾಸ್ಯದಲಿ ೩೩

ಉಟ್ಟಪೀತಾಂಬರ ಕಟ್ಟಿದ ಉಡಿದಾರ
ರತ್ನದ ಕಡಗ ಕೈಯಲ್ಲಿ
ಪಚ್ಚದ ಪದಕ ಮುತ್ತಿನ ಕಂಠಿ ಕೊರಳಲ್ಲಿ
ಪುತ್ಥಳಿ ಸರ ಹೊಳೆಯುತಲಿ ೩೪

ನೀಲಮಾಣಿಕ್ಯದ್ವಜ್ರದ್ಹರಳಿನುಂಗುರಗಳು
ಆಣಿ ಮುತ್ತಿಟ್ಟು ಕಿವಿಯಲಿ
ಪಾಣಿಯ ಮುಗಿದು ಬ್ರಾಂಬರಿಗೆ
ಭೋಜನಕುಪಚಾರ ಮಾಡುತಲಿ ತಾ ಬಂದ ೩೫

ದೊರೆಯು ತುಪ್ಪವ ಬಡಿಸುತಲಿ
ಸಾಲೆಡೆಯಲ್ಲಿ ಬರುತಿರೆ
ತಾಯಿಸ್ತನಗಳು ಭರದಿಂದುಕ್ಕೇರಿ ಬಂದುವು
ಕ್ಷೀರಪಾನದಲ್ಲಿ ತೋರಿದ ಚಿಮ್ಮಿದಸಾಕ್ಷಣವು ೩೬

ಹಾಲುಬಿದ್ದರೆ ತನ್ನ ಶಾಲಿನಿಂದ್ವೊರೆಸುತ
ಮಾ(ಮಹ?)ಲಿನ ಮ್ಯಾಲೆ ನಡೆದನು
ಆಲಯಕ್ಕೆ ವನ ಬಿಡದಂತಪ್ಪ ಹೆಸರಾಡಿ ತಾ–
ಮಲಗಿದ ಮಂಚದಲ್ಲಿ ೩೭

ಹುಟ್ಟ್ಯಾಬಡವಿಯು ದೌಲತ್ತನೆ ನೋಡಿರೆ
ಉಟ್ಟಳು ಪೀತಾಂಬರವ
ಗಟ್ಟ್ಯಾಗಿ ಸೆರಗ್ಹಿಡಿಯುವೆ ತನ್ನ ಮಾನವ
ಬಿಟ್ಟಳೆಂದಾಡಿ ಕೊಂಬುವರು ೩೮

ಎತ್ತನೋಡಿದರಿಲ್ಲ ಚಿತ್ತ ಚಂಚಲವಾಗಿ
ಮತ್ತೆಲ್ಲೂ ಮಗನ ಕಾಣದಲೆ
ಹತ್ತಿ ಬಂದಳು ಮಾಲಿನಲ್ಲೇ ಮಂಚದಿ
ಮಲಗಿಪ್ಪೋ ಸುತನ ಕಂಡಳಾಗ ೩೯

ಏನುಕಾರಣ ಮಲಗಿದಿ ಮಾತನಾಡೆಂದು
ಲಾಲಿಸಿ ಮಗನ ಮುದ್ದಿಸುತ
ಬಾಲಕ ನೀನಿಸ್ಟು ಬಳಲುವುದ್ಯಾಕೆಂದು
ಕೇಳಿದಳತಿ ಮೋಹದಿಂದ ೪೦

ಹಡೆದವರ್ಯಾರೆ ಎನ್ನೊಡನೆ ನೀ ಹೇಳೆಂದು
ಬಿಡು ಭಯ ಬೇಡವೆಂದೆನುತ
ಹಡೆಯಲಿಲ್ಲವೊ ಎನ್ನ ಮ್ಯಾಲೆ ರಾಜನು ಒಬ್ಬ
ಮಡದಿಯ ತರುವೋನೆಂದೆನುತ ೪೧

ಹೊನ್ನು ಹಣವ ಕೊಟ್ಟು ನಿನ್ನನು ತರಿಸಿದೆ
ಎನ್ನ ಕೂಸೆಂದು ಸಾಕಿದೆನು
ಇನ್ನ್ಯಾರ ಮಗನೊ ನಾನರಿಯೆನೆಂದೆನುತಲಿ
ಮನ್ನಿಸಿ ಮಾತನಾಡಿದಳು ೪೨

ಆದರೇನಮ್ಮಯ್ಯ ರಾಜಸಿಂಹಾಸನ ಏ–
ರಿದೆ ನಿನ್ನ ಪುಣ್ಯದಲಿ ನೀ ಮಾ–
ಡಿದುಪಕಾರ ಮರೆಯಲಾರೆನೆಂದು
ಪಾದಕ್ಕೆ ಬಂದೆರಗಿದನು ೪೩

ಬಣ್ಣದಂದಣ ಕಳಿಸಿದ ಸೂಲಗಿತ್ತಿಗೆ
ಮನ್ನಿಸಿ ಮಣೆಯನ್ಹಾಕಿದರು
ಅಣ್ಣಯ್ಯ ಕರೆಸಿದ ಕಾರಣೇನೆಂದು
ಬಣ್ಣಿಸಿ ಬಂದು ಕುಳಿತಳು ೪೪

ಎತ್ತಣಿಂದಲಿ ಎನ್ನ ತಂದೆ ವಾರ್ತೆಗಳನು
ಸತ್ಯವಾಗಿ ಹೇಳಬೇಕೆನುತ ವಿಪ್ರ-
ಸುತ ನಿನ್ನಿಲ್ಲಿಗೆ ತಂದುಕೊಟ್ಟನೊ
ಮುತ್ತಿಲು ಹೊನ್ನಿಗೆ ಆಸೆಮಾಡಿ ೪೫

ಹಾಕಿದೆ ಕಲ್ಲುಗುಂಡನು ನಿಮ್ಮಮ್ಮಗೆ
ಹಾಕ್ಯಾ ಮಾತುಗಳ ಆಡಿದೆನು
ಗೋಕುಲದೊಳು ಕೃಷ್ಣ ಬಂದಂತೆ ನಿನ್ನ ತಂದೆ
ಸಾಕಿದಳೆಶೋದನಂತೆ ೪೬

ಮಕ್ಕಳನಗಲಿ ದೇವಕ್ಕಿಯಂದದಿ ನಿನ್ನ
ಹೊಸ್ತಿಲೊಳಗೆ ಕುಳಿತಿಹರು
ಅಕ್ಕರದಿಂದವರನು ಕೂಡೆಂದೆನುತಲಿ
ಹಸ್ತವ ಮುಗಿದು ಹೇಳಿದಳು ೪೭

ಮುದುಕಿ ಮಾತನು ಕೇಳಿ ಪದಕ ಮುತ್ತಿನ ಸರ
ನಗುತ ಹಾಕಿದ ಕೊರಳಲ್ಲಿ
ಜರತಾರಿ ಸೀರೆ ಕುಪ್ಪುಸ ಉಡುಗೊರೆ ಕೊಟ್ಟು
ಕರೆಸಿದ ತಾಯಿತಂದೆಯರ ೪೮

ಕರೆದರೆಂದರೆ ಕಂಪಹುಟ್ಟಿತು ದೇಹದಿ
ಸುರಿಸುತ ಕಣ್ಣ ಜಲಗಳ
ಪೊರೆತನಕ್ಕೆದುರುನಾವೇನೆಂದು ಮನದಲ್ಲಿ
ಮರುಗುತ್ಯೋಚನೆಯ ಮಾಡಿದರು ೪೯

ಬಡಿಸೋನೊ ಜೈದುಬಿಡುವನೊ ಕೈಯಿಂದಲಿ
ಕೊಡಿಸೋನೊ ಜುಲುಮಾನವನು
ಇಡಿಸೋನೊ ಸೆರೆಮನೆ ಒಳಗೆ ನಮ್ಮಿಂದಲಿ
ನುಡಿಸಿಬಿಡುವನೊ ತಪ್ಪೆನುತ ೫೦

ಏನುಮಾಡುವನೋ ಬಂದ ಜನರೊಳು ನಮ್ಮ
ಮಾನವ ಕಳೆದುಬಿಡುವನೊ
ಮಾನಾಭಿಮಾನ ನಿನ್ನದು ಮಹಲಕ್ಷ್ಮಿ–
ಪಾದವೇಗತಿ ಎಂದರಾಗ ೫೧

ನಡುಗುತ ಬಂದರು ಮುಡಿಯು ಮುಂದಕೆ ಬಾಗಿ
ಕಡುಚಿಂತೆಯಿಂದ ನಿಂತಿರಲು
ಹಡೆದ ತಾಯಿತಂದೆ ನೀವೇ ಏನು ಎಂದು
ನುಡಿದು ತಾ ಚರಣಕ್ಕೆರಗಿದನು ೫೨

ಕಂದ ನಾನೆಂದರೆ ಸಂಭ್ರಮವಾದಾ–
ನಂದ ಭಾಷ್ಪಗಳುದುರಿದವು
ತಂದೆತಾಯಿ ಮಕ್ಕಳೊಂದಾದರೆನುತಲಿ
ದುಂದುಭಿ ಭೇರಿ ಬಡಿದವು ೫೩

ಹರುಷದಿಂದಿಬ್ಬರೊಂದಾಗಿ ತಾಯುಂದಿರು
ಬರೆಸಿದರಾಗ ಪತ್ರಿಕವ
ಕರೆಸಿದರು ಬಂಧುಬಳಗ ನಿಬ್ಬಣವನ್ನು
ಅರಸನ ಮದುವೆ ಸಂಭ್ರಮದಿ ೫೪

ಹಾದಿಗ್ಹಂದರ ಹಾಕಿ ಮೇಲೆ ತೋರಣಗಟ್ಟಿ
ಬೀದಿ ನೌಬತ್ತುವಾಲಗವು
ಬ್ರಾಂಬರೆಲ್ಲರು ನೆರೆದರು ನಾಲ್ಕು
ವೇದವ ಹೇಳುತ ಮಂಗಳಾಷ್ಟಕವ ೫೫

ವಲ್ಲಭನೆದುರಿಗೆ ಚೆಲ್ವಸತಿಯ ತಂದು
ಚೆಲ್ಲುತ ಮಂತ್ರಾಕ್ಷತೆಯ
ಮಲ್ಲಿಗೆ ಭಾಷಿಂಗವನು ಕಟ್ಟಿ ಕೊರಳ ಮಾಂ-
ಗಲ್ಯ ಬಂಧನ ಮಾಡಿದರು ೫೬

ಹಾಗಲ್ಹಂದರದೊಳಗ್ಹಸಿರು ಪತ್ತಾಲ ಕೊಟ್ಟು
ಆಗ ನೇಮವ ಬಿಡಿಸಿದರು
ಡಾಗುಕುಡಿಬಾಳೆಎಲೆಯ ಭೂಮವಸುಂಡು
ನಾಗವಾಲಿಗಳ ಮಾಡಿದರು ೫೭

ಮುತ್ತಿನ ಪಲ್ಲಕ್ಕಿ ಒಳಗೆ ಶ್ರೀಗೌರಿಯ
ಪಟ್ಟಣದೊಳು ಮೆರೆಸುತಲಿ
ಅರ್ಥಿಯಿಂದಲಿ ಬಂದು ಅರಸು ಸಿಂಹಾಸನ
ಕೊಪ್ಪಿದಳಾಗ ಮಹಲಕ್ಷ್ಮಿ – ೫೮

ಅರಿಷಿಣ ಕುಂಕುಮ ಅರಳು ಮಲ್ಲಿಗೆ ಗಂಧ
ಪರಿಪರಿ ಭಕ್ಷ್ಯ ಪಾಯಸವು
ನರಸಿಂಹನರಸಿಗರ್ಪಿಸುತ ಆರತಿ ಮಾಡೆ
ಹರುಷದಿಂದ್ವರವ ನೀಡುವಳು ೫೯

ಮಂಗಳ ಜಯವೆನ್ನಿ ಮಂಗಳ ಶುಭವೆನ್ನಿ
ಮಂಗಳಾಂಗನೆ ಮಹಾಲಕ್ಷ್ಮಿ
ಕಂಗಳು ತೆರೆದು ಕಟಾಕ್ಷದಿ ನೋಡಲು
ಹಿಂಗೋದು ಸಕಲ ಪಾಪಗಳು ೬೦

ಬಿತ್ತಿದ ಬೆಳೆರಾಸಿ ಒಕ್ಕುವ ಧಾನ್ಯವು
ಉಕ್ಕುವ ಕ್ಷೀರದಂದದಲಿ
ಲೆಕ್ಕವಿಲ್ಲದೆ ಮಕ್ಕಳಾಗೋರು ಮನೆತುಂಬ
ಮುತ್ತೈದೆತನವ ನೀಡುವಳು ೬೧

ತಾ ಸುರಕಾಮಧೇ[1][ನುವಿನಂತೆ][1] ಬಂದು ಭೀಮೇಶ-
ಕೃಷ್ಣನ ಸಹಿತಾಗಿ
ಲೇಸಾದ ಸಕಲ ಸಂಪತ್ತನೆ ಕೊಟ್ಟು ತಾ
ವಾಸ ಮಾಡೋಳು ಮನೆಯಲ್ಲಿ ೬೨

೧೧೬

ಲಾಲಿ ರಕ್ಕಸವೈರಿ ಶ್ರೀ ನಿನ್ನ ಪಾದ ಸೇವೆಯಿಂದಲಿ
ಸುಖಿಸೋಳೊ ಲಕ್ಷ್ಮೀಲೋಲ ಪಾಡಿ
ತೂಗುವಳೊ ಮೋಹದಲಿ ಯಶೋದ
ಯೋಗಿ ಜನರು ಕೊಂಡಾಡಲ್ಪಿನೋದ ೧

ದುರ್ಗೆರೂಪ ಪ್ರಳಿ(ಳಯ?)ಜಲಧಿ ಭೂದೇವಿ
ಪ್ರಜ್ವಲಿಸುವ ಆಲದೆಲೆಯು ತಾನಾಗಿ
ನಿದ್ರೆಹಸಿವು ಬಿಟ್ಟು ನಿರುತದಿ ಆತನ-
ಲ್ಲಿದ್ದಳಂಭೃಣಿ ಸ್ತೋತ್ರದಲಿ ಭೂದೇವಿ ೨

ವಟದ ಎಲೆಯ ಮೇಲೆ ವಟುವಾಗಿ ಮಲಗಿ ಉಂ-
ಗುಟವ ಬಾಯೊಳಗಿಟ್ಟು ಮುದದಿ ಚಪ್ಪರಿಸೆ
ಕಟುತರದಲಿ ನಾಲ್ಕು ವೇದವ ತೋರುತ
ಪಟುತರದಲಿ ಯೋಗನಿದ್ರೆ ಮಾಡಿದನು ೩

ಹದಿನಾಲ್ಕು ಲೋಕ ತನ್ನುದರವಲ್ಲಿಡುವ
ಪದುಮಾಕ್ಷ ಶ್ರೀಕೃಷ್ಣ ಪರಮಾತ್ಮ ಲಾಲಿ
ಅಜಭವಸುರರೆಲ್ಲ ಭಜನೆಯ ಗೈವರು
ಮುದದಿ ಶಯನವ ಮಾಡೊ ಮಧು ಮುರಾಂತಕನೆ ೪

ಕಡಲಶಯನ ಹರಿ [ಯ]ತೊಟ್ಟಿಲೊಳಿಟ್ಟು
ಬಿಡದೆ ನಾರಿಯರೆಲ್ಲ ಪಾಡಿ ತೂಗುವರು
ಪೊಡವಿಗೊಡೆಯ ನಿನ್ನ ನಾಮ ಕೊಂಡಾಡಲು
ಬಿಡದೆ ಭಕ್ತರ ಕಾಯೊ ಭೀಮೇಶಕೃಷ್ಣ ೫

[1] ನಿನಂತೆ.

### ೧೧೭

ವಸುದೇವ ಸುತನಿಗೆ ನಮೋ ನಮೋ ನಮ್ಮ
ವಸುಧೆ ಪಾಲಕನಿಗೆ ನಮೋ ನಮೋ ಪ.

ಮಚ್ಛಾವತಾರಗೆ ಮೊದಲೆ ಮಂಗಳವೆಂದು
ಸಾಕ್ಷಾತ ಕೂರ್ಮಗೆ ನಮೋ ನಮೋ
ಸುತ್ತಿ ಸುರುಳಿ ಭೂಮಿ ಒಯ್ದ್ಹಿರಣ್ಯಾಕ್ಷಕನ
ಪ್ರಾಣ್ಹತ್ಯ ಮಾಡಿದ ವರಾಹ ನಮೋ ನಮೋ ೧

ಕೂಸು ಕರೆಯೆ ಕಂಬದಿಂದ ಬಂದ್ಹಿರಣ್ಯ-
ಕಶ್ಯಪನ ಕೊಂದ್ಹರಿಗೆ ನಮೋ ನಮೋ
ಆಕಾಶವ್ಹಿಡಿಯದೆ ಬೆಳೆದು ಬಲಿಯ ಭಾಗ್ಯ
ಆಕ್ರಮಿಸಿದಾತಗೆ ನಮೋ ನಮೋ ೨

ಪೊತ್ತು ಕೊಡಲಿ ಕ್ಷತ್ರಿಯರ ಕಡಿದ ಸ-
ಮರ್ಥ ಭಾರ್ಗವ ನಮೋ ನಮೋ
ಹತ್ತು ಶಿರಗಳ ಕೊಂದು ಸೀತಾಸಮೇತನಾದ
ಪೃಥಿವಿ ಪಾಲಕ ರಾಮ ನಮೋ ನಮೋ ೩

ಬೆರಳಲಿ ಗೋವರ್ಧನ ಎತ್ತ್ಯಾಕಳಕಾಯ್ದ
ಕೊಳಲ ನೂದುವ ಕೃಷ್ಣ ನಮೋ ನಮೋ
ತರಳರೂಪದಿ ತ್ರಿಪುರದ ದುರುಳರನೆಲ್ಲ
ಮರುಳು ಮಾಡಿದ ಬೌದ್ಧ ನಮೋ ನಮೋ ೪

ಮುದ್ದು ತೇಜಿಯನೇರಿ ಕಲಿಗಳ ಕಡಿದಂಥ
ಕಲ್ಕ್ಯಾವತಾರಗೆ ನಮೋ ನಮೋ
ಶುದ್ಧವೈಷ್ಣವರಿಗೆ ಸುಲಭದಿಂದೊಲಿದು ಮುಕ್ತಿ
ಕೊಡುವೊ ಭೀಮೇಶ ಕೃಷ್ಣಗೆ ನಮೋ ನಮೋ ೫

### ೧೧೮

ವಂದಿಸಿ ಬೇಡುವೆ ನಾ ವರಗಳ
ವಂದಿಸಿ ಬೇಡುವೆ ನಾ-
ವಂದಿಸಿ ಬೇಡುವೆ ಇಂದಿರೆ ಮುಡಿದಂಥ
ಕುಂದ ಮಂದಾರ ನಂದಿವರ್ಧನ ನಾಗಸಂಪಿಗೆ ಪ.

ಹಸಿರುಶಾವಂತಿಗೆ ಕುಸುಮ ಮಲ್ಲಿಗೆದಂಡೆ
ಎಸೆವೊ ಕ್ಯಾದಿಗೆ ಪಾರಿಜಾತದ ವರಗಳ ೧

ಕಟ್ಟಿದ್ದ ಮಾಂಗಲ್ಯ ಕುಂಕುಮ ಗಾಜಿನ ಬಳೆ
ಮುತ್ತೈದೆತನ ಸಂಪತ್ತು ಸಂತಾನಕೆ ೨

ಕಮಲಾಕಾಂತ ಭೀಮೇಶಕೃಷ್ಣನ್ನ ರಾಣಿ ಮುಡಿದ
ಕಮಲ ಮಲ್ಲಿಗೆ ಕಾಮಿತಾರ್ಥದ ವರಗಳ ೩

೧೧೯

ವಂದಿಸುವಾನರ ಶ್ರೇಷ್ಠಗ್ವಂದಿಸು ಪ.

ಕೇಸರಿ ಸುತನಾದ ಭೂ ತನುಜಳ ವಾರ್ತೆ
ಲೇಸಾಗಿ ತಂದ ಪ್ರಾಣೇಶನ ಪಾದಕ್ಕೆ ೧

ಸುಗ್ರೀವನಗ್ರಜನಾಗ್ರ[ಹ]ದಿ ಕೊಲಿಸಿದ ದ-
ಶಗ್ರೀವನ ಬಲ ನೆಗ್ಗೊತ್ತಿದ್ವಾನರಗೆ ೨

ಭೂಮಿಗೊಡೆಯ ಸೀತಾರಾಮಸೇವಕನಂಘ್ರಿ
ಪ್ರೇಮದಿ ಭಜಿಪೋ ಭೀಮೇಶಕೃಷ್ಣನ ಭಕ್ತಗೆ ೩

೧೨೦

ವಂದಿಸುವೆನು ನಿನ್ನ ಅರವಿಂದ ಲೋಚನ-
ದಿಂದ ನೋಡೊ ನೀ ಎನ್ನ
ವಂದಿಸುವೆ ಅರವಿಂದ ಲೋಚನ-
ದಿಂದ ನೋಡೊ ದಯಾಸಿಂಧು ಎನಿಸುವೆ
ನಂದನಂದನನಾದ ಶ್ರೀ ಮುಕುಂದ ನೀ ಮುಚು-
ಕುಂದ ವರದ ವಂದಿಸುವೆನು ನಿನ್ನ ಪ.

ಅಂಬರೀಷನು ಏನೋ ಮುಚುಕುಂದ ಮುನಿವರ-
ನೆಂದು ರಕ್ಷಿಸುವೇನೊ ದ್ವಿಜ ತಂದವಲಕ್ಕಿ
ತಿಂದ ಭಿಡೆಯುಗಳೇನೊ ನೀನೆ ಸುರಧೇನು
ಕಂದ ಧ್ರುವ ಪ್ರಹ್ಲಾದ ಕರೆಯಲು
ಬಂದು ಭರದಿಂದವರ ಸಲಹಿದೆ ಮಂದಮತಿ ನಾ ಮ-
ತ್ತೊಂದನರಿಯದೆ ವಂದಿಸುವೆನು ನಿನ್ನ ೧

ಗಜನು ಅಜಮಿಳನೇನೊ ಪಾದಾಂಬುಜ ಸ್ತುತಿಸ-
ಲಜಸುತನು ನಾರದನೇನೊ
ನಿಜ ಭಕುತಿಯಿಂದಿರಲ್ವಿದುರ ಉದ್ಧವನೇನೊ
ನದಿಯಲ್ಲಿ ನಿನ್ನ ನಿಜಸ್ವರೂಪವ ತೋರಲಿಕ್ಕೆ
ನಿನ್ನ ಬಾಂಧವಕ್ರೂರನೇ ನಾ ಕೇಳು ಘನ್ನಮಹಿಮ
ಪ್ರಸನ್ನನಾಗಲಿಕ್ವಂದಿಸುವೆನು ನಿನ್ನ ೨

ಸತ್ವರೊಳು ನಾನಲ್ಲ ಅಹಲ್ಯೆ ದ್ರೌಪದಿ ಭಕ್ತಿ
ನೊದಲೆನಗಿಲ್ಲ ಪಾಂಡವರ ದುರಿತಾಪತ್ತು
ಕಳೆದ್ಯೊ ನೀಯೆಲ್ಲ ಕೇಳೆನ್ನ ಸೊಲ್ಲ
ಭಕ್ತಾಧೀನನೆ ಭಯನಿವಾರಣ
ಇಷ್ಟು ಭವಭಯ ಬಿಡಿಸಿ ಭೀಮೇಶಕೃಷ್ಣ ನಿನ್ನದಯ-
ವಿಟ್ಟುಕರುಣಿಸೊ ವಂದಿಸುವೆನು ನಿನ್ನ ೩

೧೨೧

*

ವಾರಿಜನಾಭನ ವನಜಾಂಘ್ರಿಗಳಿಗೆ
ಜೋಡಿಸಿ ಕರವ ಕೊಂಡಾಡುವೆ ಪದವ ೧

ದೇವದೈತ್ಯರು ಕೂಡಿ ಪಾಲಾಂಬುಧಿಯಲ್ಲಿ
ಮೇರು ಮಂದರವ ಕಡೆಗೋಲು ಮಾಡಿದರು ೨

ಗಿರಿಗೆ ವಾಸುಕಿ ಸುತ್ತಿ ಶರಧಿ ಮಧ್ಯದಲಿ
ಹರಿ ಕೂರುಮನಾಗಿ ಮಂದರವನೆತ್ತಿದನು ೩

ಕಾಲಕೂಟ ವಿಷವಾಯು ಪಾನಮಾಡುತಲಿ
ಮಹದೇವ ಕೋಪದಿ ನುಂಗಿ ನೀಲಕಂಠನಿಸೆ ೪

ರತ್ನ ಕೌಸ್ತುಭ ಕಾಮಧೇನು ಸುರತರುವು
ಹಸ್ತಿ ತೇಜಿಯು ಕಲ್ಪವೃಕ್ಷ ಸುಧೆ ಉದಿಸೆ ೫

---

* ಅಮೃತಮಥನ ಮಾಡಿದ್ದು.

ಸಿಂಧು ಮಥನವ ಮಾಡಲು ಶ್ರೀದೇವಿ ಜನಿಸೆ
ಮಂದಾರಮಾಲೆ ಕೈಯಿಂದಲಿ ಪಿಡಿದು ೬

ಅರ್ಕಚಂದ್ರರ ಕಾಂತಿಗಧಿಕಾದ ಮುಖವು
ದಿಕ್ಕು ದಿಕ್ಕಿಗೆ ಮಿಂಚಿನಂತೆ ಹೊಳೆಯುತಲಿ ೭

ವಜ್ರಾಭರಣವು ಕಾಲಗೆಜ್ಜೆ ಸರಪಳಿಯು ಮಲ್ಲಿಗೆ
ಕುಸುಮಗಳೊಂದೊಂದ್ಹೆಜ್ಜೆಗುದುರುತಲಿ ೮

ಕುಡಿಹುಬ್ಬು ಕಡೆಗಣ್ಣ ನೋಡುತಲಿ ನಡೆದು
ಬಂದಳು ತಾ ಬಡನಡುವಿನ ಒಯ್ಯಾರಿ ೯

ಅತಿಹಾಸ್ಯಗಳಿಂದ ದೇವತೆಗಳ ಮಧ್ಯೆ ಈ
ಪೃಥಿವಿಗುತ್ತಮನಾದ ಪತಿ ಎಲ್ಲಿಹನೋ ತಾ ೧೦

ಅರ್ಕನ್ವಲ್ಲೆನೆ ಅಗ್ನಿಯಂತೆ ಸುಡುತಿರುವನ
ಶಕ್ರನ ಒಲ್ಲೆ ಮೈಯೆಲ್ಲ ಕಣ್ಣವಗೆ ೧೧

ಸೋಮನ ಒಲ್ಲೆ ಕಳೆಗುಂದಿ ತಿರುಗುವನ
ಪಾವನ ನಮ್ಮ ಗಾಳಿರೂಪದವನ ೧೨

ರುದ್ರನ್ವಲ್ಲೆನೆ ರುಂಡಮಾಲೆ ಹಾಕುವನ
ಮುದಿಹದ್ದಿನಂದದಲಿ ಗರುಡ ಹಾರ್ಯಾಡುವನಲ್ಲೆ ೧೩

ಶೇಷನ ಒಲ್ಲೆ ವಿಷದ ದೇಹದವನ ಗ-
ಣೇಶನ್ವಲ್ಲೆನೆ ಡೊಳ್ಳುಹೊಟ್ಟೆ ಗಜಮುಖನ ೧೪

ಬ್ರಹ್ಮ ನಾಲಕು ಮೋರೆಗುಮ್ಮನಂತಿರುವ ಯಮ-
ಧರ್ಮನ ಒಲ್ಲೆ ನಿಷ್ಕರುಣ ಘಾತಕನ ೧೫

ನಾರದ ನರೆಗಡ್ಡ ಚಾಡಿಕೋರ್ಯವನ ನೊಲ್ಲೆ
ಸುರಜನರ ನೋಡಿ ಗಾಬರ್ಯಾಗುವೆನು ೧೬

ಮಂದ ಹಾಸ್ಯಗಳಿಂದ ಮಾತನಾಡುತಲಿ
ಇಂದಿರೆಪತಿಪಾದಾರವಿಂದ ನೋಡುತಲಿ ೧೭

ಗುಣದಲ್ಲಿ ಗಂಭೀರ ಮಣಿಕೋಟತೇಜ
ಎಣಿಕಿಲ್ಲದ ಚೆಲುವ ನೋಡೆನ್ನ ಪ್ರಾಣನಾಥ ೧೮

ಹದಿನಾಲ್ಕು ಲೋಕ ತನ್ನುದರದಲ್ಲಿರುವ
ಪದುಮಾಕ್ಷಗ್ವನ ಮಾಲೆ ಮುದದಿಂದ್ಹಾಕುವೆನು ೧೯

ವರ ಶಂಖ ಚಕ್ರ ಕರ ಮೆರೆವೋ ವೈಜಯಂತಿ ಸರ
ಕೌಸ್ತುಭ ಮಣಿ ನಾ ಇರುತಿರೆ ವಕ್ಷಸ್ಥಳವು ೨೦

ಶ್ಯಾಮವರ್ಣನ ಮುದ್ದು ಕಾಮನ ಜನಕ
ಪ್ರೇಮದಿಂದ್ವೊಲಿವೆ ನಾ ಕಾಮಿಸಿ ಹರಿಯ ೨೧

ಕಮಲಮುಖಿ ಬ್ಯಾಗ ಕಮಲಾಕ್ಷನ್ನ ನೋಡಿ
ಕಮಲಮಾಲೆಯ ತಾ ಕಂದರದಲ್ಹಾಕಿದಳು ೨೨

ರಂಗರಾಯನ ಸುಂದರಾಂಗಕ್ವನಮಾಲೆ
ಅಂಗನೆ ರಚಿಸಿ ತಾ ನಿಂತಳು ನಗುತ ೨೩

ರತ್ನ ಮಂಟಪ ಚಿನ್ನ ಚಿತ್ರ ಪೀಠದಲಿ
ಲಕ್ಷ್ಮೀ ನಾರಾಯಣರು ಒಪ್ಪಿ ಕುಳಿತಿರಲು ೨೪

ಸಾಗರರಾಜ ತನ್ನ ಭಾಗೀರಥಿ ಕೂಡಿ
ಬ್ಯಾಗ ಬಂದ್ಹರಿಗೆ ಸಿರಿ ಧಾರೆಯನೆರೆದ ೨೫

ಅಚ್ಚಕರಿಮಣಿ ಮಂಗಳ ಸೂತ್ರವ ಪಿಡಿದು
ಅಚ್ಯುತ ಲಕುಮಿಗೆ ಕಟ್ಟಿದ ನಗುತ ೨೬

ಮೇಲು ಕರಿಮಣಿ ಮಂಗಳ ಸೂತ್ರವ ಪಿಡಿದು
ಶ್ರೀ ಲೋಲ ಲಕುಮಿಗೆ ತಾ ಕಟ್ಟಿದ ನಗುತ ೨೭

ವಂಕಿ ಕಂಕಣ ಮುತ್ತಿನ ಪಂಚಾಳಿಪದಕ
ಪಂಕಜಮುಖಿಗೆ ಅಲಂಕರಿಸಿದರು ೨೮

ಸರಿಗೆ ಸರಗಳು ನಾಗಮುರಿಗೆ ಕಟ್ಟಾಣಿ
ವರಮಾಲಕ್ಷುಮಿಯ ಸಿರಿಮುಡಿಗೆ ಮಲ್ಲಿಗೆಯ ೨೯

ನಡುನಿನ್ನೊಡ್ಯಾಣ ಹೊಸ ಬಿಡಿಮುತ್ತಿನ ದಂಡೆ
ಮಡದಿ ಸಿರಿ ಪರಮಾತ್ಮನ ತೊಡೆಯಲ್ಲೊಪ್ಪಿರಲು ೩೦

ಮಂದರೋದ್ಧರ ನೋಡುತ ಇಂದಿರೆ ಮುಖವ ಆ-
ನಂದ ಬಾಷ್ಪಗಳು ಕಣ್ಣಿಂದಲುದುರಿದುವು ೩೧

ರಂಗನ ಕಂಗಳ ಬಿಂದು ಮಾತ್ರದಲಿ
ಅಂಗನೆ ತುಳಸಿ ತಾನವತರಿಸಿದಳು ೩೨

ಪಚ್ಚದಂತ್ಹೊಳೆವೊ ಶ್ರೀ ತುಳಸಿ ದೇವಿಯರ
ಅಚ್ಯುತ ತನ್ನಂಕದಲ್ಲಿ ಧರಿಸಿದನು ೩೩

ಮಂಗಳಾಷ್ಟಕ ಹೇಳುತ ಇಂದ್ರಾದಿ ಸುರರು
ರಂಗ ಲಕ್ಷ್ಮಿಗೆ ಲಗ್ನವ ಮಾಡಿಸಿದರು ೩೪

ಅಂತರಿಕ್ಷದಿ ಭೇರಿನಾದ ಸುರತರುವು
ನಿಂತು ಕರೆದಿತು ದಿವ್ಯ ಸಂಪಿಗೆ ಮಳೆಯ ೩೫

ಲಾಜಾಹೋಮವ ಮಾಡಿ ಭೂಮವನುಂಡು
ನಾಗಶಯನಗೆ ನಾಗೋಲಿ ಮಾಡಿದರು ೩೬

ಸಿಂಧುರಾಜನ ರಾಣಿಗೆ ಸಿಂಧೂಪವನಿತ್ತು
ತಂಡುಲುಪ್ಪಿನಲಿ ಗಜ ಚೆಂದದಿ ಬರೆದು ೩೭

ಎಲೆ ಸ್ತ್ರೀಯೆ ಎನ್ನಾನೆ ಎಣಿಕಿಲ್ಲದ್ಹಣವು
ಚೆಲುವೆ ನೀ ಬೇಕಾದರೆ ಹಿಡಿಯೆಂದನು ರಂಗ ೩೮

ಅಚ್ಯುತ ಎನ್ನಾನೆ ಲೆಕ್ಕಿಲ್ಲದ್ಹಣವ ಕೊಟ್ಟರೆ
ಕೊಡುವೆನೆಂದಳು ಲಕ್ಷ್ಮಿ ನಗುತ ೩೯

ಮುತ್ತು ಮಾಣಿಕ್ಯ ತುಂಬಿ ಮರದ ಬಾಗಿನವ
ಕೊಟ್ಟಳು ಸಿರಿ ತಾ ಋಷಿಪತ್ನೇರನೆ ಕರೆದು ೪೦

ಹವಳ ಮಾಣಿಕ್ಯ ತುಂಬಿ ಮರದ ಬಾಗಿನವ
ಹರದಿ ಕೊಟ್ಟಳು ತಾ ಋಷಿಪತ್ನೇರನೆ ಕರೆದು ೪೧

ಕುಂದಣದ್ತೊನ್ನಕೂಸಿನ ತೊಟ್ಟಿಲೊಳಿಟ್ಟು
ಕಂದನಾಡಿಸಿ ಜೋಜೋ ಎಂದು ಪಾಡಿದರು ೪೨

ಹರಬ್ರಹ್ಮರಿಗೆ ಆರೋಗಣೆ ಮಾಡಿಸಬೇಕು
ಸಿರಿ ನಿನ್ನ ಕೂಸಿನ ಕರಿ ಎಂದನು ರಂಗ ೪೩

ಸುರದೇವತೆಗಳಿಗೆ ಸುಧೆ ಎರೆಯಬೇಕಿನ್ನು
ಹರಿ ನಿನ್ನ ಕೂಸನು ಕರಿ ಎಂದಳು ಲಕ್ಷ್ಮಿ ೪೪

ಹೆಣ್ಣನೊಪ್ಪಿಸಿಕೊಟ್ಟು ಚಿನ್ನದಾರತಿಯು
ಕರ್ನೆ(ನ್ಯೆ?) ಸರಸ್ವತಿ ಭಾರತಿ ಬೆಳಗಿದರಾಗ ೪೫

ಈರೇಳು ಲೋಕದೊಡೆಯನು ನೀನಾಗೆಂದು
ಬಹುಜನರ್ಥರಸ್ಯೆರೆದರು ಮಂತ್ರಾಕ್ಷತೆಯು ೪೬

ಪೀತಾಂಬರಧಾರಿ ತನ್ನ ಪ್ರೀತ್ಯುಳ್ಳಜನಕೆ
ಮಾತುಳಾಂತಕ ನಾಮನೆ ಪ್ರಸ್ತ ಮಾಡಿದನು ೪೭

ಸಾಲು ಕುಡಿಎಲೆ ಹಾಕಿ ಮೇಲು ಮಂಡಿಗೆಯು
ಹಾಲು ಸಕ್ಕರೆ ಶಾಖ ಪಾಕ ಬಡಿಸಿದರು ೪೮

ಎಣ್ಣೋರಿಗೆ ಫೇಣಿ ಪರಮಾನ್ನ ಶಾಲ್ಯಾನ್ನ
ಸಣ್ಣಶ್ಯಾವಿಗೆ ತುಪ್ಪವನ್ನು ಬಡಿಸಿದರು ೪೯

ಏಕಾಪೋಶನ ಹಾಕಿದ ಶ್ರೀಕಾಂತಾಮೃತವ
ಆ ಕಾಲದಿ ಸುರರುಂಡು ತೃಪ್ತರಾಗಿಹರು ೫೦

ಈ ಮಹಾ ಅಮೃತ ಮಥನವ ಕೇಳಿದ ಜನಕೆ
ಪ್ರೇಮದಿಂದ್ವೊಲಿವೊನಾ ಭೀಮೇಶಕೃಷ್ಣ ೫೧

೧೨೨

ಸುಳಾದಿ

[ಧ್ರುವತಾಳ]

ವಾರಿಧಿಯೊಳಗೆ ಓಡ್ಯಾಡಿ ನಾರುವುದೇನೊ ಮಂ-
ದರವ ಹೊತ್ತು ನೀ ಧರನಾ(ಧರೆಯ?)ಹೊರುವುದೇನು

ಊರು(ಉರ?)ಬಗೆದು ಕರುಳ್ಹಾರ ಹಾಕುವುದೇನು
ದೂರ ಜಿಗಿದು ಸುಳ್ಳ(ಸುಳ್ಳಿ?) ಪೋರನೆನಿಪದೇನು
ದೂರಾಗಿ ಜನನಿ ಕೊಂದ ಸ್ವಾರಸ್ಯಗಳೇನು
ನಾರುಟ್ಟಾರಣ್ಯದಿ ನಾರಿಬಿಡುವುದೇನು ಅ-
ಪಾರ ಹೆಂಡಿರ ಸಂಸಾರ ಘೋರವಿದೇನು
ಜಾರಾಗಿ ಜನಕೆ ಶರೀರ ತೋರುವುದೇನು
ಕ್ರೂರ ಕಲಿಗಳ ನೀ ಸಂಹಾರ ಮಾಡುವುದೇನು
ಧೀರ ನಮ್ಮೆದುರು ನಿಲ್ಲಬಾರದೇನು
ಮಾರಜನಕ ಭೀಮೇಶಕೃಷ್ಣನೆ
ಮರೆಯಾಗಿದ್ದರೇನೊ ಮರೆಯದಂತಿರೊ ೧

## [ಮಠ್ಯತಾಳ]

ನೀರಶಯನನೆ ನಿಂತು ಕೇಳಿನವಮಾತು ನೀ ದಶ ಅವ-
ತಾರ ಆಗಲೀ ಪರಿಯಿಂದ
ದಾರಿಂದ ನಿನಗೇನುದ್ಧಾರವಾಗುವುದೇನೊ ಸ್ವಾಮಿ
ಶ್ರೀರಮಣನೆ
ಕಾರುಣ್ಯನಿಧಿ ಕಾಮಧೇನು ಕಲ್ಪವೃಕ್ಷ ನೀನೆಂದು ತಿಳಿದಿದ್ದೆ
ಗೋ ವೃಂದಾವನ ಪಾದ ಗೋವರ್ಧನೋದ್ಧಾರ ಭುವನಾಧಿ-
ಪತಿಯೆ ನೀ ಬಹುಮಾನಕರ್ತನೆ
ಆವನಿಪಾಲಕ ನಿನ್ನವನೆಂದು ರಕ್ಷಿಸಿ ಜವನ ಪುರದ ಹಾದಿ
ಮೆಟ್ಟಿಸದಿರೆನ್ನ ಜನನ ಮರಣ ಸ್ಥಿತಿ ಜಾತಕಾಲಕು ನೀನೆ
ಜನನಿ ಜನಕರು ಹಿಂದೆಷ್ಟೋ ಮುಂದೆಣಿಕಿಲ್ಲ ವನಜಪತಿಯೆ
ವೈ(ವಹಿ?)ಸಲಿ ಬೇಕೊ ಎನಭಾರ ನನಗೂ ನಿನಗೂ ಬಿಟ್ಟದ್ದಲ್ಲೊ
ಭೀಮೇಶಕೃಷ್ಣ ಅನುಮಾನವ್ಯಾತಕೀಗೆನ್ನ ಮಾನ
ಕಾಯ್ದುಕೊಳ್ಳೊ ೨

## [ರೂಪಕ ತಾಳ]

ನೇಮ ನಿತ್ಯವು ನಿನ್ನ ನಾಮ ಬಿಟ್ಟವಗ್ಯಾಕೆ
ಸ್ನಾನವ್ಯಾತಕೆ ನಿರ್ಮಲಚಿತ್ತನಾಗದೆ
ಮೌನ ಮಂತ್ರವು ಯಾಕೆ ಮನಶುದ್ಧಿಯಿಲ್ಲದೆ
ದಾನವ್ಯಾತಕೆ ಕಾಮಕ್ರೋಧವ ಬಿಡದಲೆ
ಆನಕದುಂ[1][ದುಭಿಗಳಿ][1]ಲ್ಲದೆ ಆದರೊಳು

[1] ಧುವಿಸು ನಿ

ಗಾನವ್ಯಾತಕೆ ಗಾರ್ದಭಸ್ವರನಂದದಿ
ಧೇನುಪಾಲಕನ ಬಿಟ್ಟೇನು ಕರ್ಮಂಗಳ
ಮಾಡಿದರದು ವ್ಯರ್ಥ ಆಗುವುದಲ್ಲದೆ
ನಾಲಿಗಿಲ್ಲದ ಗಂಟೆ ಬಾರಿಸಲದರಿಂದ
ನಾದವುಂಟಾಗೋವೇ ನಾಕಾಣೆನೆಲ್ಲೆಲ್ಲೂ
ನಾರಾಯಣನೆಂಬೊ ನಾಲ್ಕು ಅಕ್ಷರವು
ನಾಲಿಗೆಲಿರಲು ನರಕಭಯವಿಲ್ಲವು
ಶ್ರೀ ಭೂರಮಣ ಭೀಮೇಶಕೃಷ್ಣನೆ ಭವ-
ಸಾಗರ ದಾಟಿಸಿ ಸುಖದಿಂದಿಡುವುದೊ ೩

[ಅಟ್ಟತಾಳ]

ಮಗನ ಕರೆದು ಮುಕ್ತಿ ಪಡೆದಜಾಮಿಳನ ನೋಡು
ಸುಜನ ಪ್ರಹ್ಲಾದ ಸುರರಿಂದ ಮಾನಿತನಾದ
ಭುಜಬಲಿಯಾದ ಧ್ರುವ ನಿಜಲೋಕದಲ್ಲಿಹ
ಭಜಿಸುತ ಬಂದ ದರಿದ್ರ ಧನಿಕನಾದ
ಅಜಭವ ನಾರಂದ ಸುರಮುನಿಗಳು ನಿನ್ನ
ಪದವ ಭಜಿಸಿ ಮುಕ್ತಿಪಡೆದರಾನಂದವ
ವಧೆಯ ಮಾಡಿಸಲು ಬಂದಾತಗೆ ನಿಜರೂಪ
ನದಿಯಲ್ಲಿ ತೋರಿದ ನಿನ್ನ ಕರುಣವೆಷ್ಟೊ
ಮದವೇರಿದ ಗಜ ಒದರುತಿರಲು ಕಾಲು
ಕೆದರೊ ಮಕರಿ ಹಲ್ಲ ಮುರಿದ ಮುರಾರಿಯೆ
ಒದೆಯ ಬಂದವರಿಗೆಷ್ಟೊ ವಂದಿಸಿ ಉಪಚಾರ
ಮೈಗೆ ಸುತ್ತಿ ಕಚ್ಚಿದ ಕಾಳಿಂಗನುಳುಹಿದೊ
ಹೊಯ್ದ ಬಾಣದಿ ಭೀಷ್ಮ ಎಯ್ದಿದನೊ ವೈಕುಂಠ
ಬಯ್ದು ಸೂರೆಣಿಕೆಯಿಂದಾದನೊ ನಿನ ಬಂಟ
ಐದುಮಂದಿಗೆ ಸತಿಯಾದ ದ್ರೌಪದಿವ್ಯಸನ
ಬಿಡಿಸಿ ಅಕ್ಷಯವಸನವಿತ್ತುದಾರಿಯಾದೆ
ಅದ್ಭುತ ಮಹಿಮನಂಗಾಲು ಸೋಕಲು ದೋಷ
ಕಳೆದು ನಿರ್ಮಲದೇಹ ಆದಳಾಗಹಲ್ಯೆ ಬಡಿವಾರವೇನೊ
ಭಕ್ತರಿಂದ ನಿನಕೀರ್ತಿ ನಡೆವ್ರೋದು ಹದಿನಾಲ್ಕುಲೋಕದೊಳಲ್ಲದೆ
ಅಡಿಗೆರಗುವೆನೊ ಅನಂತ ಹಸ್ತಗಳಿಂದ ಪಿಡಿಯೆನ್ನ ಕೈಯ
ಭೀಮೇಶಕೃಷ್ಣ ನಮ್ಮಯ್ಯ ೪

[ಝಂಪೆತಾಳ]

ವಾಸುದೇವನೆ ನೀನು ವಸುದೇವನ ಸುತನೆ
ವಾಸವಿಸಖನಾದ ಸಾಸಿರಫಣಿಶಯನ
ದೇಶದೇಶದಿ ವ್ಯಾಪ್ತ ಏ ಸಿರಿಪತಿ ಕೇಳೊ
ಮೋಸವಾದ ಭವಪಾಶದೊಳಗೆ ಸಿಲ್ಕಿ
ಘಾಸಿಯಾಗಲು ನೋಡಿ ತಮಾಷೆಯಾಗಿದೆ ನಿನಗೆ
ಈಶ ಜೀವರಿಗಿನ್ನೂ ಉತ್ತಮ ನೀನಾಗಿ
ಬ್ಯಾಸರದಲೆ ಬೇಡಿದಿಷ್ಟಾರ್ಥವ ನೀಡಿ
ನಾಶರಹಿತ ನಿನಗೆ ನಾ ಸೆರಗೊಡ್ಡುವೆನು
ಆಶೀರ್ವಾದವನೆ ಮಾಡೊ ಮಹಾಪುರುಷ
ಕ್ಲೇಶ ದೋಷಗಳೆಂಬೊ ಕೇಡು ಕಡೆಗೆ ತೆಗೆಯೊ ಉ-
ದಾಸೀನ ಮಾಡುವುದು ಉತ್ತಮ ನಡತ್ಯಲ್ಲ
ದೋಷದೂರನೆ ಎನ್ನ ದೂರನೋಡುವುದ್ಯಾಕೊ
ಭೂಸುರರಿಗೆ ಒಡೆಯನಾದ ಭೀಮೇಶಕೃಷ್ಣ ಸಂ-
ತೋಷ ಸದಾನಂದ ನೀಡೊ ಎನಗೆ ಗೋವಿಂದ ೫

[ಜತೆ]

ಎಷ್ಟಪರಾಧಿ ನಾನಾದರು ಭೀಮೇಶಕೃಷ್ಣ ನಿನ-
ಗಪಕೀರ್ತಿ ಬಾಹುದೋ ನಾನರಿಯೆ ೬

೧೨೩

*

ವಿಷ್ಣುಪಾದವ ನೋಡಿದೆ ಎನ್ನ ಮನ-
ದಿಷ್ಟ ಫಲಗಳ ಬೇಡಿದೆ
ವಿಷ್ಣುಪಾದವ ನೋಡ್ಯಭೀಷ್ಟ ಫಲಗಳ ಬೇಡಿ
ಶ್ರೇಷ್ಠಪಾದಕೆ ಶಿರವ ಮುಟ್ಟಿಸ್ವಂದನೆ ಮಾಡಿ ಪ.

ಗಂಗೆ ಹುಟ್ಟಿದ್ದ ಪಾದ ಇದು ನೋಡೆ
ಗಯನ ಮೆಟ್ಟಿದ್ದ ಪಾದ

* ಗಯಾದಲ್ಲಿರುವ ವಿಷ್ಣುಪಾದ.

ತಂಗಿ ದ್ರೌಪದಿದೇವಿಪತಿಗೆ ಸಾರಥಿಯಾಗಿ
ಸಂಗ್ರಾಮದಿ ರಥವ ನೆಲಕೊತ್ತಿ ಉಳುಹಿದ ಪಾದ ೧

ಧ್ವಜ ವಜ್ರಾಂಕುಶದ ಪಾದ ಶಂಖವು
ಚಕ್ರಪದ್ಮರೇಖ್ಯುಳ್ಳ ಪಾದ
ಮಥುರೆಯಲಿ ಮಾವನ ಮಂಚಿಕೆಯಲ್ಲಾರಿ
ವಧೆಯ ಮಾಡಿ ಮಾತೆಬದಿಲಿ ಬಂದ ಪಾದ ೨

ಬಲಿಯ ಶಿರ ತುಳಿದ ಪಾದ
ನೆಲನ ಮೂರಡಿಯ ಮಾಡಿದ್ದ ಪಾದ
ಶಿಲೆಯಾದಹಲ್ಯೆಯ ಉದ್ಧಾರವನು ಮಾಡಿ
ಮಲತಾಯಿಯ ಮಾತಿಗರಣ್ಯ ತಿರುಗಿದ ಪಾದ ೩

ಖಗನ ಹೆಗಲೇರೊ ಪಾದ ಕಾಳಿಫಣ
ಜಿಗಿದು ತುಳಿದಂಥ ಪಾದ
ಅಗರು ಕೇಸರಿ ಗಂಧದಿಂದ ಪೂಜಿತ ಪಾದ ಕಾ-
ಲುಗುರಿನಲಿ ಬ್ರಹ್ಮಾಂಡ ಕಟಾಹ ಸೀಳಿದ ಪಾದ ೪

ಲಕ್ಷ್ಮಿ ಸೇವಿಸುವ ಪಾದ ಈ ಗಯದಿ
ಸಾಕ್ಷಾತ ಹರಿಯ ಪಾದ
ಕುಕ್ಷಿಯಲಿ ತ್ರಿಜಗವಿಟ್ಟು ರಕ್ಷಿಸುವಂಥ
ಮೋಕ್ಷಪ್ರದ ಭೀಮೇಶ ಕೃಷ್ಣಮೂರುತಿ ಪಾದ ೫

## ೧೨೪

ವ್ಯರ್ಥವಾಗೊದೊ ಜನ್ಮ ಸಾರ್ಥಕಾಗದೊ
ಭಕ್ತಿಭಾವದಿಂದ ಪುರುಷೋತ್ತಮನ ಪೂಜಿಸದ ಜನ್ಮ ಪ.

ಪರಮ ಶ್ರೇಷ್ಠಜನ್ಮದಿ ಬಂದು ಪರಮ ಭಕುತಿಯಿಂದಲೀಗ
ಪರಮಾತ್ಮನ್ನ ಪಾದವ ಭಜಿಸದೆ ಪಾಮರನಾಗಿ ಕಳೆವೋ ಜನ್ಮ ೧

ಲಕ್ಷ್ಯೆ ಇಟ್ಟಧೋಕ್ಷಜ ನಿನ್ನನುಗ್ರಹ ಅಪೇಕ್ಷಿಸದಲೆ
ಲಕ್ಷ್ಮೀಪತಿಯ ಪಾದವನ್ನಲಕ್ಷ್ಯಮಾಡಿದವನ ಜನ್ಮ ೨

ಪಂಚ ಇಂದ್ರಿಯಗಳನು ಜಯಿಸಿ ಸಂಚಿತಾದಿ ಕರ್ಮ ಕಳೆದು
ಪಂಚಮುಖನ ಪ್ರಿಯನ ನಾಮ ಮುಂಚೆ ನೆನೆಯದವನ ಜನ್ಮ ೩

ನಿತ್ಯನಿನ್ನ ನಾಮಬಿಟ್ಟನಿತ್ಯ ಮಾರ್ಗ ಹಿಡಿದು ಮುಂದೆ
ಕೆಟ್ಟು ಹೋಗೋದಕ್ಕೆ ಒಡಂಬಟ್ಟು ಹರಿಯ ಬಿಟ್ಟ ಜನ್ಮ ೪

ಏಸುಏಸು ಜನ್ಮದಲ್ಲಿ ಬ್ಯಾಸರದಲೆ ಸಲಹುತಿಹ ಭೀ–
ಮೇಶಕೃಷ್ಣನಂಘ್ರಿಗಳನು ದರ್ಶನ ಮಾಡಿದವನ ಜನ್ಮ ೫

೧೨೫

*

ಶ್ರವಣ ಮಂಗಳನೀವುದೊ ಎನ್ನ ಕರ್ಣಗಳಿಗಾ–
ನಂದ ಕೊಡುವುದು ಶರಣ ಜನರಿಗೆ
ಬಂದ ದುರಿತಗಳ್ಹರಣ ಮಾಡುವುದು ೧

ಭರಣ ಭೂಷಿತನಾದ ಲಕ್ಷ್ಮೀರಮಣ ನೀಲಾ–
ವರಣ ನಿನ್ನ ಝಣ ಝಣಂದಿಗೆ
ನಾದ ನೂಪುರ ಚರಣಕ್ವಂದಿಸುವೆ ೨

ಕಮಲನಾಳದಿ ಪುಟ್ಟಿದಾತನ ಜನನಿ ಪತಿ
ಜಗಜ್ಜನಕ ನಿನ್ನ ವನಜಪಾದಕೆ
ನಮಿಸುವೆನೊ ಈ ಮನವು ನಿನ್ನಲ್ಲಿ ೩

ನಿಲಿಸಿದರೆ ನಾ ನಿನ್ನ ನಾಮವ ನೆನೆಸಿದರೆ
ಫಲ ಫಲಿಸಿ ಬಾಹೋದು ಒಲಿಸುವನು
ವೈಕುಂಠಪತಿ ನೀ ಮನಸು ಮಾಡುವರೆ ೪

ಘನಮಹಿಮ ಗಾಂಧಾರಿ ಸುತರನು ಹನನ ಮಾಡಿದ
ಪವನ ಪ್ರಿಯನೇ ಜನುಮ ಜನುಮದಿ
ನಿನ್ನ ಬಿಡೆ ನಾ ಜಗದ ವಲ್ಲಭನೆ ೫

ಅಂಗಜನ ಪತಿ ನಿನ್ನ ಸುಂದರಾಂಗವನು ತೋರದಲೆ
ಈ ಭವ ಭಂಗ ಬಿಡಿಸುವು–
ದ್ಯಾತಕೋ ಶ್ರೀರಂಗ ಪೇಳಿನ್ನು ೬

* ಮಂತ್ರ.

ಚಕ್ರದಂವದಿ ತಿರುಗೊ ಎನಮನ ಚಕ್ರಧಾರಿಯೆ
ನಿನ್ನ ಕಾಣದೆ ಶಕ್ರಸುತನ ಸಖನೆ
ದಯಮಾಡ್ಹಕ್ಕಿ ವಾಹನನೆ ೭

ಅನ್ನದಾತನು ಇರಲು ಕಾಣದೆ ಅನ್ಯರಿಗೆ
ಬಾಯ್ತೆರೆಯಲ್ಯಾತಕೆ ಪನ್ನಗಾದ್ರಿಶಯನ
ನೀ ಸಲಹೆನ್ನ ಶ್ರೀಹರಿಯೆ ೮

ಸರ್ವಗುಣ ಸಂಪನ್ನ ಸರ್ವೋತ್ತಮನೆ
ಸರ್ವ ವ್ಯಾಪಾರಗಳನು ಸರ್ವಕಾಲದಿ
ನಡೆಸುತಿರುವ ಸರ್ವಾಧಾರಿ ೯

ವರಮಹಾ ಲಕ್ಷ್ಮೀಪತಿಯೆ ವಾರಣವರದ
ನಿನ್ನ ಸುರ ವಿರಿಂಚನಾ ಹರನು ವೀಣಾ–
ಪಾಣಿನಾರದ ಬರಿದೆ ನಮಿಸುವರೆ ೧೦

ಪರಮ ಕರುಣಾಶರಧಿ ಎನ್ನ ದುರಿತಗಳ ನೀ
ದೂರ ಮಾಡುವೆ ಬಿರುದು ನಿನ್ನದು
ಬಿಡದೆ ಭೀಮೇಶಕೃಷ್ಣ ಸಲಹೆನ್ನ ೧೧

೧೨೬

ಸಜ್ಜನರ ಸಂಗ ನೀಡೊ ಸರ್ವಪಾಲಕನೆ
ಮುದ್ದು ಗೋಪಿಯ ಕಂದ ಮೂರ್ಜಗದೊಳ್ವಂದ್ಯ ಪ.

ಸಾಧುಜನಪ್ರಿಯನೆ ಯಾದವರಿಗೊಡೆಯನೆ
ಶ್ರೀದೇವಿ ಅರಸು ಶಿವ ಬ್ರಹ್ಮರಿಗುತ್ತಮನೆ
ಶ್ರೀಧರ ಲೋಕಾಧಿಪತಿ ಸದಾನಂದಭರಿತ ನಿನ
ಪಾದಪಂಕಜದಿ ನಿಜವಾದ ಭಕುತಿಯ ಕೊಡುವೊ ೧

ದುಷ್ಟಜನ ಶಿಕ್ಷಕನೆ ಶಿಷ್ಟರ ಸಂರಕ್ಷಕನೆ
ಇಷ್ಟಫಲದಾಯಕ ಇಂದಿರೆಕಾಂತನೆ
ಕಷ್ಟದಾರಿದ್ರ್ಯ ಸಂಹಾರ ಭಯ ಛೇದಕನೆ
ಸೃಷ್ಟಿ ಸ್ಥಿತಿಲಯ ಕರ್ತೃ ಯುಧಿಷ್ಠಿರ[ನ]ನುಜನ ಸಖನೆ ೨

ವಸುದೇವನ ಸುತನೆ ಶೇಷನ್ಹಾಸಿಕೆಯಲ್ಲಿ
ಶ್ರೀಸಹಿತ ಶಯನ ಕಂಸಾಸುರಾರಿ
ವಾಸವಿಯು ರಥ ನಡೆಸಿದ್ವರಲಕ್ಷ್ಮಿ ವಲ್ಲಭನೆ
ಕ್ಲೇಶ ಪರಿಹರಿಸೊ ಭೀಮೇಶಕೃಷ್ಣನೆ ಎನಗೆ ೩

೧೨೭

*

ಸತ್ರಾಜಿತ ಕುಮಾರಿ ಗೃಹಕೆ
ಪಕ್ಷಿವಾಹನ ತನ್ನ
ಅಚ್ಛದ ಸತಿಯು ಕಾಣನೆಲ್ಲಾ ಭಾಮೆ
ಇಚ್ಛೆಯಿಂದಲಿ ಬಂದನಿಲ್ಲೆ ೧

ಮುಚ್ಛಲೋಚನೆ ನಗುತ
ಅಚ್ಚಮುತ್ತಿನ ದ್ವಾರ್‍ಯ
ಮುಚ್ಚುಕದವ ತೆಗೆಯದೆ ಭಾಮೆ
ಅಚ್ಚುತನ ಕೂಡವಿನಯದಿ ೨

ಮದಗಜಗಮನೆ ಕೇಳೆ
ಗಜವರದನು ನಾನೆ
ಕದವ ತೆಗೆಯೆ ಕಮಲಾಕ್ಷಿ ಭಾಮೆ
ಮುದದಿ ನೋಡೆನ್ನ ನಿರೀಕ್ಷೆ ೩

ಗಜವರದನೆ ಗಜವ
ವಧೆ ಮಾಡಿದವನು
ನಿನ್ನ ನೆಲೆಯು ಬಲ್ಲವರು ನಾವಲ್ಲ ಕೃಷ್ಣ
ಕದವ ತೆಗೆಯೋರ್‍ಯಾರಿಲ್ಲ ೪

ಉದಕದೊಳು ಮುಣುಗಿ ಬ್ಯಾಗ
ಮದಕದಿಂದ್ದಯನ ಕೊಂದು
ತವಕದಿ ವೇದವ ತಂದೆ ನಾನು ಭಾಮೆ
ಥಳಥಳಿಸುವ ಮತ್ಸ್ಯ ನಾನೆ ೫

---

* ಶ್ರೀಕೃಷ್ಣಗೆ ಸತ್ಯಭಾಮೆ ಬಾಗಿಲು ಕಟ್ಟಿದುದು.

ಹೊಳೆವೊ ಮತ್ಸ್ಯನಾದರೆ
ಶರಧಿ ಹುಡುಕುತ ಹೋಗೊ
ನಿನಗಾವಾಸಸ್ಥಾನಯಿದಲ್ಲ ಕೃಷ್ಣ
ಜಲವೆನ್ನ ಮನೆಯೊಳಗಿಲ್ಲ ೬

ಅಂಬುಧಿ ಮಥಿಸಿ ಅಮೃತ
ತಂದು ಸುರರಿಗಿಟ್ಟು
ಮಂದರವ ಬೆನ್ನಲಿ ತಾಳಿದೆನೆ ಭಾಮೆ
ಸುಂದರ ಕೂರ್ಮನು ನಾನೆ ೭

ಸುರರಸುರರ ಯುದ್ಧ ಬಿಟ್ಟು
ಮೋಹಿನ್ಯಾಗಲ್ಲಿ
ನಡೆ ನಾ ಸ್ತ್ರೀರೂಪ ನೋಡೋಳಲ್ಲ ಕೃಷ್ಣ
ಛಲದಿಂದ್ವಂಚಿಸು ಹೋಗವರನೆಲ್ಲ ೮

ಮಣ್ಣು ಕೆದರುತಲ್ಹೋಗ್ಹಿ-
ರಣ್ಯಾಕ್ಷನ್ನ ಸೀಳಿ
ಮನ್ನಿಸ್ಯವನಿಯ ತಂದೆ ನಾನೆ ಭಾಮೆ
ಚೆನ್ನಿಗ ವರಾಹ ನಾ ಬಂದೀನೆ ೯

ವರಾಹ ನೀನಾದರೆ
ಗಿರಿಗಂಹರವ ಸೇರೊ
ಮನೆಗೆ ಬರುವೋದುಚಿತಲ್ಲ ಕೃಷ್ಣ
ಮೆಲುವ ಬೇರೆನ್ನ ಮನೆಯೊಳಿಲ್ಲ ೧೦

ತರಳ ಕರೆಯುಲು ಕಂಬ
ಒಡೆದಸುರನ ಒಡಲ
ಕಡು ಕೋಪವನ್ನು ತಾಳಿದನೆ ಭಾಮೆ
ವರ ಲಕ್ಷ್ಮೀನರಸಿಂಹ ನಾನೆ ೧೧

ಕರುಳಾಧಾರಕ ಕೇಳೊ
ಕರಾಳವದನಕ್ಕಂಜುವೆನು
ಕಡುಕೋಪ ಎನ್ನೊಳು ತರವಲ್ಲ ಕೃಷ್ಣ
ತರಳೆರುಂಜುವರು ಲಕ್ಷ್ಮೀನಲ್ಲ ೧೨

ಅಂಜೋದ್ಯಾತಕೆ ಚಿಕ್ಕ
ಕಂದ ವಟುವು ಚೆಲ್ವ
ಸುಂದರ ವಾಮನನು ನೋಡೆ ಭಾಮೆ
ಬಂದೆನ್ನ ಗುಣವ ಕೊಂಡಾಡೆ ೧೩

ಕಪಟ ರೂಪದಿ ದಾನ
ತ್ರಿಪಾದ ಭೂಮಿ ಬೇಡಿದ
ವಿಪರೀತ ಮಾಯವ ಕಂಡವಳಲ್ಲ ಕೃಷ್ಣ
ಅಪವಿರ್ತ ಗುಣ ಬಲಿ ಬಲ್ಲ ೧೪

ಸರಸಿಜಮುಖಿ ಕೇಳೆ
ನಿರುತ ಜಪತಪಾಚರಿಸಿ
ಪರಶುರಾಮನು ನಾ ಬಂದೆನೆ ಭಾಮೆ
ಶರಥ ಮಾಡದಿರೆನ್ನೊಳು ನೀನೆ ೧೫

ನಿರುತ ನಿಷ್ಠೆಯು ಬಲ್ಲೆ
ಗುರುತು ಮಾತೆಯು ಕೊಂದೆ
ಸರಸವಾಡುವೋಳು ನಾನಲ್ಲ ಕೃಷ್ಣ
ಶರಥ ಕ್ಷತ್ರಿಯರಲ್ಲಿದು ಹೋಗೆಲ್ಲ ೧೬

ಎರಡೈದು ಶಿರಗಳ
ಕಡಿದು ಜಾನಕಿದೇವಿ
ಒಡಗೊಂಡಯೋಧ್ಯವನಾಳಿದೆನೆ ಭಾಮೆ
ಪೊಡವಿಗೊಡೆಯ ರಾಮ ನಾನೆ ೧೭

ಅಡವಿ ಅರಣ್ಯತಿರುಗಿ
ಮಡದಿಗಪನಿಂದ್ಯವ ಕಟ್ಟಿ
ಅಡವಿಗಟ್ಟ್ಯಂತಃಕರಣವಿಲ್ಲ ಕೃಷ್ಣ
ಬಿಡು ನಿನ್ನ ಸುಳ್ಳು ವಚನವಿದೆಲ್ಲ ೧೮

ಯದುವಂಶದೊಳು ಜನಿಸಿ
ವಧೆಮಾಡಿ ದೈತ್ಯರ
ನಿರ್ಭಯದಿಂದ ಬೆಳೆದೆನೆ ಭಾಮೆ
ಮಧು ಮುರಾಂತಕ ಕೃಷ್ಣ ನಾನೆ ೧೯

ಕಲಹ ಮಾಡುತ ಕಾಲ–
ಯಮನಿಂದಲೋಡಿ ಬಂದು
ನಿರ್ಭಯದಿಂದ ಬೆಳೆಯಲು ನಿಂದೆಲ್ಲ ಕೃಷ್ಣ
ಮಲಗಿದ ಮುಚುಕುಂದ ಬಲ್ಲ ೨೦

ನಿಗಮ ನಿಂದ್ಯವ ಮಾಡಿ
ಬಗೆಯಿಂದ ತ್ರಿಪುರರ
ಚೆದುರೆಯರನು ಒಲಿಸಿದೆನೆ ಭಾಮೆ
ಸುಗುಣ ಶರೀರ ಬೌದ್ಧ ನಾನೆ ೨೧

ತ್ರಿಪುರ ಸತಿಯರನೆಲ್ಲ
ವಶಮಾಡಿದಂಥ ಶೂರ
ವಸನರಹಿತಾಗಿ ತಿರುಗೋದಲ್ಲ ಕೃಷ್ಣ
ಶಶಿಮುಖಿಯರು ನಗುವರೆಲ್ಲ ೨೨

ಚೆಲುವ ತುರಗನೇರಿ
ಹೊಳೆವೋ ಕತ್ತಿಯ ಶೂರ
ಖಳರ ಮರ್ದನ ಮಾಡುವೆನೆ ಭಾಮೆ
ಥಳಥಳಿಸುವ ಕಲ್ಕಿ ನಾನೆ ೨೩

ಕಲಿಯ ಸಂಹಾರ ಕೇಳೊ
ನಿನ್ನ ಕತ್ತಿಗಂಜುವರ್ಯಾರೊ
ಕಟಿಪಿಟ್ಯೆನ್ನೊಳು ತರವಲ್ಲ ಕೃಷ್ಣ
ಕಲಿಗಳೆನ್ನರಮನೆಯೊಳಿಲ್ಲ ೨೪

ಜಾಂಬವಂತನ್ನ ಗೆದ್ದು ತಂದೆ
ಶಮಂತಕ ರತ್ನ
ಅಂಬುಜಮುಖಿ ಸತ್ಯಭಾಮೆ ನಿನ್ನ
ಹಂಬಲ ಬಿಡದೆನಗತಿ ಪ್ರೇಮ ೨೫

ಇಂದಿರಾಪತಿಯ ಪಾದ–
ಕ್ವಂದನೆಮಾಡಿ ನಗುತ
ಬಂದಿತಪರಾಧವೆನ್ನಲ್ಲಿಂದ ಕೃಷ್ಣ
ಬಂದು ಕ್ಷಮಿಸೊ ಶ್ರೀಮುಕುಂದ ೨೬

ಹಿಡಿದು ಸತಿಯು ಕೈಯ
ಬಿಡದೆ ಭೀಮೇಶಕೃಷ್ಣ
ನಡೆದು ಮಂಚದಲಿ ಸುಖದಿಂದ ಕುಳಿತ
ಕಡಲಶಯ್ಯಾನಂದದಿಂದ ೨೭

೧೨೮

ಸರಸಿಜನಯನಗೆ ಸಾಗರಶಯನಗೆ
ನಿರುತ ಸುಖಾನಂದಭರಿತನಾದವಗೆ
ಬರೆಸಿ ಉತ್ತರವ ಕಳುಹಿ ಹರುಷದಿ ತಂದ ಸತಿಯ-
ರರಸಿ ರುಕ್ಮಿಣಿ ಸಹಿತ
ಹರುಷದಿ ಕುಳಿತ ಹರಿಗೆ
ಸರಸದಾರತಿಯ ಬೆಳಗಿರೆ ಪ.

ನಿಂದ್ಯ ಪರಿಹರಿಸಲು ಬಂದು ಯುದ್ಧವ ಮಾಡಿ
ಸಿಂಧುಗಟ್ಟಿದ ರಾಮಚಂದ್ರ ಗ್ವೊಂಡಿಸುತ
ತಂದು ಮಗಳ ಧಾರೆ ಮುಂದರೋದಾ ನಗೆರೆಯು
ಜಾಂಬವಂತ್ಯೇರಸಹಿತಾನಂದದಿ ಕುಳಿತ ಹರಿಗೆ ೧

ಮಿತ್ರೆ ಕಾಳಿಂದಿ ಭದ್ರಾ ಅಚ್ಯುತನೆಡಬಲ
ಲಕ್ಷಣ ನೀಲ ನಕ್ಷತ್ರದಂದದಲಿ
ಒಪ್ಪುವ ಚಂದ್ರನಂಥ ವಾರಿಜಾಕ್ಷನು ಇರಲು
ಅಷ್ಟ ಭಾರ್ಯೇರ ಸಹಿತ ನಕ್ಕು ಕುಳಿತ ಹರಿಗೆ ೨

ನಾಶವಾಗಲಿ ನರ್ಕಾಸುರನ ಮಂದಿರ ಪೊಕ್ಕು
ಏಸುಜನ್ಮದ ಪುಣ್ಯ ಒದಗಿ ಶ್ರೀಹರಿಯು
ಶ್ರೀಶನ್ವೊಲಿದ ಭೀಮೇಶಕೃಷ್ಣನು ಸೋಳ-
ಸಾಸಿರ ಸತಿಯರಿಂದ್ವಿಲಾಸದಿ ಕುಳಿತ ಹರಿಗೆ ೩

೧೨೯

ಸರಿಯಾರೊ ನಿನಗೆ ಲೋಕದೊಳಗೆ
ಸಮರ್ಯಾರೊ ಪ.

ಅಂಜನೆಯುಲ್ಹುಟ್ಟಿ ಅಂಬುಧಿಯ ನೀನ್ಹಾರಿದೆ
ಕಂಜಾಕ್ಷಿ ಕರಕಮಲಕೆ ಉಂಗುರವನಿಟ್ಟೆ ೧

ಕೊಂದು ಕೌರವರನಾಳಿದ್ಯೊ ಗಜಪುರವನ್ನು
ತಂದು ದ್ರೌಪದಿಗೆ ಸುಗಂಧ ಕುಸುಮವನಿಟ್ಟೆ ೨

ಶ್ರೀಮದಾನಂದತೀರ್ಥರ ಚಾರುಚರಣಕ್ಕೆ ನಾ
ನಮಿಸುವೆನು ಭೀಮೇಶಕೃಷ್ಣನ ಭಕ್ತ ೩

## ೧೩೦

*

ಸರ್ಪಭೂಷಣನ ಸುತನ ಭಕ್ತಿಯಿಂದ ಬಲಗೊಂಡು
ಮತ್ತೆ ಅಜನಸತಿಯ ಪಾದಕ್ಕೆ ಎರಗುವೆ ೧

ಎಲ್ಲ ದೇವತೆಗಳಿಗೆ ಎರಗಿ ಭಕ್ತಿಯಿಂದ ಲಕ್ಷ್ಮೀ-
ವಲ್ಲಭನ ಕತೆಗಳ ವರ್ಣಿಸುವೆನು ೨

ಸ್ವಾಮಿ ಶ್ರೀಕೃಷ್ಣನ ಪ್ರೇಮವನ್ನು ಪಡೆದ ಸು-
ದಾಮನೆಂಬೊ ಭಕ್ತ ಬಡವ ಬ್ರಾಹ್ಮಣಿದ್ದನು ೩

ಸ್ನಾನ ಹೋಮ ಜಪವ ಮಾಡಿ ನೇಮ ನಿಷ್ಠೆಯಿಂದ ಉಪ್ಪು
ದಾನವನ್ನು ಬೇಡಿ ಕಾಲಕಳೆಯುತಿದ್ದನು ೪

ಅಶನವಿಲ್ಲ ವಸನವಿಲ್ಲ ಹಸಿದ ಮಕ್ಕಳನ್ನು ನೋಡಿ
ವ್ಯಸನದಿಂದ ಪತಿಯ ಪಾದಕ್ಕೆರಗಿನಿಂತಳು ೫

ತಂದೆತಾಯಿಗಳಕಡೆಯು ಬಂಧು ಬಳಗ ಯಾರು ಹತ್ತಿ-
ಮ್ಬೊಂದಿದವರುಯಿಲ್ಲ ನಿಮಗೆ ಎಂದು ನುಡಿದಳು ೬

ಪತ್ನಿಮಾತು ಕೇಳಿ ಪರಮ ಭಕ್ತಿಯಿಂದ ನುಡಿದ ಧ-
ಮಾರ್ಥ ಕಾಮ್ಯಗಳನೆ ಕೊಡುವೋ ಮೋಕ್ಷದಾಯಕ ೭

ಆದಿಮೂರುತಿ ಕೃಷ್ಣ ಓದಿಕೊಂಡ ಗೆಳೆಯನೊಬ್ಬ
ಮಾಧವನ್ನ ಬಿಟ್ಟು ಮತ್ತೊಬ್ಬರಿಲ್ಲವು ೮

ಆತನ ಕಂಡುಬಂದರ್ಯಾತರ ದಾರಿದ್ರ್ಯ ನಮಗ
ಪ್ರೀತಿಯಿಂದ ಹೋಗಿಬನ್ನಿರೆಂದು ನುಡಿದಳು ೯

* ಶ್ರೀ ಸುದಾಮ ಚರಿತ್ರೆ.

ಪರಮಾಲಕ್ಷ್ಮಿ ಅರಸು ಕೃಷ್ಣನರಮನೆಗೆ ಪೋಗಲಿಕ್ಕೆ ನ-
ದರು ಏನುವೊಯ್ಲೆ ನರಹರಿಗೆ ಎಂದನು ೧೦

ಲಕ್ಕುಮೀಶನ್ನ ದರ್ಶನಕ್ಕೆ ಒಯ್ಯಲಿಕ್ಕೆ ಮೂರು
ಮುಕ್ಕು ಅವಲಕ್ಕಿ ತಿರಿದು ತಂದುಕೊಟ್ಟಳು ೧೧

ಅವನು ಗಂಟು ಕಟ್ಟಿ ತನ್ನ ಹೆಗಲಮ್ಯಾಲೆ ಇಟ್ಟುಕೊಂಡು ನ-
ಗಧರನ್ನ ನಗರಕ್ಕಾಗ ಬರುತಲಿದ್ದನು ೧೨

ಲಕ್ಷಣಾದ ಶಕುನವ ಆಕ್ಷಣದಿ ಕಂಡು ವಿಪ್ರ
ಲಕ್ಷ್ಮೀಪತಿಯು ದಯವು ನಮಗೆ ಆಗೋದೆಂದನು ೧೩

ಹಾದಿಲ್ಹರಿವೊ ಜಲವ ಕಂಡು ಸ್ನಾನವನ್ನು ಮಾಡಿಕೊಂಡು
ವೇದ ಪುಸ್ತಕವ ಹಿಡಿದು ಓದಿಕೊಳುತಲಿ ೧೪

ಮಲ್ಲಿ ಮಲ್ಲಿಗೆ ದವನ ಅಲ್ಲಿಯಿದ್ದ ಫಲಗಳು ಲಕ್ಷ್ಮೀ-
ವಲ್ಲಭಗೆ ಅರ್ಪಿತವೆಂದು ನಡೆದನು ೧೫

ಗೋಪುರವ ಕಂಡು ದ್ವಾರಕಾಪುರಕ್ಕೆ ಕೈಯ ಮುಗಿದು
ಶ್ರೀಪತಿಯ ಬಾಗಿಲಲಿ ಬಂದು ನಿಂತನು ೧೬

ದ್ವಾರದಲ್ಲಿ ನಿಂತವರು ದಾರುಯೆಂದ್ವಿಚಾರಿಸಲು
ನಾರಾಯಣನ ಸಖನು ನಾನೆಂದ್ಹೇಳುತಿದ್ದನು ೧೭

ನುಡಿದ ನುಡಿಯು ಕೇಳುತ ನಡೆದು ಬಂದು ಚಾರಕರು
ಒಡೆಯ ನಿಮ್ಮ ಗೆಳೆಯನಂತೆ ಬಡವ ಬ್ರಾಹ್ಮಣ ೧೮

ಹುಟ್ಟಿ ಮೊದಲೆ ಅನ್ನ ತನ್ನ ಹೊಟ್ಟೆಗುಂಡ ಮನುಜನಲ್ಲ
ಗಟ್ಟಿಗಾಳಿ ಬರಲೀಗ್ಹಾರುವಂತೆ ತೋರುವ ೧೯

ಅಸ್ತಿ ಚರ್ಮ ಆತನಂಗಕ್ಹತ್ತಿಕೊಂಡ ಹೊಟ್ಟೆಬೆನ್ನು
ಮತ್ತೆ ನಡೆಯಲಾರ ಮಾತನಾಡಲಾರನು ೨೦

ಒಡೆದ ಗುಂಡುತಂಬಿಗೆ ಬಡಿವನದು ಸುತ್ತ ಮ್ಯಾಣ
ಹಿಡಿದ ಗಂಟ ಬಿಡದಲ್ಹೊತ್ತು ನಡೆದು ಬಂದನು ೨೧

ಮರದ ಗುಂಡು ಸರದಗುದ್ದಿ ಕೊರಳೊಳಗೆ ಹಾಕಿಕೊಂಡು
ಎರಳೆ ಚರ್ಮ ಸುತ್ತಿ ಎಡದ ಬಗಲಲ್ಲಿಟ್ಟನು ೨೨

ದೊಡ್ಡನಾಮ ಹಚ್ಚಿಕೊಂಡು ಮುದ್ರೆಮಯ್ಯಲೊತ್ತಿಕೊಂಡು
ಶುಭ್ರ ಚಂದ್ರಮನ ಕಾಂತಿ ತೋರುತಿದ್ದನು ೨೩

ಛಿದ್ರವಾದ ಬಟ್ಟೆಯುಟ್ಟು ಚಿಗುರು ತುಳಸಿ ಕಿವಿಯಲ್ಲಿಟ್ಟು
ಪದ್ಮನಾಭ ಪಾಲಿಸೆನುತ ಕೂಗುತಿದ್ದನು ೨೪

ನಾಮಾಂಕಿತವ ಕೇಳಲು ಸುದಾಮನೆಂದು ಹೇಳುವ
ನಾನಾ ಪರಿಯಲ್ನಿಮ್ಮ ಸ್ತುತಿಯ ಮಾಡುತಿದ್ದನು ೨೫

[1]ಅಪ್ಪಣಾಪರಾತನ[1] ಇತ್ತ ಕರೆದ. ತಾನೆನಿಸಲು
ಭಕ್ತರೊಡೆಯ ಭಾಳ ಸಂಭ್ರಮದಿ ಎದ್ದನು ೨೬

ಕರೆಸಿ ಕರವ ಪಿಡಿದು ಕುಳ್ಳಿರಿಸಿ ದಿವ್ಯಾಸನದ ಮ್ಯಾಲೆ
ತ್ವರಿಸಿ ಚಾಮರದ ಗಾಳಿ ಹಾಕುತಿದ್ದನು ೨೭

ಪನ್ನೀರು ತಂದು ಪಾದತೊಳೆದು ದ್ರಾಕ್ಷಿ ಕಿತ್ತಳೆ-
ಹಣ್ಣು ಎಳನೀರು ತಂದು ಮೆಲಲು ಕೊಟ್ಟನು ೨೮

ಪದುಮನಾಭ ಹರುಷದಿಂದ ಮುದದಿ ಮಾತನಾಡಿದನು
ಮದುವೆ ಆಯಿತೇನೊ ಸಖನೆ ಎಂದು ಕೇಳಿದ ೨೯

ಸೋಳಸಾವಿರಸತಿಯರಾಳುವೊ ಶ್ರೀರಮಣ ಕೇಳೊ
ರಾಣಿವೊಬ್ಬಳಿರುವೊಳಯ್ಯ ನಮಗೆಯೆಂದನು ೩೦

ಇಷ್ಟುದಿವಸ ಇಲ್ಲಿಗೆ ಬಾರದಿದ್ದ ಕಾರಣೇನು
ಚಿಕ್ಕಂದಿನ ಸ್ನೇಹವೆಲ್ಲ ಮರೆತ್ಯ ಎಂದನು ೩೧

ಬರದಲಿದ್ದೆ ನಾನು ಪಾಮರನು ಆದಕಾರಣ
ಕಳುಹಿಕೊಟ್ಟಳೆನ್ನ ಭಾರ್ಯಳೀಗ ಎಂದನು ೩೨

ಅಣ್ಣ ನಮ್ಮತ್ತಿಗೆ ನಮಗೇನು ಕಳಿಸಿದಳು
ನಿನ್ನ ಹೆಗಲ ಗಂಟು ಬಿಚ್ಚಿ ತೋರಿಸೆಂದನು ೩೩

1 [ಅಪ್ಪಣೆಯಾದರೆ ಆತನ]

ತಲೆಯ ಬಾಗಿ ವಿಪ್ರ ನಾಚಿ ನೆಲನ ನೋಡುತಿರಲು ಕೃಷ್ಣ
ಸಲಿಗೆಲಿಂದ ಗಂಟನೆಳೆದು ಬಿಚ್ಚಿಸಿದನು ೩೪

ಸುಜನ ಜನರು ಮಾಡುವಂಥ ಭಜನೆಯೊಂದೆ ಸಾಕುಯೆನಗೆ
ರಜತ ಹೇಮ ರತ್ನಾಭರಣವ್ಯಾತಕೆಂದನು ೩೫

ಕುಂದಣದ ಪಾತ್ರೆಯೊಳಗೆ ತಂದು ಸುರುವೆ ಪೃತುಕವನ್ನು
ಮಂದರೋದ್ಧರನು ಮುಷ್ಟಿ ತೆಗೆದುಕೊಂಡನು ೩೬

ಮುಷ್ಟಿಗೊಂದು ಬಾರಿ ಶ್ರೀಕೃಷ್ಣ ತೆಗೆದು ಮೆಲ್ಲುತಿರಲು
ಕಷ್ಟದಾರಿದ್ರ್ಯವೆಲ್ಲ ಹರಿದು ಹೋಯಿತು ೩೭

ಎರಡನೆ ಮುಷ್ಟಿ ಪಾಲು ತಲಶಯನ ಮುಕ್ಕುತಿರಲು ಷಡ-
ಸಪಗರ ವೈಕುಂಠಪದವಿ ಮುಕ್ತಿ ಆಯಿತು ೩೮

ಮೂರನೆ ಮುಷ್ಟಿಗೆ ನಾರಿ ರುಕ್ಮಿಣಿ ಬಂದು ಕೃಷ್ಣಯೇನುಕೊಡುವಿ
ವಿಪ್ರಗೆನುತ್ತ ಕರವ ಪಿಡಿದಳು ೩೯

ಭಾವನವರು ತಂದುಕೊಟ್ಟ ದೂರದ ಪದಾರ್ಥವನ್ನು
ನೀವೆ ಸವಿಯು ನೋಡುವೋದು ದಾವ ನೀತಿಯು ೪೦

ಅಕ್ಕ ಕಳಿಸಿದ್ದು ಅವಲಕ್ಕಿ ನಮಗಿಲ್ಲದ್ಹಾಗೆ
ಮುಕ್ಕಿಬಿಡುವರೇನೊ ಎಂದು ನಕ್ಕಳಾಗಲಿ ೪೧

ಇಷ್ಟು ಮಂದಿಯೊಳಗೆ ಎನ್ನ ಮುಷ್ಟಿ ಹಿಡಿದು ನಿಲ್ಲುವಂಥ
ದಿಟ್ಟತನಗಳೆಲ್ಲಿ ಕಲಿತೆ ಹೇಳೆಯೆಂದನು ೪೨

ಚಿಕ್ಕ ಸತ್ಯಭಾಮೆ ನೋಡಿ ನಕ್ಕಾಳೆಂಬೊ ನಾಚಿಕಿಲ್ಲ
ಮುಕ್ಕು ಅವಲಕ್ಕಿಗೆನ್ನ ಕರವ ಪಿಡಿವೋರೆ ೪೩

ಸರ್ವರೊಳಗೆ ಅಧಿಕಳೆಂಬೊ ಗರುವಿನ ರುಕ್ಮಿಣಿಗೆ ಬುದ್ಧಿ
ಕರೆದು ಹೇಳಬಾರೆ ಸತ್ಯಭಾಮೆಯೆಂದನು ೪೪

ಎನ್ನ ಭಕ್ತರಲ್ಲಿ ಪ್ರೇಮ ನಿನಗೆ ಉಂಟಾದರೆ
ಇನ್ನೂ ಒಂದು ಮುಕ್ಕು ನಿನಗೆ ಕೊಡುವೆನೆಂದನು ೪೫

ಅಕ್ಕಗಾಡೋ ಮಾತಕೇಳಿ ಚಿಕ್ಕಸತ್ಯಭಾಮೆ ತಾನು
ಅಕ್ಕರದಿ ಬಂದು ಕೃಷ್ಣನೆದುರು ನಿಂತಳು ೪೬

ರಂಗ ನಿನ್ನ ಪಟ್ಟದರ್ಧಾಂಗಿಯಾದ ರುಕ್ಮಿಣಿಗೆ
ಮುಂಗೈ ಹಿಡಿವೋದಕ್ಕೆ ದಾರಭಯವೇನೆಂದಳು ೪೭

ಪಾಲಶರಧಿ ಲಕ್ಷ್ಮಿ ಹುಟ್ಟಿದಾಲಯವನೆ ಸೇರಿದ ಗೋ-
ಪಾಲಕರ ಭಯವು ನಮಗಿನ್ನ್ಯಾತಕೆಂದಳು ೪೮

ನೀನು ಒಲಿದರೇನು ದಾರಿದ್ರ್ಯ ಜನಕೆ ತಪ್ಪದು
ತಾನೆ ಒಲಿದು ಲಕ್ಷ್ಮಿ ಸಕಲೈಶ್ವರ್ಯ ಕೊಡುವಳು ೪೯

ವಸುಧೆಪಾಲ ಭೀಷ್ಮಕನ ಮಗಳು ಮುದ್ದು ರುಕ್ಮಿಣಿಗೆ
ಪಶುವ ಕಾಯೋ ಗೊಲ್ಲರಂಜಿಕ್ಯಾತಕೆಂದಳು ೫೦

ನೂತನಾಂಗಿ ಸತ್ಯಭಾಮೆ ಮಾತು ಕೇಳಿ ಕೃಷ್ಣರಾಯ
ಪ್ರೀತಿಲಿಂದ ಕರವ ಪಿಡಿದು ನಗುತಲಿದ್ದನು ೫೧

ಪಂಕಿತೋಳು ಪಿಡಿದು ಒಯ್ಯಾರಿ ಸತ್ಯಭಾಮೆಯು ತ-
ನ್ನಂಕದಲಿ ಕುಳ್ಳಿರಿಸಿಕೊಂಡನಾಗ ಮೋಹದಿ ೫೨

ಬಾರೆ ಬಾ ರುಕ್ಮಿಣಿಯೆ ಭಾಮೆ ಬಲಗಳಿದ್ದವ್ಯಾಲೆಯಿಷ್ಟು
ನೀರೆ ನಿನ್ನ ಕರಗಳೊಡ್ಡೆ ನೀಡ್ವೆನೆಂದನು ೫೩

ಸತ್ಯಭಾಮೆ ರುಕ್ಮಿಣಿ ಮಿತ್ರೆ ನೀಲ ಜಾಂಬವಂತಿ
ಲಕ್ಷಣಾ ಕಾಳಿಂದಿ ಭದ್ರೆ ಕರೆದು ಕೊಟ್ಟನು ೫೪

ವಾಸುದೇವ ತನ್ನ ಸೋಳಸಾಸಿರ ಸತಿಯರ
ಸೋಸಿಲಿಂದ ಕರೆದು ಕೃಷ್ಣ ಕೊಡುತಲಿದ್ದನು ೫೫

ಕಂತುಪಿತನು ತನ್ನ ಜನಕೆ ನಿಂತು ನೀಡುತಿರಲು ಅ-
ನಂತವಾದವಾಗ ಮೂರುಮುಷ್ಟಿ ಪ್ರತಕವು ೫೬

ಗುರುವು ಸಾಂದೀಪನಲ್ಲಿ ಸರ್ವಗ್ರಂಥ ಓದಿಕೊಂಡ ವಿ-
ವರನೆಲ್ಲ ಹೇಳಿದನು ಇಂದಿರೇಶನು ೫೭

ಕಾಷ್ಟ ತನ್ನಿರೆಂದು ಗುರುಪತ್ನಿ ನಮ್ಮನ್ನ ಕಳಿಸಲಾಗ
ಅಟ್ಟಿ ಅರಣ್ಯದಲ್ಲಿ ಆಡುತಿದ್ದೆವೊ ೫೮

ಕತ್ತಲು ಕೌಂಜುರಿಂಜು ಕೆಟ್ಟಗಾಳಿ ಮಳೆಯು ಸಿಡಿಲು
ದುಷ್ಟ ಹುಲಿಯು ಸಿಂಹ ಕರಡಿ ಕೂಗುತಿದ್ದವು ೫೯

ಗಿಡಕೆ ಒಬ್ಬರತ್ತಿಕೊಂಡು ಹುಡುಕುತ ನಿಂತಿರಲು
ಹುಡುಕುತಾಗ ಬಂದರಲ್ಲಿ ನಮ್ಮ ಗುರುಗಳು ೬೦

ಅಂಜಬ್ಯಾಡಿರೆಂದು ನಮಗೆ ಅಭಯವನ್ನು ಕೊಟ್ಟು ಚಿ-
ರಂಜೀವಿ ಆಗಿರೆಂದು ಹರಸುತ್ತಿದ್ದರು ೬೧

ಮಕ್ಕಳಿಲ್ಲದವರು ನಮ್ಮ ರಕ್ಷಿಸಿದ ಗುರುಗಳಿಗೆ ಪುತ್ರ-
ನ ಕೊಟ್ಟೆ ಗುರುದಕ್ಷಿಣೆಯನು ೬೨

ಆದವಡಿಗೆ ಏಳಿರೆಂದು ಶ್ರೀದೇವಿ ಕರೆಯಲ್ಹೋಗಿ
ಮಾಧವನ್ನ ಸಹಿತ ಮಡಿಯನುಟ್ಟು ಬಂದರು ೬೩

ಮಡಿಯು ಜರದಮ್ಯಾಲೆ ಮುತ್ತಿನುಡಿದಾರವನೆ ಕಟ್ಟಿ ವಜ್ರ
ಕಡಗ ಕಂಕಣವ ತಂದು ಕರದಲ್ಲಿಟ್ಟರು ೬೪

ಪಚ್ಚದ್ಹರಳು ಕೆತ್ತಿದೊಂಟಿ ಮುತ್ತು ಕಿವಿಯ ಬಾವುಲಿ
ರತ್ನದುಂಗುರವ ತಂದು ಬೆರಳಲ್ಲಿಟ್ಟರು ೬೫

ಪುತ್ಥಳಿ ಹಾರ ಹರಳು ಕೆತ್ತಿಸಿದ ಪದಕ ಆಣೆ-
ಮುತ್ತಿನ ಕಂಠಿ ಕೊರಳಿಗ್ಹಾಕುತಿದ್ದರು ೬೬

ಬಂಗಾರದ ಮಣೆಯ ಮ್ಯಾಲೆ ಶೃಂಗಾರದಿ ಕುಳ್ಳಿರಿಸಿ
ಮುಂದೆ ಮುತ್ತಿನ್ಹೂಜಿ ಥಾಲಿ ತಂದುಕೊಡುವ್ರೋರು ೬೭

ಕುಡಿಯ ಬಾಳೆಯೆಲೆಯ ಹಾಕಿ ನಡುವೆ ಜ್ಯೋತಿ ತಂದಿರಿಸಿ
ಕಡಲೆ ಕೋಸಂಬ್ರಿ ಉಪ್ಪುಕಾಯಿ ಶಾಕವು ೬೮

ಹಪ್ಪಳ ಸಂಡಿಗೆ ಕರ್ಪುರದ ಎಣ್ಣೋರಿಗೆ
ಮಿತ್ರೆ ಕಾಳಿಂದಿ ತಂದು ಬಡಿಸುತಿದ್ದರು ೬೯

ಬುತ್ತಿ ಚಿತ್ರಾನ್ನ ಶಾಲ್ಯಾನ್ನ ಪರಮಾನ್ನಗಳನು
ಲಕ್ಷಣಾವಂತಿಯೇರು ಬಡಿಸುತಿದ್ದರು ೭೦

ರುಬ್ಬಿದಾಂಬೋಡೆ ಫೇಣಿ ಉಬ್ಬಿದ ಗುಳ್ಳೋರಿಗೆ
ಭದ್ರೆ ಜಾಂಬವಂತಿಯೇರು ಬಡಿಸುತಿದ್ದರು ೭೧

ಹಾಲು ತುಪ್ಪ ಮಂಡಿಗೆ ಮ್ಯಾಲೆ ಬಿಳಿಯ ಸಕ್ಕರೆ
ಭಾಮೆ ರುಕ್ಮಿಣಿಯು ತಂದು ಬಡಿಸುತಿದ್ದರು ೭೨

ಮಂಡು ಚಕ್ಕುಲಿಯು ಬುಂದ್ಯಮುಂಡೆ ಕರ್ಜಿಕಾಯ್ಗಳು
ಉಂಡು ಕೆನೆಮೊಸರು ಕೈ ತೊಳೆದು ಬಂದರು ೭೩

ಕರ್ಪೂರದ ತಾಂಬೂಲ ಆರ್ತಿಯಿಂದ ಮೆಲ್ಲುತ
ವಿಪ್ರಗಾಗ ತನ್ನ ಅರಮನೆಯ ತೋರಿದ ೭೪

ಜಂತದ್ದಲಿಗೆ ಮಂಚದಲ್ಲಿ ಸಂಪಿಗ್ಹೂವಿನ್ಹಾಸಿಕ್ಯಲ್ಲಿ
ಮುಂಚೆ ಸುದಾಮ ಇಲ್ಲಿ ಪವಡಿಸೆಂದನು ೭೫

ಆಣಿ ಮುತ್ತಿ ಬಿಗಿದ ಮಂಚ ಅರಳುಮಲ್ಲಿಗ್ಹಾಸಿಕ್ಯಲ್ಲಿ
ರಾಣಿ ರುಕ್ಮಿಣಿಸಹಿತ ಕೃಷ್ಣ ಶಯನ ಮಾಡಿದ ೭೬

ಅರುಣ ಉದಯಕೆದ್ದು ಗಂಗಾಸರಸಿನಲ್ಲಿ ಸ್ನಾನಮಾಡಿ
ನಳಿನನಾಭಸ್ಮರಣಕ್ಕೆರಗಿ ಅಪ್ಪಣೆಯ ಕೇಳಿದ ೭೭

ಹೋಗಿ ಬಸ್ಸಿರೆಂದು ಬ್ಯಾಗ ನಾಗಶಯನನಪ್ಪಣೆಯ ಕೊಡಲು
ಭಾಮೆ ರುಕ್ಮಿಣಿಗೆ ಬಂದು ಹೇಳುತಿದ್ದರು ೭೮

ಭಾಳ ತಡೆದು ಬಂದಿರೀಗ ಏಳು ಎಂಟು ದಿನದಲ್ಲಿದ್ದು
ಹೋಗಬಹುದುಯೆಂದು ನುಡಿದಳಾದಿಲಕ್ಷ್ಮಿಯು ೭೯

ಸತಿಯಳೊಬ್ಬಳಿರುವಳಾಕೆ ಜತೆಯು ದಾರುಯಿಲ್ಲವೆಂದು
ಅತಿಬ್ಯಾಗನಗೆ ಅಪ್ಪಣೆಯ ಪಾಲಿಸೆಂದನು ೮೦

ಅಪ್ಪಣೆಯುಗೊಂಡು ವಿಪ್ರ ಪಟ್ಟಸಾಲಿ(ಶಾಲೆ?)ಯಿಳಿದು ಬರಲು
ಸುತ್ತಬಂದು ಹಿಡಿದರಾಗ ಛತ್ರಚಾಮರ ೮೧

ಅಂಬರೀಷವರದ ಮುಕ್ತಿಸುಂದಣವನು ಏರಿಸಿ
ಮುಂದೆ ಮೂರ್ತಿ ಜ್ಞೆ ಕಳಿಸಿ ತಿರುಗಿ ಬಂದನು ೮೨

ತೊ(ತ್ವ?)ರೆಯುದಿಂದ ಹರಿಯು ವಿಶ್ವಕರ್ಮನ್ನಾಗ ಕರೆಸಿದನು
ಸರ್ವಭಾಗ್ಯಸಹಿತ ನಗರ ನಿರ್ಮಿಸೆಂದನು ೮೩

ತೋರಮುತ್ತು ರತ್ನ ಬಿಗಿದ ದ್ವಾರಗೋಪುರಗಳು
ದ್ವಾರಕೆಗೆ ಅಧಿಕವಾಗಿ ತೋರಲೆಂದನು ೮೪

ಶ್ರೇಷ್ಠವಾದ ದಿವ್ಯ ದೊಡ್ಡ ಪಟ್ಟಣ ಅರಮನೆಗಳು
ಅಷ್ಟ ಐಶ್ವರ್ಯದಿಂದ ಭರಿತವಾದುವು ೮೫

ಊರುಬಿಟ್ಟು ಬರಲು ವಿಪ್ರ ದ್ವಾರ ಕಾದಿದ್ದ ಭ-
ಟರು ಹೋಗಬ್ಯಾಡೊ ನಿಲ್ಲೊ ನಿಲ್ಲೋಯೆನುತ ಬಂದರು ೮೬

ಅಚ್ಯುತಾನಂತ ಕೊಟ್ಟ ವಸ್ತ್ರ ಆಭರಣವೆಲ್ಲ
ಬಿಚ್ಚಿಕೊಂಡು ಬೀಯು ಕೋರಿ ಹಚ್ಚಿ ಕಳುಹಲು ೮೭

ಎತ್ತ ಹೋದವರೆನ್ನ ಪ್ರಾರಬ್ಧ ಜ್ಯಾರಿ ಆಗುವ್ದೋದೆ
ಸತ್ಯವಾದ ಬ್ರಹ್ಮಬರೆಹ ತಪ್ಪದೆಂದನು ೮೮

ಮಕ್ಕಳಿಲ್ಲಿ ಬಂದು ನಮ್ಮಪ್ಪ ಏನು ತಂದಿಯೆಂದು ಅ-
ಪ್ಪಿಕೊಂಡು ಕೇಳಿದರಿನ್ನೇನು ಹೇಳಲಿ ೮೯

ನಡಗರದ ಸತ್ಯಭಾಮೆ ಉಡುವ್ದೋದ್ದ ಳಿದ ಸೀರೆವೊಂದು
ಕೊಡಬಾರದೆ ತಾನು ಎನ್ನ ಮಡದಿಗೆಂದನು ೯೦

ಭಾಗ್ಯವಂತರಲ್ಲಿ ನಿರ್ಭಾಗ್ಯಬಂದರೇನುಫಲವು
ರುಗ್ಮಿಣಿಗೆ ಕರುಣ ಹುಟ್ಟದ್ಹೋಯಿತೀಗಲೆ ೯೧

ಭಾಳ ಬಡವನೆಂದು ಯೆನ್ನ ಹೀಳ್ಯ ಮಾಡಿದ್ಯಾಕೊ ಸ್ವಾಮಿ
ಕೇಳಿಬಲ್ಲೆ ನಿನ್ನ ಸಂಸಾರ ಸುಖವನು ೯೨

ನೀರೊಳಗೆ ಮೀನಾಗ್ಯೊಳತು ನಾರುತಿದ್ದಿ ಬೆಟ್ಟದ
ಹೇರ ಭಾರಕ್ಕಂಜಿ ಮೋರೆ ಕೆಳಗೆ ಮಾಡಿದ್ಯೊ ೯೩

ಬೇರತಿಂದು ಗುಡ್ಡಗಂಹರ ತಿರುಗಿ ಕಂಬವೊಳಗೆ
ಸೇರಿ ಕರುಳಹಾರಕ್ಯಾಗಿ ತೆರೆದು ಬಾಯನು ೯೪

ನೀನು ನನ್ನಂಥ ಬಡವನಾಗಿ ಬೇಡಿಕೊಂಡು ಕಾಮ-
ಧೇನುವನ್ನು ಕಟ್ಟಿ ಕಾಲಕಳೆಯಲಿಲ್ಲವೆ ೯೫

ನಾರನುಟ್ಟು ನಾರಿಬಿಟ್ಟು ಘೋರ ಅರಣ್ಯ ತಿರುಗಿ
ಚೋರತನವ ಮಾಡಿ ಜೀವಿಸಿಕೊಳ್ಳಲಿಲ್ಲವೆ ೯೬

ಬತ್ತಲಿದ್ದು ಬಿಳಿಯ ಕೋರಿ ಕಾಣದಂತೆ ನೀನು ಬಿಚ್ಚು-
ಕತ್ತಿ ಹಿಡಿದು ಕಲಿಗಳಿಂದೆ ತಿರುಗಿದ್ಯಾತಕೊ ೯೭

ಅಂಧಕಾರ ಪ್ರಳಯದಲ್ಲಿ ಅಡಗಿ ಜನರ ಕಾಣದೆ
ಮುಂದಿಪ್ಪ ನಯಮಂದಿರಕ್ಕೆ ಬಂದು ಸೇರಿದ್ಯೊ ೯೮

ಈಶನಾದರು ಸಮುದ್ರವಾಸ ನಿನಗೆ ತಪ್ಪದೊ
ಈಸಿ ನಾನು ಭವಸಮುದ್ರ ದಾಟಿ ನಿಂತೆನೊ ೯೯

ತಾಯಿತಂದೆ ಬಂಧುಬಳಗ ದೇಹಕ್ಕೊಂದಿದವರಾಯಿಲ್ಲಾ-
ನಾದಿಕಾಲದಿಂದ ಓರ್ವನೆಂದು ಪೊಗಳೋರೊ ೧೦೦

ದು(ಶಿ?)ಷ್ಟ ಮೃಗಳ ನೀನು ಉಂಗುಷ್ಟದಿಂದ ಪಡೆದಿಯೊ
ಕೊಟ್ಟು(ಟ್ಟ?) ಶರಧಿಮೃಗಳ ಎದುರು ಮಾಡಿಕೊಂಡೆಯೊ ೧೦೧

ಭಾರ್ಯಳಿದ್ದು ಬಸಿರು ಬಾಣಂತಿ ಖರ್ಚಿಗಿಲ್ಲವೆಂದು ನಾ-
ಭಿಯಿಂದ ಪಡೆದ್ಯೊ ನಾಲ್ಕುಮೋರೆಶಿಶುವನು ೧೦೨

ನಾಲ್ಕುಮೋರೆ ಬ್ರಹ್ಮನೆಂಬೊ ಏಕಪುತ್ರನ್ನ ಪಡೆದು ಹದಿ-
ನಾಲ್ಕುಲೋಕ ಜನರ ಸೃಷ್ಟಿ ಮಾಡೆಂದ್ಹೇಳಿದ್ಯೊ ೧೦೩

ಅನ್ನಪಾನ ಬಿಟ್ಟವರ ನನ್ನವರೆಂದ್ಹೇಳುವಿ
ಅನ್ಯವಿಷಯ ಹೇಳಲವನ ಕಡೆಗೆ ನೂಕುವಿ ೧೦೪

ಮಾತೆ ಭಿಡಿಯವಿಲ್ಲ ಮಾವನ್ನ ಮಡುಹಿದಾತಗೆ ಅ-
ನಾಥ ಬ್ರಾಹ್ಮಣನ ಭಿಡಿಯವ್ಯಾತಕೆಂದನು ೧೦೫

ಮಡದಿ ಅಣ್ಣ ರುಕುಮನ ಸಗಡೆಲಿಂದ ಹೊಡೆದು ಬಂದೆ
ಬಡವ ಬ್ರಾಹ್ಮಣನ ಭಿಡಿಯನ್ಯಾತಕೆಂದನು ೧೦೬

ಜಾತಿ ಕುಲಗಳಿಲ್ಲ ಗೊಲ್ಲರೆಂಜಲುಂಡು ಬೆಳೆದಿಯೊ
ಭೀತಿ ಭಯಗಳಿಲ್ಲ ಕರಡಿಮಗಳ ಕೂಡಿದ್ಯೊ ೧೦೭

ಹತ್ತಲೊಂದು ರಥಗಳಿಲ್ಲ ಹದ್ದನೇರಿ ಓಡಾಡುವಿ
ಸರ್ಪನ್ನೆಡೆಯಲೇನು ಸುಖದಿ ಶಯನ ಮಾಡುವಿ ೧೦೮

ಸಾಗರದ ತೆರೆಗಳೆಣಿಸಲ್ಹ್ಯಾಗೆ ಅಸಾಧ್ಯವೋ
ನಾಗಶಯನ ನಿನ್ನ ಗುಣಗಳೆಣಿಸಲಾರೆನೊ ೧೦೯

ತಾರೆಗಣಗಳನ್ನು ಎಣಿಕೆ ಮಾಡಲ್ಹ್ಯಾಗೆ ಅಸಾಧ್ಯವೊ ಅ-
ಪಾರಮಹಿಮ ನಿನ್ನ ಗುಣಗಳೆಣಿಸಲಾರೆನೊ ೧೧೦

ಭಕ್ತವತ್ಸಲನು ಎಂಬೊ ಬಿರುದು ಭಾಳದೊಡ್ಡದೊ
ವ್ಯರ್ಥ ಕಳೆಯಬ್ಯಾಡೊ ಯದುಕುಲೇಶ ಕೃಷ್ಣನೆ ೧೧೧

ನಿನ್ನ ಪಾದ ಕಂಡಮ್ಯಾಲೆ ಅನ್ಯವಿಷಯವ್ಯಾತಕೊ
ಎನ್ನ ಸಲಹಬೇಕೊ ಸಂಪನ್ನ ಕೃಷ್ಣನೆ ೧೧೨

ಮಂದಮತಿಯು ನುಡಿದನೆಂದು ಕುಂದು ತಿಳಿಯಬ್ಯಾಡವೊ
ನಿಂದ್ಯ ಸ್ತುತಿಗಳಿಂದ ನಿನ್ನ ಹೊಗಳುತಿದ್ದೆನೊ ೧೧೩

ಹೆಜ್ಜೆ ಹೆಜ್ಜೆಗೊಮ್ಮೆ ಹರಿಯ ವಂದಿಸುತ ಬರುತಿರಲು
ವಜ್ರಮಾಣಿಕ್ಯದ ಗೋಪುರವ ಕಂಡನು ೧೧೪

ಗೋಪುರ ಪ್ರಕಾಶ ಕೋಟಿದೀಪದಂತೆ ಹೊಳೆಯುತಿರಲು
ಆಕಾಶಕ್ಕೆ ತುಳುಕೊ ಹೊನ್ನಕಳಸ ಕಂಡನು ೧೧೫

ಚಿತ್ರರಜತವಾದ ಕೋಟೆ ಪಚ್ಚ ನೀಲ ತೆನೆಗಳು
ರತ್ನಪ್ಟಲಿಗಬಾಗಿಲಗಸೆ ಕಂಡನಾಗಲೆ ೧೧೬

ದಾರಿತಪ್ಪಿ ಬಂದೆನೀಗ ದ್ವಾರಕಾಪುರಕೆ ಇನ್ನು
ಮೋರೆತೋರಲ್ಹ್ಯಾಗೆ ಮಾಧವಗೆ ಎಂದನು ೧೧೭

ಊಟದಾಸೆಗಾಗಿ ಬಂದ ಬೂಟಕ ಬ್ರಾಹ್ಮಣನು ಎಂದು
ಕೋಟಿಮಣಿಯತೇಜ ಹಾಸ್ಯಮಾಡಿ ನಗುವನು ೧೧೮

ಭಕ್ಷ್ಯದಾಸೆಗಾಗಿ ಬಂದ ಬಿಕ್ಷುಕ ಬ್ರಾಹ್ಮಣನುಯೆಂದು
ಲಕ್ಷ್ಮೀರಮಣ ಎನ್ನನೋಡಲಕ್ಷ್ಯ ಮಾಡೋನೊ ೧೧೯

ಎಲ್ಲಿ ದಿಕ್ಕು ತಪ್ಪಿದೆನೊ ಪುಲ್ಲನಾಭನ ಪಟ್ಟಣ
ಅಲ್ಲ ಹೌದೋ ಎನುತ ಆಲೋಚಿಸಿದನು ೧೨೦

ದ್ವಾರಕೆಯು ಸುತ್ತಲಿದ್ದ ಸಾಗರ ಎಂಬೋದು ಇಲ್ಲ
ಘೋರಗುಟ್ಟಿ ಬರುವ್ರೋ ತೆರೆಯು ಕಾಣೆನೆಂದನು ೧೨೧

ತಲ್ಲಣಿಸಿ ತನ್ನಮನದಿ ಒಲ್ಲೆನೀಭವದ ದುಃಖ
ಇಲ್ಲೆ ಹೋಗಲೆನ್ನ ಪ್ರಾಣ ಈಗಲೆಂದನು ೧೨೨

ಆಕಳು ಕರುವಿನ್ಹಿಂಡಿನಿಂದ ಗೋಪಾಲಕರು
ತಾವ್ಕೊಳಲೂದುತಲ್ಲಿ ಬರುತಲಿದ್ದರು ೧೨೩

ಈ ಪುರ ದಾರದೆನುತ ಗೋಪಾಲಕರ ಕೇಳಲು
ಶ್ರೀಪತಿಯು ಕೊಟ್ಟ ಸುದಾಮಗೆಂದರು ೧೨೪

ದನವ ಕಾಯ್ವ ಮಕ್ಕಳಿಲ್ಲಿ ಎನಗೆ ಹಾಸ್ಯ ಮಾಡುವ್ರೋರು ಈ
ಜನುಮ ವ್ಯರ್ಥವೆಂದು ಮನದಿ ಮರುಗುತಿದ್ದನು ೧೨೫

ಆನೆ ಪಲ್ಲಕ್ಕಿ ತೇಜಿ ಅಂದಣದ ರಥಗಳು ಸಾಲುಕಾಲಾಳು
ಜನರ ಕಂಡನಾಗಲೆ ೧೨೬

ಪಟ್ಟಣದ ನಾಮವೇನು ಪಟ್ಟದ ದೊರೆಯುದಾರು
ಇಷ್ಟುದಂಡು ಬಲವು ದಾರದೆಂದು ಕೇಳಿದ ೧೨೭

ಸುಂದರ ಪಟ್ಟಣ ಸುಗುಣ ಸುದಾಮನು ಇಂದಿ–
ಲಿಂದೀ ಪುರವನಾಳ್ವೊ ಅರಸು ಎಂದರು ೧೨೮

ಬಡವ ಬ್ರಾಹ್ಮಣಸಿಗೆ ಇಂಥ ಪ್ರೌಢವಿಸಾಲಿಕತನವು
ನಡೆವುದ್ಹ್ಯಾಗೆ ಕೊಡುವ್ರೋಘಣೆಯು ದಾರು ಎಂದನು ೧೨೯

ಬಡವ ನಿನಗೆ ದೊರೆಗಳ ಗೊಡವೆ ಗೋಷ್ಠಿ ಯಾತಕೊ
ನಡೆಯೊ ಸುಮ್ಮನಿಂಥ ಮಾತು ನಡೆಯಲಾರದು ೧೩೦

ಮರಕತಮಣಿಯ ಸರವು ಮರ್ಕಟಗೆ ಹಾಕಿದಂತೆ
ತಿರುಕ ಬ್ರಾಹ್ಮಣನಿಗೆ ದೊರೆತನವ್ಯಾತಕೆಂದನು ೧೩೧

ಹುಚ್ಚುಹಾರವನೆ ಕೇಳೊ ಅಚ್ಚುತ ಅರಸುತನವ
ಮೆಚ್ಚಿಕೊಟ್ಟ ಇವು ಸಂಪೂರ್ಣ ಮಾಡೋನೊ ೧೩೨

ಕರುಣಾಸಮುದ್ರ ಹರಿಯು ಕೌತುಕವ್ಯಾಪಾರ ತಿಳಿದ-
ವರು ಇಳೆಯೊಳಿಲ್ಲವೆನುತ ನಡೆದನು ೧೩೩

ಮುಂದಮುಂದವಾಗಿ ಒಂದೊಂದು ಹೆಜ್ಜೆನಿಕ್ಕುತ
ಸಂದೇಹದಿಂದ ತನ್ನ ಪುರಕೆ ಬಂದನು ೧೩೪

ಇತ್ತ ಕುಚೇಲಿ ತನ್ನ ಉಪ್ಪರಿಗೆಯೇರಿಕೊಂಡು
ಮತ್ತೆ ತನ್ನ ಪತಿಯು ದಾರಿ ನೋಡುತಿದ್ದಳು ೧೩೫

ದೂರದಲ್ಲಿ ಬರುವ ಪತಿಯು ನೋಡಿ ಮನದಿ ಹಿಗ್ಗುತ
ಆಳುಮಂದಿ ಕರೆಸಿ ಆಜ್ಞೆ ಮಾಡುತಿದ್ದಳು ೧೩೬

ರಥವು ತೇಜಿ ಸಹಿತವಾಗಿ ರಾಜಬೀದಿ ಶೃಂಗರಿಸಿ
ಜತೆಯಾಗೆಲ್ಲ ಜನರು ಮುಂದೆ ನಡೆಯಿರೆಂದಳು ೧೩೭

ವಿಪ್ರ ವೇದಪಾಠಕರು ಮುತ್ತೈದೇರೆಲ್ಲ ಕೂಡಿ
ಅರ್ಥಿಯಿಂದ ದೊರೆಯ ಕರೆಯಬಂದರಾಗಲೆ ೧೩೮

ಮಿಂದು ಪೀತಾಂಬರವುಟ್ಟು ಮೇಲೆ ಜರದ ದನಿಕೆ ತೊಟ್ಟು
ಕುಂದಣದ ಪಟ್ಟಿ ನಡುವಿಗಿಟ್ಟಳಾಗಲೆ ೧೩೯

ಎಳೆಯುಕಾಳಿಂಗ ಪೋಲ್ವೋ ಹೊಳೆಗ್ಗ ಛತ್ರದಷ್ಟು ಸುತ್ತಿ
ಚವುರಿ ಗೊಂಡ್ಯ ಚಂದ್ರಕ್ಯಾದಿಗೆಯು ಹೊಳೆಯುತ ೧೪೦

ಕುಂಕುಮ ಕಸ್ತೂರಿಬೊಟ್ಟು ವಂಕಿ ನಾಗಮುರಿಗೆಯಿಟ್ಟು
ಕಂಕಣವು ದ್ವಾರ್ಯ ಹರಡಿ ಹಸ್ತಕಡಗವು ೧೪೧

ತೂಕವಾದ ಸರಿಗೆ ಗೆಜ್ಜೆ ಸ್ಯಾರೆಮುತ್ತಿನಡ್ಡಿಕೆ
ಏಕಾವಳಿ ಪದಕ ಸರಗಳ್ಹಾಕುತಿದ್ದಳು ೧೪೨

ಕುಂದಣದ ವಾಲೆ ಬುಗುಡಿ ಚಂದ್ರಬಾಳ್ಯ ಚೆಲುವ ಗಲ್ಲ
ಕ್ಹೊಂದಿಪಾಣಿಮುತ್ತು ದ್ರಾಕ್ಷಿಬಳ್ಳಿಗೊಂಚಲು ೧೪೩

ಸಕಲ ಆಭರಣದೊಳಗೆ ಶಿಖರವಾದ ಮುತ್ತಿನ
ಮುಕುರ ಮೂಗಿನಲ್ಲಿ ಇಟ್ಟು ಮುದ್ದು ಸುರಿಯುತ ೧೪೪

ಪಿಲ್ಯ ಕಾಲುಂಗುರಿಟ್ಟು ಲುಲ್ಲು ರುಳಿಯು ಪೈಜಣ ಮೆಲ್ಲ-
ಮೆಲ್ಲನ್ಹೆಜ್ಜೆಯಿಡುತ ನಡೆದು ಬಂದಳು ೧೪೫

ಸಾಗರರಾಜ ನಲ್ಲೆ ಭಾಗೀರಥಿಯು ಬಂದರೋಡಿ-
ದ್ಹಾಗೆ ತನ್ನ ಪತಿಯ ಪಾದಕ್ಕೆರಗಿ ನಿಂತಳು ೧೪೬

ಹೊಳೆವೊ ಚಿನ್ನದ್ಹೊಜಿಯಲ್ಲಿ ತಿಳಿಯ ಪನ್ನೀರು ತಂದು
ತೊಳೆದು ತನ್ನ ಪತಿಯ ಪಾದ ಒರೆಸುತಿದ್ದಳು ೧೪೭

ಅರಳುಮೊಗ್ಗು ಮಲ್ಲಿಗೆಸರವ ಬುಕ್ಕಿಟ್ಟು ಗಂಧ
ಪರಿಮಳ ದ್ರವ್ಯಗಳ ತಂದು ಪತಿಗೆ ಅರ್ಪಿಸಿ ೧೪೮

ಅಜಮಿಳ ಅಂಬರೀಷ ಗಜನ ಬಾಧೆ ಬಿಡಿಸಿದಂಥ
ತ್ರಿಜಗವಂದಿತನ ಭಜನೆಮಾಡುತಿದ್ದಿರಾ ೧೪೯

ಸುಜನ ಪ್ರಹ್ಲಾದ ಚಿಕ್ಕಮಗುವು ಧ್ರುವರಾಯಗೆ
ನಿಜಲೋಕವನೆ ಕೊಟ್ಟ ಕರುಣಾನಿಧಿಯ ಕಂಡಿರಾ ೧೫೦

ತಂಗಿದ್ರೌಪದಿಯ ಮಾನಭಂಗ ಮಾಡದ್ಹಾಗೆ ಅಕ್ಷ-
ಯಾಂಬರವನೆ ಕೊಟ್ಟ ಹರಿಯ ಕಾಯ್ದ ನಮ್ಮನು ೧೫೧

ಧನ್ಯರೀಗ ನಿಮ್ಮ ಸರಿಯು ಪುಣ್ಯವಂತರಿಲ್ಲನೆಂದು ತಂದು
ತನ್ನ ಪತಿಗೆ ವಸ್ತ್ರಾಭರಣ ಕೊಟ್ಟಳು ೧೫೨

ಮೊಳಕೆ ಮೂವತ್ತು ಹೊನ್ನು ಬಾಳುವೊ ಪೀತಾಂಬರುಟ್ಟು
ಥಳಕು ಬೆಳಕು ಮಿಂಚಿನ ಒಡ್ಯಾಣವಿಟ್ಟಳು ೧೫೩

ಕೊರಳ ಮುತ್ತಿನ್ಹಾರಪದಕ ಎಳೆಯು ಉಡಿದಾರವು
ಕಿವಿಯ ಬೆಂಡೋಲೆ ಮುತ್ತಿನ ಚೌಕುಳಿಯನಿಟ್ಟನು ೧೫೪

ಕುಂದಣದ ರತ್ನಕಡಗ ಮುಂಗೈ ಭೂಷಣಗಳು
ತಂದು ಕೃಷ್ಣನ್ನಾಮಮುದ್ರಿ ಬೆರಳಲಿಟ್ಟರು ೧೫೫

ಶಿವ್ಹ ಜರದ ಛಾದರ ಹೊಸ್ಸ ಸುದಾಮಗೆ ವಜ್ರಬಿ–
ಗಿದ ಮುತ್ತಿನ ಮುಂಡಾಸನಿಟ್ಟರು ೧೫೬

ಮಕ್ಕಳಸಹಿತ ಪಲ್ಲಕ್ಕಿಯೇರಿ ಹರುಷದಿಂದ
ಲಕ್ಕುಮಿಶನ್ನ ಧ್ಯಾನ ಮಾಡುತಿದ್ದನು ೧೫೭

ಹತ್ತಿರಿದ್ದ ಬ್ರಾಂಬರೆಲ್ಲ ಹತ್ತಿದರಂದಣಗಳ
ಹಸ್ತಿ ಅಂಬಾರಿ ತೇಜಿ ಮುಂದೆ ನಡೆದವು ೧೫೮

ಬಂದ ಮುತ್ತೈದೇರೆಲ್ಲ ಸಂಭ್ರಮದಿಂದಲಿ
ರಂಭೆ ಕುಚೇಲಿಸಹಿತ ನಡೆದುಬಂದರು ೧೫೯

ಬಡಿವೋ ಭೇರಿ ಹಿಡಿವೋ ಕಾ(ಕಹ ?)ಳೆ ಘಡಘಡೆಂಬೊ ರಥವು ತೇಜಿ
ಬಿಡುವೋ ಬಾಣ ಬಿರುಸು ಬೀದಿ ಹಿಡಿಯದಂದದಿ ೧೬೦

ಎಡಬಲದಿ ಚಾಮರ ಹಿಡಿವ ಶ್ವೇತಛತ್ತರ (ಛತ್ರ ?)
ಸಡಗರ ಸಂಪತ್ತಿರಲರಮನೆಗೆ ಬಂದನು ೧೬೧

ಅರ್ಜುನನ ಸಾರಥಿಪಾಡಿ ಮುತ್ತೈದೇರೆಲ್ಲ
ವಜ್ರದಾರತಿಯು ಪಿಡಿದು ಬೆಳಗುತಿದ್ದರು ೧೬೨

ರಾಜ ಸಿಂಹಾಸನಯೇರಿದ ಸುದಾಮ ಬಂದು
ಬ್ರಾಂಬರಿಗೆ ದಕ್ಷಿಣೆ ತಾಂಬೂಲ ಕೊಟ್ಟನು ೧೬೩

ಅಂದುಗೆ ಅರಳೆಲೆ ಬಿಂದುಲಿ ಬಾಪುರಿಯನಿಟ್ಟ
ಕಂದರೆಲ್ಲ ಮುಂದೆ ಮುಂದೆ ಬಂದು ನಿಂತರು ೧೬೪

ಕಾಲಗೆಜ್ಜೆ ಸರಪಳಿ ಬಾಲದೊಡಿಗೆಸಿಟ್ಟ ಮುದ್ದು
ಬಾಲರೆಲ್ಲ ಮುಂದೆ ಮುಂದೆ ಬಂದುನಿಂತರು ೧೬೫

ತೊದಲು ನುಡಿಗಳಾಡುತ ಬದಿಲಿ ಬಂದು ಮಕ್ಕಳು
ತೊಡೆಯನೇರಿ ತಂದೆ ಮುಖವ ನೋಡುತಿದ್ದರು ೧೬೬

ಪುತ್ಥಳಿ ಹಾರಪದಕ ಜಿಟ್ಟಲ್ಹಿಡಿದು ನೋಡುತ
ಅಪ್ಪ ನಿನಗೆ ದಾರುಕೊಟ್ಟರೆಂದು ಕೇಳೋವು ೧೬೭

ವಜ್ರದ್ಹಾರಪದಕ ತಮ್ಮ್ಹ ಜೆಟ್ಟಲ್ಲ್ಹಿಡಿದು ನೋಡುತ
ಗೆಜ್ಜೆವಂಕಿ ನಾಗಮುರಿಗೆ ತೋರಿಸ್ತಿದ್ದವು ೧೬೮

ಅಚ್ಚಕೆಂಪು ಬಿಳಿಯ ಕಪ್ಪುಹಚ್ಚನ ಹರಳು
ಕಲ್ಲಿನ್ವಸ್ತ್ರ ನಮ್ಮವ್ವಗ್ಯಾರು ಕೊಟ್ಟರೆನುತಲಿ ೧೬೯

ಗದ್ದಗೋಣು ಹಿಡಿದು ಕೇಳೋಮುದ್ದು ಮಕ್ಕಳನ್ನು ನೋಡಿ
ಪದ್ಮನಾಭಯೆಂಬೊ ಫಣಿಯು ಕೊಟ್ಟನೆಂದನು ೧೭೦

ಕಂಠಿ ಕಂಠಮಾಲೆ ಸರವು ಟೊಂಕಮುಡಿದಾರವು ವೈ-
ಕುಂಠ ಪತಿಯು ಕೃಷ್ಣ ನಮಗೆ ಕೊಟ್ಟನೆಂದನು ೧೭೧

ತೋರಮುತ್ತು ರತ್ನಾಭರಣ ಭಾರ ಬಂಗಾರವೆಲ್ಲ
ದ್ವಾರಕೆಯ ಕೃಷ್ಣ ನಮಗೆ ಕೊಟ್ಟನೆಂದನು ೧೭೨

ಹರದಿ ಸೀರೆ ತಿರಿದುತಂದ ಕರಿಯು (ಪ್ಯಾತೆ ?) ಅವಲಕ್ಕಿಗೆ
ಹರಿಯು ಮಾಡಿದ್ದರಿಯನೇನುಹೇಳಲೆಂದನು ೧೭೩

ಜ್ಯೋತಿರತ್ನದಂತೆ ಜಗನ್ಮಾತೆ ರುಕ್ಮಿಣಿಯು ಪಾರಿ-
ಜಾತ ಮುಡಿದು ಕುಳಿತ ಸೊಬಗನ್ನೇನು ಹೇಳಲಿ ೧೭೪

ಅಚ್ಚಮುತ್ತಿನಂತೆ ಪರಮ ಸೂಕ್ಷ್ಮನಾದ ಸತ್ಯಭಾಮೆ
ಕೃಷ್ಣರಾಯನ್ತೊಡೆಯಮ್ಯಾಲೆ ಒಪ್ಪುತಿದ್ದಳು ೧೭೫

ಲಕ್ಷ್ಮಿದೀವಿಗ್ಹಚ್ಚಿದಂತೆ ಸುತ್ತನಿಂತು ಸತಿಯರು
ಮುಕ್ಕ್ಯಅವಲಕ್ಕಿಗೆ ಕೈಯೊಡ್ಡುತಿದ್ದರು ೧೭೬

ಸಾಲುದೀವಿಗ್ಹಚ್ಚಿದಂತೆ ಭಾಳಮಂದಿ ಸತಿಯರು
ಸ್ವಾಮಿ ನಮಗೆ ನಮಗೆ ಎಂದು ಬೇಡುತಿದ್ದರು ೧೭೭

ಭಾವನವರು ಬಂದರೆಂದು ಭಾಳವಮಾನ ಮಾಡುತ
ನಾವು ನಿನ್ನ ತಂಗೇರೆಂದು ಹೇಳುತಿದ್ದರು ೧೭೮

ಅಚ್ಚ್ಯುತನ ಹೆಂಡಿರ ಅಲಂಕಾರಾಭರಣವೆಲ್ಲ
ಎಚ್ಚರಿಲ್ಲದ್ಹುಚ್ಚನ್ಹಾಗೆ ನೋಡುತಿದ್ದೆನು ೧೭೯

ಆತನ ಹೆಂಡಿರೊಳಗೆ ನಿನ್ನ ನೆನಸಿ ಮರುಗುತ
ಕೋತಿಹಾಗೆ ಕಣ್ಣುಬಿಡುತ ಕೂತು ನೋಡಿದೆ ೧೮೦

ವಸ್ತ್ರ ಆಭರಣಕೊಟ್ಟು ಎಷ್ಟು ಸಂತೋಷಬಡಿಸಿ
ಹೊಸ್ತಿಲ್ಹೊರಗೆ ದಾಟಿಸಿ ಕೈಬಿಟ್ಟು ನಡೆದನು ೧೮೧

ಬೆಳ್ಳಿಬಂಗಾರ ಕೊಟ್ಟು ಕಳ್ಳರ ಬೆನ್ಹತ್ತಿಸಿದ
ಎಲ್ಲ ಸುಲಿದುಕೊಂಡು ಎನ್ನ ಮನಸು ನೋಡಿದ ೧೮೨

ಮುಕ್ಕು ಅವಲಕ್ಕಿಗೆ ಲೆಕ್ಕವಿಲ್ಲದಷ್ಟು ಭಾಗ್ಯ
ಕೊಟ್ಟ ನಮ್ಮಪ್ಪಗ್ಯಾರು ಸರಿಯು ಅಂದನು ೧೮೩

ಅಲ್ಪ ಅವಲಕ್ಕಿಗಜನಕಲ್ಪತನಕ ಉಂಡರೂ
ಸ್ವಲ್ಪಸವಿಯದಷ್ಟು ಭಾಗ್ಯ ಕೊಟ್ಟ ಕೃಷ್ಣನು ೧೮೪

ಕೆರೆಯುನೀರ ಕೆರೆಗೆ ಚೆಲ್ಲಿ ವರಗಳ ಪಡೆವೆನೆಂದು
ಹರಿಯು ಕೊಟ್ಟ ಭಾಗ್ಯ ಹರಿಗೆ ಅರ್ಪಿಸಿದನು ೧೮೫

ಕೂಪ ಕೆರೆಯು ಕಾವಲುಗೋಪುರ ದೇವಾಲಯ ನಾ-
ನಾಪರಿಯ ಚಿತ್ರಮಂಟಪವ ರಚಿಸಿದ ೧೮೬

ಕೃಷ್ಣಮೂರ್ತಿಯನು ಪ್ರತಿಷ್ಠೆಮಾಡಿ ಬ್ರಾಂಬರಿಗೆ
ಲಕ್ಷ ಸಂತರ್ಪಣೆಯು ಮಾಡುತಿದ್ದನು ೧೮೭

ಅಶ್ವಗೋವುಹಿಂಡು ದಾನ ಅಧಿಕಹೇಮ ರತ್ನ ದಾನ
ವಿಶ್ವಮೂರುತಿಗೆ ಕೋಟಿ ದೀಪದಾನವು ೧೮೮

ಅನ್ನದಾನ ವಸ್ತ್ರದಾನ ಧಾನ್ಯಕ್ಷಿಪ್ರ ಧರಣಿ ದಾನ
ಕನ್ಯಾದಾನ ಮಾಡಿ ತಾ ಕೃತಾರ್ಥನಾದನು ೧೮೯

ಕಷ್ಟಬಂದರ್ಹರಿಯ ಮನಮುಟ್ಟಿ ಭಜನೆಮಾಡಲು
ಅಷ್ಟ ಐಶ್ವರ್ಯಕೊಡುವ ಆದಿಮೂರುತಿ ೧೯೦

ಬಡವ ಸುದಾಮಗಾಸೆಬಿಡದೆ ಪೂರೈಸಿಕೊಟ್ಟ
ಒಡೆಯ ತ್ರಿಧಾಮಈಶನೆಂದು ಹೊಗಳೋರೊ ೧೯೧

ನಿತ್ಯದಲ್ಲಿ ಈ ಕಥೆ ಭಕ್ತಿಯಿಂದ ಕೇಳಲು
ಪುತ್ರಸಂತಾನ ಸಂಪತ್ತು ಕೊಡುವನು ೧೯೨

ನೇಮದಿಂದ ಈ ಕಥೆ ಕೇಳಿದ ಜನರಿಗೆ
ಕಾಮಿತಾರ್ಥ ಕೊಡುವ ಭೀಮೇಶಕೃಷ್ಣನು ೧೯೩

೧೩೧

ಸಾಕು ನರಹರಿ ಭವದ ಬವಣೆಂ-
ದ್ಯಾಕೆ ಬಳಲಿಸುವೆ ಹರಿ ಹರಿ
ಶ್ರೀ ಕಮಲಾಪತಿ ಶರಣ ಜನರೊಳ-
ಗ್ಹಾಕಿ ಪೊರೆಯೆನ್ನ ಹರಿ ಹರಿ ಪ.

ದೊರೆಯೆ ನೀನಿರಲನ್ಯರಿಗೆ ಬಾಯಿ
ತೆರೆಯಲ್ಯಾಕಿನ್ನ ಹರಿಹರಿ
ಪರಮ ಆಪ್ತ ನೀನಿರಲು ಕಾಣದೆ
ಪರರಿಗೆ ಆಲ್ಪರಿದ್ಹರಿಹರಿ ೧

ಪುತ್ಥಳಿ ಮನೆಯಲೆ ಇರಲು
ಹಿತ್ತಾಳೆ ಬಯಸುವೆನ್ಹರಿಹರಿ
ಬಿಟ್ಟು ನಿನ್ನೀಗನ್ಯ ವಿಷಯದಿಂ-
ದ್ಹುಟ್ಟುವುದೆ ಸುಖ ಹರಿಹರಿ ೨

ಬೇಡಿದ್ವರಗಳ ಕೊಡುವೊ ಭೀ-
ಮೇಶಕೃಷ್ಣ ನೀನಿರಲ್ಹರಿಹರಿ
ನೋಡಿ ಸುಖಿಸದೆ ಬಿಟ್ಟು ಕನ್ನಡಿ
ಗೋಡೆಗಡರುವೆನ್ಹರಿಹರಿ ೩

## ೧೩೨

ಸೂರೆಮಾಡೆ ವರಗಳ ಹೊಸೂರ ದೇವತೆ
ತೋರೆ ನಿನ್ನ ದಯವ ತುಂಬಿಕೊಂಡು ನಾ
ಪೋಗುವೆನು ಮನೆಗೆ ಪ.

ಶೀಘ್ರದಿಂದ ನಿನ್ನ ಸಾಲಿಗ್ರಾಮಪುಷ್ಕ ನೇತ್ರದಿಂದ ಅ-
ನುಗ್ರ [ಹ] ಮಾಡಿ ನೋಡೆ ಎನ್ನ ಶಿರಬಗ್ಗಿ ಸ್ತಂದನೆ ಮಾಡುವೆನು ೧

ರೇಣುಕಾಂಬ ನಿನ್ನ ಪಾದರೇಣು ತೋರೆ ಕರುಣದಿಂದ
ಕಾಣೆ ನಿನ್ನ ಸರಿ ಲೋಕದೊಳಗೆ ಪಾಣಿ ಹಿಡಿದು ಪಾಲಿಸೆನ್ನ ೨

ಸತ್ಯವಂತೆ ಕಳೆಯೆ ಈ ತಾಪತ್ರಯ ದಾರಿದ್ರ್ಯ ದೋಷ
ನಿತ್ಯದಲಿ ನಾ ನಿನ್ನ ಭಾಳ ಭಕ್ತಿಯಿಂದ ಬೇಡಿಕೊಂಬೆ ೩

ಬಾಳೆದಂಡಿಗೆ ಪಾಯಸ ನಿನ್ನ ಭಾಳ ಮಹಾತ್ಮ್ಯಗಳನೋಡಿ ಅ-
ರಳುಮಲ್ಲಿಗೆ ಕುಸುಮ ಕುಂಕುಮ ಬೇಡುವೆ ಪ್ರಸಾದವನ್ನು ೪

ಜಮದಗ್ನಿಸತಿಯೆ ಸಿರಿ ಭೀಮೇಶಕೃಷ್ಣನಾದ ಭಾರ್ಗವ-
ರಾಮನ ಮಾತೆಯೆ ಕರುಣದಿ ಕಾಮಿತಾರ್ಥವ ಕೊಟ್ಟು ಕಾಯೆ ೫

## ೧೩೩

*

ಸ್ಮರಿಸಿ ಬದುಕಿರೊ ಸರ್ವಾನಂದ ಗುರುಗಳ
ನಿರುತದಿಂದ ಇಷ್ಟಫಲವ ನೀಡೋ ವರಗಳ ಬೇಡಿ ಪ.

ಆದಿಕಲ್ಲಿನಲ್ಲಿ ಮಹಾದೇವ ಕರೆಯೆ ಬಂದು ನಿಂತ
ಶ್ರೀದೇವಿರಮಣನ ಮುದ್ದು ಪಾದಾಂಬುಜವ ಪೂಜಿಸುವರ ೧

ಉತ್ತಮವಾಗಿದ್ದ ದಿವ್ಯ ಛತ್ರ ವಿಜಯತೀರ್ಥ ನಿರ್ಮಿಸಿ
ನಿತ್ಯದಲಿ ಮೃಷ್ಟಾನ್ನದಾನ ವಿಸ್ತಾರವನೆ ಪೇಳಲೊಶವೆ ೨

ಕುಷ್ಠರೋಗ ವ್ಯಾಧಿ ಜ್ವರ ಚತುರ್ಥಿ (?) ಭಯ ಭೀತಿಗಳನೆಲ್ಲ
ಬಿಟ್ಟೋಡಿಸಿ ತೀರ್ಥಅಂಗಾರದಲಿ ಸಮಸ್ತರ, ಮಹಿ[ಮೆ]ಯ ನೋಡಿ ೩

* [ಮೊದಲಕಲ್ಲು ಶೇಷದಾಸರ ಮೇಲಿನದು ?]

ಸಂತಾನ ಸುಪುತ್ರದ ಫಲವ ನಿಂತುಕೊಡುತ ಮಂತ್ರಾಕ್ಷತೆಯ
ಗ್ರಂಥ ಪದಸುಳಾದಿಯ ಲಕ್ಷ್ಮೀಕಾಂತಗೆ ಮಾಡರ್ಪಿಸುವರ ೪

ಹರಿಯು ದಿವ್ಯಾಧ್ಯಸಿಕೆಯು ನಾಮ ಗುರು ವಿಜಯರಾ–
ಯರ ಪ್ರೇಮ ಪಡೆದು ಭೀಮೇಶಕೃಷ್ಣನಂಘ್ರಿ ಬಿಡದೆ
ಭಜನೆ ಮಾಡುವವರ ೫

೧೩೪

*

ಸ್ವಾಮಿ ಶ್ರೀಕೃಷ್ಣ ವಾಸುದೇವ ಲಕ್ಷ್ಮೀಪತಿ ಜಗಜನ್ಮಾದಿಕಾರಣ
ನಾರಾಯಣ ನರಕಾಂತಕ ನಾರದಪ್ರಿಯ ನರಸಖನಾದ
ನಾರಸಿಂಹಮೂರ್ತಿಗೆ ನಮಸ್ಕಾರಗಳು

ಗೋವ್ರಜಮೋಹಿದ್ದ ಗೋವರ್ಧನುದ್ಧಾರ ಗೋಪೀನಾಥ
ಗೋಕುಲದರಸು ಯಾದವಶಿರೋಮಣಿಯೆ ನಿನ್ನ
ಬಿನ್ನಪವ ಲಾಲಿಸಿ ಕೇಳಯ್ಯ ಕೃಷ್ಣ

ಕಾಮ ಕ್ರೋಧ ಮದ ಮತ್ಸರ ದುರ್ಬುದ್ಧಿ ದುರಾಚಾರ
ದುರ್ವಿಷಯಗಳ ಮೋಹ ಲೋಭಗಳ ಮರೆಸಿ
ಮುಂದೆ ಬಿರುದಿನಿಂದ ಭಕ್ತಜನ ಬಂಧು

ನೀ ದಯಾಸಿಂಧು ನಾ ಬೇಡಿಕೊಂಬುವೆನು ಬಂದು
ಸಜ್ಜನರಕ್ಷಕ ದುರ್ಜನಶಿಕ್ಷಕ ಅರ್ಜುನಸಾರಥಿಯಾದ
ಅನಂತಮಹಿಮ ನಿರ್ಜರೇಶ ನಿತ್ಯಮುಕ್ತ

ದ್ವಾರಾವತೀ ಮಧ್ವಮುನಿಗೊಲಿದಂಥ ಮೂರ್ಜಗಾಧೀಶ
ಉದ್ಧಾರಮಾಡಯ್ಯ ಉರಗಾದ್ರಿವಾಸ ಪದ್ಮಾವತೀಕಾಂತ
ಶ್ರೀವೆಂಕಟೇಶ ಜ್ಞಾನಭಕ್ತಿ ಘನ ವೈರಾಗ್ಯ

ಆಯುಷ್ಯ ಆರೋಗ್ಯ ಶ್ರೇಯಸು ಸೌಭಾಗ್ಯ
ಶ್ರೇಷ್ಠವಾದ ಸಂತಾನ ಸಕಲಾಭೀಷ್ಟಗಳ ಕೊಡುವನೆಂದು
ಬಿರುದು ನಿಂದು ಭಕ್ತಜನ ಬಂಧು ನೀ ದಯಾಸಿಂಧು

ನಾ ಬೇಡಿಕೊಂಬುವೆನು ಬಂದು ಎನ್ನ ಭಾರ ಎನ್ನ
ಪರಿವಾರ ನಿನ್ನಗೊಪ್ಪಿಸುವೆನು ಮನ್ಮಥನಪಿತ ಎನಗೆ
ಇನ್ನು ಧರ್ಮಾರ್ಥ ಕಾಮಿತ ಫಲಗಳನು ಸನ್ಮಾನದಲಿ ಕೊಟ್ಟು
ಮನ್ನಿಸಿ ನೀಡೆನಗೆ ಮಂಗಳವ ಅನುದಿನವು

* ಕನ್ನಡ ಮಂತ್ರ.

ಸುಜ್ಞಾನಿಗಳೊಡೆಯ ಸುರರಿಂದ್ವಂದಿತವಾದ ನಿನ್ನ
ಪದ್ಮಪಾದಗಳಿಗೆ ಬದ್ದ್ಯೋಳಿಕೊಂಬುವೆನು
ಭೀಮೇಶಕೃಷ್ಣ ರುಕ್ಮಿಣೀವಲ್ಲಭನೆ

೧೩೫

*

ಹರನಕುಮಾರನ ಚರಣಕಮಲಗಳಿಗೆರಗಿ
ಶಾರದೆಗೆ ವಂದಿಸುತ
ಶರಧಿಶಯನಗೆ ಸೆರಗೊಡ್ಡಿ ಬೇಡಿಕೊಂಬೆ
ಶರಧಿಸುತೆಯ ಕತೆಗ್ಸ್ವರವ ೧

ಸಾಕ್ಷಾತ ಶ್ರೀಹರಿ ವಕ್ಷಸ್ಥಳ ವಾಸಿಯೆ
ಇಕ್ಷುಚಾಪದವನ ಪಡೆದ
ಮೋಕ್ಷದಾಯಕಳೆ ಮಾಲಕ್ಷುಮಿ ಕರುಣಾಕ-
ಟಾಕ್ಷದಿ ನೋಡಬೇಕೆನ್ನ ೨

ಶ್ರಾವಣಮಾಸದಿ ಮೊದಲ ಶುಕ್ರವಾರ ಮಾ-
ಧವನರಸಿ ಮಾಲಕ್ಷ್ಮಿ-
ದೇವೇರ ಮಹಿಮೆ ಕೊಂಡಾಡುವ್ರೋದೀಕಥೆ
ಕಿವಿಗೊಟ್ಟು ಕೇಳೋದು ಜನರು ೩

ಬಡವಬ್ರಾಹ್ಮಣನೊಂದು ಪಟ್ಟಣದೊಳಗಿದ್ದ
ಮಡದಿ ಮಕ್ಕಳ ಸಹಿತಾಗಿ
ಹಿಡಿದು ತಂಬೂರಿ ತಂಬಿಗೆಯ ಗೋಪಾಳಕ್ಕೆ
ಬಿಡದೊಂದು ಮನೆಯ ತಿರುಗುತಲಿ ೪

ಸೊಸೆಯರು ನಾಲ್ಕುಮಂದಿಯು ಗಂಡುಮಕ್ಕಳು
ಹಸುಗೂಸುಗಳು ಮನೆತುಂಬ
ಅಶನ ವಸನವಿಲ್ಲ ಹಸಿದ ಮಕ್ಕಳಿಗ್ಹಾಲು
ಮೊಸರು ಅನ್ನವು ಮೊದಲಿಲ್ಲ ೫

* ಲಕ್ಷ್ಮೀದೇವಿ ಹಾಡು.

ಅತಿಗುಣವಂತರು ಗತಿಯಿಲ್ಲ ಗ್ರಾಸಕ್ಕೆ
ಮಿತಭೋಜನವ ಮಾಡುವರು
ವ್ರತ ನೇಮ ನಿಷ್ಠೆ ನಿರುತ ದರಿದ್ರವನು ಶ್ರೀಪತಿ-
ಸತಿ ದಯದಿ ನೋಡಿದಳು ೬

ಒಂದು ದಿನದಿ ಬಂದ, ಮಂದಿಮಂದಿರದಲ್ಲಿ
ಚೆಂದಾದ ಸುಣ್ಣ ಸಾರಣೆಯು
ರಂಗವಲ್ಲಿ ಚಿತ್ರ ಬಣ್ಣಕಾರಣೆ ಮನೆ-
ಮುಂದೆ ತೋರಣ ಕಟ್ಟುತಿರಲು ೭

ಮನೆಮನೆಯಲ್ಲಿ ಮಾಲಕ್ಷ್ಮಿದೇವಿಯರ ಚಟ್ಟಿಗೆ ಬರೆವು-
ದನು ತಾ ಕಂಡು ಇದು
ಏನು ನೋವಿ (ನೋಂಪಿ ?) ಎನಗೆ ಹೇಳಬೇಕೆಂದು
ಘನಭಕ್ತಿಯಿಂದ ಕೇಳಿದನು ೮

ಕ್ಷೀರಸಾಗರದಲ್ಲಿ ಹುಟ್ಟಿದ ಮಾಲಕ್ಷ್ಮಿದೇವಿ
ದೇವರ ಪಟ್ಟದರಸಿ
ಶ್ರಾವಣಮಾಸ ಸಂಪತ್ತುಶುಕ್ರುವಾರ
ನಾವು ಪೂಜೆಯು ಮಾಡಬೇಕು ೯

ಎನಗೊಂದು ಚಟ್ಟಿಗೆ ಬರೆದುಕೊಟ್ಟರೆ ಎನ್ನ
ಮನೆಯಲ್ಲಿ ಇಟ್ಟು ಪೂಜಿಪೆನು
ವಿನಯದಿಂದ್ಹೇಳಿಕೊಂಡರೆ ಒಂದುಚಟ್ಟಿಗೆ
ಬರೆದುಕೊಟ್ಟರು ಬಲಗೈಲಿ ೧೦

ಸಿರಿದೇವಿಚಟ್ಟಿಗೆ ಹಿಡಿದು ಗೋಪಾಳಕ್ಕೆ
ಹೋದನು ಮನೆಮನೆಯಲ್ಲಿ
ಗೂಡೆಅಕ್ಕಿ ಬ್ಯಾಳೆ ಬೆಲ್ಲತುಪ್ಪವ ತಂದು
ನೀಡೋರು ಹಿಡಿ ಹಿಡಿರೆಂದು ೧೧

ಕ್ಯಾದಿಗೆ ಕುಸುಮ ಮಲ್ಲಿಗೆ ಪತ್ರ ಫಲಗಳು
ಪೂಜಾ ಸಾಧನ ಪದಾರ್ಥಗಳು
ಆದಿಲಕ್ಷ್ಮಿದಯ ಆದಕಾರಣದಿಂದ
ಆದರದಿಂದ ಕೊಡುವರು ೧೨

ತಂದ ಪದಾರ್ಥ ತನ್ಹೆಂಡತಿ ಕರೆದು
ಮುಂದಿಟ್ಟು ವಾರ್ತೆಗಳ ಹೇಳಿದನು
ಇಂದಿರಾದೇವೇರ ಇಂದು ಪೂಜೆಯು ಮಾಡು ಆ-
ನಂದವ ಕೊಡುವಳು ನಮಗೆ ೧೩

ಕಬ್ಬು ಬಿಲ್ಲ ಹಿಡಿವ್ನೋ ಕಾಮನ ಮಾತೆ ಮಾಲಕ್ಷ್ಮಿ
ಉರ್ವಿಯೊಳುತ್ತಮಳೀಕೆ
ಹಬ್ಬದೂಟಕೆ ಹೇಳಿ ಬಂದೆ ಬ್ರಾಹ್ಮಣಗೆ ಮು-
ತ್ತೊಬ್ಬ ಮುತ್ತೈದೆಗ್ಹೇಳೆಂದ ೧೪

ಚಿಕ್ಕಸೊಸೆ ಎಣ್ಣೆ ಕುಂಕುಮ ಕೈಯಲ್ಲಿ
ತಕ್ಕೊಂಡು ನಡೆದಳ್ಹಾದಿಯಲಿ
ಚೊಕ್ಕ ಚಿನ್ನದ ಗೊಂಬೆಯಂಥ ಮುತ್ತೈದೆ ತಾ
ಗಕ್ಕನೆ ಬಂದು ಕೇಳಿದಳು ೧೫

ಹುಡುಗಿ ನೀ ಎತ್ತ ಪೋಗುವಿಯೆ ನಿಮ್ಮನೆಯಲ್ಲಿ
ಅಡಿಗೆಯೇನೇನು ಮಾಡುವರು
ಹಿಡಿದೆಣ್ಣೆ ಕುಂಕುಮ ಕೊಡುವ್ಹೋದಿಸ್ತ್ರೀರಿಗೆ
ಕೊಡಬಾರದೇನೆ ನೀಯೆನಗೆ ೧೬

ದಾರಾದರೇನಮ್ಮ ದಾರಿನೋಡದನುಂಚಿ
ನೀನೇ ಬಾ ನಮ್ಮ ಮಂದಿರಕೆ
ಹೇಳಿ ಮುತ್ತೈದೆಗೆ ಹಿಗ್ಗಿಲೆ ಬಂದತ್ತೆ
ಮಾವನ ಮುಂದರುಹಿದಳು ೧೭

ಮನೆಯ ಸಾರಿಸಿ ಸುಣ್ಣ ಕಾರಣೆ ರಂಗೋಲಿಯ
ಬರೆದು ಬಾಗಿಲಿಗೆ ಬಣ್ಣವನು
ತಳಿರುತೋರಣ ಕಟ್ಟಿ ಸರ್ವಸಂಭ್ರಮದಿಂದ
ಎರೆದುಕೊಂಡೆಲ್ಲರು ಬ್ಯಾಗ ೧೮

ಕಮಲ ಕ್ಯಾದಿಗೆ ಕಬ್ಬು ಕದಳಿ ಕಂಬವು
ಬಾಳೆಗೊನೆ ಕಟ್ಟಿ ಚಿತ್ರ ಮಂಟಪವ
ಎಡಬಲದಲಿ ನಾಲ್ಕು ನಂದಾದೀವಿಗೆ ಹಚ್ಚಿ
ನಡುವ್ಹ್ಯಾಕಿ ಪದ್ಮ ಪೀಠಗಳ ೧೯

ಚಟ್ಟಿಗೆಯೊಳಗಕ್ಕಿ ಐದುಫಲವ ತುಂಬಿ
ಮುತ್ತೈದೇರೆಲ್ಲ ನೆರೆದು ಕಟ್ಟಿದರ್
ಕೊರಳ ಮಾಂಗಲ್ಯ ಮಾಲಕ್ಷ್ಮಿ ಪ್ರತಿಷ್ಠೆ
ಮಾಡಿದರು ಸಂಭ್ರಮದಿ ೨೦

ಅರಿಷಿಣ ಕುಂಕುಮ ಗಂಧ ಬುಕ್ಕಿಟ್ಟ ಗೆಜ್ಜೆ-
ವಸ್ತ್ರವು ಪಾರಿಜಾತ ಸಂಪಿಗೆಯು
ಮುಡಿಸಿ ಮಲ್ಲಿಗೆದಂಡೆ ಒಡೆಸಿ ತೆಂಗಿನಕಾಯಿ
ಉಡಿತುಂಬುತ್ತತ್ತಿ ಫಲಗಳು ೨೧

ಭಕ್ಷ್ಯಕಾಪಗೆ ಪರಮಾನ್ನ ಚಿತ್ರಾನ್ನ ಸಣ್ಣಕ್ಕಿ
ಶಾಲ್ಯಾನ್ನ ಸೂಪಗಳು
ಚಕ್ಕುಲಿ ಗಿಲಗಂಜಿ ಚೆಂದ ಚಿರೋಟಿ
ಹಪ್ಪಳ ಸಂಡಿಗೆ ಆಂಬೋಡೆಗಳು ೨೨

ಸಕ್ಕರೆ ಘೃತ ಕ್ಷೀರ ಸಕಲ ಪಕ್ವಾನ್ನ
ಮಂಡಿಗೆ ಬೀಸೋರಿಗೆ ಗುಳ್ಳೋರಿಗೆಯು
ಚಂದ್ರಸಂತ್ಪೋಳಿವ್ರೊ ಶಾವಿಗೆಯು ಫೇಣಿಯು
ದಿವ್ಯ ಬುಂದ್ಯ ಬುರುಬುರಿ ಅನಾರಸವು ೨೩

ಬೇಕಾದ ಬೇಸನ್ನು ಬಿಳಿಯುದಳಿಯುದುಂಡೆ (?)
ಮೋತಿಚೂರು ಚೂರ್ಮಲಾಡು
ಸೇತು (ಶ್ವೇತ ?) ಬಿಳುಪಿನ ಚಕ್ರದಂಥ ಜಿಲೇಬಿ
ಸುಕಿಯದುಂಡೆ ಮುಖವಿಲಾಸಗಳು ೨೪

ಹೋಳಿಗೆ ಎಣ್ಣೋರಿಗೆ ಹೊಯ್ಗಡವು ಗೇಹೂರಿ(?) ಕಾ-
ಯ್ದಾಲು ಕರಿದ್ದೂರಣಗಡುವು
ತೇಂತ್ರೋಳಿ ತಿರುವಿದುಡ್ಡಿ ಸಜ್ಜ್ಯಾಳಿ ಮೆಣಸು ಜೀರಿಗೆ
ಇಂಗುಹಾಕಿದುಪ್ಪಿನ ಕಡುಬು ೨೫

ಸಾರು ಸಂಬಾರ ಪಡುವಲಕಾಯಿಪಳದ್ಯ ಉ-
ಪ್ಪೇರಿ ಉಪ್ಪಿನಕಾಯಿರಸವು
ಕೀರು ಮಾಲತಿ ಗೌಲಿ ಪರಡಿ ಪರಮಾನ್ನ ಮುಕ್-
ಸೌರಿ ಚಟ್ಟಣಿ ಕೋಸಂಬರಿಯು ೨೬

ಹಾಗಲವು ಹೀರೆ ಸೌತೆ ಹಂಪರದೌರೆ ಚೌಳಿ
ಬಾಳೆ ಬೆಂಡೆ ಕುಂಬಳವು
ಮಾಗಿದ್ದಲಸಿನಕಾಯಿ ಕಲಸಿಮೇಲೋಗರ
ಗೆಣಸು ಗುಳ್ಳದಕಾಯಿ ಬಜ್ಜಿಗಳು ೨೭

ಸಬ್ಬ ಭಾತು ಸೌತೆಭಾತು ಕೇಸರಿಭಾತು
ಕೆನೆಕೆನೆ ಮೊಸರು ಒಗ್ಗರಣೆ
ಹಸಿಅಲ್ಲ ಬಿಸಿಹಾಲು ಹೊಸಬೆಣ್ಣೆ ಇಂಗುಪ್ಪು
ಕಲಸಿ ಬಕಾಳ ಭಾತುಗಳು ೨೮

ಮುದ್ದು ಮಾಲಕ್ಷ್ಮಿ ನೈವೇದ್ಯಮಾಡಿದನಿ-
ರುದ್ಧ ಮೂರುತಿ ಸಹಿತಾಗಿ
ಶುದ್ಧ ಸುಣ್ಣವು ಎಲೆಅಡಿಕೆಯೇಲಕ್ಕಿ
ಪತ್ರಿರಿ (ಪತ್ರೆ ?) ಕಾಯಿ ಕಾಚು ಲವಂಗ ೨೯

ಹಚ್ಚಿಕೊಂಡರೆಲ್ಲರರಿಷಿಣ ಗಂಧ ಕುಂಕುಮ
ಎತ್ತಿ ಚಾಮರವ ಬೀಸುವರು
ಅಚ್ಚುತನರಸಿ ಅನುಗ್ರಹದಿ ನೋಡಿದಳು ಮೆಚ್ಚಿ
ಮುಚ್ಚಿದ ಕಣ್ಣ ತೆಗೆದು ೩೦

ಅಮರಾದಿ ಸುರರೊಡೆಯನ ರಾಣಿ ಲಕ್ಷ್ಮಿಗೆ
ಸರ್ವವು ಸಮರ್ಪಣ ಮಾಡಿ
ನಮೋನಮೋ ಎಂದು ಕೈಮುಗಿದು ಮಂತ್ರಾಕ್ಷತೆ
ಶಿರದಲ್ಲಿ ಹಾಕಿ ವರವ ಬೇಡುವರು ೩೧

ಹಾಡುತ ಪಾಡುತ ಮಾಡುತಲಾರತಿ
ಬೇಡುತ ಮುಡಿದ ಮಲ್ಲಿಗೆಯು
ನೋಡುತ ನಲಿನಲಿದಾಡುತ ತಾ ದಯ-
ಮಾಡುತ ಕೊಟ್ಟಳು ವರವ ೩೨

ಹೊತ್ತು ಭಾಳಾಯಿತು ಮುತ್ತೈದೆ ಒರಲಿಲ್ಲ
ಮತ್ತೇನು ಇದಕೆ ಉಪಾಯ
ಅಷ್ಟ ಅಡಿಗೆ ಎಲೆ[ಗೆ] ಬಡಿಸಿ ಕುಂಕುಮವೀಳ್ಯ
ಇಟ್ಟು ಪುಟ್ಟಿಯನು ಮುಚ್ಚಿದರು ೩೩

ಗಂಡ ಹೆಂಡಿರು ಬಂದ ಬ್ರಾಹ್ಮಣರೊಡಗೂಡಿ
ಉಂಡು ವೀಳ್ಯವನೆ ತಕ್ಕೊಂಡು
ಇಂದು ನಮಗೆ ಜಯ ಶುಭಕಾಲ ಬಂದಿತೀ-
ಗೆಂದಾಗಾನಂದ ಹೊಂದಿದರು ೩೪

ಮರುದಿನ ಸಂಪತ್ತುಶನಿವಾರ ಹಿಟ್ಟಿನ ಕಡುವು
ಅಂಬಲಿ ಪರಮಾನ್ನ ತಿಳಿತಿಳಿವೆಣ್ಣೆ
ಹಿಂಡಿಯು ಪಲ್ಯ ಗೌರಿಪೂಜೆಯು ಮಾ-
ಡಿಟ್ಟರು ನೈವೇದ್ಯವನು ೩೫

ಎರಡನೆ ಶುಕ್ಕುರುವಾರ ಮುತ್ತೈದೆಗೆ
ದೃಢವಾಗಿ ಹೇಳಿ ಬಾರೆನಲು
ಎಡಸ್ತ್ಯೆಯು ಮುಚ್ಚಿಕೊಂಡೆಣ್ಣೆ ಕುಂಕುಮವನ್ನು
ನಡೆದಳಾಗಿನ್ನೊಬ್ಬ ಸೊಸೆಯು ೩೬

ಬಾಜಾರ ಬಿಟ್ಟು ಬದಲು ಮಾರ್ಗ ಹಿಡಿಯಲು
ಹಾದಿಗೆ ಬಂದಡ್ಡಗಟ್ಟಿ
ಆದಿಶುಕ್ಕುರುವಾರ ಹೇಳಿಯೆನ್ನನು ಬಿಟ್ಟು
ನೀ ದಾರಿಗೆ ಹೇಳಿದಿಯೆ ಭೋಜನಕೆ ೩೭

ನಮ್ಮ ಗೊಡವೆಯಾತಕಮ್ಮ ನಿನಗೆ ಸುಮ್ಮನ್ಹೋಗು
ಶುಕ್ಕುರುವಾರದಲ್ಲಿ ನಿನ್ನ
ಎಲೆಯ ಬಡಿಸಿಟ್ಟಿದ್ದಿಂದಿಗೆ ಅದೆ
ಉಣ್ಣು ಬೇಕಾದರ್ಹೋಗಮ್ಮ ೩೮

ತಂಗಳೂಟವನುಂಬೊ ಕಂಗಾಲಿ ನಾನಲ್ಲ
ಬಂಗಾರದಂಥ ಮುತ್ತೈದೆ
ತಿಂಗಳಾಗಲಿ ಹಂಗುನೂಲು ಕಟ್ಟಿ ನಿನ್ನೆಲೆ
ತಂಗುಳು ನಿನಗುಣಿಸುವೆನು ೩೯

ಬಡಿವಾರ ಮಾತ್ಯಾಕೆ ಬಡಿಸ್ಯಟ್ಟಯು (?) ನುಂಬೊ
ಬಡವ್ಯಲ್ಲ ನಾ ಭಾಗ್ಯವಂತೆ
ತಡೆಯದೆ ಬರುವೆನು ತಾ ಎಣ್ಣೆ ಕುಂಕುಮ
ಹಿಡಿದೆಳಕೊಂಡು ನಡೆದಳು ೪೦

ಕೊಟ್ಟೆಣ್ಣೆಕುಂಕುಮ ತಟ್ಟನೆ ಬಂದಳು
ಅಷ್ಟು ವಾರ್ತೆಗಳ ಹೇಳಿದಳು
ಬಿಟ್ಟ ಮುತ್ತೈದೆ ಪೀಠದ ಮ್ಯಾಲೆ ಕಾಣೆನೆಂ-
ದೆಷ್ಟ್ಹೇಳಲಾಕೆ ಚೆಲ್ವಿಕೆಯ ೪೧

ಅಡಿಗೆಯಾದವು ಗೌರಿಪೂಜೆಗಳಾದವು
ಬಡಿದವು ಮೂರು ಗಂಟೆಗಳು
ಉಡಿಕುಂಕುಮರಿಷಿಣ ಬಡಿಸಿಟ್ಟರೊಂದೆಲೆ
ಸಡಗರದಿಂದುಂಡರಾಗ ೪೨

ಮೂರನೆಯವಾರ ಮುತ್ತೈದೆಗ್ಹೇಳುವರು ಮು-
ತ್ತೈರೆಂದು ವಿಚಾರ ಮಾಡುವರು ಮಾವನ-
ವರೆನ್ನ ಮಾತು ನೋಡಿರಿ ಎಂದು ತಾ
ಹೋದಳಿನ್ನೊಬ್ಬ ಸೊಸೆಯು ೪೩

ಮುಡಿಬಾಗ ಮುಚ್ಚಿಕೊಂಡೆಣ್ಣೆ ಕುಂಕುಮವನ್ನ
ಹಿಡಿದಳು ಇನ್ನೊಂದು ಓಣಿಯನು
ಬಡ ಬಡ ಬಂದು ಹಿಡಿದೆಣ್ಣೆ ಕುಂಕುಮ
ಕೊಡುವೋದಿನ್ಯಾರಿಗೌತನವ ೪೪

ಔತನವಲ್ಲಮ್ಮ ಅತಿಬಡವರು ನಾವು
ಗತಿಯಿಲ್ಲ ಗೌರಿಹಬ್ಬಕ್ಕೆ
ಸುತರಾಡ ಹೋಗ್ಯಾರ್ಹುಡುಕುತ ಬಂದೆ
ಬಿಡುದಾರೀಪರಿ ಬಯ್ವೋರೆನ್ನ ಮನೆಯಲಿ ೪೫

ಉಗುಲುತಗಲಿಸ ಮಾತಿನ ಬಗೆಯ ನಾ ಬಲ್ಲೆನೆ
ಹಗರಣಗಿತ್ತಿ ನೀ ಹೌದೆ
ಮೊದಲ ಶುಕ್ರುವಾರ ಹೇಳಿ ಎನ್ನನ್ನು ಬಿಟ್ಟು
ಬದಲು ಮುತ್ತೈದೆಗ್ಹೇಳುವರೆ ೪೬

ಎರಡುವಾರೌತನ ಬುರುಡಿಊಟಾಯಿತು
ಬರಡೆಮ್ಮೆ ಹೈನ ಉಂಡಂತೆ
ಕಡಲೆ ಹೂರಣಗಡಬು ಕಟದಜಿಣ್ಣೆ-
ಕಾಸಿ ತುಪ್ಪವ ಬಡಿಸೆನಗೆ ೪೭

ಮೆಚ್ಚಿಕೊಂಡಾಕೆ ಮಾತಿಗೆ ಮರುಳಾದಳು
ಹಚ್ಚಿ ಕುಂಕುಮ ಎಣ್ಣೆ ಕೊಟ್ಟು
ನಿಶ್ಚಯವೇನಮ್ಮ ನೀ ಬರುವುದು ಎಂದ-
ರೀಕ್ಷಣ ಬರುವೆನ್ಹೋಗೆಂದ್ಲು ೪೮

ಬಂದು ಹೇಳಿದಳಾಕೆ ಚೆಂದಚೆಲ್ವಿಕೆ ಮಾತು ಒಂ-
ದೊಂದು ಮಾಡಿ ವರ್ಣಿಸುತ
ಇಂದಾಕೆ ಮನಕೆ ಬಂದಂಥ ಅಡಿಗೆ ಮಾಡೋ-
ಣೆಂದು ಸಂತೋಷಬಡುವರು ೪೯

ಕಡಲೆಹೂರಣ ಕಸಕಸೆ ಕೊಬ್ಬರಿ ಯಾಲಕ್ಕಿ-
ಪುಡಿ ದ್ರಾಕ್ಷಿ ಉತ್ತುತ್ತಿ ಹಳಕು
ಕಲಸಿ ಕಲ್ಲುಸಕ್ಕರೆ ಕರಿಗಡುವು ಬೆಣ್ಣೆಕಾಸೀ (ಸಿದ?)
ತುಪ್ಪವು ಸೋಸಿಲಿಂದ ೫೦

ಸಿರಿದೇವಿ ಪೂಜೆ ನೈವೇದ್ಯಗಳಾದವು
ಹೊರಗ್ಹತ್ತುತಾಸು ಮೀರಿದವು
ಬರಲಿಲ್ಲ ಮುತ್ತೈದೆ ಎಂದೆಲೆಬಡಿಸಿಟ್ಟು
ಸರುವರೂಟವನು ಮಾಡಿದರು ೫೧

ಹುಟ್ಟಿದಮ್ಯಾಲಿಂಥ ಕಡುವು ಕಂಡಿದ್ದಿಲ್ಲ ನ-
ಮ್ಹೊಟ್ಟಿಗುಂಡವರು ನಾವಲ್ಲ
ಮುತ್ತೈದೆ ಪುಣ್ಯದಿಂದೀ ಊಟ ದೊರಕಿತು ಎಂ-
ದಷ್ಟೂರು ನಗುತ ನುಡಿದರು ೫೨

ನಾಲ್ಕನೆವಾರ ನಾ ಹೇಳಿ ಬರುವೆನೆಂದು
ಆಕೆ ಹೋದಳ್ಹಿರಿಮಗನರಸಿ
ಬೇಕಾದವರು ಬಂದು ಹಾಕ್ಯಾಡಲೆನಕೂಡ
ಯಾಕೆನಗೊಬ್ಬರ ಭಿಡೆಯು ೫೩

ದೊಡ್ಡ ಆಗಸೆಯು ಬಿಟ್ಟು ದಿಡ್ಡಿಬಾಗಿಲ ಮುಂದೆ
ಸದ್ದು ಮಾಡದೆ ಬರುತಿರಲು
ವಜ್ರದ ಗೊಂಬೆಯಂತ್ಹೊಳೆವೊ ಮುತ್ತೈದೆ
ನಿಂತಿದ್ದಳಾಗೆದುರಿಗೆ ಬಂದು ೫೪

ಸರ್ವರೊಳಗೆ ಹಿರಿಸೊಸೆಯು ನಾಯೆಂಬಂಥ
ಗರ್ವ ಅಹಂಕಾರದಿ ನೀನು
ಸರಿಯಾಗಿ ಮೂರುವಾರ್ತೆ ಹೇಳಿಬಿಟ್ಟೆನ್ನ
ಕರೆಯದುಂಬುವ ಕಾರಣೇನೆ ೫೫

ಕರಿಲಿಕ್ಕೆ ಬರಲಿಕ್ಕೆ ಕಾಣೆ ನಿಮ್ಮನೆ ನಾನು
ತಿರುಗೂವಿ ನಾರದರಂತೆ
ಇರುವ ಮಂದಿರವ ತೋರಿದರೀಗ ನಾ ಬಂದು
ಕರೆದುಣಿಸುವೆನು ನಿಮ್ಮನ್ನು ೫೬

ದೂರುಂಟು ನಮ್ಮನೆ ದಾರಿ ಅಸಾಧ್ಯವು
ನೋಡಿ ಬಂದವರು ದಾರಿಲ್ಲ
ಆಹಾರ ನಿದ್ರೆ ಸಂಸಾರ ಸಮುದ್ರವ
ಮೀರಿದವರಿಗೆ ಕಾಂಬುವುದು ೫೭

ಮಧ್ಯಾಹ್ನದ್ಹೊತ್ತಿಗೆ ಸಿದ್ಧಾಗಿ ಬರುವೆನು
ಭದ್ರವಾಗ್ವಚನ ಕೊಡುವೆನು
ಶುಭ್ರವಾದಂಥ ಕೊಬ್ಬರಿ ಭಾರಿಬಟ್ಟಲು
ತರಿಸ್ಹರಿಗಡಲೆ ತುಂಬುಡಿಯ ೫೮

ಆಗರದೊಳಗಿನ ಅರಗಿಳಿ ಮರನೇರಿ
ಮಾಗಿದ ಫಲವ ಮೆದ್ದಂತೆ
ಬ್ಯಾಗ ಬಂದೀಗ ನಿಮ್ಮನೆಯಲ್ಲೂಟವನುಂಡು
ತೇಗುತ ತೃಪ್ತ್ಯಾಗಿ ಬರುವೆ ೫೯

ಮಾಯಾದೇವಿಯು ಮಾಯಮಾತಿಗೆ ಮರುಳಾಗಿ
ತಾ ಕೊಟ್ಟಳೆಣ್ಣೆ ಕುಂಕುಮವ
ನಾ ಹೋದ ಕಾರ್ಯ ಕಾಯಾಗೋವೇ ಹಣ್ಣೆಂದು
ಹೇಳಿಕೊಂಡಳು ಶಿಫಾರಸು ೬೦

ವರ ಗೌರಿಪೂಜೆ ನೈವೇದ್ಯಗಳಾದವು
ಹೊರಗಾರು ಗಂಟೆ ಬಡಿದವು
ಬರಿಯ ಭರಾಸುಮಾತಿನ ಜಾಣೆ ಮುತ್ತೈದೆ
ಬರಲಿಲ್ಲವೆಂದು ನುಡಿದರು ೬೧

ಮತ್ತೊಂದು ಎಲೆ ಬಡಿಸಿಟ್ಟು ಮೃಷ್ಟಾನ್ನಗಳಷ್ಟೂ-
ರೂಟವನು ಮಾಡಿದರು
ಕರ್ಪೂರದಡಿಕೆ ವೀಳ್ಯಗಳ ತಕ್ಕೊಂಡರು
ಅತ್ಯಂತ್ಹರುಷದಿಂದಿರುವರು ೬೨

ಬಂದಿಶೀಗ್ಯೆದನೆ ವಾರ ಮುತ್ತೈದೆಗೆ
ಇಂದು ನೀ ಹೇಳಿಬಾರೆನುತ
ಹೆಂಡತಿ ಕರೆದು ಹೇಳಿದ ಕುಂಕುಮೆಣ್ಣೆ ತ-
ಕ್ಕೊಂಡು ತಾ ನಡೆದಳು ಬ್ಯಾಗ ೬೩

ಬೀದಿ ಬಿಟ್ಟು ಬದಲ್ಹಾದಿಗೆ ಬಂದಳಾ
ಹಾದಿಗೆ ಬಂದಡ್ಡಗಟ್ಟಿ
ನೀ ದಯಮಾಡಿ ಬಂದೆ ಎನಗೌತನ
ಆದರದಿಂದ್ಹೇಳುವುದಕೆ ೬೪

ಜಪ್ಪಿಸಿಕೊಂಡು ಔತಣವ ತಕ್ಕೊಂಡು ನೀ
ತಪ್ಪಿಸಿಕೊಂಡು ಹೋಗುವರೆ
ಒಪ್ಪೊತ್ತಾದರು ಊಟಮಾಡದವರ ಮಾತಿ-
ಗೊಪ್ಪಿಕೊಂಬುವುದ್ಹ್ಯಾಗ್ಹೇಳಮ್ಮ ೬೫

ಬಂದಔತಣ ಗಂಡ ಮಕ್ಕಳು ಭಾಗ್ಯ ಒ-
ಲ್ಲೆಂಬುವರುಂಟೆ ಲೋಕದಲಿ
ಕಂಡಲ್ಲೌತಣಹೇಳಿ ಕರೆಯುದಿರುವುವೇನು
ಚೆಂದವೇ ನಿಮ್ಮ ನಡತೆಯು ೬೬

ಲಕ್ಷಣವಂತೆ ನಾ ಎದುರಿಗೆ ಬಂದರೆ
ಲಕ್ಷಣ ಶುಭಶಕುನಗಳು
ಇಕ್ಷುವ್ಯಾಲೆ ಜೇನು ಇಟ್ಟಂತೆ ಬಂದೀಗ
ಲಕ್ಷ್ಮೀಸರಿಗೆ ನಾ ಕೂಡುವೆನು ೬೭

ಅವಕಾಶ ಕೊಡುವೆನು [1]ಸೌಕಾಸ[1]ಡಿಗೆಮಾಡು
ದಿವಾಕರ ಮುಣುಗೋ ಕಾಲದಲಿ

---

[1] [ಸಾವಕಾಶ?]

ದನಕರು ಬರುವೊ ವ್ಯಾಳ್ಯಕೆ ನಾನು ಬರುವೆನು
ಮನಕೆ ಸಂದೇಹ ಬ್ಯಾಡವ್ಮಾ ೬೮

ಅಂಗಳ ಸಾರಿಸಿ ರಂಗು ಕಾರಣೆ ಕೊಟ್ಟು
ರಂಗವಲ್ಲಿ ಚಿತ್ರ ಬರೆದು
ಅಂಬರೂದಿನಕಡ್ಡಿ ಅರಮನೆ ಬಾಗಿಲ
ಮುಂದೊಂದ್ಹಚ್ಚಿಡಿಸು ಹಿಲಾಲು ೬೯

ಮಡಿ ಪೀತಾಂಬರವುಟ್ಟು ಮಡಿಸೀರೆಯನು ಬಿಟ್ಟು
ಕಡಗ ಕಂಕಣ ಕೈಯಲ್ಲಿಟ್ಟು
ದೃಢವಾದ ಮುಕುರ್‍ಯ ಒಂದಡ್ಡಿಕೆ ಬು–
ಗುಡಿ ಬಾವುಲಿ ಹೊಳೆಯುತಲಿ ೭೦

ಕಂಚುಕಳಸ ಕದಲಾರತಿ ತಕ್ಕೊಂಡು
ಮುಂಚೆ ಬಂದೆದುರುಗೊಂಡರೆನ್ನ
ಮಿಂಚಿನಂತ್ಹೊಳೆವೊ ಚಿನ್ನದ ಹಲಗೆಯು ತೂಗೋ–
ಮಂಚದಿ ಬಂದು ಕೂಡುವೆನು ೭೧

ಅರಮನೆಯೆಲ್ಲ ನಾವಿರುವೊ ಮೂರಂಕಣ ಮನೆ ಮುಂಪೆ
ಮುರುಕು ಚಪ್ಪರವು
ಮರದ ಮಣೆಯು ನಮ್ಮಲ್ಲಿರುವೋದು ಚಿನ್ನದ
ಹಲಗೆ ಮಂಚೆಲ್ಲೆ ತರುವೋಣ ೭೨

ಮಡಿಸೀರೆ ಬಿಟ್ಟರಿನ್ನೊಂದು ಕೋರಿಗಳಿಲ್ಲ
ಮಡಿ ಪಿತಾಂಬರ ನಾ ಕಂಡಿಲ್ಲ
ಹರಡಿ ಕಂಕಣವೆಲ್ಲೆ ಕರಿಯ ಕಾಜಿನ ಬಳೆ
ಇರಲಮ್ಮ ನಿಮ್ಮದಯ ನಮಗೆ ೭೩

ಬಂಗಾರದ ಬಾಳೆಲೆ ಬೆಳ್ಳಿಬಟ್ಟಲು
ಮಂಡಿಗೆ ಹಾಲು ತುಪ್ಪಗಳು
ಉಂಡು ಕೂಡುವೆನು ಕುಂದಣ ಕೆತ್ತಿತ್ತ(ತ್ತಿದ ತ?)ಬಕಿಲಿ
ತಂದು ನೀಡೆನಗೆ ತಾಂಬೂಲ ೭೪

ಹುಟ್ಟಿದ ವ್ಯಾಲೆ ಈ ಬೆಟ್ಟಲೆಲೆಯು ಸುಣ್ಣ
ಹಚ್ಚಿ ಹಾಕಿಕೊಂಡು ನಾನರಿಯೆ

ಕರ್ಪುರದಡಿಕೆ ಮುತ್ತಿನ ಸುಣ್ಣ ಎಳೆಯೆಲೆಗ್ಹಚ್ಚಿ
ನೀ ಮಡಿಚಿಕೊಡೆನಗೆ ೭೫

ಬಂಗಾರೆಂಬುದು ನಮ್ಮ ಕಂಗಳು ಕಂಡಿಲ್ಲ
ಮಂಗಳ ಸೂತ್ರ ಒಂದ್ಹೊರತು
ಕುಂದಣ ತಬಕೆಲ್ಲೆ ಒಡಕೊಂದು ಹಿತ್ತಾಳೆ
ತುಂಡಾದ ತಾಟೊಂದಿರುವುದು ೭೬

ಬುಟ್ಟಿದಾರಿ ಬುಗುಡಿಅಂಚು ಜರತಾರಿ
ಅಚ್ಚ ಚಿನ್ನದ ಥಳಕಿರುವೊ
ಕುಪ್ಪುಸ ಹೊಲಿಸಿಕೊಟ್ಟರೆ ಒಂದರೆಕ್ಷಣ
ತೊಟ್ಟು ನಿನಗೆ ಕೊಟ್ಟು ಬರುವೆ ೭೭

ಹುಟ್ಯಾ ಬಡವರು ನಾವಷ್ಟದರಿದ್ರರು
ನಿತ್ಯಾ(ತ್ಯಯಾ?)ತ್ರೆಯಲಿ ಬದುಕುವರು
ಚಿತ್ತಕ್ಕೆ ತಂದು ನೀವು ದಯಮಾಡಿ ಬರುವ್ರೋದೆಂ-
ದ್ಹಸ್ತವ ಮುಗಿದು ಹೇಳಿದಳು ೭೮

ಕಡೆಯವಾರವು ಕಾಮಧೇನುವಿನಂತೆ ಬರುವೆನು
ಪಡೆದುಕೊ ಮನದ ಇಷ್ಟಾರ್ಥ
ನಡೆದು ಬರುವೆ ನಾಲ್ಕುವಾರದ ದಕ್ಷಿಣೆ
ಕೊಡು ನಾನು ಬಿಡುವವಳಲ್ಲ ೭೯

ಒಂದೊಂದು ಮಾತನಾಡುವಳು ಮುತ್ತೈದೆ ಬಾ-
ಯಿಂದ ಮುತ್ತುದುರುವಂದದಲಿ ಆ-
ನಂದದಿಂದ್ಹಚ್ಚಿಕುಂಕುಮ ಎಣ್ಣೆ ಕೊಟ್ಟ್ಯಾಗ
ಬಂದಳು ತನ್ನ ಮಂದಿರಕೆ ೮೦

ಸಾಧ್ಯವಲ್ಲವು ಭಾಳಸಾಧ್ಯ ಮುತ್ತೈದೆ ಸಿಂ-
ತಿದ್ದಳಿನ್ನೆದುರಿಗೆ ಬಂದು
ನಿದ್ರೆಯೊ ಕನಸೊ ಎಚ್ಚರಿದ್ದಿಲ್ಲ ಎನಗೊಂದು
ನಿರ್ಧರವಾಗಿ ತಿಳಿಯದು ೮೧

ಗತ್ತಿನ ಮಾತು ಚಮತ್ತು ಚಾತುರ್ಯ ಸಂ-
ಪತ್ತಿನ ಸೌಭಾಗ್ಯವಂತೆ

ಎಷ್ಟ್ಹೇಳಲಾಕೆ ಚೆಲ್ವಿಕೆ ಚೆಂದ ಸಾಕ್ಷಾತ
ವಿಷ್ಣುನ್ನಾದರು ಮೋಹಿಸುವಳು ೮೨

ನಮ್ಮ ಪುಣ್ಯದ ಫಲ ಒದಗಿ ಬಂದಿದ್ದರೆ
ಮನ್ನಿಸಿ ಮನೆಗೆ ಬರುವಳು
ಇನ್ನೇನು ಮಾಡೋಣಿದಕೆಂದಾಲೋಚಿಸಿ
ಇನ್ನೊಬ್ಬ ಮುತ್ತೈದೆಗ್ಹೇಳಿದರು ೮೩

ಪಾಲು ಸಕ್ಕರೆ ಪಂಚಭಕ್ಷ ಪರಮಾನ್ನವು
ಸಾರು ಶಾಕಗಳು ಶಾಲ್ಯಾನ್ನ
ಮಾಲಕ್ಷ್ಮಿಪೂಜೆ ನೈವೇದ್ಯಮಾಡಿ ಮಂಗ-
ಳಾರತಿಯನು ಬೆಳಗುವರು ೮೪

ಪಕ್ಷಿವಾಹನ ಪುರುಷೋತ್ತಮನಾದ ಅ-
ಧೋಕ್ಷಜ ಆ ಪರಮಾತ್ಮ-
ನಕ್ಷದ ಸುತ ಅಡಗುವ ಕಾಲವನ್ನು ನಿ-
ರೀಕ್ಷಿಸಿ ನೋಡುತಿಹರು ೮೫

ಅತ್ತ ಮಾಲಕ್ಷ್ಮಿ ತಾ ಪಚ್ಚಕರ್ಪೂರ ಪುನುಗಿನ
ಎಣ್ಣೆ ಸಂಪಗೆ ತೈಲ
ಕಸ್ತೂರಿ ಬೆರೆಸಿದ ಬಿಸಿನೀರು ಅರಿಷಿಣ
ಹಚ್ಚಿ ತಾ ಎರಕೊಂಡಳಾಗ ೮೬

ಸುಳಿಗುರುಳ್ಹಿಕ್ಕಿ ಬೈತಲೆ ತಿದ್ದಿ ತಳುಪ್ಹಾಕಿ
ಚೌರಿ ರಾಗಟೆ ಚಂದ್ರಗೊಂಡ್ಯ
ಗಿಳಿಗೆಜ್ಜೆ ಹೆರಳುಬಂಗಾರ ಕ್ಯಾದಿಗೆ ಮ್ಯಾಲೆ
ಅರಳುಮಲ್ಲಿಗೆಮಾಲೆ ಮುಡಿದು ೮೭

ಬಿಚ್ಚಿ ತಾನುಟ್ಟಳು ಬಿಳಿಯ ಪೀತಾಂಬರ
ಅಚ್ಚಜರದ ಸೆರಗ್ಹೊದ್ದು
ಕುತ್ತಣಿ ಕುಬುಸ ಮುತ್ತಿನ ಗೊಂಡ್ಯ ತೋಳಿಗೆ
ಕಟ್ಟುತಿದ್ದಳು ಬಾಜುಬಂದು ೮೮

ವಜ್ರದ್ವಂಕಿಯು ನಾಗಮುರಿಗೆ ನಾಗಡ್ಡಿಕೆ
ಗೆಜ್ಜ್ಯಡ್ಡಿಕೆಯು ಕೊರಳಲ್ಲಿ

ಮೊಡ್ಡ ಸರಿಗೆ ವ್ಯಾಲಡ್ಡಿಕೆ ಮುತ್ತಿನಕೆಂಪು
ಥಳಕು ಜಳಕು ಹೊಳೆಯುತಲಿ ೮೯

ಪುತ್ಥಳಿಸರ ಏಕಾವಳಿ ಚಂದ್ರಹಾರ
ಕಟ್ಟಿದಳಾಗ ಕಂಟಿ ಕಟ್ಟಾಣಿ
ಪಚ್ಚ ಮಾಣಿಕ ರತ್ನಪದಕ ನಿರಿಗಳಲಿ
ಜತ್ತಾಗಿ ನಲಿದಾಡುತಿರಲು ೯೦

ಪರಡಿ ಕಂಕಣ ಹಸ್ತಕಡಗ ಕಮಲದ್ವಾರ್ಯ
ನಡುವಿಗೆ ನವರತ್ನ ಪಚ್ಚೆ
ಬಿಡಿಮುತ್ತು ಬಿಗಿದ ವಜ್ರದ್ವಾಲೆ ಬುಗುಡಿ
ಚಂದ್ರಮುರುವು ಮುತ್ತಿನ ಸರಪಳಿಯು ೯೧

ಸಾಲು ಕುಂದಣಪಾಣಿ ಮುತ್ತಿನ ಮುಕುರ್ಯ
ಬುಲಾಕು ಬಲಕೆ ವಜ್ರದ್ಹರಳು
ಶೀಡಿ ಕಾಡಿಗೆಹಚ್ಚಿ ತಿದ್ದಿ ಕುಂಕುಮವ
ಹಣೆವ್ಯಾಲ್ಹಚ್ಚಿ ಹವಳದ ಕುಡಿಯುಂತೆ ೯೨

ಪಿಲ್ಯ ಕಾಲುಂಗುರ ಲುಲ್ಲು ಪೈಜಣ ರುಳಿ
ಘಲ್ಲು ಘಲ್ಲೆಂತ್ಹೆಜ್ಜೆನಿಡುತ
ಗೆಲ್ಲು ಮಿಂಚುಗಳಂತೆ ಧಳಥಳಿಸುತ ಬೀದಿ-
ಯಲ್ಲಿ ಬಂದಳು ಗಜಗಮನೆ ೯೩

ಬೆಳ್ಳನೆ ಬೆಳ್ಳಿಯು ಮಿಳ್ಳೆ ತನ್ನುಂಗುರ
ಬೆಳ್ಳಲಿಂ(ಬೆರಳಿನಿಂ?)ದ್ಹಿಡಿದು ಬೀಸುತಲಿ
ತೆಳ್ಳನ ಪಾದ ಪುತ್ಥಳಿಯಂತೆ ಹೊಳೆಯುತ
ಚಿನ್ನಬಳ್ಳಿಯಂದದಿ ಬಳುಕುತಲಿ ೯೪

ರಾಜಾಧಿರಾಜರೆಲ್ಲರು ನಿಂತು ನೋಡುತ
ಲಾಜಾವರದ ಗೊಂಬೆಯಂತೆ
ಭೋಜನಕೆತ್ತ ಪೋಗುವಳೊ ನೋಡುವಣೆಂದು ಬ-
ಹುಜನರ್ಹಿಂದೆ ನಡೆದರು ೯೫

ದಾವಲೋಕದಿಂದ ಇಳಿದಿಲ್ಲಿ ಬಂದಳಿ-
ದಾರ ಸತಿಯೊ ದಾರ ಸುತಳೊ

ಪೋರೆನೋಡಲು ಮೂರ್ಛೆ ಬರುವೊದ್ವೊಯ್ಯಾರಿ ಮುಂ-
ಗಾರ ಮಿಂಚುಗಳಂ[ತೆ]ತೋರುವಳು ೯೬

ಇಂದ್ರನ್ನ ಶಚಿಯೊ ಚಂದ್ರಮನ ರೋಹಿಣಿಯೊ
ಸುಂದರ ಸೂರ್ಯನರಸಿ ಸಂಜ್ಞೆಯೊ
ಗಾಂಧರ್ವರರಸಿಯೊ ಗಗನದಿಂದಿಳಿದಂಥ
ಗಂಗಾ ಶ್ಯಾಮಲ ಸೀತಾಂಗನೆಯೊ ೯೭

ರತಿಯೋ ರೇವತಿ ಅರುಂಧತಿಯೊ ಪಾರ್ವತಿಯೊ ಭಾ-
ರತಿ ಭಾಗ್ಯವಂತೆ ಸರಸ್ವತಿಯೊ
ಪತಿಗಳೈವರು ಸತ್ಯಪಾಂಡವರರಸಿ ದ್ರೌ-
ಪದಿ ಬಂದಳಿಲ್ಲಿಗೆಂಬುವರು ೯೮

ಸತ್ಯಭಾಮೋ ರುಕ್ಮಿಣಿ ಜಾಂಬವಂತಿ ಅಷ್ಟ-
ಮ ಸ್ತ್ರೀಯರೊಳಗಿದಾರೊ ಇ-
ವತ್ತು ಸಂಪತ್ತು ಶುಕ್ಕುರುವಾರ ಸಾ-
ಕ್ಷಾತ ಲಕ್ಷ್ಮಿಯೇ ಬಂದಳೆಂಬುವರು ೯೯

ಹಸ್ತವ ಮುಗಿವರು ಸಾಷ್ಟಾಂಗಕ್ಕೆರಗೋರು
ಇತ್ತ ಬನ್ನೆಂದು ಕರೆವರು
ಶ್ರೇಷ್ಠ ವೈಕುಂಠ ಮೋಕ್ಷಪುರ ಮಾಲಕ್ಷ್ಮಿ
ಬಿಟ್ಟಲ್ಲೆ ಬಂದಳೆಂಬುವರು ೧೦೦

ಮುಡಿಬಾಗಿ ನಡೆಯುತ ಮುಡಿದ್ಧೂವ್ವ ಉದುರುತ
ಮುಗುಳ್ನಗೆಯಿಂದ ತಾ ನಗುತ
ಎಡಬಲದಲಿ ವಾರೆನೋಟದಿ ನೋಡುತ
ನಡೆದಳು ಬಡವರ ಮನೆಗೆ ೧೦೧

ಸಿರಿ ಬಂದು ತಾ ಕಣ್ಣ ತೆರೆದು ನೋಡುತಲಿರೆ
ಅರಮನೆ ಆಯಿತಾಕ್ಷಣದಿ
ಸುರಗಿ ಮಲ್ಲಿಗೆ ಶಾವಂತಿಗೆ ನಾನಾ ಫಲಗಳಿದ್ದ
ವನವಾಯಿತಾ ಮನೆಸುತ್ತ ೧೦೨

ಗಚ್ಚಿನಂಗಳ ವೃಂದಾವನ ಕಟ್ಟೆ ಕಾರಂಜಿ
ಹಚ್ಚನೆ ಗಿಳಿ ಹಂಸ ಗರುಡಪಕ್ಷಿ

ನವಿಲು ಪಾರಿವಾಳ ಪಾಂಚಾಲಿವೃಕ್ಷ
ಅಶ್ವತ್ಥಗಿಡಗಳು ೧೦೩

ಪಚ್ಚದಂತೆ ಹೊಳೆವೊ ಶ್ರೀ ತುಳಸಿದೇವಿಯರಲ್ಲಿ
ಅಚ್ಚ ವಜ್ರದ ಗೊಂಬೆಯಂತೆ
ಲಕ್ಷ್ಮಿ ತಾ ನಲಿ ನಲಿಯುತಲಿ ರಚಿತವಾದ
ಕುರ್ಚಿಲಿ ಬಂದು ಕೂಡುವಳು ೧೦೪

ಬಡವನ ಮಡದಿಗೆ ಒಡವೆ ವಸ್ತ್ರದುವು ಹ-
ರಡಿ ಕಂಕಣವು ಕೈಯಲ್ಲಿ
ಮಡಿಸೀರೆ ಉಟ್ಟಿದ್ದೊ ್ಗ[1][ಯಿಡು ಸೀರ್‍ಯಂತಾಯಿತು][1]
ಅಡಿಗೆರಗೆದುರುಗೊಂಬುವರು ೧೦೫

ಗಂಧಕುಂಕುಮ ಅರಿಷಿಣ ದಿವ್ಯ ಬುಕ್ಕಿಟ್ಟು-
ತಂದ್ಹಚ್ಚಿ ಕಾಲ ಜಾವಡಿಯು
ದುಂಡು ಮಲ್ಲಿಗೆ ಪಾರಿಜಾತ ಸಂಪಿಗೆಮಾಲೆ
ದಂಡೆಮುಡಿಸಿ ಜಡೆಮುಡಿಗೆ ೧೦೬

ಕದಳಿ ಫಲಗಳು ಕೊಬ್ಬರಿಬಟ್ಟಲೊಳಗ್ಹುರಿ-
ಗಡಲೆ ಹಾಕಿ ಉಡಿಯತುಂಬುವರು
ಹಿಡಿದು ಕುಂದಣದ ಹರಿವಾಣದೊಳ್ಹಾಡಿ
ಪಾಡುತ ಮಾಡಿ ಮುತ್ತಿನಾರತಿಯು ೧೦೭

ಇಂದಿರಾದೇವಿ ಆನಂದದಿ ಕುಳಿತಿರೆ
ಇಂದ್ರಾದಿ ಸುರರು ನೋಡುತಲಿ
ಮಂದಾರಮಲ್ಲಿಗೆ ಮಳೆಯು ಕರೆದರಾಗ
ದುಂದುಮಿ ಭೇರಿ ಬಡಿದವು . ೧೦೮

ಎಡಬಲದಲ್ಲಿ ಚಾಮರವನ್ನು ಬೀಸೋರು
ಹಿಡಿದು ಹಿಲಾಲು ನೋಡುವರು
ಬಿಡಿಮಲ್ಲಿಗೆ ತಂದು ನಡೆಮಡಿ ಹಾಸೋರು
ಸಡಗರದಿಂದೆದ್ದಳಾಗ ೧೦೯

ಲಕ್ಕುಮಿದೇವಿ ತಾ ಗಕ್ಕನೆ ಬಂದಳು
ಹೊಕ್ಕಳು ದೇವರ ಮನೆಯ

---

1 ಮಡುಸೂರಂತ್ಯಾಯಿತು.

ಚೊಕ್ಕ ಚಿನ್ನದ ಕೊಡವಾಗಿ ತಾ ತೂಗೋ ಮಾ-
ಣಿಕ್ಯ ಮಂಚದಲಿ ಕೂಡುವಳು ೧೧೦

ರನ್ನ ಮಾಣಿಕ್ಯ ರತ್ನಹೊನ್ನಹಣವು ಚೊಕ್ಕ
ಚಿನ್ನದ ನೊಹರ ವರಾ(ರಹ?)ಗಳು
ಬಣ್ಣಧವಳ ಮುತ್ತು ಭಾರಿ ಬಂಗಾರದಂದಿಗೆಯು
ಬಿಂದಿಗೆ ನೋಡುತಿಹರು ೧೧೧

ಶುಕ್ಕುರುವಾರವು ಶುಭಕಾಲ ಇವರಿಗೆ
ಸಿಕ್ಕಳು ಸಿಂಧುನಂದನೆಯು
ಬಕ್ಕಸ್ತ (ಬೊಕ್ಕಸದ?)ಭಾಗ್ಯ ಭಂಡಾರದ ಜಯಲಕ್ಷ್ಮಿ
ದಕ್ಕಿದಳಿವರಿಗೆಂಬುವರು ೧೧೨

ಕರ್ಪೂರದಾರತಿ ಮಾಡಿ ಕಾಯಿ ಒಡೆದು
ಬುಕ್ಕಿಟ್ಟು ಕುಂಕುಮ ಹಚ್ಚುವರು
ಪಟ್ಟಣದ ಜನರು ಪತ್ತಲ ಸೀರೆ ಕುಪ್ಪಸ
ಲಕ್ಷ್ಮಿಗುಡುಗೊರೆಯ ಕೊಡುವರು ೧೧೩

ನಾಲ್ಕುವಾರದ ಎಲೆ ತೆಗೆದು ನೋಡುತಲಿರೆ
ಹಾಕಿದನ್ನವು ಆಣಿಮುತ್ತು
ಶಾಕ ಪಾಕವು ಪಲ್ಯ ಪರಮಾನ್ನ ಭಕ್ಷ್ಯ
ಬಂಗಾರ ರಜತ ಬಾಳೆಯೆಲೆಯು ೧೧೪

ಬಂದು ನೋಡುತ ನಾಲ್ಕು ಮಂದಿ ಸೊಸೆಯ-
ರ್ಹಂಚಿ ಕೊಂಡರಾಗೊಂದೊಂದೆಲೆಗಳ
ಹಿಂದೆಮಾಡಿದ ಪುಣ್ಯ ಬಂದೊದಗಿತು ನಮ-
ಗೆಂದು ಸಂತೋಷಬಡುವೋರು ೧೧೫

ಬಂದ ಮುತ್ತೈವೆ ಬ್ರಾಹ್ಮಣರೊಡಗೂಡಿ-
ಕೊಂಡುಂಡು ವೀಳ್ಯವನೆ ತಕ್ಕೊಂಡು
ಮಂದಗಮನೆ ಲಕ್ಷ್ಮಿ ಮಹಿಮೆ ಕೊಂಡಾಡುತ ಆ-
ನಂದವಾಗಿರುತಿದ್ದರವರು ೧೧೬

ಮುದದಿಂದ ಮೂರ್ಜಗದೊಡೆಯ ನಾರಾಯಣ-
ನೆದೆಯಲ್ಲಿರುವೋ ಲಕ್ಷ್ಮಿ ನಮ್ಮ

ಸದನಕ್ಕೆ ಬಂದು ಸಂಪತ್ತು ಶುಕ್ರುವಾರ ಸ-
ಮದೃಷ್ಟಿಯಿಂದ ನೋಡುವಳು ೧೧೭

ಕಿವುಡಗೆ ಕಿವಿ ಕುರುಡಗೆ ಕಣ್ಣು ಬರುವುದು
ಬರಡಾಕಳ್ಹೈನವಾಗುವುದು
ಹಡೆಯದ ಬಂಜೆ ಹೊಟ್ಟಮಕ್ಕಳಾಗೋರು
ಪಡೆವರೋ ಇಷ್ಟ ಫಲಗಳ ೧೧೮

ದನಕರು ತಳಿಯಾಗಿ ಧನಧಾನ್ಯ ಬೆಳಿಯಾಗಿ
ಸದಾಕಾಲ ಶುಭ ಕಾರ್ಯವಾಗಿ
ಬಳಿಕುಂಕುಮರಿಷಿಣ ಮಾಂಗಲ್ಯ ಮುತ್ತೈದೆ-
ತನವಕೊಟ್ಟ್ವರವ ನೀಡುವಳು ೧೧೯

ಬಡವರ ಮನೆಗೆ ನಡೆದುಬಂದು ಭಾಗ್ಯದ
ಕೊಡವಾಗಿ ಕೂತಂಥ ಕತೆಯ
ದೃಢ ಭಕ್ತಿಯಿಂದ್ಹೇಳಿ ಕೇಳಿದ ಜನರಿಗೆ
ಕೊಡುವಳು ಸಕಲ ಸಂಪತ್ತು ೧೨೦

ಸಾಮಜವರದ ಸುದಾಮನ ಸಖನಾದ
ಸ್ವಾಮಿ ಶ್ರೀಹರಿ ಮೋಹದರಸಿ
ಶ್ರೀ ಮಹಾಲಕ್ಷ್ಮಿ ಪೂಜೆಯ ಮಾಡಿದವರಿಗೆ
ಭೀಮೇಶಕೃಷ್ಣ ತಾ ಒಲಿವ ೧೨೧

೧೩೬

ಹರಿಗೆ ನಾ ಮೊರೆ ಹೊಕ್ಕೆನೊ ದಯಾಳು ಶ್ರೀ-
ಹರಿಗೆ ನಾ ಮೊರೆ ಹೊಕ್ಕೆನೊ
ಹರಿಗೆ ನಾ ಮೊರೆ ಹೊಕ್ಕೆ ಪೊರೆಯು ಬೇಕೆಂದಿನ್ನು
ಜರಿದು ನೋಡುವರೇನೊ ಪರಮ ದಯಾಳು ಪ.

ವೆಂಕಟರಮಣನೆ ಕಿಂಕರರಿಗೆ ಬಂದ
ಸಂಕಟ್ಹರಣ ಮಾಡಲಂಕಾರ ಮೂರುತಿ ೧

ಸದ್ಯೋಜಾತನು ತಪವಿದ್ದ ಸ್ಥಳದಿ ಬಂದು
ಉದ್ಭವಿಸಿದ ಅನಿರುದ್ಧ ಮೂರುತಿಯೆನೆ ೨

ಶೇಷಶಯನ ನೀ ಆದಿಶೈಲವಾಸನೆ
ದಾಸರಿಗೊಲಿವಂಥ ಭೀಮೇಶ ಕೃಷ್ಣನೆ ೩

೧೩೭

ಹರಿ ಹರಿ ಹರಿ ಎನ್ನದೆ ಈ ನಾಲಿಗಿ-
ನ್ನಿರುವುದ್ಯಾತಕೆ ಸುಮ್ಮನೆ ಪ.

ಸರಸಿಜಾಕ್ಷನ ದಿವ್ಯ ಸಾಸಿರನಾಮ ಬಿಟ್ಟು
ಪರರವಾರ್ತೆಲಾಸಕ್ತಿ ಪಾಮರನಾಗುವುದ್ಯಾಕೆ ೧

ಕಲ್ಲು ಹಿಟ್ಟಾಗಿ ರಂಗವಾಲಿ ಎನಿಸುವುದು
ಕಲ್ಲಿಗೆ ಕಡೆಯಾದೆ ಮಲ್ಲರಂತಕಗೆ ಬ್ಯಾಗ ೨

ಮಧುರ ಪದಾರ್ಥದಲ್ಲಿ ಮನಸನಿಕ್ಕಲು ಬ್ಯಾಡ
ಮಧುವೈರಿ ಹರಿನಾಮ ಕ್ಷುಧೆಯ ಬೇಡುತಲೀಗ ೩

ಅರ್ಕಸುತನ ಭಯ ಅಂಕೆಯಿಲ್ಲದಂತಿರೆ
ಸಿಕ್ಕು ಸಿಗದಂತಿರೆ ಯುಕ್ತಿ ರಕ್ಕಸಾಂತಕನಲ್ಲಿಟ್ಟು ೪

ಈಸು ಮಾತ್ಯಾಕೆಕೋಪಿಕೂಸಿನಾಲಾಪ್ರೊಂವಿರಲಿ
ಲೇಸು ಕಾಂಬುವುದು ಭೀಮೇಶಕೃಷ್ಣಗೆ ಬ್ಯಾಗ ೫

೧೩೮

ಹಾಲುಮಾರಲು ಪೋದೆವಮ್ಮ ಗೋಕುಲದೊಳ-
ಗ್ಹಾಲು ಮಾರಲು ಪೋದೆವಮ್ಮ
ಹಾಲು ಮಾರುವ ಧ್ವನಿ ಆಲಿಸಿ ಕೇಳುತ
ಬಾಲಕೃಷ್ಣ ಬಹು ಲೀಲೆ ಮಾಡುತ ಬಂದ ಪ.

ಹಸಿರು ಜರದ ಸೀರೆಯನುಟ್ಟು ಕುಸುರಿಕಂಕಣ
ಎಸೆವೊ ಹವಳದ ಹಿಂಬಳೆ ಕಟ್ಟು ಮೊಸರಿನ ಕುಂಭ
ಕುಸುಮ ಮಲ್ಲಿಗೆಯ ಮುಡಿಯಲ್ಲಿಟ್ಟು
ಶಶಿವದನೆಯರೆಲ್ಲ ಚೆಂದದಿ ಬರುತಿರೆ
ಕುಸುಮನಾಭ ಮುಸುಗೆಳೆದು ಮೊಸರು ಸುರಿದ ೧

ಬಣ್ಣ ಬಣ್ಣದ ಸೀರೆಯನುಟ್ಟು ಮುತ್ತಿನ ಬಟ್ಟು
ಹೊಳೆವೊ ಕಸ್ತೂರಿ ತಿಲಕವನಿಟ್ಟು ಹಾಲಿನಕುಂಭ
ಸಣ್ಣ ಮಲ್ಲಿಗೆ ಮುಡಿಯಲಿಟ್ಟು
ಚೆನ್ನಾರ ಚೆಲುವೇರು ಚೆಂದದಿ ಬರುತಿರೆ
ಕಣ್ಣು ಸನ್ನೆಮಾಡಿ ಕರೆದು ಮುದ್ದಿಡುವ ೨

ಮುಂದೆ ಮುಂದಾಗಿ ಹೋಗುತಿರಲು ಹಿಂದ್ಹಾಲಿನ್ಹರವಿ-
ಗೊಂದೊಂದ್ಹರಳು ಮಿಟುತಿರಲು ಧಾರೆಗೆ ಬಾಯಾ-
ನಂದದಿಂದೊಡ್ಡಿ ಕುಡಿಯುತಿರಲು
ಸಂದಣಿಯೊಳು ನಾವು ಒಂದರಿಯದಲೆ
ಬಂದಿಳುಹಲು ಬರೀಗಡಿಗೆ ಕಾಣಮ್ಮ ೩

ಕಡಗೋಲಿಂದೊಡೆದು ಗಡಿಗೆಯನು ಬಡವರ ಬೆಣ್ಣೆ
ಒಡಲಿಗೆ ಕದ್ದು ತಿಂಬುವುದೇನು ಕಂಡರೆನಗಂಡ
ಬಡಿದರಿನ್ನೇನು ಮಾಡುವೆ ನೀನು
ಗಡಿಬಿಡಿ ಮಾಡುತ ಕತ್ತಲ ಮನೆಯೊಳು
ತುಡುಗನಂತೆ ತಿರುಗಾಡುವ ತಾನು ೪

ಸಿಟ್ಟು ಮಾಡುವುದ್ಯಾತಕಮ್ಮ ಶ್ರೀ ರಮಣನ
ಬಿಟ್ಟು ಬಾಹುವುದೆ ಲೇಸಮ್ಮ ಭೀಮೇಶಕೃಷ್ಣನ
ಕಟ್ಟಿ ಹಾಕುವುದೆ ಲೇಸಮ್ಮ
ಪಟ್ಟುಮಾಡಿ ಪರಹೆಂಗಳೇರೊಳು ಕ-
ಣ್ಣಿಟ್ಟ ಮ್ಯಾಲೆ ಒಂದಿಷ್ಟಾದರು ಬಿಡ ೫

## ೧೩೯

*

ಹಿಡಿ ಕೇಶವ ಕೃಷ್ಣ ನಾರಾಯಣನ
ಕೊಡು ಮಾಧವ ಗೋವಿಂದ ವಿಷ್ಣುನ್ನ
ಕಡಲಶಯನನಾದ ತಕ್ಕೊ ಮಧುಸೂದನನ
ಕಡುಬ್ಯಾಗದಲಿ ತಾರೆ ತ್ರಿವಿಕ್ರಮನ ಜೋಜೋ ೧

* ಕಂದನ್ನಾಡಿಸಿದ್ದು.

ವಾಮನ ಶ್ರೀಧರ ಹೃಷೀಕೇಶವನ
ಕಾಮಿಸಿ ನೀ ಕೊಳ್ಳೆ ಪದ್ಮನಾಭನ್ನ
ದಾಮೋದರ ಶ್ರೀ ಸಂಕರುಷಣನ
ಕೋಮಲಾಂಗಿ ತಾರೆ ವಾಸುದೇವನ್ನ ಜೋಜೋ ೨

ಪ್ರದ್ಯುಮ್ನ ಅನಿರುದ್ಧ ಪುರುಷೋತ್ತಮನ
ಮುದ್ದು ಅಧೋಕ್ಷಜ ನಾರಸಿಂಹಾಚ್ಯುತನ
ಸದ್ಯೋಜನಾರ್ಧನ್ನ ಕೊಂಡು ಉಪೇಂದ್ರನ್ನ
ಸದ್ಯ ತಾರ್‍ಹರಿ ಭೀಮೇಶಕೃಷ್ಣನ್ನ ಜೋಜೋ ೩

## ೧೪೦

ಹೂವ ಕೊಡೆ ನೀ ವರವ ಕೊಡೆ
ದೇವಿ ನಿನ್ನಯ ಮುಡಿಮ್ಯಾಲಿದ್ದ ಮಲ್ಲಿಗೆ-
ಹೂವ ಕೊಡೆ ನೀ ವರವ ಕೊಡೆ ಪ.

ಕಟ್ಟುವೊ ತೊಟ್ಟಿಲ್ಹುಟ್ಟುವೊ ಗಂಡುಮಕ್ಕಳು
ಮುತ್ತೈದೆತನವ ಮುದದಿಂದ
ಮುತ್ತೈದೆತನವ ಮುದದಿ ಬೇಡುವೆ
ಶ್ರೀ ಮಾಲಕ್ಷ್ಮಿಯೆ ನಮಗೆ ದಯಮಾಡೆ ೧

ಆಂದಣ ರಥ ಬಂದ್ಹೋಗುವೋ ಹೆಣ್ಣುಮಕ್ಕಳು
ಬಂಧುಗಳಿಗೆಲ್ಲ ಬಲುಕ್ಷೇಮ
ಬಂಧುಗಳಿಗೆಲ್ಲ ಬಲುಕ್ಷೇಮ ಇರುವಂತೆ
ಇಂದಿರಾದೇವಿ ದಯಮಾಡೆ ೨

ದಂಪತಿ ನಲಿಸುತ ಸಂಪತ್ತು ಸೌಭಾಗ್ಯ
ಇಂಥ ಮಂದಿರಕೆ ಬಹುಮಾನ
ಇಂಥ ಮಂದಿರಕೆ ಬಹುಮಾನಯಿರುವಂತೆ
ಸಂತೋಷದಿ ವರವ ದಯಮಾಡೆ ೩

ಅನ್ನ ಗೋವ್ಗಳು ದಿವ್ಯ ಕನ್ಯಾ ಭೂದಾನ ಹಿ-
ರಣ್ಯದಾನಗಳ ಹಿತದಿಂದ ಹಿ-
ರಣ್ಯದಾನಗಳ ಹಿತದಿಂದ ಮಾಡುವಂತೆ ಸಂ-
ಪನ್ನೆ ನೀ ವರವ ದಯಮಾಡೆ ೪

ಇಂದಿಗೆ ಮನೋಭೀಷ್ಟ ಎಂದೆಂದಿಗೆ ನಿನಪಾದ
ಹೊಂದಿರಲೆಂದೂ ಮರೆಯದೆ
ಹೊಂದಿರಲೆಂದೂಮರೆಯದೆ ಭೀಮೇಶಕೃಷ್ಣನ-
ಧರ್ಮಾಂಗಿ ನೀ ವರವ ದಯಮಾಡೆ ೫

೧೪೧

*

ಹೂವ ಮುಡಿಸಿದ ಸ್ವಾಮಿ ರುಕ್ಮಿಣಿ
ಭಾಮೇರಿಬ್ಬರಿಗೆ ರಂಗಯ್ಯ ಪ.

ಬಂದು ರುಕ್ಮಿಣಿ ಭಾಮೇರಿಂದತಿ
ಸಂಭ್ರಮ್ಮದಿಂದ ರಂಗಯ್ಯ
ಕುಂದಣದ ಹಸೆಮ್ಯಾಲೆ ಕುಳಿತಿರೆ
ಚೆಂದದಲಿ ನಗುತ
ಚಂದ್ರವದನ ತಾ ಚತುರ್ಭುಜದಿಂದಲಿ
ಅಂಗನೆಯರ ಆಲಿಂಗನೆ ಮಾಡುತ ೧

ಹೂವ ಮುಡಿಸುತ ವಾರಿಜಾಕ್ಷೇರ ವಾರೆನೋಟದಿ
ನೋಡಿ ನಗುತ ರಂಗಯ್ಯ
ಸಾರಸಮುಖಿಸಹಿತ ಸರಸ-
ವಾಡುತ ನಾರದರು
ನಮ್ಮಿಬ್ಬರ ಕದನಕೆ ಹೂಡಿದರೆ
ಹುಚ್ಚಾದಿರೆಂದೆನುತ ೨

ಮಲ್ಲೆ ಮಲ್ಲಿಗೆಮೊಗ್ಗು ಶಾವಂತಿಗೆ
ಕಲ್ಹಾರದ ಕಮಲ ರಂಗಯ್ಯ
ಒಳ್ಳೆತಾವರೆ ಅರಳು ಮೊಗ್ಗುಗಳು
ಝಲ್ಲೆ ಕುಸುಮಗಳು
ಎಲ್ಲ ತನಕೈಯಲ್ಲಿ ಪಿಡಿದು ಚೆಲ್ವ ಭೀ-
ಮೇಶಕೃಷ್ಣ ರುಕ್ಮಿಣಿಗೆ ೩

* ಹೂವುಮುಡಿಸಿದ್ದು.

## ೧೪೨

ಹೂವ ಮುಡಿಸಿರೆ ಮುಡಿಗ್ಹರಸುತಲಿ
ಮುತ್ತೈದೆಯಾಗೆನುತ
ಹೂವ ಮುಡಿಸಿರೆ ಮುಡಿಗ್ಹರಸುತಲಿ ಪ.

ಮರುಗ ಮಲ್ಲಿಗೆ ಜಾಜಿ ಸುರಗಿ ಶಾವಂತಿಗೆ
ಸುರಪಾರಿಜಾತ ಸಂಪಿಗೆ ಸತ್ಯಭಾಮೆಗೆ ೧

ಅರಿಷಿಣ ಕುಂಕುಮ ಬೆರೆಸಿದ ಮಲ್ಲಿಗೆ
ಸುರಪಾರಿಜಾತ ಪುನ್ನಾಗ ಪುಷ್ಪಗಳ ೨

ಹೆರಳುಬಂಗಾರ ರಾಗಟೆ ಗೊಂಡ್ಯ ಕ್ಯಾದಿಗೆ
ಅರಳುಮಲ್ಲಿಗೆಯು ಭೀಮೇಶಕೃಷ್ಣನ ಸತಿಗೆ ೩.

## ೧೪೩

ಹೊಡಿ ಜೈಭೇರಿ ಮ್ಯಾಲೆ ಕೈಯ ತಿವ್ಹೊಡಿ [ಪ.]

ಕಡಲೊಳು ಭೇದಿಸಿ ಅಡಗಿದ್ದ ಯಾಸುರ-
ನ್ಹೊಡೆದು ವೇದವ ತಂದೊಡೆಯ ಶ್ರೀಕೃಷ್ಣನೆಂದ್ಹೊಡಿ ೧

ಮಂದರೋದ್ಧರ ತಾ ಸುಂದರಿ ರೂಪದಿ
ತಂದಮೃತೆರೆದ ಮುಕುಂದ ಶ್ರೀಹರಿಯೆಂದ್ಹೊಡಿ ೨

ಖಳಹಿರಣ್ಯಾಕ್ಷನ ಸೆಳೆದಪ್ಪಳಿಸಿದ
ಇಳೆಧಾರಕ ನಳಿನಾಕ್ಷ ಶ್ರೀಹರಿಯೆಂದ್ಹೊಡಿ ೩

ಕೂಸಿನ ನುಡಿಗತಿ ರೋಷದಿಂದಸುರನ
ನಾಶ ಮಾಡಿದ ಲಕ್ಷ್ಮೀಶ ಶ್ರೀಹರಿಯೆಂದ್ಹೊಡಿ ೪

ತ್ರಿಚರಣದ ಇಳೆ ಬೇಡಿ ತ್ರಿವಿಕ್ರಮ-
ರೂಪ ಧರಿಸಿದ ಉಪೇಂದ್ರ ಶ್ರೀಹರಿಯೆಂದ್ಹೊಡಿ ೫

ಕೊಡಲಿ ಪಿಡಿದು ತಾ ಮಡುಹಿದ ದೊರೆಕುಲ
ಕಡು ಮಾಋಷಿ ಪೊಡಮೈಶ ಶ್ರೀಹರಿಯೆಂದ್ಹೊಡಿ ೬

ದಶರಥ ಸುತ ದಶಶಿರ ಹತಮಾಡಿದ
ಸತಿ ಸೀತಾಂಗನೆ ಪತಿಯೆ ಶ್ರೀಹರಿಯೆಂದ್ಹೊಡಿ ೭

ಗೋಕುಲದೊಳಗಾನೇಕ ಸೂರ್ಯರಂ-
ತಾಕಳ ಕಾಯ್ದ ಗೋಪಾಲ ಶ್ರೀಹರಿಯೆಂದ್ಹೊಡಿ ೮

ಮುದ್ದುಸ್ತ್ರೀಯರ ವ್ರತ ಮೋಹಿಸಿ ಕೆಡಿಸಿದ
ಶುದ್ಧ ವೈಷ್ಣವರಿಗೆ ಸುಲಭ ಶ್ರೀಹರಿಯೆಂದ್ಹೊಡಿ ೯

ದುಷ್ಟ ಕಲಿಗಳಿಗೆ ಶಿಕ್ಷಕ ತಾ ನಿ-
ರ್ದುಷ್ಟನು ಭೀಮೇಶಕೃಷ್ಣ ಶ್ರೀಹರಿಯೆಂದ್ಹೊಡಿ ೧೦

# ನಳಚರಿತ್ರೆ

## ಧ್ವನಿ—೧

ಉಮೆಯ ಸುತನ ಚರಣಕಮಲಕೆ ನಮಿಸಿ ಪೇಳುವೆ ನಾನು ಹರುಷದಿ
ರಮೆಯ ರಮಣನ ಕರುಣದಿಂದಲಿ ನಳನ ಕಥೆಗಳನು ೧

ಕಂತುಪಿತನ ಕರುಣದಲಿ ದಮಯಂತಿ ಬಂದಾಪತ್ತು ಕಳೆದು
ಸಂತೋಷದಿ ಸಾಮ್ರಾಜ್ಯವಾಳಿದ ಕಥೆಯ ಪೇಳುವೆನು ೨

ಸತ್ಯವಂತನೆಂಬೊ ನಳ ತಾ ಪೃಥಿವಿಪತಿ ರಾಜಾಧಿರಾಜನು
ಭೃತ್ಯನಾಗಿ ಭೀಮೇಶಕೃಷ್ಣಗೆ ಭಕ್ತನೆನಿಸುವನು ೩

## ವಚನ—೨

ಬಲವಂತನಾದ ನಳರಾಯನಾಖ್ಯಾನದಲಿ
ಕಲಿಬಾಧೆಯಿಂದ ಕಡೆಗಾಗುವರು ಜನರೆಲ್ಲ
ಬಲರಾಮನನುಜನನುಗ್ರ[ಹ] ದಿಂದೀಕಥೆಯ
ಸುಲಭದಿಂದ್ಹೇಳಿ ಕೇಳುವರು ಸಜ್ಜನರು

## ಧ್ವನಿ—೩

ಹಸ್ತಿನಾವತಿಯ ಪಟ್ಟಣದಿ ಪಾಂಡವರು
ಲೆತ್ತಜೂಜುಗಳಾಡುತ
ಕೆಟ್ಟ ಕೌರವಗೆ ಸೋತೆಲ್ಲ ರಾಜ್ಯಗಳನು
ಬಿಟ್ಟಡವಿಗೆ ಪೋದರು ೧

ವನಜಾಕ್ಷಿ ದ್ರೌಪದಿಯನು ಕೂಡಿಧರ್ಮ
ವನವಾಸದಲ್ಲಿರಲು
ಘನಮಹಿಮನು ಬೃಹದಶ್ವನೆಂಬುವ ಮುನಿ
ವನಕಾಗ ನಡೆತಂದನು ೨

ಬಂದ ಮುನಿಗೆ ವಂದಿಸುತ ಧರ್ಮರಾಯ ಆ–
ನಂದದಿಂದಲಿಪೂಜಿಸಿ
ಬಂದ್ವನವಾಸದ್ವಾರ್ತೆಗಳ ಹೇಳುತಲಾಗ
ಮುಂದೇನುಗತಿ ಎಂದನು ೩

ಖಳದುಶ್ಶ್ಯಾಸ [ನ] ನು ಎಳೆದು ದ್ರೌಪದಿಯ ದು-
ರುಳರ ಸಭೆಯೊಳಗೆ
ಸೆಳೆದನು ಉಟ್ಟಸೀರೆಗಳ ಎಂದೆನುತಲಿ
ಬಳಲುತಲ್ಲೇಳಿಕೊಂಡ ೪

ಸಣ್ಣಮಲ್ಲಿಗೆ ಪೋಲುವಂಥ ದ್ರೌಪದಿಯು ಅ-
ರಣ್ಯವಾಸಗಳ ನೋಡಿ
ಇನ್ನೀಸಂತಾಪ ಸೈರಿಸಲಾರೆನೆಂತೆಂದು
ಕಣ್ಣಲುದಕ ತಂದನು ೫

ಪಟ್ಟದರಸಿ ಅನುಜರ ಸಹಿತಾಗಿ ಶ್ರೀ-
ಕೃಷ್ಣನನುಗ್ರಹದಿಂದ
ಸತ್ಯಧರ್ಮವ ನಡೆಸುತಲಿದ್ದ ರಾಜಗೆ
ಮತ್ತಿಲ್ಲಿ ವನವಾಸವು ೬

ಪೃಥಿವಿನಾಳುವ ನಳರಾಯನೆಂಬಾತನು
ಸತಿಸುತರನು ಅಗಲಿ
ಅತಿದುಃಖದಿಂದ ಭೀಮೇಶಕೃಷ್ಣನ ಪಾದ
ಗತಿಯೆಂದು ತಿರುಗಿದನು ೭

### ವಚನ—೪

ದಾರ ಮಗನಾತ ನಳರಾಯನೆಂಬುವ ಶ್ರೇಷ್ಠ
ಘೋರ ಅರಣ್ಯವಾಸ್ಯಾಕೆ ಬಂದಿತು ಕಷ್ಟ
ಕೇಳಿ ಸಂತಾಪವಾಗುವುದೆನ್ನ ಮನಕೆನಲು
ಹೇಳುವೆನು ನಳನ ಕಥೆ ಕೇಳೆಂದನಾ ಮುನಿಪನು

### ಧ್ವನಿ—೫

ಸಾಕು ಸಂತಾಪ ಮನಸ್ಸ್ವ್ಯಾಕುಲವಾಗಿದೆ
ನೀ ಕೇಳಿ ನಿಶ್ಚಿಂತನಾಗೊ ರಾಜ ಪ.

ವಸುಧೆಪಾಲನೆ ಕೇಳೊ ನಿಷಧದೇಶಾಧಿಪತಿ
ಕುಶಲದಿಂದಿದ್ದನಾ ವೀರಸೇನ
ಹೆಸರಾದ ಮಗನು ನಳರಾಯನೆಂಬಾತನು
ದೆಸೆವಂತನಾದ ಭೂಲೋಕದೊಳಗೆ ೧

ಗುಣದಲ್ಲಿ ಗಂಭೀರ ಮಣಿಯಂತೆ ಮೈಬಣ್ಣ
ಕಳೆಯು ಚೆಲ್ವಿಕೆಯು ಕಾಮನ ಪೋಲ್ವದು
ನಳರಾಯನಲ್ಲೀಗುಣಗಳ ಕೇಳಿ ದಮಯಂತಿ
ಮರುಳಾಗಿ ಮನಸಿಟ್ಟಳಾತನಲ್ಲೆ ೨

ಸತ್ಯ ಪ್ರತಿಜ್ಞೆ ಮೀರುವನಲ್ಲ ನಳರಾಯ
ಕೊಟ್ಟ ಭಾಷೆಗಳ ತಪ್ಪುವನಲ್ಲವೊ
ಅತ್ಯಂತ ಹರುಷದಿಂದಾಗ ತಾ ಭೀಮೇಶ–
ಕೃಷ್ಣನ್ನ ಭಜಿಸಿ ಭಕ್ತಿಯಲಿದ್ದನು ೩

### ವಚನ—೬

ಅವನಿಯೊಳಗೊಬ್ಬ ವಿದರ್ಭದೇಶಾಧಿಪತಿ ಭುವನದೊಳು
ಭೀಮರಾಯನೆಂದು ಹೆಸರಾದ
ದಮನೆಂಬೊ ಋಷಿಯ ವರದಿಂದ ಮೂರು ಗಂಡುತನಯರ್ಹುಟ್ಟಲು
ದಮನ ಹೆಸರೆಂದು ಕರೆಯುತ್ತ ಪಡೆದನಾಗ
ದಮಯಂತಿ ಎಂಬುವ ಮಗಳ
ಎರಡು ಪಾದಗಳು ಎಳೆ ಮಾವಿನಾ ತಳಿಲಂತೆ
ನಡೆದರಾಗಜ ನೋಡಿ ನಸಗೆ ಮಿಗಿಲೆಂಬುವುದು
ನಡುವ ನೋಡುತ ಸಿಂಹ ನಾಚಿ ಬೆರಗಾಗುವುದು
ಕಡಗಬಳೆಕರ ಬಾಳೆದಿಂಡಿನಂ[ತೆ] ತೋರುವುದು
ಜಡೆಯ ನೋಡುತ ಸರ್ಪ ಮಡುವ ಸೇರ್ವುದು ಪೋಗಿ
ಉಡುರಾಜ ನೋಡಿ ಮುಖಕಾಂತಿಗೆ ಕಪ್ಪಾದ
ಬಿಳಿ ಮುತ್ತು ಪುಟ್ಟ ಕರಡಿಗೆಯಂಥ ಬಾಯಿಂದ
ನುಡಿದ ಮಾತಿಗೆ ಮರುಳುಗೊಂಡುವಾ ಗಿಳಿಹಿಂಡು
ಒಡೆದು ದಾಳಿಂಬ್ರ ಬಾಯ್ಬಿಡಲು ದಂತಕೆ ಹವಳ
ಕುಡಿಯಂತೆ ತುಟಿಕೆಂಪು ಕದಪು ಕನ್ನಡಿಯಂತೆ
ಮುಡಿಯ ಸಂಪಿಗೆತೆನೆಯು ಮೂಗುಮಾಟಕೆ ಬಾಡೆ
ಕಡೆಗಣ್ಣು ಕಮಲದೆಸಳಂತೆ ತಿದ್ದಿದ ಹುಬ್ಬು
ಕಡಲಂತೆ ಗುಣಕೊಂದು ಕಡಿಮ್ಯಿಲ್ಲದ್ಹಾಗಿರಲು
ಕಡುಮುದ್ದು ಕಾಮನ್ನ ಪಲ್ಲಭೆಗೆಸವು ಚೆಲ್ವಿಕೆಯು
ಸಡಗರದ ಶುಭ ಲಕ್ಷಣವ ಕೇಳಿ ನಳರಾಯ
ಮಡದ್ಯಾಗಲೆನುತ ಮನಸಿಟ್ಟು ದಮಯಂತಿಯಲಿ
ಬಿಡದೆ ಭೀಮೇಶಕೃಷ್ಣನ ಬೇಡಿಕೊಳುತಿದ್ದನು

## ಧ್ವನಿ—೭

ಒಂದು ದಿನದಿ ಬ್ಯಾಟೆಗೆನುತ ಬಂದ ರಾಜನು
ಕಂಡ ರಾಜಹಂಸಪಕ್ಷಿ ಬರುವೊ ಭರವನು ೧

ತುಂಡು ತುಂಡಾಗಿ ಚಂದ್ರಮನಂಬರದಿಂದಲಿ
ಬಂದು ಭೂಮಿಯಲಿ ಬಿದ್ದನೋ ಏನೆಂದು ನೋಡಿದ ೨

ಸಾಲು ಸಾಲು ಚಂದ್ರಮನಂತ್ಹಿಶಾಲವಾಗಿರೆ
ಹಾಲು ನೊರೆಯಂತಿದ್ದ ಪಕ್ಕ ಹರವಿಕೊಂಡಿರೆ ೩

ಸಂಪಿಗೆಯ ವನದ ಮಧ್ಯ ತಂಪಿನಿಂದಲಿ
ಗುಂಪು ಗುಂಪಾಗಾಡೋಪಕ್ಷಿ ಸಂಪು ನೋಡಿದ ೪

ದೊರೆಯು ಕರದಿಂದ್ಹಿಡಿಯಲ್ಹೋದ ಸರ್ವಪಕ್ಷಿಯು
ಭರದಿಂದ್ಹಾರಲು ಹಿರಿಯದೊಂದ್ಕೈಸೆರೆಯು ಸಿಕ್ಕಿತು ೫

ಬಿಡುಬಿಡೆನ್ನ ಹಿಡಿದು ಹೀಗೆ ತಡೆವ್ರೋದ್ಯಾತಕೊ
ಒಡೆಯ ನಿನಗೊಂದ್ವಾರ್ತೆ ಹೇಳುವೆ ಸಡಗರ ಸುದ್ದಿ ೬

ಎಂಥ ರೂಪವಂತ್ಯೋ ದಮಯಂತಿಗೆ ನೀನು
ಕಾಂತನಾಗುವಂತೆ ನಾ ಮಾಡುವೆನು ಮತ್ತೀಗ ೭

ಹವಳ ಮುತ್ತು ಕೂಡಿಸಿದಂತವಳಿಗೆ ನಿನಗೆ
ಬಿಳಿಯೆಲೆ ಅಡಕೆ ಸುಣ್ಣದಂತೆ ಸೊಗಸು ಕಾಂಬೋದು ೮

ಎನ್ನ ಮಾತು ಕೇಳೊ ರಾಜ ಮನ್ನಿಸಿ ಬ್ಯಾಗ
ನಿನ್ನಗೊಂದುಪಕಾರ ಮಾಡುವೆನು ಮತ್ತೀಗ ೯

ಅಂದ ಮಾತು ಕೇಳಿ ಬಿಟ್ಟ ಆನಂದದಿ ರಾಜ
ಮುಂದೆ ಭೀಮೇಶಕೃಷ್ಣನೆ ಗತಿಯೆಂದು ಹಾರಿತು ೧೦

## ವಚನ—೮

ಕುಸುಮಲೋಚನೆ ಕುಸುಮಕೆನುತ ಬರುತಿರಲಾಗ
ಶಶಿವರ್ಣಪಕ್ಷಿ ಶಾವಂತಿಗೆವನದೊಳಗೆ
ಪಸರಿಸುತ ರೆಕ್ಕೆ ಪರಮಾರ್ಥಿಲ್ಹಾರಾಡುತಿರೆ

ಹೊಸ ಹಂಸ ನೋಡಿ ಬೆರಗಾಗುತಲಿ ದಮಯಂತಿ
ನಸುನಗುತಲ್ಹಿಡಿಯೆ ಕೈ ಕೊಸರಿಕೊಂಡ್ಹೋಗುವುದು
ಕುಶಲಮಾತಲಿ ಕರೆಯೆ ಬಂದು ಕೈ ಸೇರುವುದು
ಹಸನಾದ ಮುದ್ದು ಮುಖ ನೋಡಿ ಮಾತಾಡುವುದು
ವಸುಧೆ ಮ್ಯಾಲೇನ್ವರ್ತಮಾನ ಹೇಳೆನುತಿರಲು
ಶಶಿವದನೆ ನಿನ್ನ ನವಯೌವನಕೆ ತಕ್ಕಂಥ
ದೆಸೆವಂತನಾದ ನಳರಾಯನೆಂಬುವ ದೊರೆಯು
ಪುರುಷನಾದರೆ ನಿನ್ನ ಪುಣ್ಯಕ್ಕೆ ಸರಿಯಿಲ್ಲ
ಹೊಸರು ತಂದ್ಹಾಲಿಗ್ಹೆಪ್ಪಿಟ್ಟಂತೆ ಕೂಡುವುದು
ಮಿಸುಣಿಮಾಣಿಕ್ಯ ಮುತ್ತು ಬೆರೆಸಿದಂತೆ ತೋರುವುದು
ಅರಸನರಸಿಯು ಆಗಿ ಸರಸಸುಖಬಡುವಾಗ
ನೆನಸಿಕೊಂಬುವಿ ಎನ್ನ ಮಾತು ಮರೆಯದೆ ನೀನು
ಮನಸು ಬಂದರೆ ಮಾಡಿಕೊಂಡು ಮಕ್ಕಳ ಪಡೆದು
ಬಿಸಜಾಕ್ಷಿ ನೀನು ಭೀಮೇಶಕೃಷ್ಣನ ದಯದಿ
ಹರುಷದಿಂದಲಿ ಬಾಳು ನಳನ್ವಾರ್ತೆಗಳನು ಕೇಳು

## ಧ್ವನಿ—೯

ಅಮ್ಮ ಕೇಳೀವಾರ್ತೆಯ ನಮ್ಮ ರಾಜನ ಕೀರ್ತಿಯ
ಮನ್ಮಥನ ರೂಪ ಲಾವಣ್ಯ ಸುಂದರ ಮೂರ್ತಿಯ ಪ.

ಸಜ್ಜನ ಶಿರೋಮಣಿ ಸರ್ವಾಂಗ ವಜ್ರದ ಖಣಿ ಸಾ-
ಮ್ರಾಜ್ಯಧಾರುಣೀಫಣಿ ನೀನಾಗೆ ಪಟ್ಟದ ರಾಣಿ ೧

ತ್ಯಾಗದಲ್ಲಿ ಕರ್ಣನು ಭೋಗಕಾಮರೇಂದ್ರನು
ಸಾಗರಕ್ಕೆ ಸರಿಯುಗುಣ ಸತ್ಯದಲಿ ಧರ್ಮರಾಯನು ೨

ಭೀಮರಾಯಗೆ ಹೇಳಿಕೊ ಭೀಮೇಶಕೃಷ್ಣಗೆ ಬೇಡಿಕೊ
ಆ ನಳನ್ನ ಮಾಡಿಕೊ ಅನಂತಸುಖವು ನೋಡಿಕೊ ೩

## ವಚನ—೧೦

ಪಕ್ಷಿಮಾತನು ಕೇಳಾಪೇಕ್ಷೆ ಹುಟ್ಟಿತು ಮನಕೆ
ಇಕ್ಷುಚಾಪನ ಶರದಿಂದ ಮೋಹಿತಳಾಗಿ
ಲಕ್ಷ್ಮೀವಲ್ಲಭ ಹರಿಯ ಸಾಕ್ಷಿಯಿಂದ್ಹೇಳುವೆನು

ಸಾಕ್ಷಾತಪತಿಯು ನಳನೆಂದು ನೇಮಿಸಿಕೊಂಡೆ
ಆಕ್ಷದಿಂದಿನ್ನೊಬ್ಬ ಪತಿಯ ನೋಡುವಳಲ್ಲ
ರಕ್ಷಿಸೀಗೆನ್ನ ಸ್ವಯಂವರಕೆ ಬರಹೇಳೆನಲು
ಆಕ್ಷಣದಲ್ಲೊಗಿ ನಳರಾಯಗ್ವಾರ್ತೆಯ ತಿಳಿಸಿ
ತಕ್ಷಣದಲ್ಹ್ಯಂತರಿಕ್ಷಕ್ಕೆ ನಡೆದಿತಾಗ

ಧ್ವನಿ—೧೧

ನಳನ ವಾರ್ತೆಗಳ ಕೇಳುತ ತನ್ನ ಮನದಲ್ಲಿ
ಆಳಲುತ ಬಳಲುತಲಿ ಸೆಳೆಮಂಚದಲ್ಲಿ
ಮಲಗಿ ಮೋಹನಾಂಗಿ ತಾ ಕಳೆಗುಂದಿ ಮುಖಪದ್ಮವು ೧

ಅನ್ನಪಾನಗಳ ಒಲ್ಲಳು ತನ್ನ ದೇಹಕ್ಕೆ
ಬಣ್ಣದ್ವಸ್ತ್ರವನುಡದೆ ಸುಣ್ಣ ಬಿಳಿಯೊಲೆ
ಅಡಕೆ ತಾಂಬೂಲವ ಕಣ್ಣಲಿ ನೋಡದಂತ್ರೆ ೨

ಮರುಗ ಮಲ್ಲಿಗೆ ಜಾಜಿ ಸಂಪಿಗೆ ಸರವನು
ತುರುವಿಗೆ ಮುಡಿಯದಂತೆ ಸಗೆಳತಿಯರನು
ಕರೆದು ಮಾತಾಡದೆ ಮರುಗುತ ಸೊರಗಿದಳು ೩

ಮುತ್ತು ಮಾಣಿಕ್ಯ ಚಿನ್ನಸರ ಪದಕ ನವ–
ರತ್ನದಾಭರಣಗಳ ಬಿಚ್ಚಿಬಿ [1][ಸುಟ][1]ಳು ಜಡೆ–
ಬಂಗಾರ ರಾಗಟೆ ಹಚ್ಚದೆ ಶ್ರೀಗಂಧವ ೪

ಕಾಮ ಮೋಹಗಳಿಂದ ಪರವಶವಾಗಿರೆ
ಸಾಮಜಗಮನೆ ತಾನು ಭೀಮೇಶಕೃಷ್ಣನ
ದಯದಿಂದ ನಳದೊರೆ ತೋರಿಸೀಗೆಂದೆನುತ ೫

ವಚನ—೧೨

ಬಂದು ದೂತಿಯರ್ಹೇಳೆ ಭೀಮರಾಯಗೆ ನಿನ್ನ
ನಂದನೆಯ ಮನಸು ನಳರಾಜನಲ್ಲೊಂದಿಹುದು
ಕಂದಿಕುಂದಿದಳೆನುತ ಕೇಳುತಾಕ್ಷಣದಲ್ಲಿ
ಬಂದು ಬಿಗಿದಪ್ಪಿ ತೊಡೆಯಲ್ಲಿಟ್ಟು ಮುದ್ದಿಸುತ
ಮುಂಗುರುಳು ತಿದ್ದಿ ಮುಖ ಬೆವರುಗಳನ್ನೊರೆಸುತ್ತ

1 ಸ್ಟ

ಸಂದೇಹ ಬ್ಯಾಡ ಸ್ವಯಂವರವ ಮಾಡುವೆ ಮನಕ್ಕೆ-
ಬಂದ ರಾಯರಿಗೊಲಿದು ವನಮಾಲೆ ಹಾಕೆನುತ ಆ-
ನಂದಬಡಿಸಿದ ಮಗಳನು

ಧ್ವನಿ—೧೩

ತಿಳಿಸಿದ ಸ್ವಯಂವರವ ರಾಯರಿಗೆಲ್ಲ
ಕಳಿಸಿದ ಪತ್ರಿಕವ ಪ.

ಊರು ಶೃಂಗರಿಸುತ ಉತ್ತಮಗಂಧ ತಳಿಲು-
ತೋರಣ ಕಟ್ಟುತ ಬೀದಿ ಬೀದಿಗೆ ಬಿ-
ಡಾರ ಮಂಟಪ ಮಧ್ಯಹಾದಿಗ್ಳುಂ-
ದರ ಹಾಕಿ ಹಲವು ಕಸ್ನಡಿಸಿಟ್ಟು ಬಾರಿ ಬಾರಿಗೆ
ನೂರುಸಾವಿರ ಭೇರಿ ಬಡಿಸಿ ಭೀ-
ಮರಾಯ ಮಾಡುವನು ತಾ ಮಗಳಸ್ವಯಂ-
ವರ ನೋಡಲು ಜನ ಬರಬೇಕೆಂದು ೧

ದೊರೆ ನಡೆಸಿದ ಕಾರ್ಯವ ನಾರದರಿಂದ
ಸುರದೇವತೆಗಳು ಕೇಳಿ
ನರಲೋಕದೊಳಗೆ ನಮ್ಮಂಥ ಪುರುಷರಿಲ್ಲ
ದೊರೆ ಭೀಮರಾಯಗೆ ಅಳಿಯನಾಗುವೆನೆಂದು
ಇಂದ್ರನು ಯಮನು ವರುಣನು ಕುಬೇರ ಅಗ್ನಿ ಕೂಡಿಕೊಂಡು
ಬರುವ ಮಾರ್ಗದಿ ಕಂಡು ನಳನ
ನಾಮು ಕೇಳಿಕೊಂಡರಾಗ ೨

ಶ್ರೇಷ್ಠರಾಜನೆ ನೀ ನಮ್ಮ ಮನಸಿನ ಅ-
ಭೀಷ್ಟವ ಗೆಲಿಸೆಂದರು ಎತ್ತರಾಗಲಿ
ಉತ್ತಮರೆ ನಿಮ್ಮ ಕಾರ್ಯವಗತ್ಯ ಮಾಡುವೆ-
ನೆಂದವರಿಗ್ವಚನವ ಕೊಟ್ಟ
ಇವತ್ತು ನೀನು ಪೋಗಿ ಇಂದ್ರಾದಿಗಳು
ಬಂದರೆನುತ ಹೇಳಿ ವಿಚಿತ್ರದಮಯಂತಿ
ನಮ್ಮ ಪತ್ನಿಯಾಗುವಂತೆ ಮಾಡು ೩

ಅಂದ ಮಾತನು ಕೇಳುತ ರಾಜನು ಭಾಳ
ಸಂದೇಹದಲಿ ನುಡಿದ

೨

## ಮುಯ್ಯದ ಹಾಡು

ಏಕದಂತಗೆ ಅನೇಕ ಭಕ್ತಿಯಲಿಂದ
ಏಕಚಿತ್ತದಲಿ ನಮೋಯೆಂಬೆ ಕೋಲೆ
ಏಕಚಿತ್ತದಲಿ ನಮೋ ಎಂದು ಪೇಳುವೆ
ಶ್ರೀಕಾಂತ ಹರಿಯು ಚರಿತವ ಕೋಲೆ ೧

ಸಿದ್ಧಿವಿನಾಯಕ ರುದ್ರಕುಮಾರನ
ಮುದ್ದು ಶ್ರೀ ಚರಣಕ್ಕೆರಗುವೆ ಕೋಲೆ
ಮುದ್ದು ಶ್ರೀಚರಣಕ್ಕೆರಗಿ ನಾ ಕೇಳುವೆ
ಶುದ್ಧವಾಗೆನಗೆ ಮತಿಗಳ ಕೋಲೆ ೨

ವಾಯುಬ್ರಹ್ಮರು ಮೊದಲ್ವಾಣಿ ಭಾರತಿ ರುದ್ರ
ಪಾರ್ವತಿದೇವಿ ಮೊದಲಾದ ಕೋಲೆ
ಪಾರ್ವತಿದೇವಿ ಮೊದಲಾದ ವನಿತೇರ
ಪಾದಪದ್ಮಗಳಿಗೆರಗುವೆ ಕೋಲೆ ೩

ನಾರದರು ಮೊದಲಾದ ದೇವಋಷಿ ಗರುಡರು
ಆದಿಶೇಷರಿಗೆ ನಮೋ ಎಂಬೆ ಕೋಲೆ
ಆದಿಶೇಷರಿಗೆ ನಮೋ ಎಂದು ಕೇಳುವೆ
ಶ್ರೀಧರನಲ್ಲಿ ರತಿಗಳ ಕೋಲೆ ೪

ಗುರುರಾಘವೇಂದ್ರರಾಯರ ಚಾರುಚರಣಕ್ಕೆ
ತ್ವರಿತದಿ ನಾನು ನಮೋ ಎಂಬೆ ಕೋಲೆ
ತ್ವರಿತದಿ ನಾನು ನಮೋ ಎಂದು ಕೇಳುವೆ
ಪರಮಾತ್ಮ ಹರಿಯು ಚರಿತವ ಕೋಲೆ ೫

ಮಂಗಳಾಂಗನೆ ಮಾಲಕ್ಷ್ಮಿ ದೇವೇರ
ಮಂಗಳ ಚರಣಕ್ಕೆರಗುವೆ ಕೋಲೆ
ಮಂಗಳ ಚರಣಕ್ಕೆರಗಿ ನಾ ಕೇಳುವೆ
ಹಿಂಗದೆ ಎನಗೆ ಮತಿಗಳ ಕೋಲೆ ೬

ಭಕ್ತವತ್ಸಲನಂಘ್ರಿ ಛಾರಿಪದ್ಮಗಳಿಗೆ
ಭಕ್ತಿಂದ ನಾನು ನಮೋಎಂಬೆ ಕೋಲೆ
ಭಕ್ತಿಂದ ನಾನು ನಮೋಎಂದು ಭೀಮೇಶ-
ಕೃಷ್ಣನ ಕತೆಯ ಸ್ತುತಿಸುವೆ ಕೋಲೆ ೭

## ಧ್ವನಿ—೧

ಗೌರಿಪೂಜೆ ಮಾಡಿದರಮ್ಮ ಶೌರಿಸತಿಯರು
ಚೌರಿ ರಾಗಟೆ ಗೊಂಡ್ಯವಿಟ್ಟ್ಯಾದವಕೃಷ್ಣನರಸ್ಯೇರೆಲ್ಲ ಪ.

ಉತ್ಥಾನದ್ವಾದಶಿಯು ಬರಲು ಉತ್ತಮ ಪೌರ್ಣಿಮಿ ದಿನದಿ
ಚಿತ್ತಜನಯ್ಯನರಸಿ ರುಕ್ಮಿಣಿ ಇಟ್ಟು ಗೌರಿ ಪೂಜೆಯನ್ನು ೧

ಮಂಗಳಾಂಗಿ ರುಕ್ಮಿಣಿದೇವಿ ಗಂಧಕುಂಕುಮ ಪರಿಮಳ ಹಚ್ಚಿ
ದುಂಡುಮಲ್ಲಿಗೆಯನ್ನು ಮುಡಿಸಿ ಮಂಗಳಾರತಿ ಬೆಳಗಿದರು ೨

ಸಣ್ಣ ಶ್ಯಾವಿಗೆ ಸರ್ವಭಕ್ಷ್ಯ ಅನ್ನ ಮಂಡಿಗೆ ಫೇಣಿಗಳನು
ಪನ್ನಗ ಭೂಷಣನ ರಾಣಿ ಪಾರ್ವತಿಗರ್ಪಿಸುತ ಬ್ಯಾಗ ೩

ರಂಗನ ರಾಣಿಯರು ಬೆಳದಿಂಗಳೂಟವನ್ನು ಉಂಡು
ಗಂಧಕುಂಕುಮ ಪರಿಮಳ ಹಚ್ಚಿ ತಾಂಬೂಲವನು ಕೊಂಡರಾಗ ೪

ಕಾಂತೇರೆಲ್ಲ ಕೂಡಿ ಏಕಾಂತವಾಡೆ ಹರುಷದಿಂದ
ಕುಂತಿಸೊಸೆಯರನ್ನು ಗೆದ್ದು ಸಂಭ್ರಮದಿಂದ ಬರಬೇಕೆಂದು ೫

ಮುದ್ದು ರುಕ್ಮಿಣಿ ಹರುಷದಿಂದ ತಿದ್ದಿ ವರಗಳನ್ನು ಬೇಡಿ
ಅರ್ಜುನರರಸಿಯಾದ ಸುಭದ್ರೆ ಸೋಲಿಸಿ ಬರಬೇಕೆಂದು ೬

ಮಿತ್ರೆ ಸತ್ಯಭಾಮೆ ಭೀಮೇಶಕೃಷ್ಣನ ತಂಗಿಯರ ಗೆದ್ದು
ಶ್ರೇಷ್ಠವಾದ ಮುಯ್ಯಕೊಟ್ಟು ದಿಟ್ಟತನದಿ ಬರಬೇಕೆಂದು ೭

## ಧ್ವನಿ—೨

ಕೃಷ್ಣ ಕೃಷ್ಣ ಕೇಳೆನಮಾತು ಕೇಳೋ ಕೃಷ್ಣಕೃಷ್ಣ
ಕೃಷ್ಣ ಕೃಷ್ಣನೆ ಉತ್ಕೃಷ್ಟ ಪರಾಕ್ರಮಿ ಪ.

ನೂರುಮಂದಿಯು ಹದಿನಾರು ಸಾವಿರ ಮಂದಿ
ಆರುಮಂದಿಗೆ ಅಧಿಕರೊ ಕೇಳೊ
ಆರು ಮಂದಿಗೆ ಅಧಿಕ ರುಕ್ಮಿಣಿ ಭಾಮೆ
ಮೂರ್ಜಗದೊಡೆಯನೆದುರಿಗೆ ಕೇಳೊ ೧

ರಾಜಪೀಠದ ಮ್ಯಾಲೆ ರಾಜಿಸುತಿರೆ ಕೃಷ್ಣ
ರಾಜಿತ ಚರಣಕ್ಕೆರಗ್ಯಾರೊ ಕೇಳೊ
ರಾಜಿತ ಚರಣಕ್ಕೆರಗ್ಯಾರೊ ನಾವು ಧರ್ಮ-
ರಾಜನ ನೋಡಿ ಬರಬೇಕೊ ಕೇಳೊ ೨

ಕುಂತಿಸುತರ ಮ್ಯಾಲೆ ಕೋಮಲಾಂಗನೆ ನಿನಗೆ
ಅಂತಃಕರಣವೋ ಅತಿಸ್ನೇಹ ಕೇಳೊ
ಅಂತಃ ಕರಣವೋ ಅತಿಸ್ನೇಹ ಆದರಿಂದ
ಪಂಥುಳ್ಳಮುಯ್ಯ ಕೊಡಬೇಕೊ ಕೇಳೊ ೩

ಪಂಚ ಪಾಂಡವರೆಂಬೊ ಪಂಚಪ್ರಾಣಗಳೆಂದ
ಪಾಂಚಾಲಿ ನಿನಗೆ ಪರಮಿಷ್ಟಕೇಳೊ
ಪಾಂಚಾಲಿ ನಿನಗೆ ಪರಮಿಷ್ಟ ಆದರಿಂದ
ಮಂಚೆ ಮುಯ್ಯಗಳ ಕೊಡಬೇಕೊ ಕೇಳೊ ೪

ಚಿಕ್ಕ ಸುಭದ್ರೆ ಅವರಕ್ಕ ದ್ರೌಪದಿದೇವಿ
ಅಕ್ಕರವುಳ್ಳ ಅನುಜೇರೊ ಕೇಳೊ
ಅಕ್ಕರವುಳ್ಳ ಅನುಜೆ ದ್ರೌಪದಿ ಮನೆಗೆ
ಗಕ್ಕನೆ ಮುಯ್ಯ ಕೊಡಬೇಕೊ ಕೇಳೊ ೫

ಭಕ್ತರೊಳಗೆ ಭಾಳಶ್ರೇಷ್ಠ ಪಾಂಡವರೆಂದು
ಪೃಥಿವಿಯ ಮ್ಯಾಲೆ ಹೊಗಳೋರೊ ಕೇಳೊ
ಪೃಥಿವಿಯ ಮ್ಯಾಲೆ ಹೊಗಳೋರೊ ಭೀಮೇಶ-
ಕೃಷ್ಣಪ್ಪಣೆಯ ಕರುಣಿಸೊ ಕೇಳೊ ೬

ಧ್ವನಿ—೩

ಕೇಳಿ ನಗುವನೊ ರಂಗ ತಾ ಹೇಳಿ ನಗುವನೊ
ಭಾಳ ಹರುಷದಿಂದ ದ್ರೌಪದಿ ಕಾಳವೇಷೇರ ಕಾಂಬಿರೆಂದು ಪ.

ಹರುಷದಿಂದ ಕೃಷ್ಣರಾಯ ಕರೆಸಿಬೃಹಸ್ಪತಿಯ ಬ್ಯಾಗ
ಅರಸಿ ಭಾಮೆ ರುಕ್ಮಿಣಿ ಬಲವು ತ್ವರಿತದಿಂದ ಹೇಳಿರೆಂದು ೧

ಚಂದ್ರ ತಾರಾಬಲಗಳುಂಟು ಬಂದ ಶುಭ ನಕ್ಷತ್ರಯೋಗ
ಇಂದು ಮುಖಿಯರನ್ನ ಗೆದ್ದಾನಂದದಿಂದ ಬರುವಿರೆಂದು ೨

ಸೂರ್ಯ ಶುಕ್ರನ ಬಲಗಳುಂಟು ಮ್ಯಾಲೆ ಶುಭನಕ್ಷತ್ರಯೋಗ
ವಾರ ತಿಥಿಗಳ್ವೊಯ್ನವೆಂದು ಹೇಳಿ ಬೃಹಸ್ಪತಿ ಕುಳಿತನಾಗ ೩

ಪೃಥಿವಿಪತಿ ಭೀಮೇಶಕೃಷ್ಣ ರಥ ರಥಿಕರನೆಲ್ಲ ಕರೆಸಿ
ರಥಗಳನು ಶೃಂಗರಿಸಿ ನಿಮ್ಮ ಸಾರಥಿಯ ಕೂಡ ಬರಬೇಕೆಂದು ೪

ಧ್ವನಿ—೪

ಬಂದಾರೆ ಭರದಿಂದ ಇಂದ್ರಾದಿಸುರರು ಗೋ-
ವಿಂದನ ಮನೆಗೆ ಬರುತಾರೆ ಕೋಲೆ ಪ.

ಇಂದ್ರ ಶಚಿಯು ಕೂಡಿ ಚಂದ್ರರೋಹಿಣಿ ದೇವಿ
ಬಂದ ನೈರುತಿ ನರನೇರಿ ಕೋಲೆ
ಬಂದ ನೈರುತಿ ನರನೇರೆಂದೆನುತಲಿ
ದುಂದುಮಿ ಭೇರಿ ಬಡಿದಾವೆ ಕೋಲೆ ೧

ಸೂರ್ಯ ಸಂಜ್ಞಾ ಯಮ ಶಾಮಲ ಸಹಿತಾಗಿ
ವಾಯು ಅಗ್ನಿಯರು ಒಡಗೂಡಿ ಕೋಲೆ
ವಾಯು ಅಗ್ನಿಯರು ಒಡಗೂಡಿ ಸ್ವಾಹಾದೇವಿ
ಶ್ರೀಧರನ ಮನೆಗೆ ಬರುತಾರೆ ಕೋಲೆ ೨

ವರುಣ ಭಾಗೀರಥಿ ಕುಬೇರನು ಧನಪತಿ
ಇಲಿಯನೇರ್ವೊಬ್ಬ ಗಣಪತಿ ಕೋಲೆ
ಇಲಿಯನೇರ್ವೊಬ್ಬ ಗಣಪತಿ ರತಿ ಕಾಮ
ಹಲಧರನ ಮನೆಗೆ ಬರುತಾರೆ ಕೋಲೆ ೩

ಬ್ರಹ್ಮ ಸರಸ್ವತಿದೇವಿ ಉಮ್ಮ ಮಾ (ಮಹಾ ?)ರುದ್ರರು
ಬ್ರಹ್ಮಸುತ ದೇವ ಋಷಿಗಳು ಕೋಲೆ
ಬ್ರಹ್ಮಸುತ ದೇವ ಋಷಿಯುನಾರದ ವೀಣಾ
ರಮ್ಯಯರಸನ ನುಡಿಸುತ ಕೋಲೆ ೪

ಅಷ್ಟದಿಕ್ಕಿನ ಜನರು ಸತ್ಯ ಸ್ವರ್ಗಲೋಕದ ವ-
ಸಿಷ್ಠ ವಿಶಿಷ್ಟ ಋಷಿಗಳು ಕೋಲೆ ವ-
ಸಿಷ್ಠ ವಿಶಿಷ್ಟ ಋಷಿಗಳು ಭೀಮೇಶ-
ಕೃಷ್ಣನ ಮನೆಗೆ ಬರುತಾರೆ ಕೋಲೆ ೫

## ಧ್ವನಿ—೫

ರಂಗ ರಾಮರು ತಾವು ಬಂದ ಜನರಿಗ್ಹ ಸ್ವಾ-
ಲಿಂಗನೆ ಕೊಟ್ಟು ಕರೆವೋರು
ಅಸುರಾರಿ ಮನೆಗೆ ಬಂದರೆ ಸುರರು ಪ.

ಅಂದಣ ರಥವೇರಿ ಬಂದ ಭೂಪಾಲರು
ಇಂದಿರಾಪತಿಯು ಚರಣಕ್ಕೆ
ಇಂದಿರಾಪತಿಯು ಚರಣಕ್ವಂದನೆಯು ಮಾಡಿ
ಚಂದ್ರಸಾಲ್ವೊಳಗೆ ಇಳಿದಾರೆ ೧

ಅಸುರಮರ್ದನ ಅವರ ಕುಶಲ ಪ್ರಶ್ನೆಯು ಕೇಳಿ
ಎಸೆವೊ ಮಾಣಿಕದ ತಬಕಿಲೆ (ಕಲಿ ?)
ಎಸೆವೊ ಮಾಣಿಕದ ತಬಕಿಲೆ ತಾಂಬೂಲ
ವಸುಧೆ ಪಾಲಕರಿಗಿಡುವೋರೆ ೨

ಇಂದು ರುಕ್ಮಿಣಿದೇವಿ ಚಂದ ಚಂದದ ಮುಯ್ಯ
ಸೊಂಡಿಲಪುರಕೆ ಸೊಬಗಿಲೆ
ಸೊಂಡಿಲಪುರಕೆ ಸೊಬಗಿಲಿಂದ್ಹೊರಡಬೇ-
ಕೆಂದು ಅಪ್ಪಣೆಯು ಕೊಡುವೋರೆ ೩

ಲಕ್ಷಾನೆಯು ಹತ್ತುಲಕ್ಷ ತೇಜಿಯು ಮಾ (ಸಾ?) ರಿ
ಲಕ್ಷಣವಂತಿ ಮನೆಮುಂದೆ
ಲಕ್ಷಣವಂತಿ ಮನೆಯು ಬಾಗಿಲ ಮುಂದೆ
ಲಕ್ಷ ಹಿಲಾಲು ಹಿಡಿದಾವೆ ೪

ಕೋಟಿ ಆನೆಯು ಹತ್ತುಕೋಟಿ ತೇಜಿಯು ಮಾ (ಸಾ?) ರಿ
ಕೋಟಿ ಹಿಲಾಲು ಹಿಡಿದಾವೆ
ಕೋಟಿ ಹಿಲಾಲು ಬೆಳಕು ಭೀಮೇಶಕೃಷ್ಣ-
ನ್ನೀಟಾದ ಭಕ್ತರು ಬರುತಾರೆ ೫

## ಧ್ವನಿ—೬

ರಥವನೇರಿದ ರಥಿಕನ್ಯಾರೆ ಪೇಳವ್ವಯ್ಯ
ರಥವನೇರುವರೊಳು ರಥಿಕನು ದಾರವ್ವ
ರತಿ ಸಹಿತಾಗ್ಹರಿಸುತ ಪ್ರದ್ಯುಮ್ನ ಪ.

ಅಕ್ರೂರವರದನ ಅಚ್ಛದ ಮಕ್ಕಳು
ಚಿಕ್ಕ ಪ್ರದ್ಯುಮ್ನ ಅನಿರುದ್ಧ
ಚಿಕ್ಕ ಪ್ರದ್ಯುಮ್ನ ಅನಿರುದ್ಧ ಬರುತಾರೆ
ಮುತ್ತು ಮಾಣಿಕ್ಯದ ರಥವೇರಿ ೧

ಅಂಬರೀಷ್ವರದನ ಚಂದುಳ್ಳಮಕ್ಕಳು
ಸಾಂಬನು ಭಾನು ಅನಿರುದ್ಧ
ಸಾಂಬನು ಭಾನು ಅನಿರುದ್ಧ ಬರುತಾರೆ
ದುಂದುಮಿ ಭೇರಿ ಬಡಿಸುತ ೨

ಲೋಕ ಲೋಕದೊಳಿದ್ದ ಲೋಕ ಪಾಲಕರೆಲ್ಲ
ಏಕಕಾಲದಲಿ ರಥವೇರಿ
ಏಕಕಾಲದಲಿ ರಥಗಳನೇರಿಕೊಂಡು ಅ-
ನೇಕ ಸಂಭ್ರಮದಿ ಬರುತಾರೆ ೩

ವಸುದೇವ ದೇವಕ್ಕಿ ಸೊಸೆಪುತ ಮುಯ್ಯಕ್ಕೆ
ಎಸೆವೊ ಮಾಣಿಕ್ಯದ ರಥವೇರಿ
ಎಸೆವೊ ಮಾಣಿಕ್ಯದ ರಥಗಳನೇರಿಕೊಂಡು
ಹಸುರು ಛತ್ತರಿಗಿ ನೆರಳೀಲಿ (ಳಲ್ಲಿ ?) ೪

ನಂದಗೋಪನ ಗೋಪೀಕಂದ ಭೀಮೇಶಕೃಷ್ಣ
ಇಂದುಮುಖಿಯರ ಸಹಿತಾಗಿ
ಇಂದುಮುಖಿಯರ ಸಹಿತಾಗಿ ಬರುತಾರೆ
ದುಂದುಮಿ ಭೇರಿ ಬಡಿಸುತ್ತ ೫

## ಧ್ವನಿ—೭

ಭೇರಿ ಬಡಿದವೆ ತುತ್ತೂರಿ ಹಿಡಿದವೆ
ಭೇರಿ ತುತ್ತೂರಿ ನಗಾರಿ ನಾಗಸ್ವರಗಳಿಂದ ಪ.

ದೇವ ದೇವೊತ್ತಮ ಬಲರಾಮ ದೇವತೆಗಳ ಕೂಡಿ
ರೇವತೀದೇವಿ ಸಹಿತಾಗಿ ಬರುತಾರೆಂದು ಬ್ಯಾಗ
ರೇವತೀದೇವಿ ಸಹಿತಾಗಿ ಬಲರಾಮ
ಸಾಮಜಪುರಕೆ ಬರುತಾರೆ ಬರುತಾರೆಂದು ಬ್ಯಾಗ ೧

ಹತ್ತು ಆರು ಸಾವಿರ ಪತ್ನಿಯರೆಲ್ಲರು ಕೂಡಿ
ಮುತ್ತು ಮಾಣಿಕ್ಯದ ರಥವೇರಿ ಬರುತಾರೆಂದು ಬ್ಯಾಗ
ಮುತ್ತು ಮಾಣಿಕ್ಯದ ರಥಗಳನೇರಿಕೊಂಡು
ಮಿತ್ರೆಯರೆಲ್ಲ ಬರುತಾರೆ ಬರುತಾರೆಂದು ಬ್ಯಾಗ ೨

ನೂರುಮಂದಿ ಕೃಷ್ಣನ ರಾಣಿಯರೆಲ್ಲರು ಕೂಡಿ
ಆಣಿ ಮುತ್ತಿನ ರಥವೇರಿ ಬರುತಾರೆಂದು ಬ್ಯಾಗ
ಆಣಿ ಮುತ್ತಿನ ರಥಗಳನೇರಿಕೊಂಡು
ಜಾಣೆಯರೆಲ್ಲ ಬರುತಾರೆ ಬರುತಾರೆಂದು ಬ್ಯಾಗ ೩

ಆರು ಮಂದಿ ಕೃಷ್ಣನ ನೈಯಾರಿಯರಾನೆಯನೇರಿ
ನೂರು ಛತ್ತರಿಗಿ ನೆರಳೀಲಿ (ಳಲಿ ?) ಬರುತಾರೆಂದು ಬ್ಯಾಗ
ನೂರು ಛತ್ತರಿಗಿ ನೆರಳೀಲೆ ಜಾಂಬುವತಿ
ನೀಲ ಕಾಳಿಂದಿ ಬರುತಾರೆ ಬರುತಾರೆಂದು ಬ್ಯಾಗ ೪

ಎಂಟು ಮಂದಿ ಸತಿಯರಿಂಪ್ವೈಕುಂಠಪತಿ ಭೀಮೇಶಕೃಷ್ಣ
ಕಂಠದಾಭರಣ ಹೊಳೆಯುತ ಬರುತಾರೆಂದು ಬ್ಯಾಗ
ಕಂಠದಾಭರಣ ಹೊಳಯುತ ಲಕ್ಷಣಾ ಭದ್ರೆ
ಕಾಂತೆ ಮಿತ್ರೆ ಸಾಗಿ ಬರುತಾರೆ ಬರುತಾರೆಂದು ಬ್ಯಾಗ ೫

ಧ್ವನಿ—೮

ಇಂದ್ರ್ಯಾರೀ ಪುರದಲಿ ಬಂದರು ನೋಡೆ
ಇಂದಿರಾಪತಿ ಜೋಡೆ ಪ.

ಧೀರಧೀರರು ತಮ್ಮ ತೇರು ವಾಜಿಯನೇರಿ
ಊರುಹಿಡಿಯದೆ ಬರುತಾರೆ
ಊರುಹಿಡಿಯದೆ ಬರುತಾರೆ
ಗಂಗನಂಗಾಲಜೆಲ್ವಿಕೆಗೆ ಸರಿಯಿಲ್ಲ ೧

ಸಕಲರಾಯರು ತಾವು ಮಕರಕುಂಡಲವಿಟ್ಟು
ಸಕಲ ಸಂಭ್ರಮದಿ ಬರುತಾರೆ
ಸಕಲ ಸಂಭ್ರಮದಿ ಬರುತಾರೆ
ರಂಗನ ನಖದ ಚೆಲ್ವಿಕೆಗೆ ಸರಿಯಿಲ್ಲ ೨

ಅಷ್ಟದಿಕ್ಕಿನ ಜನರು ಶೃಂಗಾರವಾಗಿ
ಅಟ್ಟ್ಹಾಸದಿಂದ ಬರುತಾರೆ
ಅಟ್ಟ್ಹಾಸದಿಂದ ಬರುತಾರೆ
ರಂಗನುಂಗುಷ್ಟ ಚೆಲ್ವಿಕೆಗೆ ಸರಿಯಿಲ್ಲ ೩

ಭೂತಳ ಹಿಡಿಯದೆ ನೂಕಿನುಗ್ಗಾಗೋದು
ಆಕಾಶಕ್ಕಾನೆ ತುಳುಕುತ
ಆಕಾಶಕ್ಕಾನೆ ತುಳುಕೋ ಅಂಬಾರಿನೇರಿ
ಯಶೋದ ರೋಹಿಣಿಯು ಬರುತಾರೆ ೪

ನೀಲದ ಎಡಬಲ ಆಣಿಮುತ್ತಿಟ್ಟಂತೆ
ಭೀಮೇಶ ಕೃಷ್ಣನರಸ್ಯೇರು
ಭೀಮೇಶಕೃಷ್ಣನರಸ್ಯೇರು
ರುಕ್ಮಿಣಿ ಭಾಮೆ ಪ್ರೇಮದಿ ನಗುತ ಬರುತಾರೆ ೫

ಧ್ವನಿ—೯

ರಂಗ ಕರಿಪುರಕ್ಹೊರಟ ಕಾರಣವೇನೆ
ರಂಗ ಕರಿಪುರಕ್ಹೊರಟ
ಕರುಣಾಸಾಗರ ಕರಿವರದನೆ ಪ.

ದೊರೆದೊರೆಗಳು ಕೂಡಿ ಭರದಿಂದ ಬರುವಾಗ
ಬಿರುದಿನ ಕಾಳೆ ಚೀರುವುದೇನೆ
ಬಿರುದಿನ ಕಾಳೆ ಚೀರುವುದೇನೆ ಹಸ್ತಿನಾ-
ನಗರಕ್ಕೀ ಜನರು ಪೋಗುವರೇನೆ ೧

ಹತ್ತುಸಾವಿರ ಹಗಲಬತ್ತಿಗಳ್ಹಿಡಿದಾವೆ
ಚಕ್ರಬಾಣಗಳೇ ಬಿಡುತಾವೆ
ಚಕ್ರಬಾಣಗಳೇ ಬಿಡುತಾವೆ ಎದುರಿಗೆ
ನರ್ತನ ಮಾಡುವರು ಕಡೆಯಿಲ್ಲ ೨

ನಗಧರ ಹರಿಯು ತಾ ಖಗವೇರಿ ಬರುವಾಗ
ಗಗನಕ್ಕೆ ಬಿರುಸು ಬಿಡುವರೇನೆ ಗಗನಕ್ಕೆ ಬಿರುಸು ಬಿಡುವರೇನೆ
ರಂಗಯ್ಯ ಜಗದಾಧಿಪತಿಯು ಬರುವೋನೇನೆ ೩

ಲಕ್ಷಸೂರ್‍ಯರ ಕಾಂತಿ ಲಕ್ಷಿಲ್ಲದಡಗಿಸಿ
ಪಕ್ಷಿಯನೇರಿ ಬರುವೊನೇನೆ ಪಕ್ಷಿಯನೇರಿ ಬರುವೊನೇನೆ ಈ ಕಮ-
ಲಾಕ್ಷಗಿನ್ನಾರು ಸರಿಯಿಲ್ಲೆ ೪

ಅಷ್ಟರೊಳಗೂ ಮಹ ಶ್ರೇಷ್ಠ ಭೀಮೇಶಕೃಷ್ಣ
ಪಟ್ಟದರಸಿ ರುಕ್ಮಿಣಿಯೇನೆ ಪಟ್ಟದರಸಿ ರುಕ್ಮಿಣಿ ಭಾಮೆ ಚೆಲುವಿಕಿ-
ನ್ನೆಷ್ಟು ವರ್ಣಿಸಲೆಮಗ್ವಶವೇನೆ ೫

ಧ್ವನಿ—೧೦

ಗರುಡವಾಹನ ಬಂದ ಗಜಪುರಕೆ
ಮಡದಿ ರುಕ್ಮಿಣಿ ಭಾಮೇರೆಡಬಲಕೆ ಪ.

ಹತ್ತುವ ಗರುಡಗೆ ಪುತ್ಥಳಿ ಪದಕವೆ
ಮುತ್ತು ಮಾಣಿಕ್ಯದ ಮುಕುಟವೆ
ಮುತ್ತು ಮಾಣಿಕ್ಯದ ಮುಕುಟವೆ ರಂಗಯ್ಯ
ಹತ್ತುವ ಗರುಡನ ಸೊಬಗೆಷ್ಟೆ ೧

ಹಾರುವ ಗರುಡಗೆ ಹಾರ ಪದಕವೆಷ್ಟೆ-
ಕಾಲಲಂದಿಗೆ ಕಿರುಗೆಜ್ಜೆ
ಕಾಲಲಂದಿಗೆ ಕಿರುಗೆಜ್ಜೆ ರಂಗಯ್ಯ
ಏರುವ ಗರುಡನ ಸೊಬಗೆಷ್ಟೆ ೨

ವಾರ ನಾರಿಯರು ವೈಯಾರದಿ ಕುಣಿಯುತ
ಊರ್ವಸಿ ರಂಭೇರೆದುರಿಗೆ
ಊರ್ವಸಿ ರಂಭೇರೆದುರು ಗಂಧರ್ವರು
ಗಾಯನ ಮಾಡೋ ಸೊಬಗೆಷ್ಟೆ ೩

ಕದಳಿ ಖರ್ಜೂರ ಕಿತ್ತಳಿ ನಾರಿಕೇಳವು
ಅದುಭುತವಾದ ಹಲಸೆಷ್ಟೆ
ಅದುಭುತವಾದ ಹಲಸು ಮಾವಿನ ಹಣ್ಣು
ಗಜದ ಮ್ಯಾಲೇರಿ ಬರುವುದೆಷ್ಟೆ ೪

ಅಪ್ಪಾಲು ಅತಿರಸ ಒಪ್ಪುಳ್ಳ ಲಡ್ಡಿಗೆ
ಸಕ್ಕರೆ ಹೇರು ಸಾಲುಗಳೆಷ್ಟೆ
ಸಕ್ಕರೆ ಹೇರು ಸಾಲುಗಳೆಷ್ಟೆ ಮುಯ್ಯಕ್ಕೆ
ಒಪ್ಪದಿಂದ್ಹೊತ್ತು ಸಾಗುವುದೆಷ್ಟೆ ೫

ಹಾಲು ಮೊಸರಿನ ಕುಂಭ ಮೇಲಾದ ಘೃತ ಬೆಣ್ಣೆ
ಯಾಲಕ್ಕಿ ಹೇರಲೆ ಅಡಿಕೆಯೆಷ್ಟೆ
ಯಾಲಕ್ಕಿ ಹೇರಲೆ ಅಡಿಕೆ ಊದಿನ ಕಡ್ಡಿ
ಸಾಲುಸಾಲಾಗಿ ಬರುವುದೆಷ್ಟೆ ೬

ಅರಿಷಿಣ ಕುಂಕುಮ ಬೆರಸಿದ ಮಲ್ಲಿಗೆ
ಜರತಾರಿಜವಳಿ ಪೆಂಡಿಗಳೆಷ್ಟೆ
ಜರತಾರಿಜವಳಿ ಪೆಂಡಿಗಳೆಷ್ಟೆ ಮುಯ್ಯಕ್ಕೆ
ಸರಸದಿಂದ್ಹೊತ್ತು ಸಾಗುವುದೆಷ್ಟೆ ೭

ಗಂಧ ಪರಿಮಳ ಘಮಘಮಿಸುವ ಬುಕ್ಕಿಟ್ಟು
ದುಂಡು ಮಲ್ಲಿಗೆಯ ಹಾರಗಳೆಷ್ಟೆ
ದುಂಡು ಮಲ್ಲಿಗೆಯ ಹಾರಗಳೆಷ್ಟೆ ಮುಯ್ಯಕ್ಕೆ
ಚೆಂದದಿಂದ್ಹೊತ್ತು ಸಾಗುವುದೆಷ್ಟೆ ೮

ಗುಂಪು ಗುಂಪಾಗಿದ್ದ ಪಂಚವರ್ಣದ ಗಿಳಿ
ಪಂಚರತ್ನದಾಭರಣಗಳೆಷ್ಟೆ
ಪಂಚರತ್ನದಾಭರಣಗಳು ಭೀಮೇಶಕೃಷ್ಣ
ಪಾಂಚಾಲಿನಗರಕ್ಕೊಯ್ಯುವುದೆಷ್ಟೆ ೯

## ಧ್ವನಿ—೧೧

ಯದುನಾಥನು ಬಂದ
ಇದು ನೋಡೆ ಸಖಿ ಯದುನಾಥನು ಬಂದ
ಯದುನಾಥನು ಬಂದ ನದಿಯ ತೀರದಿ ನಿಂದ
ಸುದತಿ ರುಕ್ಮಿಣಿ ಭಾಮೆ ಮುದದಿ ಮುಯ್ಯವ
ತಂದರ್ಯದುನಾಥನು ಬಂದ ಪ.

ಕುದುರೆ ಕಾಲಾಳು ರಥಗಳಾನೆ ಸಹಿತಾಗಿ
ಹೊಗಳೋಭಟರು ಮಾಗಧ ವಂದಿಗಳ ಕೂಡಿ

ಹೊಗಳೋಭಟರು ಮಾಗಧ ವಂದಿಗಳ ಕೂಡಿ ಭರ-
ದಿಂದಲ್ಹರಿವೋ ಭಾಗೀರಥೀ ತೀರಕೆ ೧

ಕೃಷ್ಣನ ಮಗಳಿಗೆ ಬುಕ್ಕಿಟ್ಟು ಕುಂಕುಮ ಹಚ್ಚಿ
ಬಿಚ್ಚಿ ಕ್ಯಾದಿಗೆ ಮುಡಿಸಿದರ್ಹರುಷದಲಿ
ಬಿಚ್ಚಿ ಕ್ಯಾದಿಗೆ ಮುಡಿಸಿದರು ಮಲ್ಲಿಗೆ ದಂಡೆ ಕೊಟ್ಟರು
ಮರದ ಬಾಗಿನ ಹರುಷದಲಿ ೨

ಮಂದರೋದ್ಧಾರನ ಮಗಳು ಮಂದಾಕಿನಿಗಿಂದು
ಗಂಧಕುಂಕುಮ ಪರಿಮಳ ಪುಷ್ಪಗಳು
ಗಂಧಕುಂಕುಮ ಪುಷ್ಪಗಳ ಮುಡಿಸಿ ಹಾದಿ
ಸೊಂಡಿಲಪುರಕೆ ಬೇಕೆಂದು ಕೇಳುತಲಿ ೩

ಹರಿದಂಡು ಬಲವೆಲ್ಲ ಸುರನದಿಯನೆ ದಾಟಿ
ದೊರೆಯು ಧರ್ಮರ ಉಪವನವ ನೋಡುತಲಿ
ದೊರೆಯು ಧರ್ಮರ ಉಪವನವ ನೋಡುತ ನರ-
ಹರಿಯು ತಾ ಗರುಡನಿಂದಿಳಿದನಾಕ್ಷಣದಿ ೪

ಅಷ್ಟು ಜನರೂ ಮಹ ಶ್ರೀಕೃಷ್ಣನದಿಯ ದಾಟಿ
ಸತ್ಯಧರ್ಮರ ಉಪವನವ ನೋಡುತಲಿ
ಸತ್ಯಧರ್ಮರ ಉಪವನದೊಳು ಧೀರೇಶ-
ಕೃಷ್ಣ ತಾ ಗರುಡನಿಂದಿಳಿದನಾಕ್ಷಣದಿ ೫

## ಧ್ವನಿ—೧೨

ವನಜನಾಭನಸಖರ್ವನವ ನೋಡಿದಿರಾ
ವನಜಕುಸುಮ ದವನವನು ಮುಡಿದಿರಾ ಪ.

ಅತ್ತಿಯಶ್ವತ್ಥವನ ಸುತ್ತ ಸಾಲುಗಳು
ಜತ್ತಿಸರೋವರ ಚಿತ್ರಮಂಟಪವು ೧

ನಿಂಬೆ ದಾಳಿಂಬ್ರ ದೊಡ್ಡ ಜಂಬು ಫಲಗಳು
ಜಂಬುನೀರಲ ಔದುಂಬ್ರ ವೃಕ್ಷಗಳು ೨

ಹಲಸು ಮಾವಿನ ವೃಕ್ಷ ತುಳಸಿ ವನಗಳು
ಮೆಣಸು ಯಾಲಕ್ಕಿ ಕಳಿತ ಕದಳಿಯು ೩

ಮುಗಿಲು ಮುಟ್ಟುವೊ ನಾರಿಕೇಳ ವನಗಳು
ಗಗನ ತುಳುಕೋ ಪೂಗೀಫಲದ ವೃಕ್ಷಗಳು ೪

ನೆಲ್ಲಿ ಹೇರಳೆ ಕಂಚಿ ವೀಳ್ಯದೆಲೆಗಳು
ಬಲ್ಲಿದ ವನದೊಳು ಬದರಿ ಫಲಗಳು ೫

ಕಬ್ಬು ಕಡಲೆ ದ್ರಾಕ್ಷಿ ಪದ್ಮಕ್ಯಾದಿಗೆಯು
ನಿರ್ಭಯವಾಗಿ ಧ್ವನಿಕೊಡುವ ಕೋಗಿಲೆಯು ೬

ನಂದಿವರ್ಧನವು ಮಂದಾರ ಮಲ್ಲಿಗೆಯು
ಕುಂದಕುಸುಮ ಪಾರಿಜಾತವೃಕ್ಷಗಳು ೭

ಸಂಪಿಗೆ ಮರವು ಶಾವಂತಿಗೆ ವನವು
ಗುಂಪುಗುಂಪಾಗಿ ನವು(ವಿ?)ಲಾಡೋ ನರ್ತನವು ೮

ದುಂಡುಮಲ್ಲಿಗೆ ಚಕ್ರವಾಕ ಪಕ್ಷಿಗಳು
ಚೆಂದಚೆಂದದ ಗಿಳಿಹಿಂಡು ಚಾತಕವು ೯

ಕಸ್ತೂರಿ ಮೃಗಗಳು ಸಪ್ತ ತಾವುರಿ(ವರೆ?)ಯು
ಹತ್ತಿದ ಅರಿಷಿಣ ಉತ್ತುತ್ತೆ ಫಲಗಳು ೧೦

ಉತ್ತಮ ಕಮಲ ಕಪಿತ್ಥ ಫಲಗಳು
ಮತ್ತವಾದ ಭ್ರಮರ ಉನ್ನತ ಗಜಗಳು ೧೧

ಸತ್ಯಪಾಂಡವರ ಸಂರಕ್ಷಣೆ ವನವು
ಮತ್ತೆ ಭೀಮೇಶಕೃಷ್ಣಗರ್ಪಿಸಿದ್ವನವು ೧೨

## ಧ್ವನಿ—೧೩

ವನವ ನೋಡುತ ಕುಳಿತರು ಕೋಮಲಾಂಗಿಯರು ಈ ನಂ-
ದನ ದಿವ್ಯ ವನವ ನೋಡುತ ಕುಳಿತರು ಕೋಮಲಾಂಗಿಯರು ಪ.

ಕಿತ್ತಳೆ ವನದೊಳು ಕೃಷ್ಣನ ನೋಡುತ
ಪಕ್ಷಿಸರ್ಪಗಳು ಬದಿಯಲಿ
ಪಕ್ಷಿ ಸರ್ಪಗಳು ಬದಿಯಲಿ ನೋಡುತ
ಬಿಟ್ಟಾವೆ ತಮ್ಮ ವೈರವ ೧

ಹೂವಿನ ವನದಾಗೆ ದೇವರ ನೋಡುತ
ಗೋವು ವ್ಯಾಘ್ರಗಳು ಬದಿಯಲಿ
ಗೋವು ವ್ಯಾಘ್ರಗಳು ಬದಿಯಲಿ ನೋಡುತ
ಮೋಹದಿಂದ್ವೈರ ಮರೆತಾವೆ ೨

ಅರ್ಕಕೋಟಿತೇಜನಲ್ಲಿಟ್ಟು ತಮದೃಷ್ಟಿ
ಬೆಕ್ಕು ಇಲಿಗಳು ಬದಿಯಲಿ
ಬೆಕ್ಕು ಇಲಿಗಳು ಬದಿಯಲಿ ನೋಡುತ
ಮರ್ತಾವೆ ತಮ್ಮ ವೈರವ ೩

ವನಜಾಕ್ಷನರಸ್ಯೇರು ವನಮಧ್ಯ ಬರುತಿರೆ
ನವುಲು ನಾಚುತಲಿ ನಡೆದಾವೆ
ನವುಲು ನಾಚುತಲಿ ನಡೆದಾವೆ ನುಡಿದುವು
ಗಿಳಿಹಿಂಡು ಕೇಳಿ ತಲೆಬಾಗಿ ೪

ಗಜಗಮನೇರ ನೋಡಿ ಗಜ ನಾಚಿ ನಡೆದಾವೆ
ನಡುವಿಗೆ ಸಿಂಹ ತಲೆಬಾಗಿ
ನಡುವಿಗೆ ಸಿಂಹ ತಲೆಬಾಗೆ ಪನ್ನಂಗ
ಜಡೆಯ ನೋಡುತಲೆ ಹೆಡೆಮುಚ್ಚಿ ೫

ಕಾಂತೇರ ನಾಸಿಕ ಚೆಲುವಿಕೆ ನೋಡುತ
ಸಂಪಿಗೆ ತೆನೆಯು ತಲೆಬಾಗಿ
ಸಂಪಿಗೆ ತೆನೆಯು ತಲೆಬಾಗಿ ನೇತ್ರಕೆ
ಚಿಂತೆ ಮಾಡಿದವೆ ಎರಳೆಯು ೬

ತೋಳಿನ ಭಾವಕ್ಕೆ ಬಾಳೆ ಶಿರವ ಬಾಗಿ
ಭಾಳ ಬಣ್ಣಗಳ ಗಜನಿಂಬೆ
ಭಾಳ ಬಣ್ಣಗಳ ಗಜನಿಂಬೆ ನೋಡುತ ತಾ
ಹುಳಿಯೊಡೆದು ತಲೆಬಾಗೆ ೭

ರಂಭೇರ ಮುಖಕಾಂತಿ ಚಂದ್ರ ನೋಡುತ ಖಳ್ಯಾ (ಕಳೆಯು?)-
ಗುಂದಿ ತಿರುಗಿದನೆ ಅನುಗಾಲ
ಗುಂದಿ ತಿರುಗಿದನೆ ಅನುಗಾಲ ದಂತಕ್ಕೆ
ದಾಳಿಂಬ್ರ ತಾ ಬಾಯ ಬಿಡುತಾವೆ ೮

ಚೆಲ್ವೆರುಕ್ಮಿಣಿ ಭಾಮೇರಲ್ಲಿ ವೃಕ್ಷಗಳೆಲ್ಲ
ಮಲ್ಲಿಗೆ ವೃಷ್ಟಿ ಕರೆದಾವೆ
ಮಲ್ಲಿಗೆ ವೃಷ್ಟಿ ಕರೆದಾವೆ ರಂಗನ
ನಲ್ಲೇರು ಮುಡಿದು ಕುಳಿತಾರೆ ೯

ಶ್ಯಾವಂತಿಗ್ವನದಾಗೆ ಕ್ಯಾದಿಗೆ ಕುಸುಮವು
ತಾವುರಿ ಕಮಲ ಬಿಡಿಮೊಗ್ಗು
ತಾವುರಿ ಕಮಲ ಬಿಡಿಮೊಗ್ಗು ರುಕ್ಮಿಣಿ
ಭಾಮೇರು ಮುಡಿದು ಕುಳಿತಾರೆ ೧೦

ಮಿಂಚಿನಂತ್ಹೊಳೆಯುತ ಚಂಚಲಾಕ್ಷಿಯರೆಲ್ಲ
ಪಾಂಚಾಲದೇವಿ ವನದೊಳು
ಪಾಂಚಾಲದೇವಿ ವನದಿ ಬಂದಿರೋ ಸುದ್ದಿ
ಪಂಚಪಾಂಡವರಿಗರುಹ್ಯಾರೆ ೧೧

ಮೇಘ ಮಿಂಚುಗಳಂತೆ ಭೀಮೇಶಕೃಷ್ಣನು
ಭಾಮೆ ರುಕ್ಮಿಣಿಯು ಸಹಿತಾಗಿ
ಭಾಮೆ ರುಕ್ಮಿಣಿಯು ಸಹಿತ ಬಂದಿರೋ ಸುದ್ದಿ
ಸಾಮಜಪುರಕೆ ಅರುಹ್ಯಾರೆ ೧೨

### ಧ್ವನಿ—೧೪

ಹೋಗಿಬಾರಮ್ಮ ದೂತೆ
ಈ ಪುರದೊಳು ಸಾರಿ ಬಾ ಶುಭವಾರ್ತೆ
ಹೋಗಿಬಾರಮ್ಮ ದೂತೆ ದ್ವಾರಕೆ ದೊರೆಗಳು
ಈಗ ಬಂದಿರೋ ಸುದ್ದಿ
ನಾಗವೇಣಿಗೆ ಹೇಳಲ್ಹೋಗಿಬಾರಮ್ಮ ದೂತೆ ಪ.

ಚತುರಂಗ ಬಲವೆಲ್ಲ ಸಕಲ ಸೈನ್ಯವು ಕೂಡಿ
ಚತುರ್ಮುಖ ಬ್ರಹ್ಮ ಸರಸ್ವತಿ ಧರ್ಮರ ಮನೆಗೆ
ಚತುರ್ಮುಖ ಬ್ರಹ್ಮ ಸರಸ್ವತಿ ಕೃಷ್ಣನ ಸಖಿನ
ಮಂದಿರಕೆ ಬರುತಾರೆ ಧರ್ಮರ ಮನೆಗೆ ೧

ಶರಣರಕ್ಷಕ ನಾಗಾಭರಣಭೂಷಿತನಾ-
ಪರ್ಣದೇವಿಯರ ಸಹಿತಾಗಿ ಧರ್ಮರ ಮನೆಗೆ ಅ-

ಪರ್ಣದೇವಿಯರ ಸಹಿತಾಗಿ ಮಹಾರುದ್ರ
ತರಣಿ ಚಂದ್ರಮರು ಬರುತಾರೆ ಧರ್ಮರ ಮನೆಗೆ ೨

ಚಿಕ್ಕ ಯಶೋದ ಅವರಕ್ಕ ರೋಹಿಣಿಯು
ದೇವಕ್ಕಿದೇವಿಯರ ಸಹಿತಾಗಿ ಧರ್ಮರ ಮನೆಗೆ
ದೇವಕ್ಕಿದೇವಿಯರ ಸಹಿತಾಗಿ ವಸುದೇವ
ಮಕ್ಕಳ ಮನೆಗೆ ಬರುತಾರೆ ಧರ್ಮರ ಮನೆಗೆ ೩

ಭದ್ರೆ ದ್ರೌಪದಿದೇವಿ ಭಾಗ್ಯವಂತೇರ ನೋಡ-
ಲ್ಹದ್ದುವಾಹನನೆ ಹೊರಟಾನೆ ಧರ್ಮರ ಮನೆಗೆ
ಹದ್ದುವಾಹನನೆ ಹೊರಟಾನೆ ದ್ವಾರಕೆಯ-
ಲ್ಲಿದ್ದ ಜನರೆಲ್ಲ ಬರುತಾರೆ ಧರ್ಮರ ಮನೆಗೆ ೪

ಭೂಮಿಪಾಲಕ ಕೂಡಿ ಧೀರಶ್ರೀಕೃಷ್ಣ ಸತ್ಯ
ಭಾಮೆ ರುಕ್ಮಿಣಿ ಸಹಿತಾಗಿ ಧರ್ಮರ ಮನೆಗೆ
ಭಾಮೆ ರುಕ್ಮಿಣಿಯು ಸಹಿತ ಸತಿಯರೆಲ್ಲ
ಪ್ರೇಮದಿ ಮುಯ್ಯ ತರುತಾರೆ ಧರ್ಮರ ಮನೆಗೆ ೫

## ಧ್ವನಿ—೧೫

ರುಕ್ಮಿಣಿದೂತೆ ಬಂದಳು ಭರದಿಂದ ನಂದನಂದನ ನಿಮ್ಮ ಮಂದಿ-
ರಕ್ಹೊರಟಾನ್ಹೀಗೆಂದು ವಾರ್ತೆಗಳ್ಹೇಳುತ
ರುಕ್ಮಿಣಿದೂತೆ ಬಂದಳು ಭರದಿಂದ ಪ.

ಪಟ್ಟಾವಳಿಯನುಟ್ಟು ಪಚ್ಚದಾ(ಚ್ಛೆಯಾ ?)ಭರಣ
ವಿಟ್ಟು ಹಸ್ತಿಯನೇರಿ ಹರುಷದಿ ರುಕ್ಮಿಣಿದೂತೆ
ಹಸ್ತಿಯನೇರಿ ಹರುಷದಿ ದೂತ್ಯಮ್ಮ
ಪಟ್ಟಣದೊಳಗೆ ನಡೆದಳು ೧

ಅಂಗಳದೊಳಗಾನೆ ಚೆಂದದಿಂದಿಳಿದಳು
ಬಂಗಾರದಾಭರಣ ಹೊಳೆಯುತ
ಬಂಗಾರದಾಭರಣ ಹೊಳೆಯುತ್ಹೊಸ್ತಿಲು ದಾಟಿ
ಚಂದ್ರಸಾ(ಶಾ?)ಲ್ಯೊಳಗೆ ನಡೆದಳು ೨

ಹತ್ತುಸಾವಿರಮಂದಿ ಉತ್ತಮ ಋಷಿಗಳ
ತತ್ತ್ವ ಕೇಳುತಲಿ ಕುಳಿತಾನೆ

ತತ್ತ್ವ ಕೇಳುತಲಿ ಕುಳಿತಾನೆ ಧರ್ಮರಾಯ-
ಗೃಹಸ್ತವ ಮುಗಿದು ಎರಗ್ಯಾಳು ೩

ವೇದಪಾಠಕರ್ಧದಿನಾರುಸಾವಿರಮಂದಿ
ನಲ್ವತ್ತುಕೋಟಿ ಋಷಿಗಳು
ನಲ್ವತ್ತು ಕೋಟಿ ಋಷಿಗಳ ಎದುರಿಗೆ
ಹೋಗಿ ತಾ ಕರವ ಮುಗಿದಳು ೪

ಗುಣಪರಿಪೂರ್ಣ ನಿರ್ಗುಣನೆ ನಿರಾಶ್ರಯ
ನಿರುತ ಸುಖಾತ್ಮ ನಿಮ್ಮ ಬಂಧು
ನಿರುತ ಸುಖಾತ್ಮ ನಿಮ್ಮ ಬಂಧು ಭೀಮೇಶ-
ಕೃಷ್ಣನರಸಿ ಮುಯ್ಯಗಳ ತರುತಾಳೆ ೫

ಧ್ವನಿ—೧೬

ಬಂದನು ರಾಜ ಬಂದನು ಇಂದು ರಾಜಾಧಿರಾಜನ
ಮಂದಿರಕೆ ಕೃಷ್ಣ ಪ.

ರಮ್ಯವಾದ್ಸಸದಲ್ಲಿ ಜಮ್ಮನೆ ಕುಳಿತಾನೆ
ಬ್ರಹ್ಮನಯ್ಯನು ಬಂದು ಧರ್ಮರಾಯಗೆ ತಿಳಿಸೆಂದನೊ
ಕೃಷ್ಣ ಬಂದನೊ ೧

ಶ್ಯಾಮವರಣ ಕೃಷ್ಣ ಪ್ರೇಮದಿ ಬರುತಾನೆ
ಕ್ಷೇಮವಾರ್ತೆಗಳೆಲ್ಲ ಭೀಮರಾಯಗೆ ತಿಳಿಸೆಂದನೊ
ಕೃಷ್ಣ ಬಂದನೊ ೨

ಸಜ್ಜನರೊಡೆಯ ಸಾಮ್ರಾಜ್ಯಸುಖಾನಂದ
ನಿರ್ಜರೇಶನು ಬಂದ ಅರ್ಜುನರಾಯಗ್ಹೇಳೆಂದನೊ
ರಂಗ ಬಂದನೊ ೩

ಮುಕುತಿದಾಯಕ ತನ್ನ ಭಕುತಜನರ ಕೂಡಿ
ಸಕಲರು ಬರುತಾರೆ ನಕುಲರಾಯಗೆ ತಿಳಿಸೆಂದನೊ
ಕೃಷ್ಣ ಬಂದನೊ ೪

ಭೇದ ನಿಮ್ಮೊಳಗಿಲ್ಲ ಭೀಮೇಶಕೃಷ್ಣಗೆ
ಮೋದ ಬಡಿಸುವೋನು ಸಾದೇವರಾಯಗ್ಹೇಳಿಂದನೋ
ಕೃಷ್ಣ ಬಂದನೊ ೫

## ಧ್ವನಿ—೧೭

ರಂಗ ಬಂದ ವನದೊಳು
ಶೃಂಗಾರ ನೋಡುವ ಬನ್ನಿ
ಮಂಗಳಮೂರುತಿಯೆದುರು
ಮಂಗಳಾರತಿಯು ತನ್ನಿ ಪ.

ಅಂಬುಜಾಕ್ಷಿ ಅರವಿಂದ ನಯನೆ
ಚಂದ್ರವದನೆ ದ್ರೌಪದಿ ನಿನ್ನ
ಕಂಜ ಚರಣಗಳಿಗೆ ಶಿರಬಾಗಿ
ವಂದಿಸುವೆ ಲೋಕ ಸುಂದರಿ ಸುಗುಣೆ ೧

ಚಿತ್ತಗೊಟ್ಟು ಕೇಳು ತಾಯೆ
ಚಿತ್ತಜನಯ್ಯ ಬರುವುತಲ್ಹಾನೆ
ಚಿತ್ತಶುದ್ಧಳೆ ದ್ರೌಪದಿ ನಿನ್ನ
ಚಿಕ್ಕಸುಭದ್ರೆಯುರೊಡಗೂಡಿ ೨

ಅಷ್ಟಗಂಧಗಮಲು ಖರ್ಜೂರ ಬು-
ಕ್ಕಿಹ್ಟೊದಿನ ಕಡ್ಡಿ
ಅಚ್ಚಮಲ್ಲಿಗೆ ಅರಳುಮುಗ್ಗಿ (ಮೊಗ್ಗು?)
ಮುಷ್ಟಿಮುಷ್ಟಿ ಸೂರ್ಯಾಡುತ ಬನ್ನಿ ೩

ಅಚ್ಚಮುತ್ತಿನಾಭರಣವನಿಟ್ಟು
ರತ್ನಮಾಣಿಕ್ಯ ತೊಡಿಗೆಯು ತೊಟ್ಟು
ಚಿತ್ರವಿಚಿತ್ರದಂಬರವುಟ್ಟು
ಕೃಷ್ಣನೆದುರು ಸೂರ್ಯಾಡಿ ಬುಕ್ಕಿಟ್ಟು ೪

ರಥವು ತೇಜಿ ಶತಕೋಟಿ ಸೈನ್ಯ
ಸತಿಯರೆಲ್ಲರು ಶೃಂಗಾರವಾಗಿ
ಪೃಥುವಿ ಪಾಲಿಪ ಭೀಮೇಶಕೃಷ್ಣ-
ನ್ಹಿತದಿ ದಯುವ ಸೂರ್ಯಾಡುತ ಬನ್ನಿ ೫

## ಧ್ವನಿ—೧೮

ನಡೆವೆ ನಡೆವೆ ನಾರಾಯಣನಲ್ಲಿ
ಕೊಡುಕೊಡು ಕೃಷ್ಣ ಅಪ್ಪಣೆಯ ಬ್ಯಾಗನಲ್ಲಿ ಪ.

ಕೃಷ್ಣ ನಿಮ್ಮ ನೆಲೆಯ ಹೊತ್ತು ಧರಾಯಿತು
ದುಷ್ಟಮರ್ದನ ಮಹಾ ಸಿಟ್ಟು ಮಾಡುವನೆ
ದುಷ್ಟಮರ್ದನ ಮಹಾ ಸಿಟ್ಟುಮಾಡುವನೆ ಶ್ರೀ-
ಕೃಷ್ಣಗೆ ಅಂಜಿ ನಡೆವರು ಲೋಕದಲಿ ೧

ದಿಕ್ಕುದಿಕ್ಕಲಿ ಗಜ ಗಟ್ಯಾಗಿ ನಿಂತಾವೆ
ಶಕ್ರಾದಿಸುರರಷ್ಟದಿಕ್ಕು ಕಾಯುವರೆ
ಶಕ್ರಾದಿಸುರರಷ್ಟದಿಕ್ಕು ಕಾಯುಲು ಸರ್ವೋ-
ತ್ತಮನಾಜ್ಞೆ ನಡೆಸುವರೆ ಲೋಕದಲಿ ೨

ಸಾಗರ ತನ್ನೇರಿ ಮೀರದಂತಿರುವೋನು
ಸೂರ್ಯ ಚಂದ್ರ ನಕ್ಷತ್ರಗಳಿರುಳೇ ತಿರುಗುವರೆ
ಸೂರ್ಯಚಂದ್ರನಕ್ಷತ್ರಗಳಿರುಳೇ ತಿರುಗುವರು ಕೃಷ್ಣ-
ಗ್ಹಾರುವ ಗರುಡ ವಾಹನಾಗಿ ನಿಲ್ಲುವನೆ ೩

ಸುರಪತಿ ತಾ ವೃಷ್ಟಿ ಕರೆವೋನೆ ಹರಿಗಂಜಿ
ಪರಮಾತ್ಮಗ್ವಾಯು ಚಾಮರವ ಬೀಸುವನೆ
ಪರಮಾತ್ಮಗ್ವಾಯು ಚಾಮರವನ್ನು ಬೀಸಲು
ಸಿರಿ ಪಾದಸೇವಕಳಾಗಿ ನಿಂತಿಹಳೆ ೪

ವೃಕ್ಷಜಾತಿಗಳೆಲ್ಲ ತಕ್ಕಕಾಲಕೆ ಫಲ
ಪುಷ್ಪವ ಕೊಟ್ಟ್ಹರಿಗರ್ಪಿಸುತಿಹವೆ
ಪುಷ್ಪವ ಕೊಟ್ಟ್ಹರಿಗರ್ಪಿಸುತಿರಲು ಮೂ-
ರಕ್ಷದ ಹರ ಪಾದರಕ್ಷೆಯಿಡುವೊನೆ ೫

ಸಾಸಿರಮುಖಶೇಷ ಹಾಸಿಕೆಂದೆನಿಸೆ
ಬ್ಯಾಸರದೆ ಬ್ರಹ್ಮನು ಸೃಷ್ಟಿ ಮಾಡುವನಲ್ಲೆ
ಬ್ಯಾಸರದೆ ಬ್ರಹ್ಮನು ಸೃಷ್ಟಿಮಾಡುವನು ಯಮರಾಯ
ದುರುಳ ಜನರ ಶಿಕ್ಷಕ ತಾನಾಗಿಹನೆ ೬

## ಧ್ವನಿ—೨೦

ಘಲ್ಲುಘಲ್ಲೆಂಬ ಪಾದಗಳಿಗೆ ನಿಲ್ಲದೆರಗುವೆ
ಅಲ್ಲಿ ಬಹಳ ತಡವಾಯಿತು ಎಂ-
ದಿಲ್ಲಿ ಕೋಪಿಸಬ್ಯಾಡಮ್ಮ ಪ.

ಬ್ರಹ್ಮಪಿತನು ಬರುತಾನೆಂದು ಧರ್ಮರಾಯಗೆ ಹೇಳಿದೆನೆ
ತಮ್ಮಂದಿರು ನಾಲ್ವರ ಕೂಡಿ
ನಿಮ್ಮ ಕರೆಯಬರುತೇವೆಂದ ೧

ಕಾಳಿ ದ್ರೌಪದಿ ಚಿತ್ರ ಕುಸುಮಾಲಿ ಸುಭದ್ರೆಯರಿಗೆ
ಕಾಳಿಮರ್ದನ ಬರುತಾನೆಂದು
ಹೇಳಿಬಂದೆನಮ್ಮ ಕ್ಷಣದಿ ೨

ವಜ್ರಮಾಣಿಕ್ಯ ಮುತ್ತು ಬಿಗಿದ ಪ್ರಜ್ವಲಿಸುವ ಮಂಚದಲ್ಲಿ
ತಿದ್ದಿ ತಿಲಕವಿಟ್ಟು ಕುಳಿತ
ಮುದ್ದು ದ್ರೌಪದಿ ನೋಡಿಬಂದೆ ೩

ಸೃಷ್ಟಿ ಮಾಡಿದ ಬ್ರಹ್ಮ ಎರಡಕ್ಷಮಾಡಿ ಕೆಡಿಸಿದನು
ಲಕ್ಷ ಕಣ್ಣಿಂದ ನೋಡಲ್ಹೋಗ-
ಪೇಕ್ಷೆ ತೀರದಲ್ಲೆ ತಾಯೆ ೪

ಶಾಂತಧರ್ಮರಾಯರಿಗೆ ಕಾಂತೆಯಾದ ದ್ರೌಪದಿದೇವಿ
ಇಂಥ ಭೀಮೇಶಕೃಷ್ಣಗೆ ಏ-
ಕಾಂತ ಭಕ್ತಳೆನಿಸೋಳಂತೆ ೫

## ಧ್ವನಿ—೩೧

ಎಷ್ಟು ಕೌತುಕ ಕಂಡೆ ನಾಯಿನ್ನೆಷ್ಟು ಅಂಜಿದೆನೆ
ಇಷ್ಟು ಮದನನ ಬಾಲೆಯರಾಳುವರೆಷ್ಟು ಧನ್ಯರೇ ಅಮ್ಮ ಪ.

ಶಶಿಯ ವದನೆ ದ್ರೌಪದಿಗೆ ನಾ ಕುಶಲದಿಂದೆರಗಿದೆನಮ್ಮ
ದಶಪಾದವ ಕಂಡು ಪರವಶವಾಯಿತೆನ್ನ ದೇಹ ೧

ಭಕ್ತ್ಯತುಷ್ಟ ಎನಗುಣಲಿಕ್ಕಿ ವೀಳ್ಯ ಕೊಟ್ಟಳಮ್ಮ
ಹತ್ತು ಕೈ ಕಂಡು ಭಾಳ ಹುಚ್ಚುಗೊಂಡು ನಿಂತೆನಮ್ಮ ೨

ಇಂದುವದನೆ ಮುಂದೆ ನಿಂತು ಬಂದ ವಾರ್ತೆಗಳ್ಹೇಳುತಲಿದ್ದೆ
ಚಂದ್ರನಂತ್ಹೊಳೆವೈದು ಮೋರೆ ಕಂಡು ನಾ ಬೆರಗಾದೆನಮ್ಮ ೩

ಅಮ್ಮಾ ದ್ರೌಪದಿಗೈದು ಮೋರೆ ಸುಮ್ಮನೆ ನೋಡುತಲಿ ಮಾ-
ಧರ್ಮನರಸಿ ಶ್ಯಾಮಲ ಒಮ್ಮಿಂದೊಮ್ಮೆ ತೋರಿದಳಮ್ಮ ಎನಗೆ ೪

ಬಂದ ಶ್ಯಾಮಲ ಅಡಗುತಿರೆ ದೇವೇಂದ್ರನರಸಿ ತೋರಿದಳಮ್ಮ
ಇಂದು ಕಂಡ ಸೋಜಿಗ ನಾಯಿನ್ನೆಂದು ಕಾಣದ್ಹೋದೆನಮ್ಮ ೫

ಶಚಿಯು ಅಡಗೆ ಉಷೆಯು ಬಂದು ನಿಮಿಷದಲ್ಲಿ ತೋರಿದಳಮ್ಮ
ಉಷೆಯೂ ಅಡಗಲಾ ಭಾರತಿ ಬಂದು ನಸುನಗುತ ನಿಂತಳಮ್ಮ ೬

ಜ್ಯೋತಿಯಂಥ ಭಾರತಿಯಲಿ ಪಾರ್ವತಿಯು ನಾ ನೋಡಿದೆನಮ್ಮ
ಯಾತಕಿವರು ಭೀಮೇಶಕೃಷ್ಣನ್ನ ಪ್ರೀತಿ ಪಾತ್ರರಲ್ಲಿರುವೋರ್ಹೇಳಮ್ಮ ೭

## ಧ್ವನಿ—೨೨

ಅಂಜೊರ‍್ಯಾತಕೆ ದ್ರೌಪದಿಗಂಜೊರ‍್ಯಾತಕೆ
ಕಂಜಲೋಚನೆ ಕೃಷ್ಣೆದೇವೀರ ಮಂಗಳ ಮಹಿಮೆಯ ನೋಡಿ ಪ.

ಶಚಿಯು ಶ್ಯಾಮಲ ಉಷಪಾರ್ವತಿಗೆ ಚತುರ್ಮುಖ ಶಪಿಸಲು ಬ್ಯಾಗ
ಗತಿಯು ನಮಗ್ಯಾರೆನುತ ಭಾರತಿಯು ಉದರ ಸೇರಿದರಮ್ಮ ೧

ನರದೇಹದಿ ನಾಲ್ವರು ಬಂದು ಪರಪುರುಷನ ಜರಿವುದಕ್ಕೆ
ಮರುತನಿಂದ ಕೂಡಿ ತಮ್ಮ ನಿರುತಪತಿಗಳಿಂದ ರಮಿಸೋರಮ್ಮ ೨

ಕಾಳಿ ದ್ರೌಪದಿ ಇಂದ್ರಶಯನಳಾ(ಸೇನೆಯಾ?)ಗಿ ದ್ರುಪದರಾಯ-
ನಲ್ಲಿ ಹೋಮಕುಂಡದೊಳಗೆ ಉದಿಸಿದೀ ಮಹಾಮಹಿಮಳ ನೋಡಿ ೩

ಈಕೆ ಅಜನ ಪಟ್ಟದರಾಣಿ ಲೋಕದೊಳಗೆ ಉತ್ತಮಳು ವಾಣಿ
ಈಕೆ ಮಹಿಮೆ ಕೇಳಿದವರ ಅನೇಕ ದೋಷ ಕಳೆವ ಜಾಣೆ(ಣೆ?) ೪

ನಿತ್ಯಕನ್ನೆಯಾಗಿ ದ್ರೌಪದಿ ಸತ್ಯಪಾಂಡವರಿಂದ ರಮಿಸಿ
ಭೃತ್ಯಭಾವದಿಂದ ಭೀಮೇಶಕೃಷ್ಣನ್ನಾಲಿಸಿದಂಥ ಸುಜನೆ ೫

## ಧ್ವನಿ—೨೩

ಬರುತಾಳ್ನೋಡಿ ನಿಮ್ಮ ಕರೆಯ ದ್ರೌಪದಿದೇವಿ ಬರುತಾಳ್ನೋಡಿಯೆ
ಪರಿಚಾರಕರಿಂದ ಪರಿವಾರಿತ(ವೃತ?)ಳಾಗಿ
ಸರಿಮಾತಾಡದೆ ಸರಿದು ಹಿಂದಕೆ ನೀರೆ ಪ.

ಅಮ್ಮ ದ್ರೌಪದಿ ಸಕಲರ ಶಿಕ್ಷಕ ಯಮ-
ಧರ್ಮನರಸಿ ಶ್ಯಾಮಲವೇನೇರ ಕೂಡಿ ೧

ಚಿನ್ನದಾಭರಣ ಚಂಪಿಕಕಾಂತಿ ಹೊಳೆವ್ರೋ ವೈ-
ಗಣ್ಣಿನರಸನರ್ಧಾಂಗಿ ಶಚಿಯು ಕೂಡಿ ೨

ಅಂಕಾರಕ್ಕಭಿಮಾನಿ ತ್ರಿಣೇತ್ರನ ಸತಿ
ಪಂಕಜಮುಖಿ ಪಾರ್ವತಿದೇವ್ಯೇರ ಕೂಡಿ ೩

ಉಷಾದೇವ್ಯೇರ ಧರಿಸಿದ್ದರುಷದಿ ಮಾರುತನ-
ರಸಿ ಭಾರತಿದೇವಿ ಸರಸದಿಂದಲಿ ಬ್ಯಾಗ ೪

ತ್ವರಿತದಿ ಭೀಮೇಶಕೃಷ್ಣನ್ವಲ್ಲಭೆ ನಿನ್ನ
ಚರಣಕಮಲ ನೋಡಿ ಭರದಿಂದ ದ್ರೌಪದಿ ೫

ಧ್ವನಿ—೨೪

ಎದ್ದನಮ್ಮ ಕಾಳಿಮರ್ದನ ಪಾಂಡವ-
ರಿದ್ದ ಪಟ್ಟಣಕ್ಕನಿರುದ್ಧ ಬ್ಯಾಗದಲಿ ಪ.

ಸುದ್ದಿ ಕೇಳುತ ಹರಿ ಪದ್ಮಪಾದಗಳಿಂದ
ಹದ್ದನೇರಿದನೆ ಹರುಷದಿ
ಹದ್ದನೇರಿದನೆ ಹರುಷದಿ ರಂಗಯ್ಯ
ಅರ್ಜುನರಾಯನರಮನೆಗೆ ೧

ಸೊಂಡಿಲುಪುರದಲ್ಲಿ ಸೊಂಡಿಲು ಬೀಸುತ್ತ
ಹೊಂದಿನಿಂತಿದ್ದ ಗಜಗಳು
ಹೊಂದಿನಿಂತಿದ್ದ ಗಜವು ಗಜಪುರದಲ್ಲಿ
ಅಂದಣ ಪಲ್ಲಕ್ಕಿ ನಡೆದಾವೆ ೨

ಊರ ಬಾಗಿಲ ಮುಂದೆ ಮೇಲಾದ ಗೋಪುರ
ನೀಲಮಾಣಿಕ್ಯದ ಕಳಸವು
ನೀಲಮಾಣಿಕ್ಯದ ಕಳಸ ಕನ್ನಡಿ ಮಾಲು
ಏರಿ ನೋಡುವರು ಕಡೆಯಿಲ್ಲ ೩

ಪಟ್ಟಣ ದ್ವಾರಕೆ ಮುತ್ತಿನ ತ್ವಾ(ತೋ ?)ರಣ
ರತ್ನದುಪ್ಪರಿಗೆ ಕಿಟಕಿಯು

ರತ್ನದುಪ್ಪರಿಗೆ ಕಿಟಕಿ ಕನ್ನಡಿಸಾ(ಮಹ ?)ಲು
ಹತ್ತಿ ನೋಡುವರು ಕಡೆಯಿಲ್ಲ ೪

ತುಂಬಿದ ಕೊಡಗಳು ತೆಂಗಿನ ಕಾಯ್ಗಳು
ದುಂಡುಮಲ್ಲಿಗೆಯು ಮುಡಿದಾರೆ
ದುಂಡುಮಲ್ಲಿಗೆಯು ಮುಡಿದ ಮುತ್ತೈದೇರ
ಕಂಡ ರಂಗಯ್ಯ ಶಕುನವ ೫

ಹಾಲು ಮೊಸರಿನ ಕುಂಭ ಬಾಳೆಹಣ್ಣಿನ ಗೊನೆ
ನಾಗಸಂಪಿಗೆಯು ಮುಡಿದಾರೆ
ನಾಗಸಂಪಿಗೆಯು ಮುಡಿದ ಮುತ್ತೈದೇರ
ಸ್ವಾಮಿ ತಾ ಕಂಡ ಶಕುನವ ೬

ಬಾಜಾರದೊಳಗೆಲ್ಲ ಶ್ರೀಗಂಧ ತೊಳೆಕೊಟ್ಟು
ಜಾಜಿ ಮಲ್ಲಿಗೆಯು ಬಿಡಿ ಮೊಗ್ಗು
ಜಾಜಿ ಮಲ್ಲಿಗೆಯು ಬಿಡಿ ಮೊಗ್ಗು ಹರವಿದ
ಬೀದೀಲಿ ಕೃಷ್ಣ ಬರುತಾನೆ ೭

ಗಚ್ಚು ವೃಂದಾವನ ಕಟ್ಟಿ ಕಾರಂಜಿಯು
ಚಿತ್ರವಿಚಿತ್ರದ್ಹಲಿಗೆಯು
ಚಿತ್ರವಿಚಿತ್ರದ್ಹಲಿಗೆ ಚಿನ್ನದ ಗರಿ
ಚಪ್ರಕ್ಕೆ ಗೊಂಡ್ಯ ಅಲೆಯುತ ೮

ಅಂಗಳದೊಳಗೆಲ್ಲ ಚಂದ್ರಜ್ಯೋತಿಗಳ್ಹಚ್ಚಿ
ಚೆಂದುಳ್ಳ ಬಾಣ ಬಿರುಸಿಲೆ
ಚೆಂದುಳ್ಳ ಬಾಣ ಬಿರುಸಿಲೆ ಭೀಮೇಶಕೃಷ್ಣ
ಬಂದು ತಾ ಗರುಡನಿಂದಿಳಿದನು ೯

ಧ್ವನಿ—೨೫

ಬಂದ ಬಂದ ದೇವೇಂದ್ರಸುತನ ದಿವ್ಯ
ಮಂದಿರಕ್ಕೆ ಮುಚುಕುಂದವರದ ಕೃಷ್ಣ
ಬಂದ ಬಂದನೊ

ವೇದೋದ್ಧಾರ ಪೊತ್ತಿರುವ ಮಂದಾರವೊ
ಸುಂದರದ್ವಾರ ಹಾಕಿದ ಕರುಳ ಹಾರ ೧

ಪೃಥ್ವಿಯನಳೆದ ಕ್ಷತ್ರೇರನಳೆದ ರಾಕ್ಷಸಾರಿಯೆ
ಗೋಪಿಯರ್ವಸ್ತ್ರವ ಸೆಳೆದ ೨

ವಸನವ ತೊರೆವ ಅಶ್ವವನೇರಿ ಮೆರೆವ
ವಾಸವಿಯ ಮಂದಿರಕ್ಕೆ ಭೀಮೇಶಕೃಷ್ಣ ಬರುವ ೩

ಧ್ವನಿ—೨೬

ಏಳೋ ಅರ್ಜುನ ಬ್ಯಾಗನೆ
ಏಳೋ ಅರ್ಜುನರಾಯ ಬಹಳ್ಹರುಷದಿಂದ
ಕಾಳಿಮರ್ದನ ಬಂದ ಕರೆಯಲು ಪ.

ಹರಿ ಬಂದ ವಾರ್ತೆಯು ದೊರೆಯು ಧರ್ಮಜ ಕೇಳಿ
ಪರಮಭಕ್ತಿಯಲಿ ಪಾರ್ಥನ ಮುಂದೆ
ಪರಮ ಭಕ್ತಿಯಲಿ ಪಾರ್ಥನ ಮುಂದೆ ನುಡಿದ ಶ್ರೀ-
ಹರಿಯು ಬಂದದ್ದು ನೀವರಿಯಿರಾ ೧

ಸೂತ ಮಾಗಧರು ಪ್ರಖ್ಯಾತಿಯಿಂದ್ಹೊಗಳೋರು
ದಾವಾತನ ಮಹಿಮೆ ಕೊಂಡಾಡುತ
ದಾವಾತನ ಮಹಿಮೆ ಕೊಂಡಾಡುತ ಹೊರಗೆ ಶ್ರೀ-
ನಾಥ ಬಂದದ್ದು ನೀವರಿಯಿರಾ ೨

ದುಂದುಮಿ ಶತಭೇರಿ ಒಂದಾಗಿ ಬಡಿಯಲಾ-
ನಂದವಾದ್ಯವು ಕರ್ಣಕೆಸೆವುದೊ
ಆನಂದವಾದ್ಯವು ಕರ್ಣಕ್ಕೆಸೆವುದೊ ಹೊರಗೆ ಗೋ-
ವಿಂದ ಬಂದದ್ದು ನೀವರಿಯಿರಾ ೩

ಚೀರೋ ಚಿನ್ನದ ಕಾಳಿ(ಕಹಳೆ ?) ಸುಂದರ ಪುರುಷನ
ವೇದಶ್ರುತಿಗಳು ಸಾರುತಲಿವೆ
ವೇದಶ್ರುತಿಗಳು ಸಾರುತಲಿವೆ ಹೊರಗೆ ಶ್ರೀ-
ಲೋಲ ಬಂದದ್ದು ನೀವರಿಯಿರಾ ೪

ರುಕ್ಮಿಣಿ ಮೊದಲಾದ ಅಷ್ಟ ಮಾಸತಿಯರು
ಮಿತ್ರೆ ಕಾಳಿಂದಿ ಲಕ್ಷಣೆ ಭದ್ರೆ
ಮಿತ್ರೆಕಾಳಿಂದಿ ಲಕ್ಷಣೆ ಭದ್ರೆ ಸಹಿತ ಮಾ-
ಲಕ್ಷ್ಮಿ ಬಂದದ್ದು ನೀವರಿಯಿರಾ ೫

ಮೂರು ಕಣ್ಣವ ನಾಲ್ಕು ಮೊರಿ(ಮೋರೆ?) ಮಹಾತ್ಮರು
ಶೂರ ಸುರೇಂದ್ರ ಸುಜನರೆಲ್ಲ
ಶೂರ ಸುರೇಂದ್ರ ಸುಜನರ ಸಹಿತ ಬಲ-
ರಾಮ ಬಂದದ್ದು ನೀವರಿಯಿರಾ ೬

ವಸಿಷ್ಠ ಗೌತಮ ಭಾರದ್ವಾಜಾಂಗೀರಸ ವಿಶ್ವಾ-
ಮಿತ್ರ ನಾರದ ದೇವಋಷಿಗಳು
ಮಿತ್ರ ನಾರದ ದೇವಋಷಿಗಳು ಭೀಮೇಶ-
ಕೃಷ್ಣ ಬಂದದ್ದು ನೀವರಿಯಿರಾ ೭

## ಧ್ವನಿ—೨೭

ಅಣ್ಣ ನಮ್ಮನೆಗೆ ಬಂದರೇನೋ ಕಾಗೋದೊ
ಬೆಣ್ಣೆಕಳ್ಳ ಸುಭದ್ರನಣ್ಣ ಗೋಪಾಲಕ ಪ.

ಅರ್ಧರಾತ್ರಿಯಲ್ಲಿ ಆಕಳ ಹಿಂಡು ಕಾಯುವ
ಮುದ್ದು ಗೋಪೇರ ಮೋಹಿಸಿ ಕೊಳಲೂದುವ ೧

ಚೋರತನಗಳಿಂದ ಸೀರೆಗಳನು ಕದ್ದು
ಜಾರನೆನಿಸುವಂಥ ಶೂರ ಸುಂದರನು ೨

ಗವರಿ(ಗೌರಿ) ನೋಡುವರ ಬತ್ತಲೆ ತಿರುಗಿಸಿದಂಥ
ಶವರಿ (ಶೌರಿ?) ಭೀಮೇಶಕೃಷ್ಣ ನಿರವಸ್ಪರಣೆಸಲಾರೆ ೩

## ಧ್ವನಿ—೨೮

ಒಡಗೊಂಡು ಬಾ ಪಾರ್ಥ ಒಡೆಯ ರಂಗಯ್ಯನ
ಒಡಗೊಂಡು ಬಾ ಪಾರ್ಥ ಬಿಡುವೋದ್ಯಾತಕೊ
ಪಾಲ್ಗಡಲಶಯನನ ಪ.

ಗಂಗಾ ಉದಕ ತಂದು ರಂಗನ ಪಾದಾರ-
ವಿಂದವ ತೊಳೆದು ಆನಂದವಾಗ್ಹರಿಯ ೧

ಎಸೆವೋ ಗಂಧಾಕ್ಷತೆ ಹಸಿರು ತುಳಸಿಮಾಲೆ
ಕುಸುಮ ಮಲ್ಲಿಗೆಯ ಹಾರಗಳ್ಹಾಕಿ ಹರಿಯ ೨

ದೀಪಸಾಲುಗಳ್ಹಚ್ಚಿ ಧೂಪಾರತಿಯನೆತ್ತಿ
ಈ ಪರಿಯಲಿ ಜಗದ್ವ್ಯಾಪಕ ಹರಿಯ ೩

ಅಂಗಳದೊಳಗಾಣಿಮುತ್ತು ಸೂರ್ಯಾಡುತ
ಮಂಗಳಾರತಿಯೆತ್ತಿ ಮದನಮೂರುತಿಯು ೪

ಮ್ಯಾಲೆ ಚಾಮರ ಬೀಸಿ ಗುಲಾಲು ಬುಕ್ಕಿಟ್ಟು
ಆಲಯದೊಳು ಜಗತ್ಪಾಲಕ ಹರಿಯು ೫

ಅಚ್ಚ ಮುತ್ತಿನ ಮುಕುಟಾಭರಣವಿಟ್ಟು
ವಸ್ತ್ರವೀಳ್ಯಗಳ ಸಮರ್ಪಿಸಿ ಹರಿಯು ೬

ಭೃತ್ಯವತ್ಸಲನಾದ ಭೀಮೇಶಕೃಷ್ಣನ
ರತ್ನಮಾಣಿಕ್ಯ ಬಿಗಿದ್ವಿಚಿತ್ರ ಸಿಂಹಾಸನಕ್ಕೆ ೭

## ಧ್ವನಿ—೨೯

ಬಂದ ನೋಡೆ ಮುಚುಕುಂದವರದ ಕೃಷ್ಣ ಬಂದ ನೋಡೆ
ಮುಚುಕುಂದವರದ ಕುಂತೀಸುದ[ಸ]ರೈವರ ದಿವ್ಯಮಂದಿರಕ್ಕೆ
ಕೃಷ್ಣ ಪ.

ಚಿತ್ರಚಾವಡಿ ಮಣಿಕಟ್ಟಿನಂಗಳದಲ್ಲಿ
ಪಕ್ಷಿವಾಹನನು ಕುಳಿತಾನೆ ಕೃಷ್ಣ
ಪಕ್ಷಿವಾಹನನು ಕುಳಿತಾನೆ ಚರಣಕ್ಕೆ
ಸತ್ಯ ಪಾಂಡವರು ಎರಗ್ಯಾರು ಕೃಷ್ಣ ೧

ಎರಗಿದವರ ಬಹಳ ಕರುಣದಿಂದಲಿ ತನ್ನ
ಕರದಿಂದೆತ್ತಿದನೆ ಹರಿ ಬ್ಯಾಗ ಕೃಷ್ಣ
ಕರದಿಂದೆತ್ತಿದನೆ ಹರಿ ಬ್ಯಾಗ ತಾ ಕಣ್ಣ-
ತೆರೆದು ನೋಡಿದನೆ ದಯದಿಂದ ಕೃಷ್ಣ ೨

ಇಂದಿರಾದೇವೇರಪ್ಪುವ ನಾಲ್ಕು ಕರಭುಜ-
ದಿಂದಲಪ್ಪಿದನೆ ಹರಿ ಬಂದು ದಯ-
ದಿಂದ ಅಪ್ಪಿದನೆ ಹರಿಬಂದು ನೇತ್ರದಿ ಆ-
ನಂದ ಬಾಷ್ಪಗಳು ಉದುರುತ ಕೃಷ್ಣ ೩

ರಂಗ ತನ್ನಂಗದಾಲಿಂಗನೆಯನು ಕೊಟ್ಟು
ಕಂಗಳಿಂದುದಕ ಒರೆಸುತ ಕೃಷ್ಣ
ಕಂಗಳಿಂದುದಕ ಒರೆಸುತ ಕ್ಷೇಮವೇ-
ನೆಂದು ಕೇಳಿದನು ದಯದಿಂದ ಕೃಷ್ಣ ೪

ಹರಿಯಾಲಿಂಗನೆ ನರಜನರಿಗೆ ಉಂಟೆ
ಸುರರೊಳಗಧಿಕ ಇವರೆಂದು
ಸುರರೊಳಗಧಿಕ ಇವರೆಂದು ರಂಗಯ್ಯ
ಕರೆದಾಲಿಂಗನೆಯ ಕೊಡುವನು ಕೃಷ್ಣ ೫

ಧರ್ಮ ಭೀಮರ ಕೈಯಲಿ ಪರಿಪರಿ ಪೂಜೆಯಗೊಂಡು
ಸಿರಿದೇವ್ಯೇರ ಅರಸು ದಯದಿಂದ ಕೃಷ್ಣ
ಸಿರಿದೇವ್ಯೇರರಸು ದಯದಿ ಪಾಂಡವರಿಗೆ
ವರ ವೈಕುಂಠಗಳ ಕೊಡುವನು ಕೃಷ್ಣ ೬

ಇಷ್ಟದಾಯಕ ತನ್ನಭೀಷ್ಟ ಫಲಗಳನು
ಕೊಟ್ಟೆನು ನಿಮಗೆ ಎನುತಲಿ ಕೃಷ್ಣ
ಕೊಟ್ಟೆನು ನಿಮಗೆ ಎನುತಲಿ ಭೀಮೇಶ-
ಕೃಷ್ಣ ತಾ ನಗುತ ನುಡಿದನು [ಕೃಷ್ಣ] ೭

ಧ್ವನಿ—೩೦

ಕಂಡಿರಾ ಹರಿ ವಿಶ್ವರೂಪವ
ಪಾಂಡುಭೂಪರ ಮನೆಯಲ್ಲೀ ರೂಪವ
ಪಾಂಡುಭೂಪರ ಮನೆಯಲ್ಲೀ ರೂಪವ
ಕಂಡಿರಾ ಹರಿ ವಿಶ್ವರೂಪವ ಪ.

ಜಲಜನಾಭನ ರೂಪ ಜಲದಲ್ಲಿ ಕಾಂಬುವುದು
ಜಲನೆಲೊಂದಾಗಿ ಹೊಳೆವುದು
ಜಲನೆಲ ಒಂದಾಗಿ ಹೊಳೆವ ಮಂದಿರದಲ್ಲಿ
ಚೆಲುವ ರಂಗಯ್ನ ನಿಜರೂಪ ೧

ಸ್ಫಟಿಕಮಯವಾದ ಕಿರೀಟಯ ಮಂದಿರದಲ್ಲಿ
ವಟಪತ್ರಶಾಯಿ ಹೊಳೆವನೆ
ವಟಪತ್ರಶಾಯಿ ಹೊಳೆವನೆ ದೇವಕಿ-
ಜಠರದಿ ಬಂದ ಜಾಹ್ನವೀ ಜನಕ ೨

ಬಿಂಬನೂರುತಿ ವಜ್ರಕಂಬದೊಳಗೆ ಪ್ರತಿ-
ಬಿಂಬ ರೂಪಗಳು ಕಡೆಯಿಲ್ಲ ಪ್ರತಿ-

ಬಿಂಬರೂಪಗಳು ಕಡೆಯಿಲ್ಲ ನೋಡುತ
ಸಂಭ್ರಮವಾಗಿ ಜನರೆಲ್ಲ ೩

ಹಲವು ಕನ್ನಡಿಯಲ್ಲಿ ಹಲಧರಾನುಜನ ನೋಡಿ
ಹಲವು ಜನರಿಗೆ ದರುಶನ
ಹಲವು ಜನರಿಗೆ ದರುಶನವಾಗೋದು
ಚೆಲುವ ರಂಗಯ್ನ ನಿಜರೂಪ ೪

ಮುತ್ತು ಮಣಿಗಳಿಂದ ಕೆತ್ತಿದ ಗೋಡೆಯು-
ಲ್ಲೆತ್ತ ನೋಡಿದರೂ ಹರಿರೂಪ
ಎತ್ತ ನೋಡಿದರೂ ಹರಿರೂಪ ಭೀಮೇಶ-
ಕೃಷ್ಣಮೂರುತಿಯ ದರುಶನ ೫

## ಧ್ವನಿ—೩೧

ಗೆಜ್ಜೆ ಗಿಲುಗಿಲು ಕಾಲ ಗೆಜ್ಜೆ ಗಿಲುಗಿಲು
ಅರ್ಜುನ ರಾಯನಂಗಳದ ಒಳಗೆ ಸತಿಯರ
ಹೆಜ್ಜೆ ಗಿಲುಗಿಲು ಕಾಲ ಪ.

ಚಿತ್ರದ ಮಂಚಗಳಿಗೆ ಮುತ್ತಿನ ಲೋಡನಿಟ್ಟು
ಸತ್ಯಲೋಕಾಧಿಪತಿಯು ಮಿತ್ರೆ ಸಹಿತ ಕುಳಿತನಾಗ ೧

ಸಾಲು ಸಾಲು ಮಂಚಗಳಿಗೆ ನೀಲಮುತ್ತಿನ ಲೋಡನಿಟ್ಟು
ಮೇಲು ಮೇಲಾದ ರಾಯರು ಮೇಲು ಸ್ಥಳಕೆ ಕುಳಿತರಾಗ ೨

ರಾಮ ಮಾಧವರು ಕೂಡಿ ಆ ಮಹಾದೇವತೆಗಳಿಂದ
ಹೇಮಮಂಚದಲ್ಲಿ ಕುಳಿತು ಕ್ಷೇಮ ಕುಶಲ ಕೇಳುತಾಗ ೩

ಶೇಷನ್ನಾಸಿಕೆಯಲ್ಲಿ ಕ್ಷೀರಸಮುದ್ರವಾಸ ಬಂದು
ವಾಸವಿಯ ಮನೆಯ ರತ್ನದಾಸನದಲ್ಲಿ ಕುಳಿತ ಕೃಷ್ಣ ೪

ಸುತ್ತ ಮುತ್ತ ಸತಿಯರಾಣಿಮುತ್ತಿನಂತೆ ಹೊಳೆಯುತಿರಲು
ನಟ್ಟ ನಡುವೆ ನೀಲದ್ಹರಳಿಟ್ಟಂತೆ ಭೀಮೇಶಕೃಷ್ಣ ಕುಳಿತ ೫

## ಧ್ವನಿ—೩೨

ಹರಿ ಧರ್ಮರಾಯನ ಅರಮನೆ ದ್ವಾರಕ್ಕೆ
ಭರದಿಂದ ಬಂದ ನೋಡಮ್ಮ ಮ್ಮ
ಸರ್ವಜನರ ಸಹಿತಾಗಿ ಸುಖಾನಂದ ಭರಿತರಾಗಿ ನಿಂತರವ್ಮಮ್ಮ ಪ.

ಕಡಗ ಕಂಕಣ ಪ್ವಾರ್ಯ ನಡುವಿನೊಡ್ಯಾಣವು
ಬಿಡಿಮುತ್ತಿನ್ಹಾರ ಪದಕ ಹೊಳೆಯೆ
ಮುಡಿದ ಮಲ್ಲಿಗೆ ಪಾರಿಜಾತಗಳುದುರುತ
ಮಡದಿ ರುಕ್ಮಿಣಿ ಬಂದಳು ಅಮ್ಮಮ್ಮ ೧

ಮುತ್ತಿನ ಬಟ್ಟು ಕಸ್ತೂರಿ ಕುಂಕುಮವಿಟ್ಟು
ರತ್ನ ಮಾಣಿಕ್ಯದಾಭರಣವಿಟ್ಟು ಅಚ್ಚ–
ಮುತ್ತಿನ ದಂಡೆ ಕುಚ್ಚು ಲೋಲ್ಯಾಡುತ
ಸತ್ಯಭಾಮೆಯು ಬಂದಳಮ್ಮಮ್ಮ ೨

ದುಂಡು ಹರಡಿ ತೋಳಬಂದಿ ಕಂಕಣ ಬಾಜು–
ಬಂದಿನ ಗೊಂಡ್ಯ ಲೋಲ್ಯಾಡುತಿರೆ
ಚಂದ್ರ ಚವರಿ ಜಡೆಬಂಗಾರ ಹೊಳೆಯುತ
ಜಾಂಬವಂತಿಯು ಬಂದಳಮ್ಮಮ್ಮ ೩

ತೋಳಿಗ್ವಂಕಿಯು ಗಿಳಿಬಾಳ್ಯ ಬುಗುಡಿಯಿಟ್ಟು
ಜಾಳಿಗೆಮುತ್ತು ಜಳಜಳಿಸುತಲಿ
ಭಾಳಪರಿಯ ಬಂಗಾರಕ್ಕೆ ಬಳುಕುತ
ಕಾಳಾದೇವಿಯು ಬಂದಳಮ್ಮಮ್ಮ ೪

ಕಾಲನೂಪುರ ಗೆಜ್ಜೆ ಸಾಲುಮುತ್ತಿನ ಸರ
ವಾಲೆ ಮೂಗುತಿ ವೈಯಾರದಿಂದ
ಮೇಲುಮುಸುಕು ಜರತಾರಿ ಚಾದರ ಹೊದ್ದು
ನೀಲಾದೇವಿಯು ಬಂದಳಮ್ಮಮ್ಮ ೫

ಗೆಜ್ಜೆಕಾಲಂದಿಗೆ ಹೆಜ್ಜೆ ಕಾಲುಂಗುರ
ವಜ್ರಮಾಣಿಕ್ಯದಾಭರಣವಿಟ್ಟು
ಮುದ್ದು ಮುಖದಲಿ ಮೂರ್ಜಗವ ಮೋಹಿಸುವಂಥ
ಭದ್ರಾದೇವಿಯು ಬಂದಳಮ್ಮಮ್ಮ ೬

ಚಿತ್ರದೊಳಗಿನ ಪುತ್ಥಳಿಗೊಂಬ್ಯಂತೆ
ಚಿತ್ರವಿಚಿತ್ರದಾಭರಣವಿಟ್ಟು ನ-
ಕ್ಷತ್ರಮಾಲೆಯಂತೆ ಹೊಳೆಯುತ ಬಂದಿಲ್ಲೆ
ಮಿತ್ರೆನಿಂತಿದ್ದಳೇನಮ್ಮಮ್ಮ ೭

ವರಮಣಿಯ ವಾಲೆ ಸರಿಗೆ ಕಟ್ಟಾಣಿಯು
ಜರದ ಪೀತಾಂಬರ ನಿರಿಗಳಲ್ಲಿ
ಸರ ಪದಕವು ಸರಸದಲ್ಲಿ ಓಲಾಡುತ
ಹರದಿ ಲಕ್ಷಣೆ ಬಂದಳಮ್ಮಮ್ಮ ೮

ಸಾಲುದೀವಿಗೆಯಂತೆ ಸೋಳಸಾವಿರ ಮಂದಿ
ಹೇಮ ಮಾಣಿಕ್ಯದಾಭರಣವಿಟ್ಟು
ಪ್ರೇಮದಿಂದಲಿ ಭೀಮೇಶಕೃಷ್ಣನ ಮುಖ
ನೋಡಿ ನಗುತ ನಿಂತರಮ್ಮಮ್ಮ ೯

## ಧ್ವನಿ—೩೩

ಬಂದಳು ಭಾಮ ನಿಂತಳು ಸತ್ಯಭಾಮ
ತಂದು ಸುಭದ್ರೆ ಸುಪ್ಪತ್ತಿಗೆ ಹಾಸೆಲ್ಲ
ದುಂಡುಮಲ್ಲಿಗೆ ಮೊಗ್ಗಿಂಗಾಲಿಗೊತ್ತುವು-
ದೆಂದಳು ಭಾಮ ನಿಂತಳು ಸತ್ಯಭಾಮ ಪ.

ಸಂಪಿಗೆ ಕುಸುಮ ಹಾಸಿಲ್ಲೆ ಅಂಗಳದಿ
ಸ್ಯಾವಂತಿಗೆ ಮೊಗ್ಗ್ಯನ್ನಂಗಾಲಿಗೊತ್ತುವುದೆಂದಳು ಭಾಮೆ ೧

ಅಚ್ಚ್ಯುತರಾಯನಚ್ಚದ ಭಾಮೆಯೆದುರಿಗೆ
ಹಚ್ಚಿಟ್ಟೊದಿನಕಡ್ಡಿ ಹೊಗೆ ಭಾಳೆಂದೆನುತ ೨

ಬುಕ್ಕಿಟ್ಟು ತಂದರ್ಗ್ಗರವಿಲ್ಲೆಂದು ಭೀಮೇಶ-
ಕೃಷ್ಣನರಸಿ ಭಾಳ ಸಿಟ್ಟುಮಾಡುತ ಬಂದಳು ಭಾಮೆ ೩

## ಧ್ವನಿ—೩೪

ಕೋಲು ಕೋಲೆನ್ನಿ ಮುತ್ತಿನ ಕೋಲು ಕೋಲೆನ್ನಿ
ಬಾಲೆ ಭದ್ರೆಯು ಈಗ ಸೋಲಿಸುವ ಬನ್ನಿ ಪ.

ಹರದಿ ರುಕ್ಮಿಣಿ ನಗುತ ಕರೆದು ಭಾಮೆಯ
ಕರವ ಪಿಡಿದಳು ಭಾಮೆಯು ಸರಿಗೆ ನಿಂತಳು ೧

ರಂಭೆ ಲಕ್ಷಣಾ ಕಾಳಿಂದಿ ಭದ್ರೆಯು
ಜಾಂಬುವಂತೆರು ಭಾಮೇರೀಗೂಂದಿ ನಿಂತರು ೨

ನೀಲಾದೇವಿಯು ಮಿತ್ರೆ ಸೋಳಸಾವಿರ
ಭಾರ್ಯೇರೆಲ್ಲರು ಭಾಮೆಯು ಬಲಕೆ ನಿಂತರು ೩

ರತಿಯು ರೇವತಿ ಪಾರ್ವತಿ ಸರಸ್ವತಿ
ಸತಿಯರೆಲ್ಲರು ರುಕ್ಮಿಣಿ ಜತೆಗೆ ನಿಂತರು ೪

ಮಲ್ಲೆ ಮಲ್ಲಿಗೆ ಮುಡಿದು ಝಲ್ಲೆ ಕುಸುಮವ
ಮೆಲ್ಲುತಡಕೆಯು ವೀಳ್ಯೆಲೆ ತಾಂಬೂಲವು ೫

ಕಾಂತೆ ದ್ರೌಪದಿ ನಮ್ಮ ಕರೆಯಬಾರದೆ
ಶಾಂತ ಧರ್ಮರ ಸತಿಗೆ ಪಂಥವ್ಯಾತಕೆ ೬

ಭದ್ರಾದ್ರೌಪದಿ ಭೀಮೇಶಕೃಷ್ಣ ಸನುಜ್ಞೆಯುದ್ರ
ನಿದ್ರೆ ತಿಳಿಯದೊ ಅವರ ಬುದ್ಧಿ ಸಾಲದೊ ೭

## ಧ್ವನಿ—೩೫

ಕರೆಯ ಬಾರದೆ ಬಾಗಿ ಏನೇ ಸುಭದ್ರೆ ನಮ್ಮ
ಕರೆಯ ಬಾರದೆ ಬಾಗಿ ಸರ್ವಜನರು
ಕರಹೊಡೆದು ನಗುವರಲ್ಲೆ ಪ.

ಗಂಡರೈವರು ಎಂಬ ಗರುವಿಲೆ ದ್ರೌಪದಿ
ದಂಡೆಯ ಮಾಡಿ ಮುಡಿದಾಳೆ ಸುಭದ್ರೆ ನಮ್ಮ
ದಂಡೆಯ ಮಾಡಿ ಮುಡಿದ ಕಾರಣ ನಮ್ಮ
ಕಂಡು ಕರೀ(ರೆಯು?)ವಂಥ ಬಗೆಯಿಲ್ಲೇ ಸುಭದ್ರೆ ನಮ್ಮ ೧

ದೊರೆಗಳೈವರು ಎಂಬೋ ಗರುವಿಲೆ ದ್ರೌಪದಿ
ಸಿರಿಮದವೇರಿ ಮಲಗ್ಯಾಳೆ ಸುಭದ್ರೆ
ಸಿರಿಮದವೇರಿ ಮಲಗಿದವರು ಕಣ್ಣು-
ತೆರೆದು ನೋಡುವ ಬಗೆಯಿಲ್ಲೆ ೨

ಸಂಜೆಲಿ ಬರುವಂಥ ಕಂಜಮುಖಿಯರ ನೋಡಿ
ಅಂಜಿ ಅರ್ಭಟಿಸಿ ಮನೆಯಾಗೆ ಸುಭದ್ರೆ
ಅಂಜಿ ಅರ್ಭಟಿಸಿ ಮನೆಯಾಗೆ ಸುಭದ್ರೆ ತಾ ಧ-
ನಂಜಯನ್ಹಿಂದೆ ಅಡಗ್ಯಾಳೆ ೩

ಮುದ್ದು ರುಕ್ಮಿಣಿ ಮುಯ್ಯ ಗದ್ರಿಸ್ತಾ (ಗದರಿಸುತ?) ಬರುವಾಗ
ಸದ್ದು ಸುಳಿವಿಲ್ಲೇ ಸುಕುಮಾರಿ ಸುಭದ್ರೆ
ಸದ್ದು ಸುಳಿವಿಲ್ಲೇ ಸುಕುಮಾರಿ ಸುಭದ್ರೆ ಹೋಗಿ
ಅರ್ಜುನನ ಹಿಂದೆ ಅಡಗ್ಯಾಳೆ ೪

ಬೆಚ್ಚಿ ಬೆದರುತ ಭೀಮೇಶ ಕೃಷ್ಣನ ತಂಗೇರು
ಹುಚ್ಚುಗೊಂಡಂತೆ ಕುಳಿತರೆ ಸುಭದ್ರೆ
ಹುಚ್ಚುಗೊಂಡಂತೆ ಕುಳಿತರೆ ನಾವು ನಿಮ್ಮ
ಕಚ್ಚ ಬಂದಿಲ್ಲೇ ಹೆದರೋರೆ ಸುಭದ್ರೆ ೫

ಧ್ವನಿ—೩೬

ಏಳಿರೇಳಿರೇ ದ್ರೌಪದಿ ಭದ್ರಾ ಕೇಳ ಕೇಳಿರೆ
ಏಳಿರೇಳಿರೀರೇಳು ಲೋಕದಪತಿ-
ರಾಣಿ ತನ್ನವಚನದ ಬಾಣ ಬಿಡುತಲ್ಹಾಳೆ
ಕೇಳಿಕೇಳಿರೆ ದ್ರೌಪದಿ ಭದ್ರಾ ಪ.

ರಂಭೆದ್ರೌಪದಿ ನಿನ್ನ ಕುಂದುಗುಣಗಳೆಲ್ಲ
ಒಂದೊಂದು ಮಾಡಿ ಹರಿವೋ ರುಕ್ಮಿಣಿ ವಾಕ್ಯ
ಒಂದೊಂದು ಮಾಡಿ ಹರಿಯುತ ನಿಂತರೆ
ಬಂದ ನಾರಿಯರು ನಗುತ ರುಕ್ಮಿಣಿ ವಾಕ್ಯ ೧

ಹರದಿ ದ್ರೌಪದಿ ನಿನ್ನ ಹಗುರಾದ ಗುಣಗಳ
ಹರಿಯುತ ರಾಜಸಭೆಯಲ್ಲಿ ರುಕ್ಮಿಣಿ ವಾಕ್ಯ
ಹರಿಯುತ ರಾಜಸಭೆಯಲ್ಲಿ ನಿಂತಿರೆ ಜಗದ
ನಾರಿಯರು ನಗುತ ರುಕ್ಮಿಣಿ ವಾಕ್ಯ ೨

ಇಲಿಯು ಬೆಕ್ಕಿಗೆ ಅಂಜಿ ಒಲೆಯ ಸೇರಿದಂತೆ
ಹಲಧರಾನುಜನ ಅರಸಿ ರುಕ್ಮಿಣಿವಾಕ್ಯ

ಹಲಧರಾನುಜನ ಅರಸಿ ರುಕ್ಮಿಣಿಗಂಜಿ
ತಲೆಯು ತಗ್ಗಿಸಿದ ಪರಿಯೇ ರುಕ್ಮಿಣಿ ವಾಕ್ಯ ೩

ಬೆಕ್ಕಿಗೆ ಇಲಿ ಅಂಜಿ ಹೊಕ್ಕು ಪೊರಪದಂತೆ
ಹಕ್ಕಿವಾಹನನ ಅರಸಿ ರುಕ್ಮಿಣಿ ವಾಕ್ಯ
ಹಕ್ಕಿವಾಹನನ ಅರಸಿ ರುಕ್ಮಿಣಿಗಂಜಿ
ಮಿಕ್ಕನಾರಿಯರು ನಗುತ ರುಕ್ಮಿಣಿ ವಾಕ್ಯ ೪

ಸಣ್ಣ ಸುಭದ್ರೆ ನಿಮ್ಮಣ್ಣ ಭೀಮೇಶಕೃಷ್ಣ
ಕಣ್ಣಬಿಡುತಲಿ ಕುಳಿತ ರುಕ್ಮಿಣಿ ವಾಕ್ಯ
ಕಣ್ಣಬಿಡುತಲಿ ಕುಳಿತಾನೆ ನಿಮ್ಮಣ್ಣ
ಕರ್ಣ(ನ್ಯೆ?) ರುಕ್ಮಿಣಿಯು ಸರಿಯೇ ರುಕ್ಮಿಣಿ ವಾಕ್ಯ ೫

## ಧ್ವನಿ—೩೭

ಕರಿ (ರೆಯೆ?) ಕರಿಪುರ ದೊರೆಸತಿ ಸತ್ಯ ಭಾಮೆಯರ
ಪರಿಪೂರ್ಣ ದಯವ ನೀಡುವರ ಪ್ರೇಮದಿ
ಕರಿ ಕರಿಪುರ ದೊರೆಸತಿ ಪ.

ದಿಟ್ಟತನಗಳೆಲ್ಲ ಬಿಟ್ಟು ಬಿಡೆ ನಿನ್ನ
ಶ್ರೇಷ್ಠತನಗಳೆಲ್ಲ ಕಟ್ಟಿ ಇಡೆ ಬು–
ಕ್ಕಿಟ್ಟು ಸೂರ್ಯಾಡಿ ರುಕ್ಮಿಣಿಯನೀಗ ೧

ಉತ್ತರ ಕೊಡುವುದುಚಿತವಲ್ಲವೀಗ ಸ–
ರ್ವೋತ್ತಮಳೆಂದು ನೀ ತಿಳಿಯೆ ಬ್ಯಾಗ ದ್ರೌ–
ಪದಿ ಮುತ್ತು ಸೂರ್ಯಾಡಿ ಭಾಮೆಯರನೀಗ ೨

ಮಲ್ಲ ಮರ್ದನ ಹರಿವಲ್ಲಭೇರ ಕರ–
ಪಲ್ಲವಿಡಿದು ಅತಿ ಚೆಲ್ವೆಯರ ಶಿರ–
ದಲ್ಲಿ ವೃಷ್ಟಿಯ ಮಾಡಿ ಮಲ್ಲಿಗೆಯ ೩

ಮಂದಗಮನೆ ಲೋಕಸುಂದರಿಯ ಸಮ–
ಳೆಂದಿಗೆ ಆಗುವಿ ಕ್ಷೀರನಂದನೆಯ ಅರ–
ವಿಂದಪಾದಕೆ ಮಾಡೀಗ್ವಂದನೆಯ ೪

ವಾರೆ ನೋಟದಿ ವೈಯಾರದಿಂದಲಿ ಧ-
ರ್ಮರಾಯನರಸಿ ಶೃಂಗಾರ ತೋರುತಲಿ ೧೦

ಲಕ್ಷ್ಮಿಪತಿ ಭೀಮೇಶಕೃಷ್ಣನ ನೋಡ-
ಲಕ್ಕತಂಗಿಯರು ಬಾಲಾರ್ಕನಂತೆ ಹೊಳೆಯುತ್ತ ೧೧

## ಧ್ವನಿ—೩೯

ಬಂದವರ್‍ಯಾರತಿ ಸುಂದರಿ ದ್ರೌಪದಿ
ಇಂದು ಮಾರುತಿರಾಣಿ ತಂದಳಾರತಿ
ಬಂದವರ್‍ಯಾರತಿ ಪ.

ವಸುದೇವನ ಸೊಸೆಯರಿಗೆ
ಕುಶಲದಿಂದ ಎರಗಿಬ್ಯಾಗ
ನಸುನಗುತಲಿ ರುಕ್ಮಿಣಿಮ್ಯಾಲೆ
ಕುಸುಮ ವೃಷ್ಟಿ ಕರೆದು ಕರೆಯೆ ೧

ನಂದಗೋಪನ ಸೊಸೆಯರರ-
ವಿಂದ ಪಾದಕ್ಕೆ ಎರಗಿ
ಚಂದದಿಂದ ರುಕ್ಮಿಣಿಮ್ಯಾಲೆ
ದುಂಡುಮಲ್ಲಿಗೆ ವೃಷ್ಟಿ ಕರೆಯೆ ೨

ಮಂಗಳಾಂಗಿ ರುಕ್ಮಿಣಿ ಚರಣ
ಗಂಗಾ ಉದಕದಿಂದ ತೊಳೆದು
ಅಂಗನೆಯರಾಲಿಂಗನೆಕೊಟ್ಟು
ಇಂದು ಬಾ ಬಾರೆಂದು ಕರೆಯೆ ೩

ಸತ್ಯಭಾಮೆ ರುಕ್ಮಿಣಿ ಚರಣ
ಕೃಷ್ಣೆ ಉದಕದಿಂದ ತೊಳೆದು
ಹಚ್ಚಿ ಹಣೆಗೆ ಕುಂಕುಮ ನ-
ವ್ಮುತ್ತಿಗೆ ಬಾ ಬಾರೆಂದು ಕರೆಯೆ ೪

ಶ್ರೇಷ್ಠ ಭೀಮೇಶಕೃಷ್ಣರಾಯನ
ಪಟ್ಟದರುಕ್ಮಿಣಿಗೆ ಬು-
ಕ್ಕಿಟ್ಟನುಗ್ಗಿ ಭರದಿ ಮನೆಗೆ
ದಿಟ್ಟೆ ಬಾ ಬಾರೆಂದು ಕರೆಯೆ ೫

## ಧ್ವನಿ—೪೦

ಕಮಲನಾಭನ ತೋರೆ ಕಾಂತೆ ಮುಂದಕೆ ಬಾರೆ
ಕಮಲಮುಖಿಯೆ ಕಮಲದಳನಯನೆ ಪ.

ರಂಗನರಸಿ ಮುಕುಂದನಂಘ್ರಿ ತೋರಿಸೆ
ಹೊಂಗ್ಯಾದಿಗೆ ಮುಡಿ ಹೊಸ ಮುತ್ತಿನ ಬುಗುಡಿ
ಹೊಂಗ್ಯಾದಿಗೆ ಮುಡಿ ಹೊಸ ಮುತ್ತಿನ ಬುಗುಡಿಯಿಟ್ಟು
ಸಿಂಗಾರವಾಗಿದ್ದ ಚಂದಿರಮುಖಿಯೆ ೧

ತೋರ ಮುತ್ತಿನ ಮಲಕು ಸೀರೆ ಜರದ ಬೆಳಕು
ಹಾರ ಹರಡಿ ವಂಕಿ ದ್ವಾರ‍್ಯ ಬಳೆ ಝುಳಕು
ಹಾರ ಹರಡಿ ವಂಕಿ ದ್ವಾರ‍್ಯಬಳೆ ಝುಳಕಿನ
ಮಾರನ ಜನನಿ ನಿನ್ನೊಯ್ಯಾರದೊಲವು ೨

ಮಲ್ಲ ಮರ್ದಕನ ಎಲ್ಲಿ ನೋಡಿದರಿಲ್ಲ
ಎಲ್ಲಡಗಿಸಿದ್ಹೇಳೆ ಫುಲ್ಲನಾಭನ ಸ್ತ್ರೀಯೆ
ಎಲ್ಲಡಗಿಸಿದ್ಹೇಳೆ ಫುಲ್ಲನಾಭನ ಸ್ತ್ರೀಯೆ
ನಲ್ಲ ಕೃಷ್ಣನ ತೋರೆ ಚೆಲ್ವೆರುಕ್ಮಿಣಿಯೆ ೩

ಚತುರಹಸ್ತದಿ ಚದುರೆಯೆ ನಿನ್ನಾಲಿಂಗಿಸಿ
ಮಧುವೈರಿ ತಾ ನಿನ್ನ ಸದನ ಬಿಟ್ಟಗಲವೆ
ಮಧುವೈರಿ ತಾ ನಿನ್ನ ಸದನ ಬಿಟ್ಟು ಅಗಲವೆ
ಮುದದಿಂದಿರುವ ಸೋಮವದನ ಸುಂದರನ ೪

ವಾಸುದೇವ ನಿನ್ನಲ್ಲಾವಾಸವಾಗಿರಲಿನ್ನು
ಈ ಸೆರಗೊಡ್ಡಿ ನಾ ಬೇಡಿಕೊಂಬುವೆನೆ
ಈ ಸೆರಗೊಡ್ಡಿ ನಾ ಬೇಡಿಕೊಂಬುವೆನೆ ಭೀಮೇಶ-
ಕೃಷ್ಣನೆ ಬಾಯೆನ್ನರಮನೆಗೆನುತ ೫

## ಧ್ವನಿ—೪೧

ಇಂಥ ರಂಗ ಮನೆಗೆ ಬಂದ ನೋಡೆ ನೀ
ಕಾಂತೆ ಸತ್ಯಭಾಮೆ ರುಕ್ಮಿಣಿ
ಕಾಂತೆ ಹೇಮದಂತೆ ಹೊಳೆಯುತ-
ಲಿಂಥ ರಂಗ ಮನೆಗೆ ಬಂದ ಪ.

ಪಾದದಲ್ಲಿ ಪದ್ಮರೇಖೆ ಕಾಲ ಘೋಷಣ
ಸಾಲು ಬೆರಳಿನಲ್ಲಿ ಮುದ್ರೆ ಕರದ ಭೂಷಣ
ನೀಲವರ್ಣ ನಿಂತ ನಿನ್ನಲಿ ನಿರೀಕ್ಷಣ ೧

ಕಂಠದಲ್ಲಿ ಕಂಠಿಪದಕ ಕರ್ಣಕುಂಡಲ
ಒಂಟಿ ಮುತ್ತು ಕದಪಲ್ಹೊಳೆವ ಕಮಲಲೋಚನ ವೈ-
ಕುಂಠವಾಸನಾದ ಎರಡೆಂಟುಸಾವಿರ ಸತಿಯರರಸು ೨

ವಕ್ಷಸ್ಥಳದಿ ಕೌಸ್ತುಭ ಶ್ರೀವತ್ಸಧಾರಕ
ಅಚ್ಚ ಮುತ್ತು ರತ್ನದ್ಹಾರ ಪಚ್ಚೆಪದಕ
ನಿಶ್ಚಯವಾಗಿ ನಿಂತ ನೋಡ್ವರಪ್ರದಾಯಕ ೩

ದಂತಮುಗ್ಗಿ(ಮೊಗ್ಗು?) ಶಾಂತಗುಣದ ಶ್ಯಾಮ ಸುಂದರ
ಕಂತು ಪಿತಗ್ವೊಡ್ಯಾಣ ಕಮಲ ಜರ(ಜರಿಯ?)ಪೀತಾಂಬರ
ಶಂಖ ಚಕ್ರ ಚತುರ್ಭುಜದಲಂಕೃತದರವಿಂದ ಮುಖವು ೪

ಏಸು ಸೂರ್ಯರನು ಸೋಲಿಸುವ ಪ್ರಕಾಶಿತ
ಕ್ಲೇಶ ದೋಷವನ್ನು ಕಳೆವ ನಾಶರಹಿತ ಭೀಮೇಶ-
ಕೃಷ್ಣ ಬಂದ ಸಂತೋಷದಾಯಕ ೫

ಧ್ವನಿ—೪೨

ಕಂಡು ರಂಗಗೆ ಕೈಯ ಮುಗಿದೆವಮ್ಮ ದೂ-
ರಿಂದ ಶಿರವ ಬಾಗಿ ವಂದಿಸಿದೆವೆ ಸಖಿ ಪ.

ಕಡಲಾಬ್ಧಿ ಶಯನನ ಎಡದ ಭಾಗದಲೊಂದು ಕ-
ರಡಿ ಕಂಡಂಜುತ ನಡಿಗೆ ನಿಂತವೆ ಸಖಿ ಕ-
ರಡಿ ಕಂಡಂಜುತ ನಡಿಗೆನಿಂತವೆ ರಂಗನ
ಮಡದಿ ಎಂಬೋದು ಮೊದಲರಿತು ಕೊಳ್ಳದಲೆ ೧

ವಾಸುದೇವನ ಮುಂದೆ ಸೋಸಿಲೆ ನಿಂತಾಳೆ
ಮೋಸಗಾರುತಿ ಮಾಯಾದೇವಿಯೆ ಸಖಿಯೆ
ಮೋಸಗಾರುತಿ ಮಾಯಾದೇವಿ ತಮ್ಮಣ್ಣನ
ಮೀಸೆ ತೆಗೆಸಿದ ಮಹಾಶೂರಗಿತ್ತಿಯರ ೨

ದಿಟ್ಟತನದಿ ಭೀಮೇಶಕೃಷ್ಣನ ಮುಂದೆ
ಎತ್ತಿ ಆಯುಧ ಅಷ್ಟದಿಕ್ಪಾಲರ
ಎತ್ತಿ ಆಯುಧ ಅಷ್ಟದಿಕ್ಪಾಲರ ಮುಂದೆ
ಬಿಟ್ಟು ಓಡಿಸಿದಂಥ ದುಷ್ಟ ಸತಿಯರ ಕಂಡು ೩

## ಧ್ವನಿ—೪೩

ನಮ್ಮ ಕರೆಯ ಬಂದವರ್ಯಾರಮ್ಮ ಸಭೆಯೊಳು
ಹಮ್ಮಿಲಿಂದ ಕೊಬ್ಬಿ ಮಾತಾಡೋ ಸತಿಯರು ಪ.

ಕುಂತಿದೇವಿಸುತನೆನಿಸಿದ ಶಾಂತಧರ್ಮರಾಯರಿಗೆ
ನಿಂತುಮಾಲೆ ಕೊರಳಿಗ್ಹಾಕಿದಂಥ ಸತಿಯಳು ೧

ಏಕ ಪುರುಷ ಬಾಣ ಹೊಡೆಯೆ ತಾಕಿ ಬಿದ್ದನು ಬೀಸಲೊಳಿದ
ನಾಲ್ಕು ಮಂದಿ ಪುರುಷರೊಲಿಸಿದಾಕೆ ಸತಿಯಳು ೨

ನೀಚಬುದ್ಧಿ ಕೀಚಕಗೆ ಮಾತುಕೊಟ್ಟು ಕೊಲಿಸಿ ಬಂದು
ನಾಚಿಕಿಲ್ಲದೆ ನಮ್ಮ ಎದುರು ನಿಂತ ಸತಿಯಳು ೩

ಬಿಂಕವೆಂಬ ವಂಕಿ ಬಡಿವಾರಸೆಂಬಾಭರಣವಿಟ್ಟು
ಅಂ(ಅಹಂ?)ಕಾರವೆಂಬ ಜರಿಯ ಸಾಲ್ಗಿಗೆ ಮುಡಿದ ಸತಿಯಳು ೪

ದಿಟ್ಟತನವೆಂಬಂಥ ಸೀರೆ ಉಟ್ಟು ಭೀಮೇಶಕೃಷ್ಣನಸನ್ನಿಧೆ
ಶ್ರೇಷ್ಠ ಕೊಂಬ ಗರ್ವಸ್ಥ್ಯಾಲಿಯುಟ್ಟು ಬಿಲಾಡುತ ೫

## ಧ್ವನಿ—೪೪

ಬಾರೆ ಮಾನಿನಿ ಭಾಳ ಹೊತ್ತಾಯಿತು
ಭಾರಿಗುಣಗಳೇಕೆ ಬಾರವೆ ಸಖಿಯೆ ಪ.

ಹೊಸ್ತಿಲ್ಹೊರಗೆ ನಿಂತು ನಿಷ್ಠೂರವಾಡುವಿ
ಕೃಷ್ಣರಾಮರ ಮಹಾಸಿಟ್ಟಿಗಂಜದಲೆ
ಕೃಷ್ಣರಾಮರ ಮಹಾಸಿಟ್ಟಿಗಂಜದಲಿಂಥ
ದಿಟ್ಟೆ ನಿನಗೆ ಸರಿಯಾರೆ ಲೋಕದೊಳು ೧

ಬಾಗಿಲ್ಹೊರಗೆ ನಿಂತು ಭಾಳ ಮಾತಾಡುವಿ
ರಾಮ ಕೃಷ್ಣರ ಮಹಾ ಕ್ರೋಧಕಂಜದಲೆ

ರಾಮಕೃಷ್ಣರ ಮಹಾಕ್ರೋಧಕಂಜನಲಿಂಥ
ನೀರೆ ನಿನಗೆ ಸರಿದಾರೆ ಲೋಕದೊಳು ೨

ಒಬ್ಬ ಬ್ರಾಹ್ಮಣ[ನ] ಏಕಾಂತದಿ ಕರೆದು ನೀ
ಕಬ್ಬುಬಿಲ್ಲಿನ್ಯಾಗುಬ್ಬುಬಾಣ್ಣಲಿ ಬರೆದೆ
ಕಬ್ಬು ಬಿಲ್ಲಿನ್ಯಾಗುಬ್ಬು ಬಾಣ್ಣಲಿ ಬರೆದಂಥ
ನಿರ್ಭಯ ನೋಡಿ ನಗುತಾರೆ ಸುಜನರು ೩

ಹರಿದಾರಿ ನೋಡುತ ಹರನವಲ್ಲಭೆ ಮುಂದೆ
ವರವ ಬೇಡುತಲಿ ಕುಳಿತೆಯ
ವರವ ಬೇಡುತಲಿ ಕುಳಿತೆ ರುಕ್ಮಿಣಿ ಸಹೋ-
ದರನ ಮ್ಯಾಲುಂಟೆ ಕರುಣವು ೪

ನಿಮ್ಮಣ್ಣ ರುಕುಮನು ಬೆನ್ಹತ್ತಿ ಬರುವಾಗ
ಪನ್ನಿಯ ನೀನು ತೆಗಿಸಿದೆ
ಪನ್ನಿಯ ನೀನು ತೆಗಿಸಿದೆ ಮುಖದಲ್ಲಿ
ಸುಣ್ಣದ ಬಟ್ಟನಿಡಿಸಿದೆ ೫

ಗುಣನಿಧಿ ಅನಂತಗುಣಪರಿಪೂರ್ಣನು
ಎಣಿಸದೆ ನಿಮ್ಮ ಅಪರಾಧ
ಎಣಿಸದೆ ನಿಮ್ಮ ಅಪರಾಧ ರಂಗಯ್ಯ
ಒಲಿದರೆ ಜನರು ನಮಿಸೋರೆ ೬

ದಿಟ್ಟೆ ನಿನಗೆ ಹೆತ್ತ ತಂದೆತಾಯಿಗಳೊಡ-
ಹುಟ್ಟಿದವರ ಭಯವಿಲ್ಲೆ [ಒಡ]
ಹುಟ್ಟಿದವರ ಭಯವಿಲ್ಲೆ ಭೀಮೇಶ-
ಕೃಷ್ಣನ ಮ್ಯಾಲೆ ಮನಸಿಟ್ಟು ೭

ಧ್ವನಿ—೪೫

ಭದ್ರಾ ನಿನ್ನಯ ಸುದ್ದಿಗಳ್ಹೇಳಲು ಇ-
ದ್ದಿದ್ದ ಜನರು ಕೈ ಹೊಡೆದು ನಗುವೋರೆ ಸಖಿ ೧

ರಾಯ ಕೌರವಗೆನುತ ನಿನ್ನನು ರೋಹಿ-
ಣಿಯ ಸುತನು ಪ್ರತಿಜ್ಞೆ ಮಾಡಿದ ೨

ಆಡಿದ್ವಚನವ ಕೇಳಿ ಬ್ಯಾಗನೆ
ಬಹಳ ಕೋಪ ತಾಳಿದೆ ಸಖಿ ೩

ಬರೆದ ಪತ್ರವ ಕರೆದು ಅರಗಿಳಿ
ದೊರೆಯು ಪಾರ್ಥರಿದ್ದೆಡೆಗೆ ಕಳುಹಿದೆ ಸಖಿ ೪

ನಿನ್ನಭೀಷ್ಟವ ಮನ್ನಿಸರ್ಜುನ
ಸಂನ್ಯಾಸಿ ಆಗಿ ಬ್ಯಾಗ ತೆರಳಿದ ಸಖಿ ೫

ಬಂದ ಯತಿಗಳಿಗ್ವಂದಿಸುತ ರಾಮ
ತಂದು ಅವನ ಸೇವೆಗೆ ನಿನ್ನೊಂದಿಸಿದನು ೬

ಪತಿಯು ಕಾಣದ ವ್ಯಥೆಯು ನಿನಗಿರೆ
ಯತಿಯು ತಂದು ನಿಮ್ಮಣ್ಣ ಜತೆಯು ಮಾಡಿದ ೭

ನೋಡಿ ಚೆಲುವನ ಗಾಡಿಕಾರಳೆ ಬ್ಯಾಗ-
ದಿಂದ ಸೇವೆಗೆ ಅನುಕೂಲವಾದೆಯೆ ೮

ಕಂಡು ಚೆಲುವನ ಪುಂಡಗಾರಳೆ
ಕಂಡಿರಾ ಪಾರ್ಥನ ಹಾಗೆಂದು ನುಡಿದೆಯೆ ೯

ಕೇಳಿ ಅರ್ಜುನ ಎನುತ ವಾರ್ತೆಯ
ಕಾಳರಾತ್ರಿಯಲ್ಲವನ ಕೂಡಿದೆ ಸಖಿ ೧೦

ಸದ್ದು ಮಾಡದೆ ಎದ್ದು ಬರುತಿರೆ ಅ-
ಲ್ಲಿದ್ದವರು ತಡೆಯೆ ನೀನು ಯುದ್ಧಕೆ ಕೂಡಿದೆ ೧೧

ಪತಿಗೆ ಸಾರಥಿ ಆಗಿ ರಥವ ನಡೆಸುತ
ಅತಿವೇಗದಿಂದ ಹಸ್ತಿನಾವತಿಗೆ ನಡೆದೆಯೆ ೧೨

ಬಹಳ ಗುಣಗಳ ಕೇಳಿ ರೋಹಿಣೀಯನು
ಕಾಳಿಮರ್ದನನು(ನಲಿ?)ಕೋಪ ತಾಳಿದ ಸಖಿ ೧೩

ಇಷ್ಟು ಗುಣಗಳ ಹೇಳಲ್ಹೊತ್ತು ಸಾಲದೆ
ಸಿಟ್ಟು ಬಂದಿತೆ ಭೀಮೇಶಕೃಷ್ಣಗೆ ಸಖಿ ೧೪

## ಧ್ವನಿ—೪೬

ಬಂದು ಮಾತಾಡೆನ್ನ ಮಂದಿರದೊಳಗಿಂದಿರಾ
ಭಾಮೆ ಲೋಕಸುಂದರಿ ಪ.

ವಲ್ಲಭನ ಬಿಟ್ಟು ಕೊಲ್ಲಾಪುರಕೆ ನೀ
ನಿಲ್ಲದೆ ನಡೆದೆ ನಿಮ್ಮ ಈ ಗುಣಗಳ
ನಿಲ್ಲದೆ ನಡೆದ ನಿಮ್ಮ ಈ ಗುಣವ ಕೇಳಿ
ಎಲ್ಲ ನಾರಿಯರು ನಗುತಾರೆ ಸಖಿಯೆ ೧

ಗರತಿಯರಾದರೆ ಗಂಡನ ಕೊಡುವುದು
ನಿರುತ ಸತಿಯರ ನೀತ್ಯೇನೆ ಸಖಿಯೆ
ನಿರುತ ಸತಿಯರ ನೀತ್ಯೆ ಸತ್ಯಭಾಮೆ
ಅರಸನ ದಾನ ಕೊಡುವೋರೆ ಸಖಿಯೆ ೨

ಏಕಪುಷ್ಪಕೆ ನೀನನೇಕ ಕದನ ಮಾಡಿ
ಲೋಕಾಧಿಪತಿಯು ಗಸಗುಟ್ಟಿ ಸಖಿಯೆ
ಲೋಕಾಧಿಪತಿಯು ಗಸಗುಟ್ಟಿ ತಿಕ್ಕುತ
ಪಾಕಶಾಸನನ ಜಯಿಸಿದೆ ಸಖಿಯೆ ೩

ಶಕ್ರನ ವನದೊಳಗ್ಹೊಕ್ಕು ಯುದ್ಧವ ಮಾಡಿ
ದಿಕ್ಕುಪಾಲಕರ ಧನುವೆತ್ತಿ ಸಖಿಯೆ
ದಿಕ್ಕು ಪಾಲಕರ ಧನುವೆತ್ತೋಡಿಸಿದಂತೆ
ಮಿಕ್ಕ ನಾರಿಯರು ನಗುತಾರೆ ಸಖಿಯೆ ೪

ವಜ್ರಪಾಣಿಯು ನಿರ್ಲಜ್ಜೆಯಿಂದಲಿ ಗೆದ್ದ
ಸುದ್ದಿ ಕೇಳುತಲಿ ಸುರರೆಲ್ಲ ಸಖಿಯೆ
ಸುದ್ದಿ ಕೇಳುತಲಿ ಸುರರು ನಿನ್ನಯ ಮುಖ
ಎದ್ದು ನೋಡುತಲಿ ನಗುತಾರೆ ಸಖಿಯೆ ೫

ಕಂತುಪಿತಗೆ ಶಮಂತಕ ಕಳುವಿಟ್ಟ
ಎಂಥ ಧಾರ್ಮಿಕನೆ ನಿಮ್ಮಯ್ಯ ಸಖಿಯೆ
ಎಂಥ ಧಾರ್ಮಿಕನೆ ನಿಮ್ಮಯ್ಯ ರಂಗಗೇ–
ನಂಥ ನಿಂದ್ಯಗಳ ನುಡಿವೋರೆ ಸಖಿಯೆ ೬

ಇಟ್ಟಕಳುವುದೋಷ ಬಿಟ್ಟು ಹೋಗಲೆಂದು
ಕೊಟ್ಟ ನಿಮ್ಮಯ್ಯ ನಿನ ತಂದು ಸಖಿಯೆ
ಕೊಟ್ಟ ನಿಮ್ಮಯ್ಯ ನಿನ ತಂದು ಭೀಮೇಶ-
ಕೃಷ್ಣ ತಾ ಒಲಿದ ದಯಮಾಡಿ ಸಖಿಯೆ ೭

## ಧ್ವನಿ—೪೭

ಮಾನಿನಿಮಣಿ ಕೇಳೆ ಈ ಕಾರ್ಯ-
ವಿನ್ಹ್ಯಾಗೆ ಮಾಡಿದಿ ಹೇಳೆ ಸೋ-
ಗಿನ ಗೊಂಬೆ ಸುಂದರಿ ಸುಮ್ಮನ್ಹೋಳೆ ಪ.

ಚೆನ್ನಿಗ ಪುರುಷನ ಸನ್ಯಾಸಿ ರೂಪದಿ
ಧರ್ಮನ ಎಲ್ಲಿ ಅಡಗಿಸಿದೆ
ಧರ್ಮನ ಎಲ್ಲಿ ಅಡಗಿಸಿ ನೀ ಮಾನ್ಯ
ಮಾನ್ಯರೊಳಗೆ ಕಂಕನೆನಿಸಿದೆ ಸಖಿಯೆ ೧

ಬಲವಂತ ಪುರುಷನ ಒಲೆಯ ಮುಂದೊಟ್ಟಿದೆ
ಚಲದಿಂದ ಹುಟ್ಟು ಹಿಡಿಸಿದೆ ಸಖಿಯೆ
ಚಲದಿಂದ ಹುಟ್ಟು ಹಿಡಿಸಿದೆ ಭೀಮನ
ಚೆಲ್ವಿಕೆಯೆಲ್ಲಿ ಅಡಗಿಸಿದೆ ಸಖಿಯೆ ೨

ಗಾಂಡೀವಿ ಅಡಗಿಸಿ ಬೃಹನ್ನಳೆ ಎನಿಸಿದೆ
ಹೆಂಗಸರೊಳಗೆ ಸರಿ ಮಾಡಿದೆ ಸಖಿಯೆ
ಹೆಂಗಸರೊಳಗೆ ಸರಿ ಮಾಡಿ ಗಂಡನ
ಸಂಗೀತ ಹೇಳ ಕಳಿಸಿದೆ ಸಖಿಯೆ ೩

ರಾಜ್ಯಾಧಿಪತಿ ಒಯ್ದು ತೇಜಿ ಕಾಯಲು ಹಚ್ಚಿ
ಮೋಜು ನೋಡುತಲಿ ಕುಳಿತೆಯೆ ಸಖಿಯೆ
ಮೋಜು ನೋಡುತಲಿ ಕುಳಿತೆಯೆ ನಿನ್ನ ಕೀರ್ತಿ
ಈ ಜಗದೊಳಗೆ ಬೆಳೆದಾವೆ ಸಖಿಯೆ ೪

ಚಿಕ್ಕಪುರುಷನ ನೀ ವತ್ಸ ಗೋವುಗಳ ಕಾಯ-
ಲ್ಹಚ್ಚಿದೆ ಹ್ಯಾಗೆ ಹರುಷದಿ
ಹಚ್ಚಿದೆ ಹ್ಯಾಗೆ ಹರುಷದಿ ಗಂಡನ
ಕುತ್ಸಿತರೊಳಗೆ ಸರಿ ಮಾಡಿದೆ ಸಖಿಯೆ ೫

ಗಂಡರುಳ್ಳಂಗನು ಗರಡಿ ಮನೆಯು ಪೊಕ್ಕ
ಪುಂಡ ಕೀಚಕನಿಗ್ರಚನವ ಸಖಿಯೆ
ಪುಂಡಕೀಚಕನಿಗ್ರಚನವ ಕೊಟ್ಟು ನೀ
ಕೊಂದು ಬರುವುದು ತರವೇನೆ ಸಖಿಯೆ ೬

ಇಂಥ ಗುಣಗಳು ಶ್ರೀಕಾಂತ ಭೀಮೇಶಕೃಷ್ಣ
ಅಂತರಂಗದಲಿ ಹಿಡಿಯನೆ ಸಖಿಯೆ
ಅಂತರಂಗದಲಿ ಹಿಡಿಯುದ ಕಾರಣ
ಇಂಥ ಗುಣಾಢ್ಯಳೆನಿಸಿದೆ ಸಖಿಯೆ ೭

ಧ್ವನಿ—೪೮

ಅಂಗನೆಮಣಿ ಆಲದೆಲೆಯಾಗಿ ನೀ ಮುದ್ದು
ರಂಗನ ಹ್ಯಾಗೆ ಒಲಿಸಿದೆ ಕೋಲೆ ಪ.

ಅಂಧಕಾರದಲ್ಲಿ ಅಂಬುಧಿ ಜಲದಲ್ಲಿ
ಹಿಂದೆ ಮುಂದಿಲ್ಲ ಜನಸದ್ದು ಕೋಲೆ
ಹಿಂದೆ ಮುಂದಿಲ್ಲ ಜನಸದ್ದು ಅದರೊಳು
ಹೊಂದಿತಿನ್ಹ್ಯಾಗೆ ನಿನ್ನಮನ ಕೋಲೆ ೧

ಎಳೆ ಆಲದೆಲೆಯಾಗಿ ಪ್ರಳಯುದುದಕದಲ್ಲಿ
ನಳಿನಾಕ್ಷಿ ಹ್ಯಾಗೆ ಕುಳಿತಿದ್ದೆಕೋಲೆ
ನಳಿನಾಕ್ಷಿ ಹ್ಯಾಗೆ ಕುಳಿತಿದ್ದೆ ಅದರೊಳು
ತಿಳಿಯದೆ ನಮಗೆ ನಿನಮಾಯ ಕೋಲೆ ೨

ಉಂಗುರವ್ವ ಧರಿಸಂತ್ಹೋದಿಕೊಂಡ್ಹರಿನಿನ್ನ
ಎಂದೆಂದಿಗು ಬಿಡದೆ ಎಲ ನಾರಿ ಕೋಲೆ
ಎಂದೆಂದಿಗೆ ಬಿಡದೆ ಎಲ ನಾರಿ ನಿನ ಮ್ಯಾಲೆ
ಬಂದ ಸತಿಯರ ಗತಿಯೇನು ಕೋಲೆ ೩

ಚೆಮರೆ ನೀನೊಬ್ಬಳು ಎದೆಯ ಮ್ಯಾಲಿದ್ದರೆ
ಹದಿನಾರುಸಾವಿರ ದಾಸ್ಯೇರು ಕೋಲೆ
ಹದಿನಾರುಸಾವಿರ ದಾಸ್ಯೇರು ಒಂದಾಗಿ
ಒದರಬೇಕೇನೇ ನಿನ ಸುತ್ತ ಕೋಲೆ ೪

ಮಾಸವಿಲ್ಲದಲೆ ನೀ ಭೀಮೇಶಕೃಷ್ಣನ
ವಾಮಭಾಗದಲಿ ವರ (ಒರಗಿ ?) ಕೊಂಡು ಕೋಲೆ
ವಾಮ ಭಾಗದಲಿ ವರಕೊಂಡಿದ್ದರೆ ಸತ್ಯ–
ಭಾಮೆ ಕೋಪಿಸದೆ ಬಿಡುವೋಳೆ ಕೋಲೆ ೫

ಧ್ವನಿ—೪೯

ಅತಿ ಗುಣವಂತಳಂಗನೆ ಕೃಷ್ಣ
ಜತೆಯಾಗಿ ನಾವು ಕೀರುತಿಯ
ಕೊಂಡಾಡುವೋಣತಿ ಗುಣವಂತಳಂಗನೆ ಕೃಷ್ಣ ಪ.

ಅಷ್ಟನಾರಿಯರ ತನ್ನೊಟ್ಟೆಯಲ್ಲಡಗಿಸಿ
ಪಟ್ಟದರಸಿ ನಾನೆ ಶ್ರೇಷ್ಠಳೆಂಬುವರೆ
ಪಟ್ಟದರಸಿ ನಾನೆ ಶ್ರೇಷ್ಠಳೆಂಬುದ ಕೇಳಿ
ಅಷ್ಟು ಜನರು ಬಾಯ್ ಬಿಟ್ಟು ನಗುವರಲ್ಲೆ ೧

ತನ್ನೊಳು ಶಚಿ ಶ್ಯಾಮಲ ಉಪರನಡಗಿಸಿ
ಧರ್ಮ ನಕುಲ ಸಾದೇವ ಪಾರ್ಥರನ್ನು
ಧರ್ಮ ನಕುಲ ಸಾದೇವ ಪಾರ್ಥರ
ಮೋಹವನುಬಡಿಸುವ ಸಂಪನ್ನ ಗುಣಗಳ ೨

ಅಂದು ಕೌರವ ಸೀರೆ ನಿಂದ್ರಿಸಿ ಸೆಳೆವಾಗ
ಬಂದಿತೆ ನನ್ನ ಮನಸಿಗೆ
ಬಂದಿತೆ ನನ್ನ ಮನಸಿಗೆ ದ್ರೌಪದಿ
ಕುಂದಾಗಲಿಲ್ಲೇ ನಿನ್ನ ಮಾನ ೩

ದೊರೆಯು ಕೌರವ ಸೀರೆಸೆರಗ್ಹಿಡಿದೆಳೆವಾಗ
ಸರಿಬಂತೇ ನನ್ನ ಮನಸಿಗೆ
ಸರಿಬಂತೇ ನನ್ನ ಮನಸಿಗೆ ದ್ರೌಪದಿ
ಕೊರತ್ಯಾಗಲಿಲ್ಲ ನಿನ್ನ ಮಾನ ೪

ಬಣ್ಣ ಬಣ್ಣಗಳಿಂದ ಭೀಮೇಶಕೃಷ್ಣನು
ವರಣಿಸುತಾನೆ ನಿನ್ನ ಗುಣವ
ವರಣಿಸುತಾನೆ ನಿನಗುಣ ನೀರಲಾ–
ಧ್ಯಕ್ಷ್ಣಾಗ್ಹತ್ತೀತೆ ತಲೆ ಕೆಳಗೆ ೫

## ಧ್ವನಿ—೫೦

ನೀರೆ ಬಾರೆ ಮಂದಿರಕ್ಕೆ ನೀರಜಮುಖಿ
ಮಾರಜನನಿ ಮಂದಗಮನೆ ವಾರಿಜಮುಖಿ ಪ.

ಅಂಗನೆ ಮಾಲಕುಮಿ ನೀನು ಬಂಗಾರರೂಪದಿಂದ
ಭಂಗಬಡಿಸುವಿಯೆ ಭಾಳ ಜನರನು ಸಖಿ
ಭಂಗಬಡಿಸುವಿಯೆ ಭಾಳ ಜನರನು ಹರಿಭಜಕರು
ಕಂಡರೆ ದೂರದಿ ಕೈಯು ಮುಗಿವರೆ ಸಖಿ ೧

ಇಂದಿರೆ ನೀ ಹೊಂದಿರೆ ಮದಾಂಧರೆನಿಸಿಕೊಂಬೋರಂತೆ
ತಂದೆ ಮಕ್ಕಳಿಗೆ ಕದನವೆ ಸಖಿ
ತಂದೆ ಮಕ್ಕಳಿಗೆ ಕದನವ ಹಚ್ಚುವ್ರೋದು
ಸಂದೇಹವಿಲ್ಲ ನಿನ್ನ ಗುಣವಿದು ಸಖಿ ೨

ನಿನ್ನ ಪೆಸೆಯಿಂದ ಜಗಳದೊಳನ್ಯಾಯ ನಡೆವದಲ್ಲೆ
ಹೊನ್ನು ಹೊನ್ನಿಗೆ ಪ್ರಾಣಕೊಡುವ್ರೋರೆ ಸಖಿ
ಹೊನ್ನು ಹೊನ್ನಿಗೆ ಪ್ರಾಣ ಕೊಡುವರೆ ನಿನ್ನ ಆಸೆ
ಸನ್ಯಾಸಿಗಳಿಗೆ ಮೊದಲೆ ಬಿಡದಲ್ಲೆ ಸಖಿ ೩

ಮಡದಿ ನಿನ್ನ ಕಡಿದು ಕಾಸಿ ಬಡಿದು ಬಣ್ಣ ಕೀಸೋರಂತೆ
ಬಡಿವಾರವೇನೆ ನಿನ್ನ ಮನವಿದು ಸಖಿ
ಬಡಿವಾರವೇನೆ ನಿನ್ನ ಮನದ ಅಹಂಕಾರವೆಲ್ಲ
ಬಿಡುಬಿಡು ನಮ್ಮ ಎದುರು ನಡೆಯದೇ ಸಖಿ ೪

ಅತ್ತಿಗೆಯೆ ನಿನ್ನ ಮ್ಯಾಲೆ ಮುತ್ತಿಗೆಯ ಹೆಟ್ಟಿಸ್ಯಾಕೆ
ಎತ್ತಿಮಾರುತಲೆ ಜೆಲೆ ಹಚ್ಚೋರೆ ಸಖಿ
ಎತ್ತಿ ಮಾರುತಲೆ ಜೆಲೆ ಹಚ್ಚೋರೆ ಭೀಮೇಶಕೃಷ್ಣ
ಗಟ್ಟಿಗಾರ ನಿನ್ನ ಎದೆಯಲ್ಲಿಟ್ಟನೆ ಸಖಿ ೫

## ಧ್ವನಿ—೫೧

ಬಾರೆ ಬಾರೆ ಭಲಾ ದ್ರೌಪದಿ ಭಾಳ
ದೂರ ನಿಂತಾಡಿಕೊಂಬೋದು ನೀತೆ (ತವೆ ?) ಪ.

ಘನಮಯುಗಾರಳೆ ತನುವಿನೊಳೈವರು
[1]ಜನನಿಲ್ಲದ್ಹ್ಯಾಗೆ[1] ಜನಿಸಿದೆ
ಜನನಿಲ್ಲದ್ಹ್ಯಾಗೆ ಜನಿಸಿದೆ ನಿನ-
ಗಗ್ನಿಭಯವಿಲ್ಲವೇನೆ ಭಲಾ ನಾರಿ ೧

ಉಟ್ಟ ವಸ್ತ್ರಗಳೊಂದು ಬಿಟ್ಟವಂ[ತೆ]ತೋರಿದಿ
ಎಷ್ಟು ಮಾಯಗಳ ಕಲಿತಿದ್ದೆ
ಎಷ್ಟುಮಾಯಗಳ ಕಲಿತಿದ್ದೆ ನಿನ್ನಂಥ
ದಿಟ್ಟರಿಲ್ಲೆಂದು ನಗುತಾರೆ ೨

ಒಂದು ವಸ್ತ್ರಕೆ ಮಂದರದಂತೆ ತೋರಿದಿ
ಎಂದೀ ಮಾಯಗಳ ಕಲಿತಿದ್ದೆ
ಎಂದೀ ಮಾಯಗಳ ಕಲಿತಿದ್ದೆ ನಿನಕೀರ್ತಿ
ಕೊಂಡಾಡಿ ಜನರು ನಗುತಾರೆ ೩

ಮಾಯಾವಿದ್ಯದಿ ವಸ್ತ್ರ ಮಾಡೊ ಸಾಮರ್ಥ್ಯಗಳು
ಮೂರು ಬಿಟ್ಟರಿವೆ ಮುನಿಪಗೆ
ಮೂರು ಬಿಟ್ಟರಿವೆ ಮುನಿಪಗೆ ಕೊ-
ಟ್ಟರಿನ್ನೇನೆಂಬೋರಿದಕೆ ಜನರೆಲ್ಲ ೪

ವನದೊಳಗನ್ನ ದಾನವ ಮಾಡೇನೆಂತೆಂಬೊ
ಧರುಕೇನೆ ನಿನ್ನ ಮನದಾಗೆ
ಧರುಕೇನೆ ನಿನ್ನ ಮನದಾಗೆ ನಿನ ಕೀರ್ತಿ
ದಿವಾಕರನಲ್ಲಿ ನಡೆವೋದೆ ೫

ಹಸ್ತಿವೆನುತ ಬಂದರುತ್ತಮ ಋಷಿಗಳು
ಕತ್ತಲೊಳೆತ್ತ ಕುಳಿತಿದ್ದೆ
ಕತ್ತಲೊಳೆತ್ತ ಕುಳಿತಿದ್ದೆ ನಿನ್ನುದಾ-
ರತ್ವ ತಾನೆಲ್ಲಿ ಅಡಗಿತ್ತೆ ೬

ಉಂಡೇನೆನುತ ಬಂದ ಪುಂಡರೀಕಾಕ್ಷಗೆ
ತಂದು ಥಾಲಿಯನು ಬರುಕೀದೆ
ತಂದುಥಾಲಿಯನೆ ಬರುಕಿ ಭೀಮೇಶಕೃಷ್ಣ
ಉಂಡೆನ್ನ ಮಾನ ಉಳುಹೆಂದೆ ೭

1 [ಜನನಿ ಇಲ್ಲದೆ ಹ್ಯಾಗೆ]

### ಧ್ವನಿ—೫೨

ಬಾರೆ ಭಾಮೆ ಬಾ ಸತ್ಯಭಾಮೆ
ಭಾಳ ಕೋಪಿಸುವ ನೀಲಮೇಘಶ್ಯಾಮ ಪ.

ಶತ್ರುಮರ್ದಕನ ನೀ ಕೊಟ್ಟೆಯೆ ದಾನವ
ಪಟ್ಟದರಸಿ ಮನದಿಷ್ಟವೆ ಸಖಿಯೆ
ಪಟ್ಟದರಸಿ ಮನೋಭೀಷ್ಟವೆ ರುಕ್ಮಿಣಿ
ಸಿಟ್ಟು ಮಾಡದೆ ನಿನ್ನ ಬಿಡುವ್ರೋಳೆ ಸಖಿಯೆ ೧

ಅರಿಯು ಮರ್ದಕ ನರಹರಿಯು ದಾನವಕೊಟ್ಟು
ಸರ್ವಜನರ ಸಮ್ಮತವೇನೆ ಸಖಿಯೆ
ಸರ್ವಜನರ ಸಮ್ಮತವೇನೆ ರುಕ್ಮಿಣಿ
ತಿರುಗಿ ಕೋಪಿಸದೆ ಬಿಡುವಳೆ ಸಖಿಯೆ ೨

ಭರಣಭಂಡಾರ ತಕ್ಕಡಿಲಿಟ್ಟು ತೂಗುತ
ಶರಣರಕ್ಷಕ ನೀಲವರಣನ ಸರಿಯೆ
ಶರಣರಕ್ಷಕ ನೀಲ ವರಣನ ಸರಿಗೆ ಸು-
ವರಣವು ನಿನಗೆ ದೊರೆಯುದೆ ಸಖಿಯೆ ೩

ಒಂದು ತುಳಸೀದಳ ತಂದು ತಕ್ಕಡಿಲಿಟ್ಟ
ಬಂದಿತೆ ನಿನಗೆ ಅಪಕೀರ್ತಿ ಸಖಿಯೆ
ಬಂದಿತೆ ನಿನಗೆ ಅಪಕೀರ್ತಿ ನಾರದ ಇ-
ನ್ನೆಂದು ನಿಮ್ಮದಾನ ಹಿಡಿಯನೆ ಸಖಿಯೆ ೪

ರಾಮನಾಗಿ ಬಂದ ಭೀಮೇಶಕೃಷ್ಣನು
ಪ್ರೇಮದಿಂದಲಿ ಸೀತೆಯಾಗಿ ಬಾರೆಂದ
ಪ್ರೇಮದಿಂದಲಿ ಸೀತೆಯಾಗಿ ಬಾರೆಂದರೆ ಪಾರಿಜಾತ-
ದ ಮುಡಿಬಾಗಿ ನಿಲ್ಲುವರೆ [ಸಖಿಯೆ] ೫*

### ಧ್ವನಿ—೫೩

ಸರಸವ್ಯಾಕೆ ಸಾರಸಮುಖಿ ಸುಂದರಿಕೂಡಾ ಕೃಷ್ಣೆ
ಅರಿತುಕೊಳ್ಳದಲವರ ಗುಣವ ಭರಿತ ಸಭೆಯಲಿ ಕೃಷ್ಣೆ ಪ.

ಪ್ರೀತಿಸತಿಯುರ್ವಚನ ಕೇಳಿ ಪಾರ್ಥ ಕೋಪದಿ ಕೃಷ್ಣೆ
ನೀತಿಯಿಲ್ಲದ ಮಾತು ರುಕ್ಮಿಣಿಗ್ಯಾತಕಾಡುವಿರೆ ಕೃಷ್ಣೆ ೧

* ಹೆಂಗಸರ ಹಾಡು ಮುಗಿಯಿತು ; ಗಂಡಸರ ಹಾಡು ಪ್ರಾರಂಭ.

ಇಂದುವದನೆ ಇಂದಿರೆಗೆ ನೀ ಕುಂದು ನುಡಿವರೇ ಕೃಷ್ಣೆ
ಸಂದೇಹಿಲ್ಲದೆ ನಿನ್ನ ಬುದ್ಧಿ ಮಂದವೆನಿಸಿತೋದೇ ಕೃಷ್ಣೆ ೨

ಕಾಳಿಮರ್ದನ[ನ]ರಸಿ ರುಕ್ಮಿಣಿ ಕರೆದು ಮನ್ನಿಸದೆ ಕೃಷ್ಣೆ
ಬಹಳಪರಿಮಾತುಗಳ ಬಳಸೊ ಚಾಳಿ ತರವೆ [ಕೃಷ್ಣೆ] ೩

ಮುದ್ದು ಸತ್ಯಭಾಮೆರುಕ್ಮಿಣಿ ಪದ್ಮಚರಣಕೆ ಕೃಷ್ಣೆ
ಬಿದ್ದು ಬೇಡಿಕೊಂಬೋದೊಳಿತೆ ಭದ್ರೆ ನಿನಗೆ ಕೃಷ್ಣೆ ೪

ಹ್ಯಾಗೆ ರುಕ್ಮಿಣಿ ಸರಿಗೆ ನಿನ್ನೀವಾದ ಕೂಡುವುದೆ ಕೃಷ್ಣೆ
ಭಾಗೀರಥಿಗ್ಹಳ್ಳಗಳು ಸರಿ ಆಗೋದೇ ನೀರೆ ೫

ಮಣಿಯು ಮುಂದ್ಹಚ್ಚಿಡೋ ದೀಪಗೆ ಸೂರ್ಯನರನೆ ಪೋಲುವುದೆ
ವರಮಣಿಗೆ ಕಬ್ಬಿಣಕೆ ಸರಿಯೆ ನೋಡಾ ಖಗೇಂದ್ರಗೆ [ಕಾಗೆ] ೬

ಕಡಗ ಕಂಕಣ ತೋಳುಬಂದೀಗ್ಹಾಲ್ಗಡಗ ಪೋಲ್ವುದೆ ಕೃಷ್ಣೆ
ಬಿಡೆ ದ್ರೌಪದಿ ಭೀಮೇಶಕೃಷ್ಣನ ಮಡದಿಗೆ ಸರಿಯೆ [ಕೃಷ್ಣೆ] ೭

## ಧ್ವನಿ—೫೪

ಸಾಕುಸಾಕಯ್ಯ ಪಾರ್ಥ ಸಾಕುಸಾಕಯ್ಯ ನಿನ-
ಗ್ಯಾಕೆ ಸುಮ್ಮನೆ ನಿಲ್ಲೊ ಹೋಕ್ಯಾ ಮಾತುಗಳ ಅಂ-
ಜಿಕಿಲ್ಲದಾಡುವೋರೆ ಸಾಕುಸಾಕಯ್ಯ ಪಾರ್ಥ ಪ

ನರನ ನುಡಿಗಳ ನಾರಾಯಣ ಕೇಳುತ
ಭರದಿಂದೆದ್ದನು ಹರಿ ಬ್ಯಾಗ ಸುಮ್ಮನೆ ನಿಲ್ಲೊ
ಭರದಿಂದೆದ್ದನು ಹರಿಯು ಪಾರ್ಥನಂ (ನಹಂ ?) ಕಾರ
ಮುರಿವೆನೊ ಒಂದು ಕ್ಷಣದಾಗೆ ಸುಮ್ಮನೆ ನಿಲ್ಲೊ ೧

ಅಣ್ಣರಾಮರ ಮುಂದೆ ಸಣ್ಣ ಸುಭದ್ರೆಗೆ
ಸಣ್ಣ ಮಾತುಗಳ ನುಡಿವೋರೆ ಸುಮ್ಮನೆ ನಿಲ್ಲೊ
ಸಣ್ಣ ಮಾತುಗಳ ನುಡಿದರೆ ನಾ ನಿನಗೆ
ಚೆನ್ನಾಗಿ ಶಿಕ್ಷೆ ಕಲಿಸುವೆ ಸುಮ್ಮನೆ ನಿಲ್ಲೊ ೨

ತಂಗಿ ದ್ರೌಪದಿಯಂಥ ಗುಣವು ಲೋಕದೊಳಿಲ್ಲ
ಷಂಢ ನಿನ್ನಂಥ ಪುರುಷಿಲ್ಲ ಸುಮ್ಮನೆ ನಿಲ್ಲೊ
ಷಂಡ ನಿನ್ನಂಥ ಪುರುಷರಿಲ್ಲೆನುತಲಿ
ಕೊಂಡಾಡಿ ಜನರು ನಗುತಾರೆ ಸುಮ್ಮನೆ ನಿಲ್ಲೊ ೩

ಅತ್ತೆಯ ಉದರದಲ್ಹುಟ್ಟತಕ್ಕವನಲ್ಲ
ಕೃಷ್ಣೆ ಸುಭದ್ರೆಗ್ವರನಲ್ಲ ಸುಮ್ಮನೆ ಸಿಟ್ಟೊ
ಕೃಷ್ಣೆ ಸುಭದ್ರೆಗ್ವರನಲ್ಲ ಬ್ರಹ್ಮನು ನಿನ್ನ
ಸೃಷ್ಟಿ ಮಾಡಿದನು ನಮಗಾಗೆ ಸುಮ್ಮನೆ ಸಿಟ್ಟೊ ೪

ಭೀಮೇಶಕೃಷ್ಣನ ಪ್ರೇಮ ಒಂದಿರಲಿಕ್ಕೆ
ಸಾಮಜಪುರದ ದೊರೆತನ ಸುಮ್ಮನೆ ಸಿಟ್ಟೊ
ಸಾಮಜಪುರದ ದೊರೆತನಾಳುವಿರೆಂದು
ಧ್ಯಾನಕ್ಕೆ ತಂದು ಮರೆಯುದೆ ಸುಮ್ಮನೆ ಸಿಟ್ಟೊ ೫

## ಧ್ವನಿ—೫೫

ಪಂಥವ್ಯಾತಕೊ ಕೃಷ್ಣ ಪಂಥವ್ಯಾತಕೊ
ಪಂಥವ್ಯಾತಕಯ್ಯ ನಿಮಗೆ ಪಂಚಪಾಂಡವರ ಕೂಡ
ನಿಂತುಗೋವ್ಗಳನ್ನು ಕಾಯುವಂಥ ಗೋಪಾಲಕರಿಗೆಲ್ಲ
ಪಂಥವ್ಯಾತಕೊ ಕೃಷ್ಣ ಪಂಥವ್ಯಾತಕೊ ಪ.

ಬಟ್ಟೆ ಮುತ್ತು ಹೋಲುವಂಥ ರುಕ್ಮಿಣಿ ದೇವೇರಿಗೀಗ
ದುಷ್ಟಮಾತುಗಳನ್ನು ನುಡಿವೋನು ದಿಟ್ಟೆ
ದ್ರೌಪದಿ [1]ನೊಯಿಸಿ[1]ಕೊಂಡು ೧
ಸರದ ಮುತ್ತು ಹೋಲುವಂಥ ಸರಸಿಜಾಕ್ಷಿ ಭಾಮಿನಿಯರಿಗೆ
ಬಿರುಸುಮಾತುಗಳನ್ನು ನುಡಿವೊ ಬಾಲೆ ಸುಭದ್ರೆ[2]ನೊಯಿಸಿ[2]ಕೊಂಡು ೨

ಪತ್ರಕಾಯುತ್ತನದ ಒಳಗೆ ಇಚ್ಛಾನುಸಾರವಾಗಿ ತಿರುಗಿ
ಕಿಚ್ಚು ನುಂಗಿದಂಥ ಕೇವಲ್ಗು ಚಿಟ್ಟುಪುರುಷ ನಮ್ಮ ಕೂಡ ೩

ಆವುಪಾಲ ಗೋವುಪಾಲ ಆಕಳಪಾಲಕರು
ನಮ್ಮ ಕುಲಕ್ಕೆ ಸರಿಯೆ ನೀವು ಗೋಕುಲದ ಗೊಲ್ಲ ಕೃಷ್ಣ ೪

ಹಾಸಿಕೆಲ್ಲಿದ್ದಾ(ದೆ ಹಾ ?)ಸಿನಲಿ ನಾಗಿನ ಫಣೆಯಲಿ ಶಯನ
ಬೇಸರವೆ ಭೀಮೇಶಕೃಷ್ಣ ನೀ ಸಮುದ್ರವಾಸ ಮಾಡಿದಿ ೫

## ಧ್ವನಿ—೫೬

ಬಿಡೋ ಬಿಡೋ ಬಡಿವಾರದ ಬಿಂಕ
ಬಿಡೋ ಬಿಡೋ ಪ.

1, 2[ಯನ್ನು ವಹಿಸಿ ?]

ಅಂಧಕ ಧೃತರಾಷ್ಟ್ರ ಗಾಂಧಾರಿದೇವೇರು
ನೋಡಿಕೊಂಬುವರೆಂದೋ ಸುಪೇಹ ನಿಮಗಿಲ್ಲ ೧

ನಿನ್ನ ಒಡಹುಟ್ಟಿದ ಘನ್ನ ಸಮರ್ಥನ
ಕರ್ಣನ ಮಡುಹಿದಿ ಇನ್ಯಾಕೋ ರಾಜ್ಯ ೨

ಭಾಳ ಪ್ರೇಮದಿ ವಿದ್ಯೆ ಹೇಳಿದ ಗುರುಗಳ
ದ್ರೋಣಾಚಾರ್ಯರ ದ್ರೋಹ ಸಾಲದೆ ಪಾರ್ಥ ೩

ಕುಲಕೆ ಪಿತಾಮಹ ಬಲವಂತ ಭೀಷ್ಮನ
ಗೆಲಿದ ರಾಜ್ಯವನಾಳೋ ಚಲವೇನೊ ಪಾರ್ಥ ೪

ಬಿಟ್ಟು ಯುದ್ಧವ ಭೀಮೇಶಕೃಷ್ಣನ ಮುಂದೆ
ಇಟ್ಟು ಆಯುಧ ಹಸ್ತ ಮುಗಿದ್ಯಲ್ಲೋ ಪಾರ್ಥ ೫

ಧ್ವನಿ—೫೭

ಬಲ್ಲೆನೋ ಇದು ನಿನ್ನ ಬಡಿವಾರ
ಗೊಲ್ಲತಿಯರ ಪಾಲ್ಬೆಣ್ಣೆ ಚೋರ ಪ.

ನಾರಿ ರುಕ್ಮಿಣಿಮನೆ ಸೇರಿದ್ದನರಿಯದೆ
ವಾರಿಧಿಯೊಳಗ್ಹೋಗಿ ಹುಡುಕಿದೆ
ವಾರಿಧಿಯೊಳಗ್ಹೋಗಿ ಹುಡುಕಿದೆನೊ ಮತ್ಸ್ಯಾವ-
ತಾರನಾಗ್ಹೋದ್ಯೋ ಭಾಳ ದುಡುಕಿಲೆ ೧

ಜಾಂಬವಂತೇರ ಮನೆ ಹೊಂದಿದ್ದನರಿಯದೆ
ಅಂಬುಧಿ ಒಳಗ್ಹೋಗಿ ಹುಡುಕಿದೆ
ಅಂಬುಧಿಯೊಳಗ್ಹೋಗಿ ಹುಡುಕಿದೆ ಕೂರುಮನಾಗಿ
ಮಂದರ ಪೊತ್ತೆಯೊ ಬಹಳ ದುಡುಕಿಲೆ ೨

ಕಾಳಿಂದಿ ಬದಿಯಲ್ಲಿ ಕಾದಿರುವೋದರಿಯದೆ
ಮೇದಿನಿಯೊಳಗೆ ಹೋಗಿ ಹುಡುಕಿದೆ
ಮೇದಿನಿಯೊಳಗ್ಹೋಗಿ ಹುಡುಕಿದೆ ವರಹಾವ-
ತಾರನಾಗಿ ಹೋದ್ಯೋ ಬಹಳ ದುಡುಕಿಲೆ ೩

ನೀಲನ ಬದಿಯಲ್ಲೆ ನಿಂತಿರುವೋದರಿಯದೆ
ನಾನೀಗ ಕಂಬ ಬಗೆದು ಹುಡುಕಿದೆ
ನಾನೀಗ ಕಂಬ ಬಗೆದು ಹುಡುಕಿದೆ ನರಮೃಗಾವ-
ತಾರನಾಗಿ ಹೋದ್ಯೋ ಬಹಳ ದುಡುಕಿಲೆ ೪

ಭದ್ರನ ಬದಿಯಲ್ಲೆ ಇದ್ದನೆಂದರಿಯದೆ
ಎದ್ದು ಹೋಗಿ ಬಲಿಬಾಗಿಲು ಹುಡುಕಿದೆ
ಎದ್ದು ಹೋಗಿ ಬಲಿಬಾಗಿಲು ಹುಡುಕಿದೆ ಚರಣದಿ
ಗೆದ್ದನೊ ತ್ರಿಜಗ ಬಹಳ ದುಡುಕಿಲೆ ೫

ಮಿತ್ರಾನ ಬದಿಯಲ್ಲಿ ಪುತ್ರೊನ್ನ್ಯನೋಡದೆ
ಕ್ಷತ್ರಿಯರಿದ್ದ ಸ್ಥಳ ಹುಡುಕಿದೆ
ಕ್ಷತ್ರಿಯರಿದ್ದ ಸ್ಥಳ ಹುಡುಕಿದೆ ಕೊಡಲಿಯ
ಪೊತ್ತು ಪೋದನೊ ಬಹಳ ದುಡುಕಿಲೆ ೬

ಲಕ್ಷ್ಮಣನ ಬದಿಯಲ್ಲಿ ಲಕ್ಷ್ಯಿಟ್ಟ್ಯನೋಡದೆ
ಅಟ್ಟ್ಯಆರಣ್ಯದಲ್ಹುಡುಕಿದೆ
ಅಟ್ಟ್ಯಆರಣ್ಯದಲ್ಲಿ ಹುಡುಕಿದೆ ಶರಧಿಯ
ಕಟ್ಟಿ ಪೋದೆಯೊ ಭಾಳ ದುಡುಕಿಲೆ ೭

ಹದಿನಾರು ಸಾವಿರ ಚೆದುರೇರ ಬಿಟ್ಟ್ಯ
ತ್ರಿಪುರದ ಸತಿಯರಲಿ ಹುಡುಕಿದೆ
ತ್ರಿಪುರದ ಸತಿಯರಲ್ಲಿ ಹುಡುಕಿದೆ ನೀ ಲಜ್ಜೆ ತೊರೆ-
ದು ಪೋದೆಯೊ ಭಾಳ ದುಡುಕಿಲೆ ೮

ಸತ್ಯಭಾಮೆರ ಕಾಂತ ಹತ್ತಿ ತೇಜಿಯಸಂಗ
ಇತ್ತ್ಯಾಕೆ ಬಾರನೆಂದ್ಹುಡುಕಿದೆ
ಇತ್ತ್ಯಾಕೆ ಬಾರನೆಂದ್ಹುಡುಕಿದೆ ಭೀಮೇಶಕೃಷ್ಣ
ಎತ್ತ ಪೋದೆಯೊ ಭಾಳ ದುಡುಕಿಲೆ ೯

### ಧ್ವನಿ—೫೮

ಪಾರ್ಥ ನಿನ್ನಯ ವಾರ್ತೆ ಪೇಳಲು
ಕೀರ್ತಿ ಲೋಕದಿ ಮೆರೆವೋದರ್ಜುನ ಪ.

ಶಾಂತಧರ್ಮಗೆ ಕಂಕನೆನಿಸಿದೆ
ಪಂಚಾಂಗ ಪಗಡೆ ಕೊಟ್ಟು ಕಳಿಸಿದರ್ಜುನ ೧

ಬಲ್ಲೆ ಭೀಮನ ಒಳ್ಳೆಪಾಕಗಾರನ
ಬಲ್ಲವನೆಂದ್ಹೆಸರು ಎಲ್ಲಿ ಪಡೆದನರ್ಜುನ ೨

ಸಕಲ ತೇಜಿಯ ತೊಳೆವೊ ಕೆಲಸಕೆ
ಯುಕುತಿ ಹೇಳಿ ಕಳಿಸಿದೇಸೊ ನಕುಲಗರ್ಜುನ ೩

ಕಾದು ಗೋವ್ಗಳ ಸಾಧು ಮಾಡಲು
ಭೇದಪಿಲ್ಲದೆ ಕಲಿಸಿದ್ಯೊ ಸಹದೇವಗರ್ಜುನ ೪

ದುಂಡುಕಂಕಣ ಇಟ್ಟು ಬಳೆಗಳ
ಬಂದ ಕುಬ್ಜರೂಪವೇನೋ ಚೆಂದವರ್ಜುನ ೫

ಕಂಡೆ ನಿನಗುಣಗಂಡೆನೊ ಫಲ್ಗುಣ ತ್ರಿ-
ದಂಡಿಯಾಗಿ ಭದ್ರೆ (ಯನ್ನ ?) ಕೊಂಡೊಯ್ದ ಕಾರಣ ೬

ಪನ್ನಂಗಶರ ಕರ್ಣ ಬಿಡುತಿರೆ
ಎನ್ನನೀವೊ(ಕಾಯೋ ?) ಭೀಮೇಶಕೃಷ್ಣಂಬುವರೇನರ್ಜುನ ೭

## ಧ್ವನಿ—೫೯

ಕೋಲೆಂದು ಪಾಡಿರೆ ನಮ್ಮ ಕೋಮಲಾಂಗೇರೆಲ್ಲ ಕೂಡಿ
ನೀಲವರ್ಣ ಕೃಷ್ಣ ಪಾರ್ಥರಾಯನ ಮ್ಯಾಲಿ ಪ.

ಸತ್ಯಪಾಂಡವರ ಸಭಾಮಧ್ಯದಲ್ಲಿ ಸರಸವಾಕ್ಯ
ಅರ್ಥಿಯಿಂದರ್ಜುನಗೆ ನುಡಿದ ಶ್ರೀಕೃಷ್ಣರಾಯ ೧

ದೇವೇಂದ್ರನ ಸುತ ಹರುಷದಿಂದ ದೇವಕೀತನಯನ ಕೂಡ
ಪ್ರೇಮಕಲಹ ಮಾಡುತ್ತಿದ್ದನರ್ಜುನರಾಯ ೨

ತಾಯಿತಂದೆಗಳಿ ನಿಮ್ಮ ಜೀವದಾಸೆಗೆಮುನೆದಾಟಿ
ದಾರ ಮಗನೆಂದೆನಿಸಿಕೊಂಡ್ಯೊ ಶ್ರೀಕೃಷ್ಣರಾಯ ೩

ನಿಮ್ಮ ಪ್ರಾಣದಾಸೆಗಾಗಿ ಅಸ್ಯರಿದ್ದರಗಿನ ಮನೆಗೆ
ವಹ್ನಿಹಚ್ಚಿ ಓಡಿ ಬಂದಿರರ್ಜುನರಾಯ ೪

ಹೊಟ್ಟೆಬಾಕ ಪೂತಣಿಯು ಕೊಟ್ಟ ವಿಷವನುಂಡು ಪಾಲು-
ಚಟ್ಟಿಗೆ ದಧಿ ಬೆಣ್ಣೆಗಳ ಮೆದ್ದ ಶ್ರೀಕೃಷ್ಣರಾಯ ೫

ಹೊಟ್ಟೆಗಾಗಿ ಇಟ್ಟ ವಿಷಲಡ್ಡಿಗೆಯ ಮೆದ್ದು ರಾಟನಲ್ಲಿ
ಹುಟ್ಟುಹಿಡಿವಟ್ಟಂಬೋರೇನೊ ಅರ್ಜುನರಾಯ ೬

ಸತ್ರಯಾಗವನ್ನ ನಿಮಗೆ ಸಾಲದ್ದೋಗೆ ಶಕ್ರಪದವು
ಭರ್ತಿಯಾಯಿತೇನೊ ನಿನಗೆ ಶ್ರೀಕೃಷ್ಣರಾಯ ೭

ಭಿಕ್ಷೆ ಬೇಡಿದನ್ನ ನಿಮಗೆ ಬರಿಯಾಗದೆ
ಬಕನ ಕೊಂದು ಎಷ್ಟುಬಂಡಿ ಅನ್ನವನುಂಡಿರರ್ಜುನರಾಯ ೮

ಈರೇಳು ಲೋಕ್ಕ ಡಿಪ್ಪೋ ಹೊಟ್ಟೆ ದಾರಿಗುಂಟು
ಧರೆಯ ಮ್ಯಾಲೆ ಸಾರಥ್ಯಾಗಿ ಕಳೆವ್ಯೋ ಕಾಲ ಶ್ರೀಕೃಷ್ಣರಾಯ ೯

ಸಾಕೊ ನಿನ್ನ ಜಂಬ ಒಂದು ರಾಟದ ನಾವಿಕ್ಕಿ ನಿನಗೆ
ಹಾಕಿದೆ ದೂರ್ವಾಸರಿಗನ್ನ ಅರ್ಜುನರಾಯ ೧೦

ಮಾನಿನಿಯರ ಸೀರೆ ಕದ್ದು ಮರವನೇರಿ ಮಾನ ಕಳೆಯಲು
ಬಾರದೇಕೊ ಕರುಣೆ ನಿನಗೆ ಶ್ರೀಕೃಷ್ಣರಾಯ ೧೧

ರಾಯರಾಯರೆದುರು ದ್ರೌಪದಿ ಸೀರೆ ಸೆಳೆವೋ-
ಕಾಲದಲ್ಲಿ ದಾರಿಗೆ ಬಂತಯ್ಯ ಕರುಣೆ ಅರ್ಜುನರಾಯ ೧೨

ವೃಂದಾವನವಾಸದಲ್ಲಿ ಹಿಂಡುಗೋಗಳನ್ನು ಕಾಯ್ದು
ಪುಂಡನಾಗಿ ಕುಣಿತೆಯಲ್ಲೋ ಶ್ರೀಕೃಷ್ಣರಾಯ ೧೩

ಅಂದು ವನವಾಸಾಗುತಿರಲು ತೇಜಿ ದನ ಕಾಯ್ದು
ಷಂಡನಾಗಿ ತಿರುಗಿದೆಲ್ಲೊ ಅರ್ಜುನರಾಯ ೧೪

ಪಟ್ಟಣ ನಡುಬೀದಿಯಲ್ಲಿ ಸೊಟ್ಟಕುಬ್ಜೆಯನ್ನು ಕಂಡು
ಹುಟ್ಟಿತೇನೊ ಮನಸು ನಿನಗೆ ಶ್ರೀಕೃಷ್ಣರಾಯ ೧೫

ಅರಣ್ಯ ಅರ್ಧರಾತ್ರಿಯಲಿ ಘೋರ ಹಿಡಿಂಬಿಯನ್ನು ಕಂಡು
ದಾರು ಮನಸೋತದ್ದೇಳೊ ಅರ್ಜುನರಾಯ ೧೬

ಕನ್ಯತನವ ರುಕ್ಮಿಣಿಭಾಮೆಯರ ಕನ್ಯನೆನಿಸಿಕೊಂಡು
ತಳ್ಳೀಕೋರತನವ ತಂದ್ಯೊ ಶ್ರೀ ಕೃಷ್ಣರಾಯ ೧೭

ಹೆಣ್ಣೆಂದು ತಿಳಿಸದಲೆ ಕುಂತಿಗೆ ಹುಣ್ಣು ಕಂಡೆನೆಂದು ಹೇಳಿ
ಉಣ್ಣರೈವರೆನಿಸಿಕೊಂಡ್ಯರ್ಜುನರಾಯ ೧೮

ಸೋದರತ್ತಿ ಆದ ರಾಧೆ ಭೇದವಿಲ್ಲದವಳ ಕೂಡಿ
ಸೀ ದಾವ ಕ್ರಿಯಸ್ಥನ್ಹ್ಯೇಳೋ ಶ್ರೀಕೃಷ್ಣರಾಯ ೧೯

ಒಳಿಗೆ ಬಂದ ಊರ್ವಶಿಯು ಬಿಟ್ಟ ಶಾಪವನ್ನೆತ್ತಿಕೊಂಡು
ಬಳೆಯನಿಟ್ಟು ಹೆರಳ್ಹಾಕಿಕೊಂಡ್ಯರ್ಜುನರಾಯ ೨೦

ಅಂದು ಜನಿಸಿತಪ್ಪ ಕಂಸನ ಕೊಂದು ಉಗ್ರಸೇನರಾಯಗೆ
ವಂದಿಸುವುದು ಚಂದವೇನೊ ಶ್ರೀಕೃಷ್ಣರಾಯ ೨೧

ಗಾಂಧಾರಿ ಸುತರನ್ನ ಕೊಂದು ಅಂಧಕರನಡವಿಗಟ್ಟಲು
ಬಂದಿತೇನೋ ಭಾಗ್ಯ ನಿನಗೆ ಅರ್ಜುನರಾಯ ೨೨

ದುಷ್ಟಕಾಲಯವನನಿಂದ್ಯುದ್ಧವ ಬಿಟ್ಟು ಬಹಳ ಧೈರ್ಯದಿಂದ
ಹೊಕ್ಕ್ಯೊ ಮುಚಕುಂದನ ಗುಹೆಯಲಿ ಶ್ರೀಕೃಷ್ಣರಾಯ ೨೩

ಪಿತೃಪುತ್ರರನ್ನು ಉಳುಹಿಕೊಟ್ಟೇನೆಂಬೋ ಶೂರತನದಿ
ಎತ್ತಿ ಮಾಡಿದ ತೋರೋದ್ಯೇನಗೆ ಅರ್ಜುನರಾಯ ೨೪

ಮಾತುಳನ ಮಾವ ಮಗಧಭೂಪಗಂಜಿ ಶರಧಿ ಯೊಳಗೆ
ಯಾತಕೆ ಮನೆಗಟ್ಟಿದ್ಹ್ಯೇಳೊ ಶ್ರೀಕೃಷ್ಣರಾಯ ೨೫

ಅಣ್ಣತಪ್ಪುಂಡಿರ ಭಯಕರಣ್ಯತಿರುಗಜ್ಞಾತವಾಸದಿ
ಇನ್ನ್ಯಾರಡಗಿಕೊಂಡವರ್ಹ್ಯೇಳೋ ಅರ್ಜುನರಾಯ ೨೬

ಶಕ್ರನ್ಹನದಿ ಕಿತ್ತು ವೃಕ್ಷ ಅಷ್ಟದಿಕ್ಪಾಲಕರ ಕಂಡು
ಸತ್ಯಭಾಮೆ ಕಳುಹಿದ್ಯೊ ಯುದ್ಧಕೆ ಶ್ರೀಕೃಷ್ಣರಾಯ ೨೭

ಶತ್ರು ಸೈನ್ಯವನ್ನೆ ಕಂಡು ಇಟ್ಟುಗಾಂಡೀ [1]ವವ[1] ಕೆಳಗೆ
ಹಸ್ತ ಮುಗಿದು ನಿಂತ್ಯೋಯೆನಗೆ ಅರ್ಜುನರಾಯ ೨೮

ಪಿಡಿಯೆ ಚಕ್ರವೆಂದು ಪಂಥ ನುಡಿದಾ ಭೀಷ್ಮರಿದುರು ನಿಂತು
ಹೊಡೆಸಿಕೊಂಡವರ್ಯಾರೊ ಹಣೆಗೆ ಶ್ರೀಕೃಷ್ಣರಾಯ ೨೯

---
1 ಶಿಯು

ಪಂಚನಿಂದ್ರಿಯುರ ಸರಳ ಮಂಚದಲ್ಲಿ ಕೆಡವಿ ಗುರುಗಳ
ನಿಂತು ನೀ ಸಂಹರಿಸುವರೇನೊ ಅರ್ಜುನರಾಯ ೩೦

ಅಸುರ ಸ್ತ್ರೀಯರ ಪುಂಡರೀಕಾಕ್ಷ್ಯಸುದೇವನ ವಧೆಯು ಮಾಡಿ
ಲೇಸಾದಪಕೀರ್ತಿ ಪಡೆದ್ಯೋ ಶ್ರೀಕೃಷ್ಣರಾಯ ೩೧

ಅಣ್ಣನಲ್ಲೇ ಸೂರ್ಯಪುತ್ರ ಕರ್ಣರಾಯನ್ವಧೆಯ ಮಾಡಿ
ಅನ್ಯಾಯಕ್ಕೊಳಗಾದೆಯಲ್ಲೊ ಅರ್ಜುನರಾಯ ೩೨
ಸೋಜಗದ ಮದುವೆ ಮಾಡಿ ಜೂಜು ಪಗಡೆ ಆತ್ತಾಡಿ
ಬೀಗನ ಕೊಂದಿಡುವೋರೇನೊ ಶ್ರೀಕೃಷ್ಣರಾಯ ೩೩

ರಾಜರೊಳಗೆ ನಿಮ್ಮ ಸರಿಯು ಜೂಜುಪಗಡೆಯಾಡುವವರ
ಈ ಜಗತ್ತಿನೊಳಗೆ ಕಾಣೆನರ್ಜುನರಾಯ ೩೪

ಮೊರೆಯುಬಿದ್ದ ಸಜ್ಜನರ ಸೆರೆಯು ಹಾಕಿ ನಿನ್ನಪುರದಿ
ತಿರುಗಿ ಬಾರದಂತೆ ಮಾಡುಸಿ ಶ್ರೀಕೃಷ್ಣರಾಯ ೩೫

ನಿನ್ನ ಮೊರೆಯು ಹೊಕ್ಕ ಗಯನ ಬೆನ್ನನಲ್ಲಿ ಬಿಗಿದುಕೊಂಡ
ಘನ್ನ ಸಮರ್ಥಿಕೆಯು ತೋರೊ ಅರ್ಜುನರಾಯ ೩೬

ಸಿಟ್ಟು ಬ್ಯಾದೊ ನಿನ್ನ ನಿರ್ದಾನಷ್ಟ ಗುಣಗಳನ್ನು ಭಾಳ
ಭಕ್ತಿಂದ ಕೊಂಡಾಡುವೆನಯ್ಯ ಶ್ರೀಕೃಷ್ಣರಾಯ ೩೭

ಅತ್ತೆಸುತನೆಂದು ಸುಭದ್ರೆಯ ಎತ್ತಿ ಯುಕ್ತಿಯಾಗೊಯ್ದ-
ಕಾಲಕ್ಕೆನ್ನಪರಾಧ ಕ್ಷಮಿಸಿದೆನ್ನ್ಯೊ ಅರ್ಜುನರಾಯ ೩೮

ವಾಸವಿ ವಸುದೇವಸುತನ ವಾಕ್ಯ ಕೇಳಿ ಹರುಷಪಡಲು
ಲೇಸಾಗಿ ರಕ್ಷಿಸುವ್ರೋನೊ ಭೀಮೇಶಕೃಷ್ಣರಾಯ ೩೯*

## ಧ್ವನಿ—೬೦

ಶರಣು ಶರಣು ಶ್ಯಾಮವರಣನೆ
ರಂಗ ಶರಣುಶರಣು ಶ್ಯಾಮ ವರಣನೆ
ಶರಣು ಶರಣು ಶ್ಯಾಮವರಣ ರಕ್ಷಿಸೊ
ನಿನ್ನ ಚರಣಕಮಲಗಳಿಗೆರಗುವೆ ಕೃಷ್ಣ ಶರಣು ಶರಣು ಪ.

* ಗಂಡಸರ ವಾದ ಮುಗಿದುದು.

ಬ್ರಹ್ಮನಯ್ಯನೆ ಕೃಷ್ಣ ನಮ್ಮಪರಾಧವ
ನಿಮ್ಮೊಳ್ಹಿಡಿಯದಿನ್ನು ಕರುಣಿಸೊ
ನಿಮ್ಮೊಳ್ಹಿಡಿಯದಿನ್ನು ಕರುಣಿಸಬೇಕೆಂದು
ಧರ್ಮ ನಗುತ ಕೈಯ ಮುಗಿದನು ರಂಗ ೧

ಕಾಮನಯ್ಯನೆ ಎನ್ನ ಕರುಣಿಸಬೇಕೆಂದು
ರಾಮಕೃಷ್ಣರ ದಿವ್ಯ ಚರಣಕ್ಕೆ
ರಾಮಕೃಷ್ಣರ ದಿವ್ಯ ಚರಣಕ್ವಂದನೆಯ ಮಾಡಿ
ಭೀಮ ನಗುತ ಕೈಯ ಮುಗಿದನು ೨

ಸಕಲಗುಣಗಳ ನಾ ಭಕುತಿಯಿಂದ್ಹೊಗಳಿದೆ
ಮುಕುತಿದಾಯಕ ನೀನು ಮುನಿವೋರೆ
ಮುಕುತಿದಾಯಕ ನೀನು ಮುನಿಯದಿರೆನುತಲಿ
ನಕುಲರಾಯನು ಕೈಯ ಮುಗಿದನು ೩

ಸಾಧು ಸಜ್ಜನರ ಸನ್ಮತವಾದ ನಿನ್ನ ಕೀರ್ತಿ
ವಾದವುುಖದಿ ನಾವು ನುಡಿದೆವೊ
ವಾದ ಮುಖದಿ ನಾವು ನುಡಿದೇವೆಂದೆನುತಲಿ
ಸಾದೇವ ಬಂದು ಕೈಯ ಮುಗಿದನು ೪

ಪದ್ಮಪಾದಗಳಿಗೆ ಬಿದ್ದೆವೊ ಭೀಮೇಶಕೃಷ್ಣ
ನಿರ್ದಯ ಮಾಡದೆ ಕರುಣಿಸೊ
ನಿರ್ದಯ ಮಾಡದೆ ಕರುಣಿಸಬೇಕೆಂದು
ಅರ್ಜುನ ಬಂದು ಕೈಯ ಮುಗಿದನು ೫

## ಧ್ವನಿ—೬೧

ಬಿಡೋ ನಿನ್ನ ಮಾಯ ಮಾತಾಡೊ ಧರ್ಮರಾಯ
ಬಿಡೊ ನಿನ್ನ ಮಾಯ ಅಡಿಗೆರಗಿದರೆ ಆಡಿದ ನುಡಿ ಮರೆವೊರೆ ಪ.

ಅನುಜನಾಡಿದ ಮಾತು ನಿನ್ನ ಮನಸಿಗೆ ಬಂತು
ಜನಕೆ ಸನ್ಮತವಲ್ಲ ಜಾಣತನವಿದೆಲ್ಲ ೧

ನಾನು ಅಣ್ಣನೊಂ(ನ ವಂ?)ಚಿಸಿ ನರಗೆ ಸುಭದ್ರೆಕೊಟ್ಟೆ
ನೀರು ಮಜ್ಜಿಗೆಯ ಗೋಕ್ಷೀರವೆಂದು ನಾ ತಿಳಿವೆ ೨

ಕೀಚಕ ಬಂದು ಸತಿಗೆ ನೀಚ ಮಾತಾಡುವಾಗ
ಯೋಚನಿಲ್ಲದಲೆ ಕಂಕಾಚಾರ್ಯರಾಗಿ ನೀ ಕುಳಿತ್ಯೋ ೩

ಕ್ರೂರಕೌರವಗೆ ನೀ ನಾರಿಯು ಪಣಕಿಟ್ಟು
ಸೀರೆ ಸೆಳೆವಾಗ ದಾರ ದಾರಳಂತೆ ನೋಡಿದ್ಯೋ ೪

ಪಟ್ಟದರಸಿಯು ನೀ ಸುದೇಷ್ಣೆದಾಸಿಯು ಮಾಡಿ-
ದಿಷ್ಟುಗುಣವ ಭೀಮೇಶಕೃಷ್ಣ ಒಬ್ಬ ನಾ ಬಲ್ಲೆ ೫

ಧ್ವನಿ—೬೨

ನಂದನಂದನ ಶ್ಯಾಮಸುಂದರ ಕೃಷ್ಣನರ-
ವಿಂದಪಾದಕ್ಕೆ ಎರಗುತ ದ್ರೌಪದಿ ಭದ್ರಾ
ಚಂದ್ರಸೂರ್ಯರಂತ್ಹೊಳೆಯುತ ಪ.

ಎಸಳುಗಂಗಳ ಚೆಲ್ವೆ ವಸುಧೆಪಾಲರ ರಾಣಿ
ಕುಸುಮಮಲ್ಲಿಗೆ ಉದುರುತ
ಕುಸುಮ ಮಲ್ಲಿಗೆ ಹೂವು ಉದುರುತ ದ್ರೌಪದಿ
ಅಸುರಮರ್ದನಗೆರಗ್ಯಾರು ದ್ರೌಪದಿ ಭದ್ರಾ ೧

ಹಾರ ಹರಡಿ ವಂಕಿ ದ್ವಾರ್‍ಯ ಕಂಕಣವಿಟ್ಟು
ಭಾರ ಬಂಗಾರಕ್ಕೆ ಬಳುಕುತ
ಭಾರ ಬಂಗಾರಕ್ಕೆ ಬಳುಕುತ ಭದ್ರಾ ಬಲರಾಮನ
ಚರಣಕ್ಕೆರಗ್ಯಾರು ದ್ರೌಪದಿ ಭದ್ರಾ ೨

ಚೌರಿ ರಾಗಟೆ ಗೊಂಡ್ಯ ಹೆರಳುಬಂಗಾರದ
ಗಿಳಿಗೊಂಡ್ಯದ ಮುತ್ತುಚೆದುರುತ
ಗಿಳಿಯು ಗೊಂಡ್ಯದ ಮುತ್ತು ಚೆದುರುತ ಸುಭದ್ರಾ
ಹರಿಯ ಚರಣಕ್ಕೆ ಎರಗ್ಯಾಳು ೩

ಅಣ್ಣ ಎನ್ನಯ ಮುಖವನ್ನು ನೋಡುತ ನಿನಗೆ
ಸಣ್ಣ ಮಾತುಗಳ ನುಡಿದಿದ್ದ ಶ್ರೀ ಕೃಷ್ಣ ನಿನಗೆ
ಸಣ್ಣ ಮಾತುಗಳನು ನುಡಿದ ಫಲ್ಗುಣನ ನೀ
ಮನ್ನಿಸಬೇಕೊ ದಯಾನಿಧೆ ೪

ಭಿಡಿಯವಿಲ್ಲದಲೆ ಭೀಮೇಶಕೃಷ್ಣ ನಿನಗೆ
ನುಡಿದ ಅಪರಾಧ ಕ್ಷಮಿಸೆಂದು ಶ್ರೀಕೃಷ್ಣ ನಿನಗೆ
ನುಡಿದ ಅಪರಾಧ ಕ್ಷಮಿಸೆಂದು
ಕಡಲಶಯನಗೆ ಎರಗ್ಯಾರು ದ್ರೌಪದಿ ಭದ್ರಾ ೫

## ಧ್ವನಿ—೬೩

ಭೀತಿ ಯಾತಕೆ ದ್ರೌಪದಿ ಭೀತಿನ್ಯಾತಕೆ
ನೀತಿಮಾರ್ಗ ಅರಿಯದವನ ಮಾತು ಕೇಳಿ ಮುಂದಿ ನಗುವರು ಪ.

ಹುಟ್ಟಿದಾರಭ್ಯಯಿವನ ಖೊಟ್ಟಿಗುಣವ ನೋಡಿ ನೋಡಿ
ಕೊಟ್ಟ ಮ್ಯಾಲೆ ನಿಮ್ಮಣ್ಣರನು ಸಿಟ್ಟು ಮಾಡಿನ್ನೇನು ಫಲವು ೧

ನಮ್ಮ ಸೋದರತ್ತೆ ಮಗನು ನಿಮ್ಮಣ್ಣರಿಗೆ ಪುರುಷನೆಂಜೊ
ಹಮ್ಮಿಲಿಂದ ನಾಲ್ಕುಮುಖದ ಬ್ರಹ್ಮಬರಲೀಗಂಜುವನಲ್ಲ ೨

ಭದ್ರೆ ದ್ರೌಪದಿ ನಿಮ್ಮ ಪತಿಗಳಲ್ಲಿ ಕೋಪವಿಲ್ಲ ಎನಗೆ ಅರ್ಜುನನ ಮ್ಯಾ-
ಲೆ ದಯವು ಅತಿಶಯಂತಃಕರಣವುಂಟು ೩

ರಥಿಕನನ್ನು ಮಾಡಿ ನಾ ಸಾರಥಿಯು ಆಗಿ ಅವನ ಕೀರ್ತಿ
ಪೃಥಿವಿಮ್ಯಾಲೆ ಬೆಳೆಸ್ಯೇನೆಂಜೊ ಅತಿಗುಣಾಢ್ಯತನಗಳಿಲ್ಲ ೪

ವನಜಪತಿ ಭೀಮೇಶಕೃಷ್ಣ ಎನಗೆ ಆಪ್ತನೆಂಬುವನಲ್ಲ
ವನವನವ ಸಂಚರಿಸಿ ಬಂದು ಮನೆಯ ಸೇರಿ ಮರೆತೆನೆಲ್ಲ ೫

## ಧ್ವನಿ—೬೪

ಬಾರೆ ಬಾ ರುಕ್ಮಿಣಿ ನಮ್ಮ ಮಂದಿರಕೆ ತಡ ಮಾಡುವುದ್ಯಾಕೆ
ಬಾರೆ ಬಾ ರುಕ್ಮಿಣಿ ನಮ್ಮ ಮಂದಿರಕೆ ಪ.

ವನಜಾಕ್ಷಿ ರುಕ್ಮಿಣಿ ಜನನಿಯು ಸರಿಯಮ್ಮ
ವಿನಯದಿ ನಾವು ನುಡಿದೆವೆ
ವಿನಯದಿ ನಾವು ನುಡಿದಂಥ ಅಪರಾಧ
ಮನದೊಳಗಿಡದೆ ಕರುಣಿಸೆ ೧

ಸತ್ಯಭಾಮೇರ ದಿವ್ಯ ಉತ್ತಮ ಚರಣಕ್ಕೆ
ಭಕ್ತಿಂದ ನಾವು ಎರಗೇವೆ

ಭಕ್ತಿಂದ ನಾವು ಎರಗೇವೆ ಅಪರಾಧ
ಚಿತ್ತದೊಳಿಡದೆ ಕರುಣಿಸೆ ೨

ಮುಂಗೈಯ ಹಿಡಿದರೆ ದುಂಡುಮುತ್ತುದುರ್ಯಾವೆ
ಗಂಧ ಪರಿಮಳವ ಎಸೆಯುತ
ಗಂಧ ಪರಿಮಳವ ಎಸೆಯುತ ರುಕ್ಮಿಣಿ
ಅಂಗಳ ಬಿಟ್ಟು ನಡೆದಳೆ ೩

ಹಸ್ತಗಳ್ಹಿಡಿದರೆ ಮುತ್ತುಗಳುದುರ್ಯಾವೆ
ಬುಕ್ಕಿಟ್ಟು ಪರಿಮಳವ ಎಸೆಯುತ
ಬುಕ್ಕಿಟ್ಟು ಪರಿಮಳವ ಎಸೆಯುತ ಸತ್ಯಭಾಮೆ
ಹೊಸ್ತಿಲ ದಾಟಿ ನಡೆದಳು ೪

ಸೋಮಶೇಖರನರಸಿಗೆ ರುಕ್ಮಿಣಿ ಭಾಮೆ
ಹೇಮದಾರತಿಯ ಬೆಳಗುವ ಶೃಂಗಾರ ನೋಡಿದ್ಯಾ
ಹೇಮದಾರತಿಯ ಬೆಳಗಿ ತಾವ್ ಕುಳಿತರು
ಭೀಮೇಶಕೃಷ್ಣನೆಡಬಲದಲ್ಲಿ ಶೃಂಗಾರ ನೋಡಿದ್ಯಾ ೫

## ಧ್ವನಿ—೬೬

*

ಎದ್ದು ಬಂದಳೆ ಸುಭದ್ರೆ ನಗುತ
ಪದ್ಮನಾಭನ್ನ ಪ್ರೀತಿಂದ ನೋಡುತ ಪ.

ಕುಂತಿ ದೇವಕ್ಕಿ ಹೇಮಮಂಚದಿ ಕುಳಿತಿರೆ
ಅಂತರಂಗದ ಮಾತುಗಳಾಡುತ
ಪಂಚಬಾಣನ ಪಿತನರಸೇರ ಪೂಜೆಗೆ
ಪಾಂಚಾಲಿಯೇಳೆ ಏಳೆಂದೆಬ್ಬಿಸುತ ೧

ವಾರಿಜಾಕ್ಷನ ವಾರೆ ನೋಟದಿ ನೋಡುತ
ಸಾರಸಮುಖಿ ಸರಸವನಾಡುತ
ವಾರಿ ಮಗ್ಗೆಯ (ಓರಿಮೊಗ್ಗು?)ಪಾರಿಜಾತಗಳುದುರುತ
ವಾರಿಜನಾಭಗ್ವಂದನೆ ಮಾಡುತ ೨

* ರಾಗ : ಭಿಲ್ಲರಿ (ಬಿಲಹರಿ?). ತಾಳ : ಏಕತಾಳ

ಕಿರುಗೆಜ್ಜೆಯಿಂದಿಗೆ ರುಳಿ ಕಿರುಧ್ವನಿ ಮಾಡುತ
ಕಿರುಬೆವರನು ಕರದಿಂದೊರೆಸುತ
ಕಿರುನಗೆಯಿಂದ ಕೃಷ್ಣನ ಮುಖ ನೋಡುತ
ಕಿರೀಟವಲ್ಲಭೆ ಕಿರುಮಾತನಾಡುತ ೩

ಕುಂಕುಮರಿಶಿಣ ಹಚ್ಚಿ ಪಂಕಜಮುಖಿಯರು
ಅಲಂಕಾರವಾದ ಆಭರಣವಿಟ್ಟು
ಪಂಕಜ ಪಾರಿಜಾತವು ಗಂಧ ಬುಕ್ಕಿಟ್ಟು
ಕಾಂತೆ ರುಕ್ಮಿಣಿಭಾಮೇರಿಗಚ್ಯುತ ೪

ಅಷ್ಟ ಪರಿಮಳಗಂಧ ಬುಕ್ಕಿಟ್ಟೊದಿಸಕಡ್ಡಿ
ಅಚ್ಚಮಲ್ಲಿಗೆ ಬಿಡಿ ಮುತ್ತಿನ ಹಾರಗಳು
ಸತ್ಯಧರ್ಮರು ತಂದು ಸಭೆಯೊಳು ಭೀಮೇಶ-
ಕೃಷ್ಣರಾಮರನು ಭಕ್ತಿಂದ ಪೂಜಿಸುತ ೫

## ಧ್ವನಿ—೬೭

*

ಬಂದು ಕೂಡೆ ಬ್ಯಾಗನರವಿಂದನಯನೆ
ಇಂದುವದನೆ ದ್ರೌಪದಿ ನಾವು ತಂದ ಮುಯ್ಯ ಒಪ್ಪಿಸುವೆ
ಬಂದು ಕೂಡೆ ಬ್ಯಾಗನರವಿಂದನಯನೆ ಪ.

ಅರಿಶಿಣ ಕುಂಕುಮ ಹಚ್ಚಿ ಜರಿಪಿಸ ಮಲ್ಲಿಗೆ ಮುಡಿಸಿ
ತರಿಸಿ ತಾಂಬೂಲ ಕೊಡುತೇವೆ
ತರಿಸಿ ತಾಂಬೂಲ ಕೊಡುತೇವೆ ದ್ರೌಪದಿಗೆ
ಹರುಷದಿ ಮುಯ್ಯ ಇಡುತೇವೆ ೧

ಅಪ್ಪಾಲು ಅತಿರಸ ಐನೂರು ಲಡ್ಡಿಗೆ
ಸಕ್ಕರೆಫೇಣಿ ರಸಬಾಳೆ
ಸಕ್ಕರೆ ಫೇಣಿ ರಸಬಾಳೆ ಫಲಗಳ
ಒಪ್ಪದಿ ಮುಯ್ಯ ಇಡುತೇವೆ ೨

ಬಂಗಾರದ ಹರಿವಾಣ ಭಾರಿ ಪದಾರ್ಥವು
ರಂಗು ಮಾಣಿಕ್ಯದಾಭರಣವು

* ರಾಗ : ಶಂಕರಾಭರಣ, ಝಾಪುತಾಳ

ರಂಗು ಮಾಣಿಕ್ಯದಾಭರಣ ಭೀಮೇಶಕೃಷ್ಣನ
ತಂಗ್ಯೇರಿಗೆ ಮುಯ್ಯ ಇಡುತೇನೆ ೩

## ಧ್ವನಿ—೬೮

*

ಎಂಥ ಭಾಗ್ಯವು ನೋಡೆ ಶಾಂತಧರ್ಮರ ಮನೆಯೊ-
ಳಿಂಥ ರಂಗಯ್ಯ ಕುಳಿತಾನೆ ಶ್ರೀದೇವಿಸಹಿತ
ಎಂಥ ಭಾಗ್ಯವೆ ಸಖಿಯೆ ಪ.

ದಿಕ್ಕು ದಿಕ್ಕಿನ ಮಿಂಚು ಜತ್ತಿಲೆ ಕೂಡ್ಹೊಳೆದಂತೆ
ರುಕ್ಮಿಣಿ ಭಾಮೆಯುರ ಸಹಿತಾಗಿ ಪಾಂಡವರ ಮನೆಯೊಳು
ರುಕ್ಮಿಣಿ ಸತ್ಯಭಾಮೆಯುರ ಸಹಿತ ಕುಳಿತಿರೆ ರಂಗ ಸತ್ಯ
ವೈಕುಂಠವಿದು ನೋಡೆ ೧

ಅಷ್ಟ ದಿಕ್ಕಿನ ಮಿಂಚು ಪತ್ತೊಟ್ಟಿಲಿ ಕೂತ್ಹೊಳೆದಂತೆ
ಅಷ್ಟಮ ಸತಿಯುರ ಸಹಿತಾಗಿ
ಅಷ್ಟಮ ಸತಿಯುರ ಸಹಿತ ಕುಳಿತಿರೆ
ಕೃಷ್ಣ ಸತ್ಯವೈಕುಂಠ ಇದು ನೋಡೆ ೨

ತಾರಾಮಧ್ಯದಿ ಚಂದ್ರ ಭಾಳ ಶೋಭಿಸಿದಂತೆ
ಸೋಳ ಸಾವಿರದ ಸತಿಯುರು
ಸೋಳ ಸಾವಿರಮಂದಿ ಸತಿಯುರಾ-
ಳಿರೆ ಕೃಷ್ಣ ಭೂ ವೈಕುಂಠಾಗಿ ತೋರುವುದೆ ೩

ಪಂಚಸೂರ್ಯರ ಕಾಂತಿ ಮಿಂಚುತ ಸಭೆಯೊಳು
ಪಾಂಚಾಲದೇವಿ ಸಹಿತಾಗಿ
ಪಾಂಚಾಲದೇವಿ ಸಹಿತ ರಂಗನ ಮುಂದೆ
ಪಂಚ ಪಾಂಡವರು ಕುಳಿತಾರೆ ೪

ಉದ್ಧವ ಸಾತ್ಯಕಿಯುರು ಉಭಯಚಾಮರ ಬೀಸೋ[ರು]
ಪ್ರದ್ಯುಮ್ನ ಸಾಂಬ ಅನಿರುದ್ಧ
ಪ್ರದ್ಯುಮ್ನ ಸಾಂಬ ಅನಿರುದ್ಧ ಬಲರಾಮ-
ಲ್ಲಿದ್ದ ಯಾದವರು ಕುಳಿತಾರೆ ೫

* ರಾಗ: ಸಾವೇರಿ, ರೂಪಕತಾಳ

ರಂಭೆ ಊರ್ವಶಿಯರು ಸಂಭ್ರಮ ನಾಟ್ಯವನಾಡೋ[ರು]
ತುಂಬುರರೆಷ್ಟೊ ಸಭೆಯೊಳು
ತುಂಬುರರೆಷ್ಟೊ ಸಭೆಯೊಳು ಗಾಯನ
ಮಾಡೊ ಗಂಧರ್ವರೆಷ್ಟೊ ಕಡೆಯಿಲ್ಲ ೬

ಅರಿಷಿಣ ಕುಂಕುಮ ಗಂಧ ಬಿರುಸು ಬಾಣಗಳಿಂದ
ಅರಸು ಧರ್ಮರರಮನೆ ಚೆಂದ
ಅರಸು ಧರ್ಮರ ಅರಮನೆ ಚೆಂದ ಕಾಂಬುವುದು
ಸರಸಿಜಾಕ್ಷನ ದಯದಿಂದ ೭

ಮಲ್ಲಿ ಮಲ್ಲಿಗೆ ಎಷ್ಟೊ ಜಲ್ಲಿಕುಸುಮವೆಷ್ಟೊ
ಚೆಲ್ವೆ ಸುಭದ್ರೆ ಹಿಡಿದಳೆ
ಚೆಲ್ವೆ ಸುಭದ್ರೆ ಹಿಡಿದಳೆ ರಂಗನ ರಾಣಿ[ಯ]
ರೆಲ್ಲರಿಗೆ ಕೊಡುತ ಬರುತಾಳೆ ೮

ರತ್ನಜ್ಯೋತಿಗಳೆಷ್ಟೊ ಕಟ್ಟುಕಟ್ಟಲಿ ವೀಳ್ಯ
ಮುತ್ತಿನ ತಬಕ ಹಿಡಿದಳೆ
ಮುತ್ತಿನ ತಬಕ ಹಿಡಿದಳೆ ಚಿತ್ರಾಂಗದೆ
ಬುಕ್ಕೄಟ್ಟಾಕುತಲಿ ಬರುತಾಳೆ ೯

ಬೀಸೊ ಚಾಮರವೆಷ್ಟೊ ಬಿಳಿಯೆಲೆ ಅಡಿಕ್ಯೆಷ್ಟೊ
ಭೂಸುರರೆಷ್ಟು ಸಭೆಯೊಳು
ಭೂಸುರರೆಷ್ಟು ಸಭೆಯೊಳು ಕುಳಿತ ಸು-
ವಾಸಿನಿಯರೆಷ್ಟು ಕಡೆಯಿಲ್ಲ ೧೦

ಪಾರಸುಪ್ಯನ ಮುಂದೆ ವೀಣಾಗಾಯನವೆಷ್ಟೊ
ವಾಣಿ ಮಾವನ್ನ ನುಡಿಸುತ
ವಾಣಿ ಮಾವನ್ನ ನುಡಿಸುತ ಸಭೆಯೊಳು
ನಾರದ ನಲಿದಾಡೊ ಸುಖವೆಷ್ಟೊ ೧೧

ಸತ್ಯಮೂರ್ತಿಯ ಸರಸದಿಂದ ನೋಡುವರೆಷ್ಟೊ
ಕೃಷ್ಣೆ ಸುಭದ್ರೆ ಸುಖವೆಷ್ಟೊ
ಕೃಷ್ಣೆ ಸುಭದ್ರೆ ಸುಖವೆಷ್ಟೊ ಹರಿಯ ಗುಣ ಸ-
ಮಸ್ತ ಕೊಂಡಾಡೋ ದಯವೆಷ್ಟೊ ೧೨

ವೇದ ಭೇದಗಳೆಷ್ಟೊ ವಾದ ಮಾಡುವರೆಷ್ಟೊ
ಆದಿಮೂರುತಿಯು ಸ್ತುತಿಸುತ
ಆದಿಮೂರುತಿಯು ಸ್ತುತಿಸುತ ಸಭೆಯೊಳು
ಸಾದೇವನ ಪುಣ್ಯಫಲವೆಷ್ಟೊ ೧೩

ಭಕುತ ಜನರಿನ್ನೆಷ್ಟೊ ಮುಕುತಿ ಬೇಡುವರೆಷ್ಟೊ
ಸಕಲರಿಗಧಿಕ ಹರಿಯೆಂದು
ಸಕಲರಿಗಧಿಕ ಹರಿಯೆಂದಾಡುವರೊ ಈ
ನಕುಲನ ಪುಣ್ಯಫಲವೆಷ್ಟೊ ೧೪

ಹಾಟಕ ಮಂಟಪವೆಷ್ಟೊ ಊಟಕೆ ಬಡಿಸುವರೆಷ್ಟೊ
ಕೋಟಿಮಣಿತೇಜ ವಲುತೆಷ್ಟೊ
ಕೋಟಿಮಣಿತೇಜ ತಾ ವಲುತರೀಮಹಿಮೆ ಕಿ-
ರೀಟಿಯ ಪುಣ್ಯಫಲವೆಷ್ಟೊ ೧೫

ರಾಜ ಋಷಿಗಳಿನ್ನೆಷ್ಟೊ ಭೋಜನ ಮಾಡುವರೆಷ್ಟೊ
ಮೂರ್ಜಗದೊಡೆಯು ವಲುತೆಷ್ಟೊ
ಮೂರ್ಜಗದೊಡೆಯು ವಲುತರಿನ್ನೀಧರ್ಮ-
ರಾಜನ ಪುಣ್ಯಫಲವೆಷ್ಟೊ ೧೬

ಹೇಮ ಮಾಣಿಕ್ಯವೆಷ್ಟೊ ದಾನಧರ್ಮಗಳೆಷ್ಟೊ
ಭೀಮನ ಪುಣ್ಯಫಲವೆಷ್ಟೊ
ಭೀಮನ ಪುಣ್ಯಫಲವೆಷ್ಟೊಯಿವರಿಗೆ
ಭೀಮೇಶಕೃಷ್ಣೊಲಿದ ದಯವೆಷ್ಟೊ ೧೭

## ಧ್ವನಿ— ೬೯

*

ಚಿತ್ತಾರವನು ಬರೆದಳು ಜಾಣೆ
ಪಾರ್ಥರಾಯರ ಪಟ್ಟದ ರಾಣಿ ಪ.

ಗಚ್ಚಿನ ಗೋಡೆಯ ಮ್ಯಾಲೆ ಲಕ್ಷಕ್ಕೆ ಚಿತ್ತಾರ
ಲಕ್ಷಿಲ್ಲದ್ಹಾಂಗೆ ಬರೆದಳು
ಲಕ್ಷಿಲ್ಲದ್ಹಾಂಗೆ ಬರೆದಳು ದ್ರೌಪದಿಗೆ
ಮುತ್ತು ನಿವಾಳಿ ತೆಗಿಬೇಕೆ ೧

---

* ರಾಗ : ಶಂಕರಾಭರಣ, ಛಾಪುತಾಳ

ಸಣ್ಣ ಸುಭದ್ರೆ ತಾ ಬಣ್ಣ ಬಣ್ಣದ ಚಿತ್ರ
ಸನ್ಯಾಸಿ ರಥವ ಬರೆದಳು
ಸನ್ಯಾಸಿ ರಥವ ಬರೆದಳದರ ಮುಂದೆ
ಕನ್ಯಾಸಾರಥಿಯ ನಿಲಿಸ್ಯಾಳು ೨

ಪಾಂಚಾಲಿ ಬರೆದಂಥ ಪರಮ ಚಿತ್ರದ ಗೊಂಬಿ
ಕಂಕಭಟ್ಟೆಂಬ ಪುರುಷನ
ಕಂಕಭಟ್ಟೆಂಬೊ ಪುರುಷನ ಕೈಯಲ್ಲಿ
ಪಂಚಾಂಗ ಯಾಕೆ ಬರೆದಳು ೩

ಚೆಲ್ವೆ ದ್ರೌಪದಿ ಚಿತ್ರ ಬಲ್ಲಷ್ಟು ಬರೆದಳು
ಬಲ್ಲವನೆಂಬೊ ಪುರುಷನ
ಬಲ್ಲವನೆಂಬೊ ಪುರುಷಗೆ ತಾ ಬಲ ಗೈ-
ಯಲ್ಲಿ ಹುಟ್ಟು ಹಿಡಿಸ್ಯಾಳು ೪

ದುಂಡು ಹರಡಿ ನೋಡೆ ಗೊಂಡ್ಯಪ್ಪರಳು ನೋಡೆ
ಸಂಗೀತ ಹೇಳೊ ಪುರುಷನ
ಸಂಗೀತ ಹೇಳೋ ಪುರುಷನ ದ್ರೌಪದಿ
ಷಂಡರೂಪವನು ಬರೆದಳು ೫

ಈ ಜಾಣೆ ಬರೆದಂಥ ಸೋಜಿಗದ ಚಿತ್ತಾರ
ರಾಜಾಧಿರಾಜನನುಜನ
ರಾಜಾಧಿರಾಜನನುಜನ ಕೈಯಲ್ಲಿ
ತೇಜಿಯನ್ಯಾಕೆ ಬರೆದಳು ೬

ಭೂಪಾಲಕನ ಗೊಂಬೆ ಗೋಪಾಲಕನ ಮಾಡಿ
ಆಕಳ್ಹಿಂಡುಗಳ ಬರೆದಳು
ಆಕಳ್ಹಿಂಡುಗಳ ಬರೆದಳು ದ್ರೌಪದಿಗೆ ನಾವ್
ಸಿಪಾರಸ್ತು(ಶಿಫಾರಸ್?) ಕೊಡಬೇಕು ೭

ಕಪಹಾಲ್ದ ಮರ ನೋಡೆ ಉಡುವ ಸೀರೆಯು ನೋಡೆ
ಮಡದೇರ ಸುತ್ತ ಬರೆದಳು
ಮಡದೇರ ಸುತ್ತ ಬರೆದಳು ದ್ರೌಪದಿ
ತನ್ನೊಡಹುಟ್ಟಿದವರ ಗುಣಗಳ ೮

ಕೃಷ್ಣತಾ ಭೀಮೇಶ ಕೃಷ್ಣ ಬಲರಾಮರ
ಹಸ್ತದಿ ಕೊಳಲು ಬರೆದಳು
ಹಸ್ತದಿ ಕೊಳಲು ಬರೆದಳದರ ಮುಂದೆ
ವತ್ಸದ್ಹಿಂಡುಗಳ ನಿಲಿಸ್ಯಾಳು ೯

## ಧ್ವನಿ—೭೦

ಏಳಿರುಡುಗೊರೆ ಕೊಡುವೆ ಭಾಮೆ ರುಕ್ಮಿಣಿಯರಿಗೆ
ನೀಲ ಮಾಣಿಕ್ಯದ ಹಸೆಮ್ಯಾಲಿ ಶ್ರೀಕೃಷ್ಣ
ಏಳಿರುಡುಗೊರೆ ಕೊಡುವೆನು ಪ.

ಜಾಂಬೂನದಂಬರ ನಿನಗೆ ತಂದೆವು ಸ್ವಾಮಿ
ಜಾಂಬವಂತೀಶ ಉಡುಬಾರೊ
ಜಾಂಬವಂತೀಶ ಉಡುಬಾರೊ ನಮಗಿನ್ನು
ಇಂಬು ವೈಕುಂಠದಲ್ಲಿ ಕೊಡು ಬಾರೊ ಕೃಷ್ಣ ೧

ವಜ್ರಮಾಣಿಕ್ಯದ ಹೊಸವಂಕಿ ಕಂಕಣ ಹಸ್ತ
ಪ್ರಜ್ವಲಿಸುತಿರುವಂಥ ಹರಳುಪಂಜರದ್ವಾಲೆ
ಹೆಜ್ಜೆಗಲೆವೊ ಪೀತಾಂಬರವು ಗೆಜ್ಜೆ ಸರಪಳಿ
ರುಕ್ಮಿಣಿದೇವೇರಿಗುಡುಗೊರೆ ಕೃಷ್ಣ ೨

ಪಚ್ಚೆ ಮಾಣಿಕ್ಯದ ಹೊಸವಂಕೆ ಬಾಜೂಬಂದು
ಅಚ್ಚ ಮುತ್ತಿನ ದಂಡೆ ರತ್ನ ಪಂಜರದ್ವಾಲೆ
ಪಟ್ಟೆಗ್ಹೊಳೆವಂಥ ಜರತಾರಿ ಪೀತಾಂಬರವು
ಸತ್ಯಭಾಮಾದೇವಿಗುಡುಗೊರೆ ಕೃಷ್ಣ ೩

ರತ್ನಮಯವಾದ ರಾಗಟೆ ಜಾರಿ ಕ್ಯಾದಿಗೆಯು
ಅಚ್ಚ ಮುತ್ತಿನ ದಂಡೆ ಅರೆಚಂದ್ರ ಶಿಸ ಹೂವು ?)
ಜತ್ತಾದ ಜಡೆಯುಬಂಗಾರ ಪೀತಾಂಬರವು
ಅಷ್ಟಮ ಸತಿಯರಿಗುಡುಗೊರೆ ಕೃಷ್ಣ ೪

ಜರ ಕಮಲಿಪ್ಹೊಷ್ಯಾಣ ಜೆಲುವ ತಾಯಿತ ಮುತ್ತು
ಸರಿಗೆ ಕಟ್ಟ್ಯಾಣಿ ನಾಗಮುರಿಗೆಗೊಪ್ಪುವ ಕುಬುಸ

ವರ ವಜ್ರದಾಭರಣ ಹರಿಯು ಹದಿನಾರು ಸಾ–
ವಿರ ಮಂದಿ ಸತಿಯರಿಗುಡುಗೊರೆ ಕೃಷ್ಣ ೫

ಅಷ್ಟ ಭಾರ್ಯೇರಿಗೆರಗಿ ಕೃಷ್ಣೆ ತಾ ನಿಂತಿರಲು
ಭಕ್ತಳನು ನೋಡಿ ಭೀಮೇಶಕೃಷ್ಣನು ನಗುತ
ಕೊಟ್ಟು ವೀಳ್ಯವನು ಕೈಹಿಡಿದು ದ್ರೌಪದಿ ನಿನಗೆ
ಕೊಟ್ಟನೆಸ್ವಲ್ಕುಂತದ ಅಷ್ಟಪದವಿಯನು ೬

## ಧ್ವನಿ—೭೧

ಕರಿ(ರಿಯೆ?)ಭಾಮೆ ಕಮಲಾಕ್ಷಿ ದ್ರೌಪದಿಯು ಕರಿ ಭಾಮೆ
ಕರಿಪುರದೊರೆಸತಿಯಾದ ಹರದಿ ದ್ರೌಪದಿಯು ಕರಿ ಭಾಮೆ ಪ.

ಪಂಚರತ್ನದ ಕಾಂತಿ ಮಿಂಚು ಆಭರಣವು
ಪಾಂಚಾಳಿಮುತ್ತು ಪದಕವೆ
ಪಾಂಚಾಳಿಮುತ್ತು ಪದಕ ಹಾಕುವೆನಮ್ಮ
ಪಾಂಚಾಲದೇವಿ ಕೊರಳಿಗೆ ೧

ಜರದ ಪೀತಾಂಬರ ನಿರಿಗ್ಯೆಲ್ಲ ಬಿಡಿಮುತ್ತು
ಸೆರಗಿನ ಗೊಂಬೆ ನಗುತಾವೆ
ಸೆರಗಿನ ಗೊಂಬೆ ನಗುವ ಪೀತಾಂಬರ
ಹರದಿ ದ್ರೌಪದಿಗೆ ಉಡುಗೊರೆ ೨

ಬೇಕಾದಾಣಿಮುತ್ತು ಯೇಕಾವಳಿಯು ಸರ
ತೂಕಾದ ಸರಿಗೆ ಸರಗಳು
ತೂಕಾದ ಸರಿಗೆ ಸರಗಳು ಪಾರ್ಥ–
ನ ಕಾಂತೆ ಸುಭದ್ರೆಗುಡುಗೊರೆ ೩

ತೋರ ಮುತ್ತಿನ ಕೊರಳ್ಹಾರ ಪದಕವಿಟ್ಟು
ಮೇಲಾದ ಸೆರಗು ಜರತಾರಿ
ಮೇಲಾದ ಸೆರಗು ಜರತಾರಂಚಿನ ಸೀರೆ
ತಾಯಿ ಕುಂತ್ಯೆಮ್ಮಗುಡುಗೊರೆ ೪

ಪದ್ಮನ್ಹಾವಿನ ಸೀರೆ ಮುಗ್ಗಿಯ(ನೊಗ್ಗಿನ?) ಕುಪ್ಪುಸ
ವಜ್ರದ್ಹಾರಗಳ ನಡುವಿಟ್ಟು

ವಜ್ರದ್ವಾರಗಳ ನಟುವಿಟ್ಟ ಸ್ತ್ರೀನಾವತಿಯು-
ಲ್ಲಿದ್ದ ಜನರಿಂಗೆ ಉಡುಗೊರೆ ೫

ದ್ರಾಯರ್ಾದ್ರೂ ವಿನ ಸೀರೆ [1]ಜರಮುಗ್ಗಿ[1] ಕುಪ್ಪಸ
ಜೋಡಿಸಿ ಹಿಡಿದೌ(ದವ?)ರು ಕಡೆಯಿಲ್ಲ
ಜೋಡಿಸಿ ಹಿಡಿದೌರು ಕಡೆಯಿಲ್ಲ ಮುಯ್ಯವ
ನೋಡ ಬಂದವರಿಗುಡುಗೊರೆ ೬

ಅಚ್ಚ ಪೀತಾಂಬರ ಹೆಚ್ಚಿನ ಜವಳಿಯು
ಬಿಚ್ಚಿ ಕೊಡುವೋರು ಕಡೆಯಿಲ್ಲ
ಬಿಚ್ಚಿಕೊಡುವೋರು ಕಡೆಯಿಲ್ಲ ಭೀಮೇಶ-
ಕೃಷ್ಣ ತಂದಿದ್ದನುಡುಗೊರೆ ೭

## ಧ್ವನಿ—೭೨

ಕೊಡು ಬಾ ಬಲರಾಮ ಹಿಡಿ ಉಡುಗೊರೆಯ ನಿ-
ನ್ನೊಡೆಯ ಧರ್ಮರಿಗಿನ್ನು ಉಡಿಗೆ ಪೀತಾಂಬರ
ನಡುವಿನೊಡ್ಯಾಣವು ಬಿಗಿಮುತ್ತಿನ್ಹಾರ ಪದಕ ಹರುಷದಿ ಪ.

ಪಚ್ಚ್ಯಪ್ಪ(ಚ್ಚೆಹ?)ಳು ವಜ್ರ ಕೆತ್ತಿದ ಕಿರೀಟ
ರತ್ನ ಮಾಣಿಕ್ಯದುಂಗುರ
ಅಚ್ಚಮುತ್ತಿನಸರ ಪದಕ ಪೀತಾಂಬರ
ಸತ್ಯಧರ್ಮರಿಗೆ ಉಡುಗೊರೆ ಹರುಷದಿ ೧

ಹೇಮ ಮಾಣಿಕ್ಯ ರತ್ನ ಕೆತ್ತಿದ ಕಿರೀಟ
ನೀಲದ್ಹೊನ್ನುಂಗುರವು
ಆಣಿ ಮುತ್ತಿನ ಸರ ಪದಕ ಪೀತಾಂಬರ
ಭೀಮಸೇನರಿಗೆ ಉಡುಗೊರೆ ಹರುಷದಿ ೨

ಜಾತಿ ಮಾಣಿಕ್ಯ ರತ್ನ ಕೆತ್ತಿದ ಕಿರೀಟ
ಪ್ರೀತಿ ಹೊನ್ನುಂಗುರವು
ಜ್ಯೋತಿ ಮುತ್ತಿನ ಸರ ಪದಕ ಪೀತಾಂಬರ ಪ್ರ-
ಖ್ಯಾತ ಪಾರ್ಥರಿಗೆ ಉಡುಗೊರೆ ಹರುಷದಿ ೩

ಕುಂದಣ ಕೆತ್ತಿದ ಬಂಗಾರದೊಡ್ಯಾಣ
ರಂಗು ಮಾಣಿಕ್ಯದುಂಗುರ

---

1 [ಜರಿಯಮೊಗ್ಗಿನ?]

ದುಂಡುಮುತ್ತಿನ ಸರ ಪದಕ ಪೀತಾಂಬರ
ಸುಂದರ ನಕುಲಗುಡುಗೊರೆ ಹರುಷದಿ ೪

ವರಮಣಿಮಯ ವಜ್ರ ಕೆತ್ತಿದ ಕಿರೀಟ
ಜರದ ಪೀತಾಂಬರವು
ಒರೆದು ಭೀಮೇಶಕೃಷ್ಣನ ಭಕ್ತನಾಗಿದ್ದ
ಚೆಲುವ ಸಾದೇವಗುಡುಗೊರೆ ಹರುಷದಿ ೫

## ಧ್ವನಿ—೭೩

ಕರೆಯೆ ಕರೆಯೆ ಕೃಷ್ಣರ ಕರೆಯೆ ಕೃಷ್ಣೆ
ಹರಿಯು ಕೂಡ ಭರದಿ ಓಕುಳಿ ಆಡುವ್ರೋಣಂತೆ ಪ.

ಮಚ್ಛನಾಗಿ ಜಲದ ಒಳಗೆ ಇಚ್ಛಾನುಸಾರ ಆಡಿದವಗೆ
ಸ್ವಚ್ಛವಾದ ಓಕುಳಿ ನೀರ್ಗೆ ಗುಜ್ಜನೆ ಕೊಳಕು ನಾರವಂತೆ ೧

ಮಂದರವನೆ ಪೊತ್ತ ನೀರ್ಗೆ ತುಂಬಿಸೋಕುಳಿ ಚೆಲ್ಲಿದರೀಡಿ
ಹಿಂದೆ ಬೆನ್ನು ಗಟ್ಟಿ ಚಳಿಯಿಂದ ರಹಿತನಾದ ಹರಿಯು ೨

ಕುಸುಮನಾಭ ಬ್ರಹ್ಮನ ನಾಸಿಕದ ಉಸಿರಿನಿಂದ ಜನಿಸಿ
ಕೆಸರು ಬಗೆದ ಕೋರೆ ನೀರ್ಗೆ ಹಸನಾದೋಕುಳಿ ಹಾಕುವ್ರೋಣಂತೆ ೩

ಖಳನ ರಕ್ತ ಎಳೆದ ಶ್ರವ(ಮು?)ನ ಕೊರಳ ಬಿಡಿಸಿ ಕರುಳ ಮಾಲೆ
ತೊಳೆದು ನೀರ್ಗೆ ಶುದ್ಧ ಮಾಡಿ ಘೋರನೋಕುಳಿ ಹಾಕುವ್ರೋಣಂತೆ ೪

ಎಷ್ಟು ಓಕುಳಿ ಸಾಲದು ತ್ರಿವಿಕ್ರಮನಾಗಿ ಬೆಳೆದವ್ಯಾಲೆ
ಪುಟ್ಟವಟುವಾಗಿರಲಿಕೊಂದು ಬಟ್ಟಲವೊ(ಲಿನೊ?)ಳಗೆ
ಮುಗಿಸೋಣಂತೆ ೫

ಭೂತಳವನೆ ದ್ವಿಜರಿಗಿಟ್ಟ ಮಾತೆ ಕೊಂದ ಪಾತಕ ಕಳೆದು ಪ್ರ-
ಖ್ಯಾತನಾಗಿ ಬರಲು ತಡವು ಮಾತೃಹತ್ಯೆಮಾಡದ(ಡುವ?)ಮುಂಚೆ ೬

ಜನನಿ ಮಾತು ಕೇಳಿ ವನವನವ ಚರಿಸಿ ಅನುಜರೊಡನೆ
ವಾನರೇಶನ ಬಲವ ಕಟ್ಟಿ ವನಿತೆ ತಂದ ಘನತೆಗುಂಜೋರೊ ೭

ಬಾಲಕಿಯರ ಮನೆಮನೆ ಗೋಪಾಲಕರನು ಕೂಡಿ ಮಾ
ಜಾರಲನಂತೆ ತಿರುಗೋಕೃಷ್ಣಗ್ವಾಲಿನೋಕುಳಿ ಹಾಕೋಣಂತೆ ೮

ಅಂಬರವನು ಕಾಣದೆ ದಿಗಂಬರನಾಗೋಡಾಡುತಿಹನು
ಚೆಂದದಿಂದ ಓಕುಳಿಯಾಡಿಸ್ಕೊಂಡು ವಸ್ತ್ರ ಕೊಡುವ್ರೋಣಂತೆ ೯

ಘೋರ ತುರಗವೇರಿ ಹಾರ್‍ಯಾಡೋನೋಕುಳಿ ಯಾಕುವೃದ್ಯ್ಯಾಗೆ
ಧೀರ ಪಾರ್ಥರಾಯರ ರಥಕೆ ಸಾರಥಿ ಮಾಡಿ ಮೆರೆಸೋಣಂತೆ ೧೦

ನಕುಲ ಸಾದೇವ ಧರ್ಮ ಬಕನೈರಿ ಭೀಮ ಪಾರ್ಥ
ಸಖಿ ಸುಭದ್ರೆ ದ್ರೌಪದಿಕೂಡ ಸಕಲ ಸದ್ಗುಣಗ್ಳಾಕಿದರಾಗ ೧೧

ಇಂದಿರೇಶ ಭಾಮೆ ರುಕ್ಮಿಣಿಯಿಂದಲಿ ಭೀಮೇಶಕೃಷ್ಣ
ಕುಂದಣದ ಕೊಳವಿಲೋಕುಳಿ ಪಾಂಡುಭೂಪನ ಸುತರಿಗ್ಹಾಕಿದ ೧೨

## ಧ್ವನಿ—೭೪

ಪೂಜೆ ಮಾಡಿದರು ಪುನ್ನಾಗ ಪುಷ್ಪಗಳಿಂದ
ರಾಜ ಧರ್ಮರು ರಾಮಕೃಷ್ಣರಿಬ್ಬರನು
ಪೂಜೆ ಮಾಡಿದರು ಬ್ಯಾಗ ಪ.

ಓಕುಳಿಯನಾಡಿ ಅನೇಕ ಸಂಭ್ರಮದಿಂದ
ಶ್ರೀಕಾಂತ ನಗುತ ಶ್ರೀ ಸಹಿತ ಕುಳ್ಳಿರಲಾಗ
ಪಾಕಶಾಸನಸುತನು ಪರಮ ಭಕ್ತಿಯಲಿಂದ
ತಾ ಕೈಪಿಡಿದೆಬ್ಬಿಸಿದನು ೧

ವಜ್ರ ಮಾಣಿಕ್ಯದ ಗದ್ದಿಗೆಯಲ್ಲಿ ಕುಳ್ಳಿರಿಸಿ
ಶುದ್ಧ ಸ್ನಾನವ ಮಾಡಿ ಮಡಿಯನುಟ್ಟು ಧ-
ರ್ಮಜನು ಅರ್ಘ್ಯಪಾದ್ಯಾರ್ಚನವ ಮಾಡಿ ಶ್ರೀಹರಿಗೆ
ವಿಧ್ಯುಕ್ತದಿಂದ ಅಭಿಷೇಕ ಮಾಡಿದರು ೨

ಗೋಪಾಲಕೃಷ್ಣಗೆ ಗೋಕ್ಷೀರದಿಂದೆರೆದು
ಅಪಾರ ಮಹಿಮಗಾ ಪೀತಾಂಬರವನುಡಿಸಿ
ದೀಪ ಗಂಧಾಕ್ಷತೆ ಧೂಪ ಆರತಿಯೆತ್ತಿ ಅನೇಕ
ಸಂಭ್ರಮದಿ ಏಕಾರತಿಯ ಬೆಳಗಿ ೩

ಭೂಮಂಡಲೇಶನ ಮುಂದೆ ಮಂಡಲ[1][ವ][1] ಮಾ-
ಡಿ ಮಂಡಿಗೆ ಫೇಣಿಗಳು ದುಂಡುಗುಳ್ಳೋರಿಗೆಯು

---

1 ನೆ

ಉಂಡೆ ಚುರ್ಮಾಬುಂದ್ಯದುಂಡೆ
ಬೀಸೋರಿಗೆಯ ತಂದಿಟ್ಟರಾವಿಧದಿಂದಲಿ ೪

ಅಣ್ಣ ಕೃಷ್ಣನ ಮುಂದೆಯೆಣ್ಣೋರಿಗ್ಹೋಳಿಗೆಯು
ಸಣ್ಣಶ್ಯಾವಿಗೆಫೇಣಿ ಸರ್ವ ಭಕ್ಷ್ಯಂಗಳನು
ಕಣ್ಣಿಗಿಂಪಾದ ಕಲಸನ್ನ ಕೇಸರಿಭಾತು
ದಧ್ಯಾನ್ನವನು ತಂದಿಟ್ಟರು ೫

ನಾಗಶಯನನ ಮುಂದೆ ಓಗರವ ಕಲಸು ಮೇ–
ಲೋಗರವ ತಂದಿಟ್ಟರಾಗ ಕಾಸಿದಪಳದ್ಯ
ಬಾಗಿದ ಸಣ್ಣಕ್ಕಿಶಾಲ್ಯಾನ್ನ ಭಾಂಡ್ಯಗಳಲ್ಲಿ
ಬ್ಯಾಳೆತವ್ವೆಯನಿಟ್ಟರು ೬

ಸಾಗರಳಿಯನ ಮುಂದೆ ಸಾರು ಸಾಂಬಾರ ಸಾಸಿ–
ವೆಗಾಯಿ ಮುಂತಾದ ಸರ್ವಭಕ್ಷ್ಯಗಳನ್ನು
ಕಾಯ್ಹಾಲು ಹುಗ್ಗಿ ಹೊಯ್ಗಡುವು
ಕೋಸಂಬರಿಯು ಬ್ಯಾಗದಲಿ ತಂದಿಟ್ಟರು ೭

ಅಪ್ರ(ಅಪಾರ?) ಮಹಿಮನ ಮುಂದೆ ಹಪ್ಪಳ ಸಂಡಿಗೆಯು
ತುಪ್ಪದಲಿ ಕರಿದ ಚಕ್ಕುಲಿ ಕರ್ಜಿಕಾಯಿಗಳು
ಅಪ್ಪಾಲು ಅತಿರಸಾಂಜೋಡೆ ಹೂರಣಗಡುವು
ತಪ್ಪದಲೆ ತಂದಿಟ್ಟರು ೮

ಸಕಲರೊಳು ಸೌತೆಕಾಯಿಭಾತು ಜಿಲೇಬಿಗಳು
ಶಿಖಿಯುದುಂಡೆಯು ಭಿನ್ನಭಕ್ಷ್ಯ ಸೀ ಹುಳಿದೋಸೆ
ಮುಖವಿಲಾಸವು ಮೋತಿಚೂರಿ ಗೇಹೂರ ತೇಂ–
ತೊಳಿ ತಂದು ತುಂಬಿಟ್ಟರು ೯

ನಾನಾವಿಧ ಚಟ್ಟಣಿ ನಾಲ್ಕು ಉಪ್ಪಿನಕಾಯಿ
ಶ್ಯಾವಿಗೆ ಗೌಲಿ ಬಟ್ಟವಿ ಪರಡಿ ಪರಮಾನ್ನ
ಬ್ಯಾಗ ಸಕ್ಕರೆ ತಬಕಿನಾಗೆ ತಾಂಬೂಲವನು
ಪನ್ನೀರುಗಿಂಡಿಯನಿಟ್ಟರು ೧೦

ಆಕಳ ಬಿಸಿಹಾಲು ಆಗ ಕಾಸಿದ ತುಪ್ಪ
ಬೇಕೆಂಬ ಕೆನೆಮೊಸರು ಬೆಣ್ಣೆ ಸೀಕರ್ಣೆಗಳು

ಆ ಕಮಲನಾಭನಿಗನೇಕ ಫಲ ನೈವೇದ್ಯ
ಏಕ ಭಕ್ತಿಯಲಿಟ್ಟರು ೧೧

ಘಂಟಾನಾದಗಳಿಂದ ಪಂಟಿ ಕರ್ಪುರವು ವೈ-
ಕುಂಠಪತಿಗೆ ನೂರಾಯೆಂಟು ಮಂಗಳಾರತಿಯು
ನಂಟರಲ್ಲವೋ ನಿನ್ನ ಬಂಟರು ನಾವೆಂದು
ಕಂಠಕ್ಹಾಕಿದರು ಪೂಮಾಲೆ ತುಳಸಿಯನು ೧೨

ಇಷ್ಟಫಲದಾಯಕಗೆ ಎಷ್ಟು ಉಪಚಾರಗಳು
ಎತ್ತಿ ಚಾಮರವ ಎಡ ಬಲದಲ್ಲಿ ಬೀಸುತಿರೆ
ಮತ್ತೆ ವೇದೋಕ್ತಗಳು ಪುಷ್ಪ ಮಂತ್ರಾಕ್ಷತೆಯು
ಸಮರ್ಪಿಸಿದರಾಗ ಹರಿಗೆ ೧೩

ಕುಡಿಬಾಳೆಯೆಲೆ ಹಾಕಿ ಸಡನೆ ಮುತ್ತಿನ ಮಣೆಯು
ಎಡೆಯೆಡೆಗೆ ಜೋಡು ಜ್ಯೋತಿಗಳ್ಹಚ್ಚಿ ಭೂಸುರರು
ಕುಡಿವೊ ತಂಬಿಗೆ ಥಾಲಿ ಉಡುವೊ ಪೀತಾಂಬರವು
ಹಿಡಿದವರು ಕಡೆಯಿಲ್ಲದೆ ೧೪

ದೇವಋಷಿ ಬ್ರಹ್ಮಋಷಿ ರಾಜಋಷಿ ಬಲರಾಮ ಯಾ-
ದವರ ಸಹಿತ ಪಾಂಡವರು ಕುಳ್ಳಿರಲಾಗ
ಭಾಮೆ ರುಕ್ಮಿಣಿ ಸುಭದ್ರೆ ದ್ರೌಪದಿಸಹಿತ
ಭೋಜನಕೆ ಕುಳಿತರಾಗ ೧೫

ಭೀಮ ಪಾರ್ಥಸಹಿತ ಭೀಮೇಶಕೃಷ್ಣನು
ಸೋಮ ಸೂರ್ಯರ ಕಾಂತೆಯರುಂಡು ಕೈ ತೊಳೆದು
ಬ್ಯಾಗ ತಾಂಬೂಲ ವೀಳ್ಯವ ಕೊಂಡು ಶ್ರೀಹರಿಯು
ಹೋಗಿ ಬರುವೆನೆಂದನು ೧೬

## ಧ್ವನಿ—೭೫

ಏಳೆ ರುಕ್ಮಿಣಿದೇವಿ ದ್ವಾರಾವತಿಗೆ ಏಳೆ ಕಂಜೋದ್ಭವತೆ
ಏಳೆ ಕಮಲಜೆ ಮಾತೆ ಏಳೆ ಜಗದೀಶನ ಪ್ರೀತೆ ಪ್ರಖ್ಯಾತೆ
ಏಳೆ ರುಕ್ಮಿಣಿ ಪ.

ನಾಲ್ಕುಮುಖದ ಬ್ರಹ್ಮ ಶ್ರೀರಂಗ ರುಕ್ಮಿಣಿಗೆ
ಏಕಭಕ್ತಿಯಲಿ ವಂದನೆಯ ಮಾಡಿ

ಗೋಕುಲದರಸು ಹರಿ ಗೋವರ್ಧನುದ್ಧಾರ
ಯಾದವ ಶಿರೋಮಣಿ ಕೃಷ್ಣ ಪಕೋ ದ್ವಾರಕೆಗೆ ೧

ಮೂರು ನೇತ್ರದ ಹರನು ಮುಂಭಾಗದಲಿ ನಿಂತು
ಭಾಮೆ ರುಕ್ಮಿಣಿಯರಿಗೆ ಭಾವಶುದ್ಧದಲಿ
ಕ್ಷೀರಸಾಗರ ತನುಜೆ ಶ್ರೀ ಸತ್ರಾಜಿತಕುಮಾರಿ
ಸೋಮಬಿಂಬದ ವದನೆ ಲಾಲಿಸೆಂದೆನುತ ೨

ತುಂಬುರರು ನಾರದರು ಗಂಧರ್ವಗಾಯಕರು
ರಂಭೆ ಊರ್ವಶಿಯರು ವಂದಿ ಭಟರುಗಳು
ಪಾಂಡುಭೂಪನ ಸುತರ ಪಾದಕ್ವಂದನೆ ಮಾಡಿ
ಇಂದಿರೇಶನ ಕೂಡಿ ಬಂದರಂಗಳಕೆ ೩

ಮುದ್ದು ರುಕ್ಮಿಣಿ ಭಾಮೆ ಹೆಜ್ಜೆ ಮಿಕ್ಕುತ ಬರಲು
ಎದ್ದು ದ್ರೌಪದಿ ಸುಭದ್ರ ತಾ[ವು]ನಗುತ
ಹೊದ್ದ ಪೀತಾಂಬರ ಸೆರಗ್ಹಿಡಿದರು ರುಕ್ಮಿಣಿಗೆ
ಹದ್ದುವಾಹನನ ಹೆಸರ್ಹೇಳಬೇಕೆನುತ ೪

ನಾರಿ ನಿಮ್ಮಗ್ರಜನ ನಾವು ಹೇಳುವೆ ಕೇಳು
ಸೋದರನ ಭಯಕೆ ಸರ್ವೋತ್ತಿನೊಳು ಜನಿಸಿ
ಜಾರ ಚೋರಸುರ ಸಂಹಾರ ಧೀರರ್ಜುನರ
ತೇರು ನಡೆಸಿದ ಬಿರುದು ಭೀಮೇಶಕೃಷ್ಣ ೫

## ಧ್ವನಿ—೭೬

ಎದ್ದನೆ ನಮ್ಮ ರಂಗ ಪದ್ಮ ಪಾದಗಳಿಂದ ಹದ್ದನೇರಿದನೆ
ಅಲ್ಲಿದ್ದ ಜನರ ಕೂಡಿ ಎದ್ದನೆ ನಮ್ಮ ರಂಗ ಪ.

ಹರಿ ಕುಂತಿದೇವೇರ ಚರಣಕ್ವಂದನೆ ಮಾಡಿ
ಪರಮ ಭಕ್ತಿಯಲಿಂದ ಕರವ ತಾ ಮುಗಿದು
ಶಿರದಲ್ಲಿ ಕರವಿಟ್ಟಾಶೀರ್ವಾದ ಮಾಡೆಂದು
ತಿರುಗಿ ಬರುವೆನ್ಹೋಗಿ ಅಪ್ಪಣೆ ನೀಡೆಂದೆನುತ ೧

ಅಷ್ಟಮ ಸತಿಯರಿಂದ ಜಗನ್ನಾಥನು
ಪಟ್ಟದರಸಿ ರುಕ್ಮಿಣಿ ಭಾಮೆ ಸಹಿತ

ಪಟ್ಟೆ ಸಾಲೆಯು ಬಿಟ್ಟು ಪರಮ ಹರುಷದಿಂದ
ಕೃಷ್ಣ ಬಂದನು ಮಣಿಕಟ್ಟೆನಂಗಳಕೆ ೨

ನಕುಲ ಸಾದೇವ ಭೀಮಾರ್ಜುನ ಧರ್ಮರು
ಭಕ್ತವತ್ಸಲನ ಪಾದಕೆ ಎರಗಿ
ಮುಕುತಿದಾಯಕ ಮುಂದಕ್ಕೊಯ್ಯಗದಿರೆನುತಲಿ
ಸಕಲ ಜನರು ಸುತ್ತುಗಟ್ಟೆ ಶ್ರೀಹರಿಯ ೩

ಅತ್ತೆ ಸುತರ ಮಾತು ಚಿತ್ತದೊಳಗೆ ಇಟ್ಟು
ಅತ್ಯಂತ ವಿನಯದಿ ಮಾತನಾಡುತಲಿ
ಇವತ್ತೆ ಪೋಗುವೆ ನಾಳೆ ಪತ್ತೆ ಬರುವೆನೆಂದು
ಅಪ್ಪಣೆ ಕೊಡೊ ನಮ್ಮ ಪಟ್ಟಣಕೆಂದ ೪

ಚೆಲ್ವೆ ದ್ರೌಪದಿ ಭದ್ರೆ ಮೆಲ್ಲನೆ ನಡೆತಂದು
ಎಲ್ಲಿಗ್ಹೋಗುವಿ ರಂಗ ನಿಲ್ಲಬೇಕೆನುತ
ಫುಲ್ಲಾಕ್ಷ ನಮ್ಮನು ಅಗಲದಿರೆನುತಲಿ
ಮಲ್ಲಿಗೆ ಶಿರ ಪಾದದಲ್ಲಿ ಮನ್ನಿಸುತ ೫

ಇಂದು ವದನೆಯರಂದ ವಾಕ್ಯವ ಕೇಳಿ
ಮಂದರೋದ್ಧಾರ ಮಾತನಾಡಿ ತಾ ನಗುತ
ಇಂದೆ ಪೋಗುವೆ ನಾಳೆ ಬಂದೇನೀಮಾತಿಗೆ
ಸಂದೇಹ ಬ್ಯಾಡ ಸುಭದ್ರೆ ಕೇಳೆಂದ ೬

ಭೇರಿ ತಮ್ಮಟೆ ಬಿರುದಿನ ಹೆಗ್ಗಾಳೆಯು
ಭೀಮೇಶ ಕೃಷ್ಣನ ಮುಂದೆ ಓಲಗವು
ವಾರಿಜಾಕ್ಷನು ಅಜ ಸುರರ ಸಹಿತವಾಗಿ
ಮಾರನಯ್ಯನು ಮಹಾದ್ವಾರಕೆ ಬರಲು ೭

ಧ್ವನಿ—೭೭

ಹೇಳೆ ಕಾಮಿನಿ ಕೇಳುವೆ ಹೇಳೆ ಕಾಮಿನಿ
ನಮ್ಮ ಸಾಮಜವರದ ಸುದಾಮನ ಸಖನ
ಹೆಸರನು ಹೇಳೆ ಕಾಮಿನಿ ಕೇಳುವೆ ಪ.

ಸೂರ್ಯ ಉದಿಸಿದಂತೆ ನಾರಿ ರುಕ್ಮಿಣಿದೇವಿ
ಬ್ಯಾಗನೆ ಬಂದಳ್ಹೊರಿಯಕ್ಕೆ

ಬ್ಯಾಗನೆ ಬಂದಳ್ಹೊರಿಯಕ್ಕೆ ದ್ರೌಪದಿ
ದ್ವಾರ್ಯದ ಕೈಯು ಹಿಡಿದಳು ೧

ಅರ್ಕ ಉದಿಸಿದಂತೆ ಸತ್ಯಭಾಮಾದೇವಿ
ಗಕ್ಕನೆ ಬಂದಳ್ಹೊರಿಯಕ್ಕೆ
ಗಕ್ಕನೆ ಬಂದಳ್ಹೊರಿಯಕ್ಕೆ ದ್ರೌಪದಿ
ಹಸ್ತವನ್ಹಿಡಿದು ನುಡಿದಳು ೨

ಕರ್ನೇ(ನ್ಯೇ?)ರಿಬ್ಬರು ನಮ್ಮಣ್ಣನ ಹೆಸರ್ಹೇಳ-
ದಿನ್ನು ದಾರಿಗಳ ನಾ ಬಿಡುವೆನೆ
ಇನ್ನು ದಾರಿಗಳ ಬಿಡುವೆನೇನೆಂದೆನುತಲಿ
ಸಣ್ಣ ಸುಭದ್ರೆ ತಾ ನುಡಿದಳು ೩

ಅಸುರೆ ಪೂತಣೆ ವಿಷ ಅಸುವ್ಹೀರಿ ಕುಡಿದನು
ಮೊಸರಿನ ಕಳ್ಳನೆಂದೆನಿಸಿದ
ಮೊಸರಿನ ಕಳ್ಳನೆಂದೆನಿಸಿದ ಶ್ರೀಕೃಷ್ಣ-
ನ್ಹೆಸರು ಕೇಳಮ್ಮ ವನಜಾಕ್ಷಿ ೪

ಬೀಗಪಾರ್ಥನ ರಥ ಬಿಂಕದಿ ನಡೆಸಿದ
ಭೀಮನ ಮನೆ ಬಂಟನೆನಿಸಿದ
ಭೀಮನ ಮನೆ ಬಂಟನೆನಿಸಿದ ಭೀಮೇಶ-
ಕೃಷ್ಣರಾಯನೆಂಬ್ಹೆಸರು ಹೇಳುವೆ ಕೇಳೆ ೫

## ಧ್ವನಿ—೭೮

ಹೋಗಿ ಬರುವೆನೆ ಹೋಗಿ ಬರುವೆ ನಾ ದ್ವಾರಕಾಪುರಕಿನ್ನು
ಪಾಲಿಸಪ್ಪಣೆ ಪರಮ ಹರುಷದಲಿ ಕೃಷ್ಣೆ ಪ.

ಕೊಟ್ಟು ಹೋದರೆಂದು ತುಚ್ಛ ಮಾಡಲಿ ಬೇಡ
ಕೊಟ್ಟಂಥ ಮುಯ್ಯ ತಿರುಗಿಸೆ
ಕೊಟ್ಟಂಥ ಮುಯ್ಯ ತಿರುಗಿಸದಿದ್ದರೆ
ಪಾರ್ಥನ ಮಗಳು ಎನಿಸುವೆ ಕೃಷ್ಣೆ ೧

ನಮ್ಮ ಮುಯ್ಯವ ನಮಗೆ ತಿರುಗಿಸದಿದ್ದರೆ
ಹಮ್ಮು ಕೊಬ್ಬಿನಲಿ ಮರೆತರೆ
ಹಮ್ಮು ಕೊಬ್ಬಿನಲಿ ಮರೆತರೆ ದ್ರೌಪದಿ
ಧರ್ಮರ ಮಗಳು ಎನಿಸುವೆ ೨

ಬಂದ ಜನರೊಳು ನಮ್ಮ ನಿಂದ್ಯ ಮಾಡಿವರೆಂದು
ಸಂದೇಹ ಬ್ಯಾಡ ಮನದಾಗೆ
ಸಂದೇಹ ಬ್ಯಾಡ ಮನದಾಗೆ ಮಾಣಿಕ್ಯದ
ಬಂದಿಯು ಕೊಡುವೆ ಬಿಡು ಕೋಪ ಕೃಷ್ಣೆ ೩

ನೋಡೋ ಜನರೊಳು ಮುಖ ಬಾಡಿಸಿದವರೆಂದು
ಬೇಡವೆ ನಿನ್ನ ಮನದಾಗೆ
ಬೇಡವೆ ನಿನ್ನ ಮನದಾಗೆ ಮುತ್ತಿನ
ಹಾರವ ಕೊಡುವೆ ಬಿಡು ಕೋಪ ೪

ಇದ್ದ ಜನರೊಳು ನಮ್ಮನ್ಗೆದ್ದರೆಂದು ಹಿಡಿಯದೆ
ಮುದ್ದು ಸುಭದ್ರೆ ಮುನಿಯದೆ
ಮುದ್ದು ಸುಭದ್ರೆ ಮುನಿಯದಿದ್ದರೆ
ನಮ್ಮ ವಜ್ರದ್ಹಾರವ ಕೊಡುವೆ ಬಿಡು ಕೋಪ ೫

ವತ್ಸಪಾಲರ ತಂಗೇರಾದರಾಗಲಿ ನಮ್ಮ
ಪಾರ್ಥನ ಭಿಡಿಯ ನಮಗುಂಟೆ
ಪಾರ್ಥನ ಭಿಡಿಯ ನಮಗುಂಟೆ ಸುಭದ್ರೆ
ದಿಟ್ಟೆ ನಿನ ಮಾನ ಉಳಿಸೇವೆ ೬

ಆವುಪಾಲರ ತಂದೆಯರಾದರಾಗಲಿ ಧರ್ಮ-
ರಾಯನ ಭಿಡಿ ನಮಗುಂಟೆ
ರಾಯನ ಭಿಡಿಯ ನಮಗುಂಟೆ ದ್ರೌಪದಿ
ನೀರೆ ನಿನ ಮಾನ ಉಳಿಸೇವೆ ೭

ಪೊಂಗೊಳಲೂದಿ ಗೋವುಗಳ ಕಾಯ್ವೋ ಗೊಲ್ಲರ
ತಂಗೇರ ಭಿಡಿಯ ನಮಗೇನೆ
ತಂಗೇರ ಭಿಡಿಯ ನಮಗೇನೆ ನಮ್ಮ
ಧನಂಜಯನ್ಹಿಂದೆ ಉಳಿದಿರೆ ಕೃಷ್ಣೆ ೮

ಭೀಮೇಶಕೃಷ್ಣನ ಪ್ರೇಮದ ತಂಗೇರು
ಸಾಮಜಪುರದ ದೊರೆಗಳ
ಸಾಮಜಪುರದ ದೊರೆಸತಿ ದ್ರೌಪದಿ
ಹೋಗಿ ಬರುತೇವೆ ದಯವಿರಲೆ ೯

## ಧ್ವನಿ—೭೯

ಮಾತೆ ನಿನ್ನ ಮಾತು ಎನಗೆ ಪ್ರೀತಿಯಾಯಿತೆ
ಸೋತರೇನಾಯ್ತು ಜಗನ್ಮಾತೆ ರುಕ್ಮಿಣಿ ೧

ಪೊಡವಿಗೊ[1]ಡೀಯಿ[1]ದ್ದೆಡೆಗೆ ನೀನು ನಡೆದ ಚರಣಕೆ
ಮುಡಿಯ ಬಾಗಿ ನಾವು ಮುಕ್ತರಾದೆವಿಂದಿಗೆ ೨

ವಾಸುದೇವನ್ಹಾಸಿಕ್ಯಲ್ಲಿ ನಿಂತ ಚರಣಕೆ
ಈ ಶಿರಗಳ ಬಾಗಿ ನಾವು ಲೇಸು ಕಾಂಬೆವೆ ೩

ಅಂಬುಜಾಕ್ಷನಧರಾಮೃತದಚುಮ್ಮನಂಗಳ ಬಾ-
ಯಿಂದ ನುಡಿದ ನುಡಿಯ ಕೇಳ್ಯಾನಂದವಾಯಿತೆ ೪

ಹರಿಯ ಚರಣಕಮಲ ಸೇವೆಯಿದ್ದ ನಿನ್ನಯ
ಕರವ ಪಿಡಿದು ನಮ್ಮ ಕರ ಪವಿತ್ರವಾಯಿತೆ ೫

ರಂಗನಂಗಸಂಗ ಮಾಡಿದಂಗನೆಯರ ಆ-
ಲಿಂಗ[2]ನಿಂ[2]ದ ನಮ್ಮ ದೋಷ ಭಂಗವಾಯಿತೆ ೬

ಕಾಮನಯ್ಯನೊಲಿಸಿದಂಥ ಕಾಮಿನಿಯರ
ಭೀಮೇಶಕೃಷ್ಣನ್ನ ದಯದಿ ನೋಡಿದೆವಿಂದಿಗೆ ೭

## ಧ್ವನಿ—೮೦

ಕೋಲನಾಡಿರೆ ಕೋಮಲಾಂಗೇರು ಬಾಲಕೃಷ್ಣನ ಸತಿಯರು
ಬಾಲೆ ದ್ರೌಪದಿ ಬಹಳ ಪರಿ ನಮಗ್ಹೇಳಿಕೊಂಬುವಳೆನ್ನುತ ಪ.

ಅಂಬುಜಾಕ್ಷೇರ ಗರುವವರೆದು ಗಂಧವ ಮಾಡಿದೆವೆನ್ನುತ ನಾವು
ತುಂಬಿದ ಸಭೆಯೊಳು ನಿಂತು ರುಕ್ಮಿಣಿ ಚೆಂದದಿಂದ ಮಾತನಾಡುತ ೧

ಪಂಕಜಾಕ್ಷೇರ ಗರುವವರೆದು ಕುಂಕುಮ ಮಾಡಿದೆವೆನ್ನುತ ನಾವು
ಶಂಕೆಯಿಲ್ಲದೆ ಸಭೆಯೊಳಗೆ ಭಾಮೆ ನಿಂತು ನಗುತ ಮಾತನಾಡುತ ೨

ಅಷ್ಟಮಾಸತಿಯರು ಅರಳುಮಲ್ಲಿಗೆ ಬುಕ್ಕಿಟ್ಟು ಹಿಡಿ ಸೂರ್‍ಯಾಡುತ
ಪಾರ್ಥಗೆ ಪರಮೋತ್ಸವಂಗಳ ಕೊಟ್ಟು ಹರಿ ರಕ್ಷಿಸುವನೆನುತಲಿ ೩

[1] [ಡೆಯ ಇ?] [2] [ನೆಯಿಂ?]

ಅಚ್ಯುತನರಸೇರು ಅಚ್ಚಮಲ್ಲಿಗೆ ಬಿಚ್ಚಿಹಿಡಿ ಸೂರ್ಯಾಡುತ ತಾವು
ಸತ್ಯಧರ್ಮರ ಮನೆಗೆ ಜಯಜಯವೆಂದು ಶ್ರೀ ಮಹಾಲಕ್ಷ್ಮಿ
ನುಡಿಯುತ ೪

ಪರಮ ಉತ್ಸವದಿ ಪಾರ್ಥನಂಗಳದಿ ನೆರೆದು ವನಿತೆಯರಾಡುತ ತಾವು
ಕರಿ ತುರಗ ಭೀಮೇಶಕೃಷ್ಣನ ಹರವೇರು ಹರುಷದಿಂದೇರಿ ತೆರಳುತ ೫

## ಧ್ವನಿ—೮೧

ಅರ್ಜುನನ ಸಖ ಬಂದ ಸಜ್ಜನಪ್ರಿಯ
ನಿರ್ಜರೇಶರೊಡಗೂಡಿ ನಿತ್ಯಾನಂದ ದ್ವಾರಕೆಗೆ
ಅರ್ಜುನನ ಸಖ ಬಂದ ಸಜ್ಜನಪ್ರಿಯ ಪ.

ಸಾಧು ಸಜ್ಜನರಿಂದ ವೇದಘೋಷಣದಿಂದ
ಶ್ರೀದೇವಿ ಸಹಿತ ಸುಖದಿಂದ
ಶ್ರೀದೇವಿ ಸಹಿತ ಸುಖದಿಂದ ದ್ವಾರಕಾ-
ಹಾದಿಯ ಹಿಡಿದ ಹರಿ ಬ್ಯಾಗ ೧

ಪತ್ಯಾ(ತ್ಯ್ಯಾ?)ದಿ ಜನರಿಂದ ತತ್ವಘೋಷಣದಿಂದ
ಸತ್ಯಭಾಮೆಯರ ಸಹಿತಾಗಿ
ಸತ್ಯಭಾಮೆಯರ ಸಹಿತಾಗಿ ದ್ವಾರಕಾ-
ಪಟ್ಟಣ ಹೊಕ್ಕ ಹರಿ ಬ್ಯಾಗ ೨

ಹರಿಯು ತನ್ನರಮನೆ ಭರದಿಂದ ಹೊಗುವಾಗ
ಸುರರು ಪೂಮಳೆಯ ಕರೆದರು
ಸುರರು ಪೂಮಳೆಯ ಕರೆದರು ರಂಗಯ್ಯ
ಪರಮ ಸಂಭ್ರಮದಿ ಕುಳಿತಾನೆ ೩

ಸರಸ್ವತಿ ಭಾರತಿ ಪಾರ್ವತಿಯರೆಲ್ಲ ಬಂದು
ರತಿಪತಿಪಿತನ ಚರಣಕ್ಕೆ
ರತಿಪತಿಪಿತನ ಚರಣಕ್ವಂದನೆಯ ಮಾಡಿ ಶ್ರೀ-
ಪತಿಯೆ ನೀ ನಮ್ಮ ಸಲಹೆನುತ ೪

ಸುರರಿಗಭಯ ಕೊಟ್ಟು ಸುಜನರಿಗ್ವರವಿಟ್ಟು
ಹರಿ ನಮಗೊಲಿದಭೀಷ್ಟವ ಕೊಟ್ಟು
ಹರಿ ನಮಗೊಲಿದಭೀಷ್ಟವ ಕೊಟ್ಟು ರಂಗಯ್ಯ
ಸಿರಿದೇವಿಯರಸು ದಯವಿಟ್ಟು ೫

ರುಕ್ಮಿಣಿಮುಯ್ಯ ಅಕ್ಕರೆಯಿಂದ ಕೇಳಲು
ಸಕ್ಕರೆ ಕ್ಷೀರ ಕುಡಿದಂತೆ
ಸಕ್ಕರೆ ಕ್ಷೀರ ಕುಡಿದಂತೆ ನಮಗೆ ದೇ-
ವಕ್ಕಿ ಸುತನು ಸುಖ ಸುರಿಸುವನು ೬

ಮಂಗಳಾಂಗನ ಕಥೆ ಮನಸ್ಸಿಟ್ಟು ಕೇಳಲು
ಮಂಗಳಾದೇವಿ ರಮಣನು
ಮಂಗಳಾದೇವಿ ರಮಣನೊಲಿದು ಜಯ-
ಮಂಗಳ ಕೊಟ್ಟು ಸಲಹುವನು ೭

ಜಯಜಯಲಕ್ಷ್ಮೀ ಜಯವೆಂದು ಪಾಡಲು
ಜಯದೇವಿ ರಮಣ ಒಲಿವೋನು
ಜಯದೇವಿ ರಮಣನೊಲಿದು ನಮಗೆ ಧನಂ-
ಜಯಸಖ ವರವ ಕೊಡುವನು ೮

ಇಷ್ಟಗಳಾಗೋದನಿಷ್ಟ ದೂರ್ಹೋಗೋದು
ಸೃಷ್ಟೀಶನೊಲುಮೆ ದೊರೆವೋದು
ಸೃಷ್ಟೀಶನೊಲುಮೆ ದೊರೆವೋದು ಭೀಮೇಶ-
ಕೃಷ್ಣ ದಯಮಾಡಿ ಸಲಹುವನು ೯

*

ಏಳೊ ಕ್ಷೀರಾಂಬುಧಿಶಯನ ರಂಗ
ಏಳೊ ಈರೇಳು ಲೋಕದರಸ ಪ.

ನೀರೊಳಗಾಡುತ ನಿಗಮತಂದಜಗಿಟ್ಟು
ಭಾರ ಬೆನ್ನಲಿ ಪೊತ್ತು ಬವಣೆಯಲಿ
ಭಾರ ಬೆನ್ನಲಿ ಪೊತ್ತು ಬವಣೆರಹಿತ ಮಚ್ಛ
ಕೂರುಮ ಬಾರೊ ನಮ್ಮನೆತನಕ ೧

* ಈ ಧ್ವನಿಯನ್ನು ಹಾಡಿ ಮುಯ್ಯಿನ ಹಾಡನ್ನು ಮುಗಿಸಬೇಕು.

ಕೊಂದು ಹಿರಣ್ಯಾಕ್ಷನ್ನ ತಂದು ದಾಡೆಲಿ ಧರೆ
ಬಂದು ಕಂಬದಿ ಕರುಳ್ಹಾರ ಹಾಕಿ
ಬಂದು ಕಂಬದಿ ಕರುಳ್ಹಾರ ಹಾಕಿದ ನಮ್ಮ
ನಾರಸಿಂಹನೆ ಬಾ ನಮ್ಮನೆತನಕ ೨

ಬೇಡಿ ಭೂದಾನವ ಬೆಳೆದ ತ್ರಿವಿಕ್ರಮ
ಮಾಡಿ ಕ್ಷತ್ರೇರ ಹತ ಮಹಾಪುರುಷ
ಮಾಡಿ ಕ್ಷತ್ರೇರ ಹತ ಮಹಾಪುರುಷ್ವಾಮನ ಪರಶು-
ರಾಮಮೂರುತಿ ಬಾ ನಮ್ಮನೆತನಕ ೩

ಕಡಲ ಸೇತುವೆ ಕಟ್ಟಿ ಬಿಡದೆ ಸೀತೆಯ ಕೂಡಿ
ಮಡುವನ್ಹಾರುತ ಕಾಳಿ ಹೆಡೆ ತುಳಿದು
ಮಡುವನ್ಹಾರುತ ಕಾಳಿ ಹೆಡೆಯ ತುಳಿದ ನಮ್ಮ
ಕಡುಮುದ್ದು ಕೃಷ್ಣ ಬಾ ಮನೆತನಕ ೪

ಬತ್ತಲೋಲ್ಯಾಡುತ ಹತ್ತಿ ತುರಂಗವ
ಎತ್ತ ಪೋಗುವಿಯೊ ಕತ್ತಿಯ ಪಿಡಿದು
ಎತ್ತ ಪೋಗುವಿಯೊ ಕತ್ತಿಯ ಪಿಡಿದು ಭೀಮೇಶ-
ಕೃಷ್ಣ ಮೂರುತಿ ಬಾ ನಮ್ಮನೆತನಕ ೫

## ಪತಿದಾನ ಕೊಟ್ಟ ಹಾಡು

ಗಜಮುಖ ಗಣಪಗೆ ನಮೋ ನಮೋ
ತ್ರಿಜಗದೊಳು ಪೂಜಿಪ ನಮೋ ನಮೋ
ಗಜಮುಖ ಗಣಪಗೆ ನಮೋ ನಮೋ ಪ.

ಸಿದ್ಧಿವಿನಾಯಕ ನಮೋ ನಮೋ
ವಿದ್ಯಾಪ್ರದಾಯಕ ನಮೋ ನಮೋ
ಲಡ್ಡಿಗೆ ಮೋದಕ ನಮೋ ನಮೋ
ನೈವೇದ್ಯಕರ್ಪಿಸುವೆನು ನಮೋ ನಮೋ ೧

ಹರನ ಕುಮಾರನೆ ನಮೋ ನಮೋ
ಗಿರಿಜೆಯ ವರಪುತ್ರ ನಮೋ ನಮೋ
ಹರಿಕಥೆಗಳ ಕೇಳ್ವೆ ನಮೋ ನಮೋ
ವರಮತಿ ಪಾಲಿಸೊ ನಮೋ ನಮೋ ೨

ಆಕಾಶಕಭಿಮಾನಿ ನಮೋ ನಮೋ
ಮೂಷಿಕವಾಹನ ನಮೋ ನಮೋ
ಭೀಮೇಶಕೃಷ್ಣನ ಕಥೆ ನಮೋ ನಮೋ
ಸಂತೋಷದಿ ಪೇಳ್ವೆನು ನಮೋ ನಮೋ ೩

### ವಚನ—೧

ಅತಿ ಭಕ್ತಿಯಿಂದ ಗಣಪತಿಯು ಬಲಗೊಂಡು ಸರ-
ಸ್ವತಿಯು ಭಾರತಿಯು ಪಾರ್ವತಿಯು ಪಾದಕ್ಕೆರಗಿ
ರತಿಪತಿಪಿತನ ದಾನವ ಕೊಟ್ಟ ಕಥೆಗಳನು
ಅತಿ ಹರುಷದಲಿ ಪೇಳ್ವೆನು

### ಧ್ವನಿ—೨

ಸೃಷ್ಟಿಯೊಳು ಶ್ರೀರಂಗ ದ್ವಾರಕಾ-
ಪಟ್ಟಣವ ನಿರ್ಮಿಸಿದ ಶರಧಿಯೊಳು
ದುಷ್ಟ ಜರಾಸಂಧಾದಿ ದೈತ್ಯರ ಬಾಧೆಗಾಗ ೧

ತಾಯಿ ದೇವಕ್ಕಿದೇವಿ ರೋಹಿಣಿ
ರಾಮ ರೇವತಿ ಉಗ್ರಸೇನನು
ರಾಯ ವಸುದೇವ ಉದ್ಧವ ಅಕ್ರೂರರರಮನೆಯು ೨

ನೀಲಮಾಣಿಕ್ಯ ಬಿಗಿದ ಗೋಪುರ
ಆಣಿಮುತ್ತಿನ ಕಳಸಕನ್ನಡಿ
ಮಾ(ಮಹ?)ಲುಗಳ ನಿರ್ಮಿಸಿದ ತಾ ಸೋಳಸಾವಿರರಮನೆಯು ೩.

ಭಕ್ತವತ್ಸಲ ಭಯನಿವಾರಣ
ನಿತ್ಯತೃಪ್ತನು ನಿಂತು ನೋಡುತ ಅಷ್ಟಮಾ-
ಸತಿಯರ ಅರಮನೆ ಕಟ್ಟಿಸಿದನು ೪

ಪಚ್ಚೆಯಕಲ್ಲು ಪದ್ಮಮಾಣಿಕ್ಯ
ಅಚ್ಚಮುತ್ತುಗಳಿಂದ ರಚಿಸಿದ
ಅಚ್ಚುದರಸಿ ಸತ್ಯಭಾಮೆಗೆ ಹೆಚ್ಚಿನರಮನೆಯು ೫

ಕಟ್ಟಿದ ಕಾರಂಜಿ ಕಮಲವು
ಸುತ್ತ ಹೂವಿನ ತೋಟ ಮಧ್ಯದಿ
ಪಟ್ಟದರಸಿ ರುಕ್ಮಿಣಿಗೆ ಮಹಾಶ್ರೇಷ್ಠದರಮನೆಯು ೬

ರಂಗುಮಾಣಿಕ್ಯ ರತ್ನಪೀಠವು
ಶೃಂಗಾರದಿ ಭೀಮೇಶಕೃಷ್ಣನು
ಬಂದುಕುಳಿತು ರಾಜಿಸುವ ಸಭಾ ರಂಗಮಂಟಪವ ೭

ವಚನ—೩

ಈ ರೀತಿಯಿಂದ ದ್ವಾರಾವತಿಯು ಶೃಂಗಾರ
ಮಾರುತಿರೆ ಬೆಳ್ಳಿ ಬಂಗಾರ ಮುತ್ತಿನ ರಾಸಿ
ತೋರುತಿರೆ ಭೂ ವೈಕುಂಠಕ್ಕೆ ಮಿಗಿಲಾಗಿ
ಶ್ರೀರಮಣನರಮನೆಗಳು

ಧ್ವನಿ—೪

ಒಂದು ದಿನ ರುಕ್ಮಿಣಿಯು ಮಂದಿರಕೆ ಶ್ರೀಕೃಷ್ಣ
ಚೆಂದದಲಿ ಬಂದನಾನಂದದಿಂದಾಗ ೧

ಬರುವ ಕೃಷ್ಣನ ಕಾಣುತಲೆದ್ದು ರುಕ್ಮಿಣಿಯು
ಚರಣಕ್ಕೆರಗಿ ಕರವ ಮುಗಿದು ಕರೆತಂದು ೨

ಮಲ್ಲಿಗೆ ಮಂಚದಲಿ ಚೆಲ್ವೆ ರುಕ್ಮಿಣಿ ಸಹಿತ
ಫುಲ್ಲನಾಭನು ಕುಳಿತ ಪರಮ ಹರುಷದಲಿ ೩

ಪರಿಮಳವು ಗಂಧ ಬುಕ್ಕಿಟ್ಟು ಕೊರಳಿಗೆ ಹಾಕಿ
ಬಿಳಿಯೆಲೆ ಅಡಿಕೆ ಕರ್ಪೂರವೀಳ್ಯ ಕೊಡುತ ೪

ನೂತನಾಂಗಿಯು ಪಾರಿಜಾತ ಕೊರಳಿಗೆ ಹಾಕಿ
ಪ್ರೀತಿಯಿಂದ್ಹರಿಕೂಡ ಮಾತನಾಡುವಳು ೫

ಘನಮಹಿಮ ಕೇಳ್ ನಮ್ಮ ಮನೆಗೆ ಬಂದರೆ
ಭಾಮೆ ಮುನಿಸುಗುಟ್ಟಿದರೆ ಮತ್ತೇನು ಮಾಡುವಿರಿ ೬

ವನಜಾಕ್ಷ ನಿಮ್ಮನಗಲರೆಗಳಿಗೆ ಆ ಭಾಮೆ
ಇರಲಾರಳೀಗ ಬಿಟ್ಟಲ್ಲಿ ಬರಬಹುದೆ ೭

ಆಡಿದ್ವಚನವ ಕೇಳುತಲರವಿಂದದಳನಯನ
ಬ್ಯಾಡ ಸತ್ಯಭಾಮೆಭಯವು ನಿನಗೆಂದ ೮

ಹಳ್ಳಿಗೋಪ್ಯಳ ಕಾಯೋ ಗೊಲ್ಲರ ಮಗ ನಾನು
ಬಲ್ಲಿದರಸನ ಮಗಳು ಬಲು ಭಾಗ್ಯವಂತೆ ೯

ಲೋಕನಾಯಕಿಯೆ ನಿನ್ನ ಸರಿಯುಂಟೆ ಜಗದೊಳಗೆ
ಅನೇಕ ಸತಿಯರು ನಿನ್ನ ಸಮರಾಗೋವುಂಟೆ ೧೦

ಮಗನಾದ ಬ್ರಹ್ಮ ಮಾಡಿದನೆನಗೆ ಉಪಕಾರ
ಸುಗುಣೆ ನಿನ್ನಂಥ ಸತಿ ಕೂಡಿಸಿದನೆನಗೆ ೧೧

ದಡ್ಡ ರುಕುಮನ ನಿನಗೆ ಅಡ್ಡಿ ಮಾಡಿದವರನು
ಗಡ್ಡ ಛೇದಿಸಿ ಬಂದೆ ಗರುವೆಲ್ಲ ಮುರಿದು ೧೨

ರುಗ್ಮಿಣಿಯೆ ನೀನೊಲಿಯದಂಥ ಶಿಶುಪಾಲ ನಿ-
ರ್ಭಾಗ್ಯನೆಂದಾಡುವೋರು ಸುಜ್ಞಾನಿಜನರು ೧೩

ಆಡುತಾಡುತ ಪರವ್ಶನೋದದಿಂದೀ ಮಾತು
ಮಾಡುತಿದ್ದನು ಮಂದಹಾಸ್ಯಗಳ(?)ತಾನು ೧೪

ಲೆತ್ತಪಗಡೆಯನಾಡುತಾಗ ರುಕ್ಮಿಣಿಸಹಿತ
ಅರ್ಥಿಯಲಿ ಭೀಮೇಶಕೃಷ್ಣ ಕುಳಿತಿಹನು ೧೫

ವಚನ—೫

ಸಂತೋಷದಿಂದ ರುಕ್ಮಿಣಿಸಹಿತ ಹರಿಯಿರಲು
ಅಂತರಂಗದಲಿ ಆಲೋಚಿಸುತ ಭಾಮೆ ತಾ
ಕಾಂತ ಬರಲಿಲ್ಲ ಕಾಣದೆ ಭಾಳ ಹೊತ್ತಾಯ್ತು
ಸಂತಾಪದಿಂದ ನುಡಿದಳು ಸಖಿಯರನು ಕರೆದು
ನಿಂತು ಮಾತಾಡುವುದು ಮತ್ತೇನೆಂದರೆ—

ಧ್ವನಿ—೬

ಎತ್ತ ಪೋದನೆ ರಂಗನ್ನೆಲ್ಲಿ ಹುಡುಕಲೆ
ನಾ ಇನ್ನೆಲ್ಲಿ ಹುಡುಕಲೆ ಪ.

ಸೋಳ ಸಾವಿರ ಜನರುಪ್ಪರಿಗೆಯೇರಿ ನೋಡುತ್ಯದು-
ಕುಲೇಶ ದಾವಕಡೆಯಲ್ಲಿದ್ದರಾತನ ತೀವ್ರದಿಂದ ಕರೆದುತನ್ನಿ ೧

ಮಿತ್ರವಂತೆ ಮನೆಯ ಮುಂದೆ ಸುತ್ತಿ ಸುಳಿದು ಬನ್ನಿರೀಗ
ಲಕ್ಷಣಾನ ಮನೆಯಲ್ಲಿದ್ದರೆ ಲಕ್ಷ್ಯವಿಟ್ಟು ತನ್ನಿರಮ್ಮ ೨

ನೀಲದೇವಿ ಮನೆಯ ಮುಂದೆ ನಿಂತು ನೋಡಿ ಬನ್ನಿರೀಗ
ಕಾಳದೇವಿ ಮನೆಯಲ್ಲಿದ್ದರೆ ಕರೆದುತನ್ನಿರಮ್ಮ ಜ್ಯಾಗ ೩

ಮುದ್ದು ಜಾಂಬವಂತೇರಲ್ಲಿ ಇದ್ದಾನ್ಯಾಗೋ ತಿಳಿದುಕೊಂಡು
ಭದ್ರದೇವಿ ಮನೆಯಲ್ಲಿದ್ದರೆ ಸುದ್ದಿ ತೆಗೆದುಕೊಂಡು ಬನ್ನಿ ೪

ಪಟ್ಟದರಸಿ ಮನೆಯಲ್ಲಿದ್ದರೆ ಇಷ್ಟುನಿಮಗಸಾಧ್ಯವೀಗ
ತಟ್ಟನ್ಹೋಗಿ ನಾನು ಭೀಮೇಶಕೃಷ್ಣನ್ನಾದರು ಕರೆದು ತಾವೆ ೫

ವಚನ—೭

ಈ ರೀತಿಯಿಂದ ಅಪ್ಪಣೆ ಮಾಡಿ ಕಳಿಸುತ್ತ
ದಾರದಾರ ಮನೆಯಲಿಲ್ಲದ್ವಾರ್ತೆಯ ತರಿಸಿ

ನಾರಿ ರುಕ್ಮಿಣಿಯು ಮನೆ ಸೇರಿದ್ದು ನಿಜವೆಂದು
ಭಾರಿ ವಸ್ತ್ರಗಳಿಟ್ಟು ಭಾಳ ಶೃಂಗಾರವಾಗಿ
ತಾ ನಡೆದುಬರುವೋ ಬಗೆ—

## ಧ್ವನಿ—೮

ಸತ್ಯಭಾಮೆ ಶೃಂಗಾರವಾದಳು ತಾನಲಂಕಾರ
ಸತ್ಯಭಾಮೆ ಶೃಂಗಾರ ಪ.

ಉಟ್ಟಳು ಕೋಟಿ ಪರ(ಹ?)ದ ಪೀತಾಂಬರ
ತೊಟ್ಟಳು ನವರತ್ನದ ಕುಪ್ಪಸ ಜರ
ಕಟ್ಟಿದಡ್ಡಿಕೆ ಕಟ್ಟಾಣಿ ಮುತ್ತಿನಸರ
ಶ್ರೇಷ್ಠವಾದ ಸರಿಗೆಯು ನಾಗಮುರಿಗೆ
ಪಟ್ಟೆ ನಡುವಿನಲ್ಲಿಟ್ಟಳೊಡ್ಯಾಣ ೧

ಕಾಲಪೈಜಣ ರುಳಿ ಗೆಜ್ಜೆಪೆಂಡ್ಯಗಳು
ತೋಳಿಗ್ವಂಕಿ ಬಾಜುಬಂದು ಗೊಂಡ್ಯಗಳು
ದ್ವಾರ್ಯ ಕಂಕಣ ಹಸ್ತಕಡಗ ದುಂಡುಗಳು
ನೀಲಮಾಣಿಕ್ಯದ್ಹರಳುಂಗುರ ಮುಂಗೈ-
ಮ್ಯಾಲೆ ಹರಡಿ ಹವಳದ ಕೈಕಟ್ಟು ೨

ಚಂದ್ರಚೌರಿ ರಾಗಟೆಯು ಶೃಂಗಾರ
ರಂಗು ಮಾಣಿಕ್ಯದ ಹೆರಳುಬಂಗಾರ
ದುಂಡುಮುತ್ತಿನ ಗೊಂಡ್ಯ ಗೊಂಚಲು ಭಾರ
ಮುಂದೆ ಮಲ್ಲಿಗೆಸೊಗ್ಗು ಮುಡಿದ ಶಾವಂತಿಗೆ
ಚೆಂದವಾದ ತಳುಪಿಕ್ಕಿದ್ವೊಯ್ಯಾರ ೩

ಹರಳುವಜ್ರದ್ವಾಲೆ ಬುಗುಡಿಯ ತಳಕು
ಗಿಳಿ ಬಾವುಲಿ ಚಂದ್ರಬಾಳ್ಯದ ಬೆಳಕು
ಝುಳಿಝುಳಿಸುವ ದ್ರಾಕ್ಷಿಬಳ್ಳಿಯು ಮಲಕು
ಝುಳಕು ಮಿಂಚಿನಂದದಿ ಮುಖಪದ್ಮಕೆ
ಹೊಳೆವೊ ಜ್ಯೋತಿ ಮುತ್ತುಮುಕುರ್ಯ ಬುಲಾಕು ೪

ಬೆರಳ ಮುದ್ರೆ ಕಾಲುಂಗುರಿಟ್ಟಿಹಳು
ಹರಳು ಮಾಣಿಕ್ಯದ್ಹಾವಿಗೆಯು ಮೆಟ್ಟಿಹಳು
ಬಿಳಿಯೆಲೆ ಅಡಿಕೆ ಬಾಯಲ್ಲೊತ್ತಿಹಳು

ಪರಿಮಳ ಗಂಧ ಕೇಸರಿ ಬುಕ್ಕಿಟ್ಟು
ಪಣೆಯಲ್ಲಿಟ್ಟು ಕಸ್ತೂರಿ ಕುಂಕುಮವ ೫

ಉಗುರಿನಿಂದ ಮುಂಗುರುಳು ತಿದ್ದುತಲಿ
ನಗೆಮುಖ ಕಿರುಬೆವರುಗಳೊರೆಸುತಲಿ
ಝಗಿಝಗಿಸುತ ಜಗಜ್ಯೋತಿಯಂದದಲಿ
ಈಬಗೆ ಪುತ್ಥಳಿ ಚಂದ್ರ ಸರ ಜಾ(ಜರ?)ತಾರಿ
ನಿರಿಯ ಮ್ಯಾಲೆ ನಲಿದಾಡುತಲಿರಲು ೬

ಬಾಗಿ ಬಳುಕಿ ಬಾಳೆಯ ಸುಳಿಯಂತೆ
ಸೋಗೆ ನವಿಲು ಸರಸದ ಗಿಳಿಯಂತೆ
ಸೋಗು ಮಾಡುತ ಸುವರ್ಣದ ಬಳ್ಳ್ಯಂತೆ
ಬ್ಯಾಗ ಬಂದಳು ಭೀಮೇಶಕೃಷ್ಣನ ಕರೆ-
ತಾವೇನೆನುತ ತಾರಾಪತಿಯಂದದಿ ೭

## ವಚನ—೯

ನಡೆದು ಬರುವಂಥ ಭಾಮೆಯ ನೋಡಿ ಶ್ರೀಕೃಷ್ಣ
ನಡುಗುತದೆ ಎನ್ನೆದೆ ಒಡೆದು ಭಾಗಿಲಿಸ್ತದೆ
ಮಡದಿ ಮತ್ತಾ್ಯಗೆ ಮಾಡಲಿಯೆಂದು ಸತಿ
ಯೊಡನೆ ನುಡಿದು ತೋರಿಸುವುದು ಮತ್ತಾ್ಯಗೆಂದರೆ-

## ಧ್ವನಿ—೧೦

ಬಂದಳು ಬಂದಳು ಭಾಮೆಯು ನೋಡೆ
ಇಂದುವದನೆ ನಿನ್ನ ಮಂದಿರಕೆ
ಬಂದಳು ಬಂದಳು ಭಾಮೆಯು ನೋಡೆ ಪ.

ದೇವಲೋಕದ ಮಿಂಚು ಭೂಲೋಕಕೆ
ಬಂದ್ಹಾಗೆ ಕಾಂಬುವಳೊ ಮೋಹದ ರಾಣಿ ೧

ಹಗಲ ಬತ್ತಿಯಂತೆ ನಗೆ ಮುಖಕಾಂತಿಯು
ಗಗನದ ಚಂದ್ರ ಇಳಿದಂತೆ ೨

ಬಡನಡು ಬಳುಕುತ ಮುಡಿದ್ಹೂವು ಉದುರುತ
ಕಡುಕೋಪದಿಂದ ನೋಡುತಲೆನ್ನ ೩

ಭಾನುಪ್ರಕಾಶ ಬಿದ್ದರೆ ನಿನ್ನ ಮನೆಯಲ್ಲಿ
ಏನು ಕಾರಣಯಿಲ್ಲಿಗೆಯಿಗ ೪

ಸೋಸಿಲಿಂದಾಗ ಭಿಮೇಶಕೃಷ್ಣನು ತನ್ನ
ಸತಿಯೊಡನೆ ತೋರಿದನಾಗ ೫

ವಚನ—೧೧

ಮಂದಗಮನೆಯು ಮಂಚಕ್ಕೊಂದಿ ನಿಂತಿರಲಾಗ
ಸಂದೇಹದಿಂದ ಹರಿ ಒಂದು ಮಾತಾಡದಿರೆ
ಬಂದಿತಾ(ದ ಆ?) ಘನಕೋಪದಿಂದ ಕೃಷ್ಣನ ಕೂಡ
ಮುಂದೆ ಮಾತಾಡುವುದು ಮತ್ತೇನೆಂದರೆ-

ಧ್ವನಿ—೧೨

ದಿಟ್ಟೆ ರುಕ್ಮಿಣಿ ಮಂದಿರ ಬಿಟ್ಟು ಬರುವುದಕೆ
ಹುಟ್ಟಲೊಲ್ಲನುಯೇನೊ ಮನಸು ಮಾಧವನೆ ೧

ಹೆಚ್ಚಿನರಸಿಯು ಈಗ ಮೆಚ್ಚು ಮಾಡಿದಳೊ
ಹುಚ್ಚು ಹಿಡಿಸಿದಳೇನೊ ಅಚ್ಯುತ ನಿನಗೆ ೨

ಅತ್ತಿತ್ತ ಪೋಗದಂದದಲಿ ರುಕ್ಮಿಣಿಯು
ಮತ್ತೇನು ತೈಲ ನಿನ ನೆತ್ತಿಗೂಂದಳೊ ೩

ಓಲೆ ಬರೆದೊಲಿಸಿಕೊಂಡವರಲ್ಲಿ ಸ್ನೇಹ
ಮಾಡಿದರೆ ಜನರೆಲ್ಲ ನೋಡಿ ನಗುವರು ೪

ಅಣ್ಣ ರುಕುಮನ ಮೋರೆಗೆ ಪನ್ನಿಚಿತ್ರವನು ಈಕೆ
ಬಣ್ಣಗಾರ್ತಿ ನೊಡೊ ಭಾಳ ಸಂಪನ್ನೆ ೫

ಪಲ್ಲಿ ಸೆರಗಲಿ ಕಟ್ಟಸಿ ಬೆಲ್ಲ ಜೀರಿಗೆಯು ಈಕೆ
ಒಲ್ಲದೆ ಶಿಶುಪಾಲನ ಓಡಿ ಬಂದವಳು ೬

ಒತ್ತೆಯಿಟ್ಟವರ್ಯಾರೀ ವನಜಾಕ್ಷಿಗೆ ನಿನ್ನ
ಕೊಟ್ಟೇಗ್ದುಣಗಳ ನಾನು ಬಿಡಿಸಿಕೊಂಬುವೆನು ೭

ಮಾರುಗೊಂಡಂತೀಕೆಯು ಮನೆ ಸೇರಿದಿ ಮತ್ತೆ ಹದಿ-
ನಾರು ಸಾವಿರ ಮಂದ್ಯೊದರುವೋರೀಕೆಯು ಸುತ್ತ ೮

ವಿಗಡಮಾಯಗಾರ್ತಿ ಈ ರುಕ್ಮಿಣಿ ಕೂಡ ನೀ
ಪಗಡೆಯಾಡುವುದೇನು ಪರಮ ಆಶ್ಚರ್ಯ ೯

ಪಟ್ಟದ್ವಲ್ಲಭೆ ಕೂಡಿರುಯೆನುತ ಭೀಮೇಶ-
ಕೃಷ್ಣಗ್ಹೇಳುತಲಿ ತಟ್ಟನೆ ತಾ ತೆರಳಿದಳು ೧೦

### ವಚನ—೧೩

ಮಂಗಳಾಂಗನ ಬಿಟ್ಟು ಮನೆಗೆ ಬಂದಳು ಭಾಮೆ
ಅಂಗಳದೊಳಗಾಣಿಮುತ್ತಿನ ಮಂಚದಲಿ
ಕಂಗಳಿಂದುದಕ ಸುರಿಸುತ್ತ ಮಲಗಿರಲಾಗ
ರಂಗ ರುಕ್ಮಿಣಿ ಕೂಡ ಮಾತನಾಡುವುದು ಮತ್ತೇನೆಂದರೆ—

### ಧ್ವನಿ—೧೪

ಯಾಕೆ ಪೋದಳೆನ್ನ ಮೋಹದ
ಸಾಕಿದರಗಿಳಿ ಸತ್ಯಭಾಮೆ ಪ.

ಭರದಿ ಮನೆಗೆ ಪೋನಮ್ಯಾಲೆ ಕರಗಿ ಕಠಿಣವಾದ ಜೀವ
ಮರುಗುತಾಕೆಗೆನ್ನ ಮನಸು ತಿರುಗಿತಾಕೆಯಲ್ಲಿ ಮೋಹ ೧

ಪಟ್ಟದರಸಿ ನೀನು ಮುನಿಸುಗುಟ್ಟಿ ಕುಳಿತೀಯೆನುತಲೀಗ
ಹತ್ತಿಲೇ ನಿಂತಿದ್ದರೂ ಮುಂದತ್ತ ಕರೆಯಲಿಲ್ಲ ನಾನು ೨

ದಿಟ್ಟಿಸಿ ನೋಡಿದರೆ ನೀರೆ ದೃಷ್ಟಿತಾಕಿ ಬಾಡೀತೆಂದು
ಪುತ್ಥಳಿಗೊಂಬ್ಯಂಥ ಸತಿ ಕಣ್ಣೆತ್ತಿ ನೋಡಲಿಲ್ಲ ನಾನು ೩

ಕರೆದು ಮಾತನಾಡಲಿಲ್ಲ ಸೆರಗನ್ಹಿಡಿದು ನಿಲಿಸಲಿಲ್ಲ
ಕರವ ಪಿಡಿದುಯೆನ್ನ ತೊಡೆಯಲ್ಲಿರಿಸಿ ನಾ ಸುಖಬಡಿಸಲಿಲ್ಲ ೪

ಮಂದಗಮನೆ ಕೂಡ ನಾ ಮತ್ತೊಂದು ಮಾತನಾಡಲಿಲ್ಲ
ಮಂದಬುದ್ಧಿಯಿಂಪಲೀಗ ಮೋಸಹೋದೆನಲ್ಲೆ ನಾನು ೫

ಹಾದಿಗೊಂದೊಂದ್ವಾರ ಹರಿದು ಬೀದಿಗೊಂದು ಬಿಷ್ಮ (ಸುಟ ?) ಳೇನೊ
ಹೋದರೆನ್ನ ಒಳಗೆ ಬಿಡದೆ ಕಾವಲು ಮಾಡಿದ್ದಾಳೇನೊ ೬

ಕೆಂಡದಂಥ ಕೋಪತಾಪದಿಂದ ಕೋಮಲಾವ ದೇಹ
ಕಂದಿಕುಂದಿ ಮರುಗಿ ಸೊರಗಿ ಬೆಂದು ಬ್ಯಾಸರಾದಳೇನೊ ೭

ಪದ್ಮದಂಥ ಮುಖವು ಬಾಡಿ ತಿದ್ದಿದ ಕಸ್ತೂರಿಗಂಧ
ಬಿದ್ದು ಬೆವೆತು ವಸ್ತ್ರವೆಲ್ಲ ಒದ್ದೆಯಾಯಿತೇನೊ ಈಗ ೮

ವ್ಯಾಕುಲವಾಗೆನ್ನ ಮನಸು ಅನೇಕ ಚಿಂತೆ ಮಾಡುತಿದೆ
ಆಕೆವಾರ್ತೆ ತಂದು ಎನಗ್ಹೇಳುವೋರಿಲ್ಲ ೯

ಯಾಕೆ ಪಡೆದಳೆನ್ನ ಜನನಿ ಸಾಕಿದಳ್ಯಾತಕೆಶೋದ ಅ-
ನೇಕ ಸತಿಯರನು ಗಂಟುಹಾಕಿದನ್ಯಾತಕೋ ಬ್ರಹ್ಮ ೧೦

ಪತಿಗಳೈದುಮಂದಿ ಜನ ದ್ರೌಪದಿಯನ್ನರುಪ ಬಡಿಸುವ್ರೋರು
ಮಿತಿಯು ಮೀರಿ ಸೋಳಸಾವಿರ ಸತಿಯರ ಸಂತ್ಯೆಸಲ್ಹ್ಯಾಗೆ ೧೧

ಭೇದಬುದ್ಧಿ ಹುಟ್ಟಿತು ಭೀಮೇಶಕೃಷ್ಣಗೆನುತಲೀಗ
ಮೇದಿನಿಯೊಳಪಕೀರ್ತಿಸಾಧನವಾಗಿಪ್ಪೆ ನಾನು ೧೨

## ವಚನ—೧೫

ಅಂತರಂಗದಲಿ ಆಲೋಚಿಸುತ ಹರಿ ತಾನು
ಮಂಚದ ಮ್ಯಾಲೆ ಮುಸುಕಿಟ್ಟು ಮಲಗಿರಲಾಗ
ಸಂತೋಷದಿಂದ ನಾರದ ವೀಣೆಗಳ ಪಿಡಿದು ಶ್ರೀ-
ಕಾಂತನ ಮಂದಿರದಿ ನಿಂತು ನಲಿದಾಡುವುದು ಮತ್ತೇನೆಂಪರೆ-

## ಧ್ವನಿ—೧೬

ಬಂದನೊ ನಾರಂದನೊ ಇಂದಿರಾರಮಣನ
ಮಂದಿರಕ್ಕಾಗಲೆ ಬಂದನೊ ನಾರಂದನೊ ಪ.

ಹಚ್ಚಿದ ಎಳೆನಾಮ ಒತ್ತಿದ ಶ್ರೀಮುದ್ರೆ
ಕೃಷ್ಣಾಜಿನದ ಪೆಟ್ಟಿಗೆಯನ್ಹೊತ್ತು
ಹಸ್ತದಲ್ಲಿ ತಂಬೂರಿಯ ಮೀಟುತ
ಸರ್ಪಶಯನನ್ನ ನಾಮವ ಕೊಂಡಾಡುತ ೧

ಕೊರಳಲ್ಲಿ ಜಪದಮಾಲೆಯು ಸರ ಅಲೆಯುತ
ಚರಣದಲ್ಲೊಪ್ಪುತಿವೋ ಹಾವಿಗೆಯ ಮೆಟ್ಟಿ
ಬಿಳಿಯ ರೇಶಿಮೆಯಂತೆ ಜಡೆಯು ಹಿಂದ್ಹೊಳೆಯುತ
ನಳಿನನಾಭನ್ನ ಪಾಡುತ ಕೊಂಡಾಡುತ ಬಂದನೊ ೨

ಕರ್ಪೂರದಂತೆ ಮುಖದ ಬಣ್ಣ ಮೈಕಾಂತಿ
ನಕ್ಷತ್ರಮಾಲೆಯಂತ್ಹೊಳೆಯುತಲಿ
ಭಕ್ತವತ್ಸಲ ಭೀಮೇಶಕೃಷ್ಣನ ನಾಮ
ಭಕ್ತಿಂದ ಹಾಡಿ ಪಾಡುತ ಕೊಂಡಾಡುತ ೩

ವಚನ—೧೭

ಬರುವ ನಾರದರ ಕಣ್ತೆರೆದು ನೋಡುತ ಕೃಷ್ಣ
ಚರಣವನು ತೊಳೆದು ಪೀಠಗಳ್ಹಾಕಿ ಕುಳ್ಳಿರಿಸಿ
ಮಧುಪರ್ಕ ಸೋಡಿಸುವು (ಷೋಡಶೋಪ?) ಚಾರ ಮಾಡುತಲಿರಲು
ನಾರದರು ಹರಿಕೂಡ ಮಾತನಾಡುವುದು ಮತ್ತೇನೆಂದರೆ—

ಧ್ವನಿ—೧೮

ಕ್ಷೇಮವೆ ರಂಗ ಕ್ಷೇಮವೆ
ಭಾಮೆ ರುಕ್ಮಿಣಿ ಸಹಿತಾಗಿ ಸಕಲಜನ
ಕ್ಷೇಮವೆ ರಂಗ ಕ್ಷೇಮವೆ ಪ.

ಜನನಿ ಜನಕ ಬಲರಾಮ ರೇವತಿ ಮುತ್ತ್ಯಾ
ಮುದುಕನಾದುಗ್ರಸೇನರಾಯ
ಯದುಕುಲದಲ್ಹುಟ್ಟಿ ಬೆಳೆದ ಯಾದವರೆಲ್ಲ
ಮುದದಿಂದಿರುವ್ರೋರೆ ಮಕ್ಕಳು ಮೊಮ್ಮಕ್ಕಳು ೧

ಹದಿನಾಲ್ಕುಲೋಕ ನಿನಗೆ ಬಂಧುಬಳಗವು
ಚೆದುರೆಯರಷ್ಟಭಾರ್ಯೇರು ಕ್ಷೇಮವೆ ವ್ರ-
ಜದ ಗೋಪಿಯರು ರಾಸಕ್ರೀಡೆವನಿತೇರು
ಮದುವೆಹೆಂಡಿರು ಹದಿನಾರು ಸಾವಿರಮಂದಿ ಕ್ಷೇಮವೆ ೨

ಪಟ್ಟದರಸಿ ರುಕ್ಮಿಣಿ ಭಾಮೇರಿಬ್ಬರು
ಭಕ್ತಿಯಿಂದನುಕೂಲರಾಗಿಪ್ರೋರೆ
ಚಿತ್ತದೊಳಗೆ ಚಿಂತೆಯಿಂದ ನಿನ ಮುಖಪದ್ಮ
ಬತ್ತಿ ಬಾಡುವು (ಡಿಹು?) ದೇಕೋ ಭೀಮೇಶಕೃಷ್ಣ ೩

ವಚನ—೧೯

ಹರಿ ನೀನೆ ಮುರವೈರಿ ಸರ್ವಾಂತರ್ಯಾಮಿ
ಸರ್ವರೊಳಗಧಿಕ ರುಕ್ಮಿಣಿ ಸತ್ಯಭಾಮೆಯರು

ಇರುವರೇನಯ್ಯ ಅನುಕೂಲರಾಗೆನುತಿರಲು
ಹರಿ ನಾರದರ ಕೂಡ ಮಾತನಾಡುವುದು ಮತ್ತೇನೆಂದರೆ–

### ಧ್ವನಿ—೨೦

ಭಾಮೆ ಬಂದು ತಿರುಗ್ಹೋದಳೊ ಮನೆಗೆ
ನಾನು ಚಿಂತೆಗೆ ಒಳಗಾದೆನೊ ಕೊನೆಗೆ
ಭಾಮೆ ಬಂದು ತಿರುಗ್ಹೋದಳೊ ಮನೆಗೆ ಪ.

ಪಟ್ಟದರಸಿಕೂಡ ಪಗಡೆಯನಾಡುತ
ಅರ್ಥಿಂದ ಕುಳಿತ ಕಾಲದಲಿ ಬಂದು
ಸಿಟ್ಟನಿಂದ ಸಿಡಿಸಿಡಿ ಮಾತನಾಡುತ
ತಟ್ಟನೆ ತಿರುಗ್ಹೋದಳು ತೀವ್ರದಿಂದ ೧

ಆಕೆಯಲ್ಲಿರುವುದೆನಗೆ ಭಾಳ ಮನಸು
ಲೋಕಸುಂದರಿಗೀಗೆನ್ನಮ್ಯಾಲೆ ಮುನಿಸು
ನಾ ಕೈಯ ಮುಗಿದು ಪೇಳುವೆನೀಗ ಮುನಿರಾಯ ವಿ–
ವೇಕದಿಂದ್ಹೋಳಿ ಭಾಮೆಗೆ ಎನ್ನ ಕಲೆಸು ೨

ಬೇಡಿದ್ದು ಕೊಡುವೆ ನಿನಗೆ ಹಣ ಹೊನ್ನು
ಭಾಳಮಾಣಿಕ್ಯ ರತ್ನಾಭರಣಗಳನ–
ವ್ಯಾಳ್ಯ ಮಾಡಲಾಗದು ಎನ್ನ ಮಾತೆಂದು
ಹೇಳಿಕೊಂಡನು ಭೀಮೇಶಕೃಷ್ಣನು ಬಂದು ೩

### ವಚನ—೨೧

ಅಕ್ಕರದಿ ಕೃಷ್ಣನಾಡಿದ ಮಾತ ಕೇಳುತಲಿ
ಸಿಕ್ಯಾ ನನ ಕೈಯೊಳಗೆ ಶ್ರೀನಾಥ ನೀನೆಂದು
ನಕ್ಕು ನಾರಂದ ಮನದೊಳಗೆ ಹಾಸ್ಯವ ಮಾಡಿ ಮತ್ತೆ
ಕೃಷ್ಣನ ಕೂಡ ಮಾತನಾಡುವುದು ಮತ್ತೇನೆಂದರೆ–

### ಧ್ವನಿ—೨೨

ಹಣ ಹೊನ್ನು ದ್ರವ್ಯದಾಸೆಯು ಎನಗ್ಯಾತಕೆ
ಮನೆಮಾರು ಹೆಂಡಿರೆನಗಿಲ್ಲ

ಅನುದಿನ ಕಾಡಿ ಬೇಡುವೋ ಮಕ್ಕಳೆನಗಿಲ್ಲ
ನಿಮಗಿರಲಯ್ಯ ಧನ ಭಾಗ್ಯ ೧

ಅಚ್ಯುತ ನಿನ್ನ ಶ್ರೀವಕ್ಷದಿ ನಲಿದಾಡೊ
ಅಚ್ಚ ಶ್ರೀ ತುಳಸಿ ವನಮಾಲೆ
ಕೊಟ್ಟರೀಗೆನ್ನ ಕಂಠದಿ ಧರಿಸುವೆನೆಂಬೊ
ಅಪೇಕ್ಷ್ಯವಾಗಿದೆ ಎನಗೀಗ ೨

ಬೇಡಲಾಗದು ನೀವು ನೀಡಲಾಗದು ನಾನು
ಮಾಡಿಕೊಂಡಂಥ ಮಡದಿಯು
ಜೋಡ್ಯೆಳೆ ಕಂಠಿ ಮುತ್ತಿನ ಸರ ಪದಕವ
ಬೇಡಿದ್ದು ಕೊಡುವೆ ನಿಮಗೀಗ ೩

ಅಡವಿಯೊಳು ಬೆಳೆದಿದ್ದ ಗಿಡದ ತೊಪ್ಪಲ ತಂದು
ಮಡದಿಯೆಂಬುವರೆ ಮಹರಾಯ
ಕಡಿಮೆ ಹೆಂಡಿರೆ ಹದಿನಾರು ಸಾವಿರ ಮಂದಿ
ಬಿಡು ನಿನ್ನ ಚಾಳಿ ತರವಲ್ಲ ೪

ಮಡದೇರೆಲ್ಲರು ಎನ್ನ ತೊಡೆಯ ಮ್ಯಾಲಿರುವೋರು
ಎದೆಯಲ್ಲಿರುವಳೋ ಮಾಲಕ್ಷ್ಮಿ
ಮುಡಿಯಲ್ಲಿರುವಳೋ ಮೋಹದ ಮುದ್ದು ತುಳಸಿಯು
ಕೊಡುವೋದಿನ್ನ್ಯಾಕೆ ಜನರಿಗೆ ೫

ಹರದಿ ರುಕ್ಮಿಣಿ ನಿನ್ನ ಸರಿಸವತಿಯು ನೋಡೆ
ಸಿರಿಮುಡಿ ಮ್ಯಾಲೆ ಧರಿಸುವ
ಇರುತಿರೆ ನೀ ವಕ್ಷಸ್ಥಳದಲ್ಲಿ
ವನಮಾಲೆ ತೆಗೆದು ಬಿಷ್ಟೆ (ಸುಟೆ ?) ನ್ನ ಕರದಲ್ಲಿ ೬

ಬಾಡಿ ಬತ್ತುವೋದಳ ತಂದು ನಿನಗೂ ಹೆಚ್ಚು
ಮಾಡಿ ತಾ ಮುಡಿಯಲ್ಲಿಡುವೋನು
ಗಾಡಾಂಧಕಾರ ಪ್ರಳಯದಲ್ಲೀತನ ಸೇವೆ
ಮಾಡೋದ್ಯಾಕಮ್ಮ ಮಹದೇವಿ ೭

ಮುನಿಯ ಮಾತನು ಕೇಳಿ ಮುನಿಸಾಗಿ ರುಕ್ಮಿಣಿ
ತೆಗೆ ಕೃಷ್ಣ ನಿನ್ನ ಕೊರಳ್ಹಾರ

ನಗಧರ ನಾನಿರುತಿರೆ ವಕ್ಷಸ್ಥಳದಲ್ಲೀ–
ಹಗರಣ ಸವತಿಸರವ್ಯಾಕೆ ೮

ಬಿಗಡಗಂಟಕ ಮುನಿಯಿಲ್ಲೆ ಜಗಳ ತಂದ
ಬಗೆಬಗೆ ಮಾತು ಕಲುಪಿಸಿ
ಸುಗುಣೆನ್ನಳ ಸಿಟ್ಟು ಮಾಡದಿರೆನುತಲಿ
ಅಗಣಿತ ಮಹಿಮ ನುಡಿದನು ೯

ಯಾಕಯ್ಯ ನಿನಗೆ ಅನೇಕ ಹೆಂಡಿರ ಕಾಟ
ನೂಕಿಬಿಡೆಲ್ಲ ವನಿತೇರ
ಬೇಕಾದ ದಾರಿಗೆ ನನ್ನಿಂದೆ ಬಂದರೆ ನಿನ್ನ
ಸಾಕುವೋ ಧೈರ್ಯ ಎನಗುಂಟು ೧೦

ಕಬ್ಬಿನ ಮ್ಯಾಲೆ ಜೇನಿಕ್ಕಿದಂತಿರೋ ನೀನು
ಒಬ್ಬ ಶ್ರೀ ತುಳಸಿಯೊಡಗೂಡಿ
ದಬ್ಬಿಬಾರಯ್ಯ ಕೊಬ್ಬಿದ ಸತಿಯರನೆಲ್ಲ
ನಿರ್ಭಯದಿಂದ ತಿರುಗೋಣ ೧೧

ಏಳಿರೇಳಿರಿ ನೀವು ಎಷ್ಟು ಹೊತ್ತಾಯಿತು
ಭಾಳ ಬಳಲುವೋಳೆನ್ನ ಭಾಮೆ
ಕಾಳಿಮರ್ದನ ಕರಮುಗಿದೆದುರಿಗೆ ನಿಂತು
ಹೇಳಿಕೊಂಡನು ಮುನಿಗಾಗ ೧೨

ನಾಗವೇಣಿಯು ಕಂಡು ಬರುವೆ ಮುಂದಿನ ಮಾತು
ಹ್ಯಾಗದೋ (ಹೇಗಿದೆಯೊ ?) ನಮಗೆ ತಿಳಿಯದು
ನಾಗಶಯನ ನಿನ್ನ ಲಕ್ಷಿಲ್ಲದವರಿಗೆ
ಯೋಗಿ ಜೋಗಿಗಳ ಪರವ್ಯೇನು ೧೩

ದನವ ಕಾಯುವರಿಗೆ ಧನವಂತ್ಹೆಂಡರು ಬರಲು
ಮನದೊಳ್ಹಂಕಾರ ಮದವೆಷ್ಟೊ
ಮನೆಗೆ ಬಂದವರ ಮನ್ನಿಸಿ ಮಾತನಾಡದೆ
ಬಡಿದಿದೆ ನಿನಗೆ ಘನದೈವ ೧೪

ಇಷ್ಟೊಂದು ದೈನ್ಯಬಡುವೋರೆ ಭೀಮೇಶಕೃಷ್ಣ
ಅಪ್ಪಣೆಕೊಟ್ಟು ಕಳುಹೆನ್ನ

ಸತ್ಯಭಾಮೆಗೆ ಸನ್ಮತವ್ಹೇಳಿ ನಾನೀಗ
ತಟ್ಟನೀಗಿಲ್ಲಿ ಕಳಿಸುವೆ ೧೫

## ವಚನ—೨೫

ಶಂಬರಾರಿಯು ಜನಕನಿಂದ ಅಪ್ಪಣೆಗೊಂಡು
ತಂಬೂರಿ ತಾಳ ಕರದಿಂದ ಬಾರಿಸುತಾಗ
ಸಂಭ್ರಮದಿಂದ ಸತ್ಯಭಾಮೆ ಮಂದಿರಕೆ
ಬಂದು ನಾರಂವ ನಲಿದಾಡುವುದು ಮತ್ತೇನೆಂದರೆ–

## ಧ್ವನಿ—೨೪

ನಡೆದು ಬಂದ ಆಗ ನಾರದನು
ಸಡಗರದಿ ಸತ್ಯಭಾಮೆಯು ಮನೆಗೆ ತಾನು ಪ.

ಬರಲು ಕಾಣುತಲೆದ್ದು ಪ್ರೇಮದಿಂದ
ಎರಗಿ ನವರತ್ನ ಮಾಣಿಕ್ಯಬಿಗಿದ ಹೇಮ–
ಮಣೆಯಮ್ಯಾಲೆ ಕುಳ್ಳಿರಿಸಿ ಕ್ಷೇಮ ಕುಶಲ–
ವಾರ್ತೆಗಳ ಕೇಳುತಿದ್ದಳು ಸತ್ಯಭಾಮೆ ೧

ಮುದದಿ ಕೇಳಮ್ಮ ವಾರ್ತೆಯನು
ಹದಿನಾಲ್ಕು ಲೋಕದೊಳು ಜನರ ಕೀರ್ತಿಯನು
ವಿಜಯನ ರಥಸಾರಥಿಯನು ಕಂಡು ಬಂದೆ
ಯದುಕುಲದೊಡೆಯ ಕೃಷ್ಣ ಮೂರ್ತಿಯನು ೨

ಸತ್ಯಲೋಕದಲಿ ನಾ ಬಂದೆ
ಮತ್ತೆ ಕೇಳು ಚತುರ್ಮುಖದ ಬ್ರಹ್ಮ ಎನ್ನತಂದೆ
ಮಿತ್ರೆಸರಸ್ವತಿ ಹೊಂದಿಕೊಂಡು ಕುಳಿತ
ಅರ್ಥಿ ವಿನೋದ ನಿನ ಮುಂದ್ಹೇಳ ಬಂದೆ ೩

ದೇಶದೇಶವ ತಿರುಗಿಕೊಂಡು ಕೈ–
ಲಾಸಪರ್ವತದಿ ಶಂಕರನ ನಾ ಕಂಡೆ
ಈಶ್ವರನು ಪಾರ್ವತಿ ಅಪ್ಪಿಕೊಂಡು ಕುಳಿತ್ವಿಲಾಸ
ಹಾಸಗಳ ನಿನ ಮುಂದ್ಹೇಳ ಬಂದೆ ೪

ವಾರಣಾವತಿ ಧರ್ಮರಾಯ
ಅರಸು ತಾವೈವರೆಲ್ಲ ದ್ರೌಪದಿಯಲ್ಲಿ
ಸ್ನೇಹ ಭಾಳ ಸಾರ್ಥಕ ಕೃಷ್ಣೆ ಪ್ರಾಯ
ಕೊಟ್ಟನವರಿಗಾ ಮಗಳ ಧನ್ಯನು ದ್ರುಪದರಾಯ ೫

ಸತ್ರಾಜಿತ ನಿನಗೆ ಪೈರ್ಯಾದ ಹುಟ್ಟಿ ತಾ
ಹರಿಗೆ ನಿಮ್ಮಿಬ್ಬರೊಳು ಭೇದ
ನಿತ್ಯ ನಿನ್ನಲ್ಲಿ ಬಹುಕ್ರೋಧ ಮುಖ್ಯ
ಮಾತೇನು ರುಕ್ಮಿಣಿಕಡೆಗೆ ಆದ ೬

ತೊಡೆಯ ಮ್ಯಾಲಿಟ್ಟಾಗ ಸತಿಯ
ಜಡೆಗೂ ಹೂವ ಮುಡಿಸಿ ನೋಡುವ ಭಾಳ ರತಿಯು
ಪೊಡವಿಮ್ಯಾಲಿಂಥ ಸತಿಪತಿಯು ನಾನು
ಹುಡುಕಲಿನ್ನಿಲ್ಲು ಕಾಣೆನು ಇದಕೆ ಪ್ರತಿಯು ೭

ಅತಿಮೋಹದಿಂದ ರುಕ್ಮಿಣಿಯು ತನ್ನ
ಚತುರ ಕರದಿಂದಪ್ಪಿ ನೋಡಿದರು ದಣಿಯು
ಹಿತದಿ ಮುತ್ತಿನ ಜೊಟ್ಟು ಪಣೆಯಲಿಟ್ಟು
ಅತಿಹರುಷಬಡಿಸುವನು ಸತಿ ಶಿರೋಮಣಿಯ ೮

ಹಾರಪದಕಗಳ ಹಾಕುವನು ಆಕೆ
ಭಾರವನು ತನ್ನೆದೆ ಮ್ಯಾಲೆ ವಹಿಸುವೋನು
ಮೋರೆ ಮೋರೆಗೆ ಹೊಂದಿಸುವೋನು ಹೆಗಲು
ಜಾರಿಬಿದ್ದರೆ ಜರದ (ರಿಯ ?) ಸೆರಗನ್ನೊಪ್ಪದಿಸುವನು ೯

ರುಕ್ಮಿಣಿಯು ಕೂಡ ಒಂದಾಗಿ
ಕುಳಿತರೊಬ್ಬ ಕೃಷ್ಣನುಯೆಂದು
ತಿಳಿವೆ ಮುಂದಾಗಿ ಬಗ್ಗಿ ನೋಡಿದೆ ಬದಿಯಲ್ಹೋಗಿ
ಕಣ್ಣಿಗ್ಹಬ್ಬವಾಯಿತು ಕಂಡುಬಂದೆ ಲೇಸಾಗಿ ೧೦

ದೃಷ್ಟಿಯೆರಡಾಕೆಯಲ್ಲಿಟ್ಟ
ಗುಟ್ಟುವೊಂದಿಬ್ಬರದು ಹೇಳಲಿನ್ನೆಷ್ಟ
ಇಷ್ಟು ಸೈರಿಸದೆ ನಾ ಸಿಟ್ಟುಮಾಡಿ ಬಂದೆ ಭೀಮೇಶ-
ಕೃಷ್ಣನು ನಿನ್ನ ಬಿಟ್ಟ ೧೧

## ವಚನ—೨೫

ನುಡಿದ ನುಡಿ ಕೇಳುತೆದೆವೊಡೆದು ಝಲ್ಲೆಂದಾಗ
ನಡುಗುಹುಟ್ಟಿ ನಾಗವೇಣಿಯ ದೇಹ ತಲ್ಲಣಿಸೆ
ಕಡಲಶಯನನ ಕರುಣವಿಲ್ಲೆನ್ನ ಮ್ಯಾಲೀಗ
ಸುಡು ಹೆಣ್ಣು ಜನ್ಮ ಸಂಸಾರವ್ಯಾಕೆಂದೆನುತ
ಬಿಡುವೆನೀ ಪ್ರಾಣವೆಂದೆನುತ ದೃಢ ಬುದ್ಧಿಯಲಿ
ಹೆಡೆ ಆಡೋ ಸರ್ಪನಂದದಲಿ ಉಸಿರ್ಹಾಕುತ್ತ
ಖಿಡಿ ಖಿಡಿ ಕೆಂಡದಂಥ ಕೋಪ ತಾಪದಲಿ
ಗಡಗಡನೆ ಹೊರಳುತಲಿ ಕೊಡಕೊಡನೆ ಜಿವರುತಲಿ
ಧಡಧಡನೆ ಕಣ್ಣಿಂದ ಉದಕ ಸುರಿಸುತಲಿ
ಮುಡಿ ಘಟ್ಟಿಸುತಲಿ ಮೂರ್ಛಿತಳಾಗಿ ಬೀಳುತಿರೆ
ನುಡಿದ ನಾರಂಪ ಬಿಡುಬಿಡು ಚಿಂತೆಯಾಕೆನುತ
ಮಡದಿ ಮೂರ್ಛವ (ರ್ಛೆಯ ?) ತಿಳಿದು ಮಾತನ್ಹೇಳುವುದು
ಮತ್ತೇನೆಂದರೆ–

## ಧ್ವನಿ—೨೬

ತಾಯೆ ಕೇಳವ್ವ ಇದು ನ್ಯಾಯವೇನೆಲೆ ಭಾಮೆ
ಜೀವದಾಸೆಯ ತೊರೆಯಬಹುದೆ ೧

ಘೇನಿಸಿ ಕೇಳಿ ನಿಧಾನ ಮಾಡಿಕೋ ಮನಕೆ
ನಾನೊಂದುಪಾಯ ಹೇಳುವೆನು ೨

ಪತಿವರತಿಕೇಳು ನಿನ್ನ ಪತಿಯು ದಾಸವ ಮಾಡು ಶ್ರೀ–
ಪತಿ ನಿನ್ನ ಬಿಟ್ಟಗಲದಿರುವ ೩

ಪುತ್ರಸಂತಾನ ಸಂಪತ್ತು ಸಕಲೈಶ್ವರ್ಯ
ಮುತ್ತೈದೆತನವುಂಟಿದರಿಂದ ೪

ಮಾಘಮಾಸದಲಿ ಸಪ್ತಮಿ ಭಾನುವಾರದಲಿ
ಕೂಡಿಸಿ ದೊಡ್ಡ ಪರವಣಿಯ ೫

ಮಾಡಮ್ಮ ನೀನು ಈ ವ್ರತಪುಣ್ಯದ ಫಲಕಿನ್ನು
ಈಡಿಲ್ಲ ಈ ಲೋಕದೊಳಗೆ ೬

ಅನ್ನಗೋವ್ಗಳ ದಾನ ಚಿನ್ನಗೃಹ ಭೂ ದಾನ
ಕನ್ಯಾದಾನವ ಕಂಡು ಬಲ್ಲೆ ೭

ತನ್ನ ಪತಿದಾನ ಕೊಡುವಂಥ ಮೂರ್ಖರನೀಗ
ಇನ್ನೆಲ್ಲು ಕಾಣೆ ಜಗದಿ ೮

ಸರಸ್ವತಿ ಪಾರ್ವತಿಯು ಅರುಂಧತಿದೇವಿ-
ಯರು ತಮ್ಮ ಪತಿದಾನವ ಕೊಟ್ಟು ಹಿತದಿಂದ ೯

ಸತಿಪತಿಯರೆಲ್ಲ ಸಂತೋಷದಿಂದಿರುತಿಹರು
ಮಿತಿಯಿಲ್ಲ ಈ ಪುಣ್ಯಫಲಕೆ ೧೦

ಮುಂದಗಮನೆಯೆ ಕೇಳು ಮತ್ತೊಂದು ಸಂಶಯ ಬಹಳ
ಮುಂದಿ ಸವತಿಯರುಂಟು ನಿನಗೆ ೧೧

ಬಂದು ಭರ್ತಾರಿಯರ್ದ್ದಿನಾರುಸಾವಿರ
ಮಂದಿ ಮುಂದೀವ್ರತಕ್ಕೆ ವಿಘ್ನ ಮಾಡುವರು ೧೨

ಅನುಮಾನವ್ಯಾತಕೀಗೆನಗೊಬ್ಬರ ಭಯವಿಲ್ಲ
ಮನೆಗೆ ಕರೆತಂದು ಮಾಧವನ ೧೩

ಕೊಡುವೆ ಭೀಮೇಶಕೃಷ್ಣನ ದಾನವೆಂತೆಂದು
ನಡೆದಳಾ ಹೇಮಲತಾಂಗಿ ೧೪

## ವಚನ—೨೭

ಭರದಿಂದ ಬರುವ ಭಾಮೆಯ ನೋಡಿ ಶ್ರೀಕೃಷ್ಣ
ಜರದ ಶಾಲುಗಳ ಮುಸುಕಿಟ್ಟು ಮಲಗಿರಲಾಗ
ವರಮೋಹನಾಂಗಿ ಬಂದ್ವಾಸುಕೇಶಯನನ್ನ
ಸರಿಗೆ ಮಂಚಕೆ ನಿಂತು ಸರಸವಾಡುವುದು ಮತ್ತೇನೆಂದರೆ-

## ಧ್ವನಿ—೨೮

ಗೆಜ್ಜೆ ರುಳಿ ಪೈಜಣವು ಘಲ್ಲುಘಿಲ್ಲೆನುತ
ಮುದ್ದು ಸುರಿಯುತ ಮುಂದೆ ಸುಳಿದಾಡುತಿರಲು ೧

ರುಳಿಗೆಜ್ಜೆ ಪೈಜಣದ ಧ್ವನಿಗೇಳದಿರಲು
ಒಲುಮೆಯಿಂದ್ವಜ್ರ ಮಂಚವನು ಏರಿದಳು ೨

ಸುಪ್ಪತ್ತಿಗೆ ಮಂಚದಲ್ಲಿ ತಾ ಕುಳಿತು
ಒತ್ತುತ್ತಿದ್ದಳು ಪಾದವನು ವಾರಿಜಾಕ್ಷಿ ೩

ಆದರದಲೊತ್ತುತ್ತಿರಲಾ ಪದ್ಮಪಾದ
ಶ್ರೀಧರನು ಮಲಗೇಳದಿರಲು ವಿನೋದ ೪

ಮುಸಿಮುಸಿ ನಗುತಿರಲು ಮುಸುಕಿನೊಳಗಾಗ
ಹಸುರು ಜರಚಾದರವ ಮುಸುಗೆಳೆದು ಬ್ಯಾಗ ೫

ಮುಂಜೆರಗಿನಿಂದ ಮುಖಜೆವರನೊರೆಸುತ್ತ
ಸಂಜೆಗಿಷ್ಟಿರಲಿ ಸುಖನಿದ್ರೆಯೆಂದೆನುತ ೬

ಮಂದಹಾಸದಿ ಮಾತನಾಡಿ ತಾ ನಗುತ
ಇಂದಿರಾರಮಣ ವೈಮುರಿದೆದ್ದ ಬ್ಯಾಗ ೭

ಕುಂದಕುಸುಮವು ಬಾಡಿದಂಥ ಈ ಮುಖವು
ಕುಂದಿದ್ದ ಬಗೆಯು ಹೇಳೆಲೆ ಕೋಮಲಾಂಗಿ ೮

ಬಳಲಮುಡಿ ತಿದ್ದಿ ಭಾಮೆಯನು ಬಿಗಿದಪ್ಪಿ
ನಳಿನಮುಖಿ ಬಂದ ಕಾರಣವ ಹೇಳೆನುತ ೯

ಮನೆಗೆ ಬಂದರೆ ಮಾತನಾಡುವೆನು ನಾನು
ಘನಮಹಿಮ ಬ್ಯಾಗ ಗರುಡವನೇರೊ ನೀನು ೧೦

ಹೇಳಿ ರುಕ್ಮಿಣಿಗ್ಹೋಗಿಬರುವೆನೆಂದೆನುತ
ಭೀಮೇಶಕೃಷ್ಣ ಬಂದನು ಭಾಮೆ ಸಹಿತ ೧೧

## ವಚನ—೨೯

ಅಕ್ಕರದ ಸತಿಯು ಸಹಿತ ಪಕ್ಷಿರಾಜನ್ನ
ಪಕ್ಕದ ಮ್ಯಾಲೇರೆ ಪರಮ ಸಂಭ್ರಮದಿಂದ
ಗಕ್ಕನ್ಹಾರಿದ ಗಗನ ಮಾರ್ಗದಲ್ಯಾಗರುಡ
ಪಟ್ಟಣದ ಜನರೆಲ್ಲ ಅರ್ಥಿಯಲಿ ನೋಡಿ
ಮಾತಾಡುವುದು ಮತ್ತೇನೆಂದರೆ—

## ಧ್ವನಿ—೩೦

ಗಗನದಿ ಬರುವಂಥ ಖಗನ ನೋಡಿದಿರಾ
ಜಗದೊಳಗಿದು ಭಾಳಾಶ್ಚರ್ಯ ಕೇಳಿದಿರಾ ಪ.

ಅಂತರಿಕ್ಷವಲ್ಯಾಡುತಿರುವ ಪಕ್ಷಿಯು ನೋಡಿ
ನಿಂತಾ ಜನರು ಇದೇನಂತ (ನೆಂದು ?) ನುಡಿದರು ೧

ವೃಷ್ಟಿ ಕಾಲವಿದಲ್ಲ ಹತ್ತಿದ ಮಳೆ ನೋಡ
ಎತ್ತಹೋದನು ಭಾನು ಅಡಗಿ ಮೇಘವಲಿ ೨

ಬಲ್ಲಜನರು ನೋಡಿ ಕಲ್ಪಿಸಿದರೀ ಮಾತು ಇ-
ದೆಲ್ಲ ಇಂದ್ರನ ಕಾರ್ಯವಲ್ಲನೆಂದೆನುತ ೩

ನೀಲವರಣ ಕೃಷ್ಣ ಮೇಘದಂತಿರೋಭಾಯೆ
ಕೋಲುಮಿಂಚಿನ ಕಾಂತಿ ಭಾಮೆಚೆಲ್ವಿಕೆಯು ೪

ಗರುಡ ರೆಕ್ಕೆಯು ಬೀಸುತಿರುವ್ಹೋದೀ ಸುಳಿಗಾಳಿ
ಮಳೆಯು ನೀರಲ್ಲ ನೋಡಿಷ್ಟ್ವಸಜ ಕುಸುಮವು ೫

ಬಿಡಿಯ ಮಲ್ಲಿಗೆ ಮೊಗ್ಗು ಮುಡಿದಳಾ ಸತ್ಯಭಾಮೆ
ಜಡಿ ಮಳೆಯಿದು ಪಾರಿಜಾತಪುಷ್ಪಗಳು ೬

ಕೋಟಿ ಭಾಸ್ಕರನ ಪ್ರಕಾಶ ಶ್ರೀಹರಿಯು
ಆಕಾಶದಲ್ಲಿರೆ ಭಾನು ಅಡಗಿ ಕಾಂತಿಯಲಿ ೭

ಆಡುತಾಡುತ ಪಕ್ಷ್ಯೋಡ್ಯಾಡುತಿರಲು ಕಂಡು
ನೋಡಿ ಭಾಮೆಯ ಪುಣ್ಯಕ್ಕೆ ಜೋಡುಯಿಲ್ಲೆನುತ ೮

ಬೆದರಬ್ಯಾಡೆನುತ ಭೀಮೇಶಕೃಷ್ಣನು ತನ್ನ
ಚತುರ ಹಸ್ತದಿ ಬಿಗಿದಪ್ಪಿ ಭಾಮೆಯನು ಗಗನದಿ ೯

## ವಚನ—೩೧

ಇಳೆಮ್ಯಾಲೆ ಇಳಿದು ಬಂದ ಪಕ್ಷಿರಾಜನು
ಒಳಗೆ ಬಂದ ಮುನಿಯ ನೋಡಿ ವಂದನೆ ಮಾಡಿ

ಸೆಳೆಮಂಚದಲ್ಲಿ ಕುಳಿತಿರುವೊ ಕೃಷ್ಣನ ಮುಂದೆ
ನಳಿನಾಕ್ಷಿ ಬಂದ್ಹೇಳಿಕೊಂಬೊ ಮಾತುಗಳು ಮತ್ತೇನೆಂದರೆ–

## ಧ್ವನಿ—೩೨

ಪಾಲಿಸಪ್ಪಣೆಯಿಂದು ಪರಮ ದಯಾಸಿಂಧು
ಬೇಡಿಕೊಂಬೆನೊ ನಾ ಬಂದು ಕೃಷ್ಣನೆ ನಿನ್ನ
ಬೇಡಿಕೊಂಬೆನೊ ನಾ ಬಂದು ಪ.

ದಾನವಾಂತಕ ನಿನ್ನ ದಾನವ ಕೊಟ್ಟು
ನಿಧಾನಳಾಹೆನೊ ಮನಕೆ
ಜ್ಞಾನಿಗಳೊಡೆಯನೆ ಗೆಲಿಸೆನ್ನಾಭೀಷ್ಟವ
ಏನೆಂಬಿ(ಬೆಇ?)ದಕೆ ಸುರ್ಥೇನು ಭಕ್ತ್ಯೇನು ೧

ಲಕುಮಿ ನಾರಾಯಣ ಸಕಲಗುಣ ಪರಿಪೂರ್ಣ
ಭಕುತಿಯಿಂದ ಚರಣ
ನಖಶಿಖ ಪರಿಯಂತ್ರ ನೋಡಿಕೊಂಡಿರುವೆನು
ಮುಕುತಿದಾಯಕ ಮೋಹನ್ನ ನೋಡೆನ್ನ ೨

ಭಾಳ ಮಂದ್ಯೆನಗೆ ಗಯ್ಯಾಳಿ ಸವತಿಯರೊ–
ಳೀಳ್ಯ ಮಾಡಿದೆಯೊ ಎನ್ನ
ಭಾಳ ಮಾತೇನೊ ಭೀಮೇಶ ಕೃಷ್ಣನೆ ನಿನ್ನೀ–
ವ್ಯಾಳ್ಯದಿ ಕೊಡುವೆ ನಾನು ದಾನವನು ೩

## ವಚನ—೩೩

ಜಾಣರೊಳಗಧಿಕೆ ಬಹುಜಾಣೆ ಸತ್ಯಭಾಮೆ
ರಾಣಿರುಕ್ಮಿಣಿ ಅರಿಯಳೀ ವ್ರತವ ಎಂದೆಂದು
ಮಾಡುಮಾಡಿದಕೆ ಅನುಮಾನ ಬ್ಯಾಡೆನುತಿರಲು
ಕೇಳಿ ಕೃಷ್ಣನ ಮಾತು ಏನು ಮಾಡಿದಳೆಂದರೆ–

## ಧ್ವನಿ—೩೪

ರಂಗರಾಯನ ಬಂಗಾರದಿ ಶೃಂಗಾರ ಮಾಡಿದಳು ಭಾಮೆ
ಕಂಗಳಿಂದ ನೋಡಿ ಪರಮಾನಂದ ಬಡುವಳು ಭಾಮೆ ಪ.

ಪುನುಗು ಕಸ್ತೂರಿ ಸಂಪಿಗೆಣ್ಣೆ ತಿವರಿ ತೀಡಿದಳು ಭಾಮೆ
ಕನಕಕೊಪ್ಪರಿಗೆ ಬಿಸಿ ನೀರು ಬೆರಸಿ ತಾನೆರೆದಳು ಭಾಮೆ ೧

ಬಿಚ್ಚಿಜರ ಪೀತಾಂಬರವುಡಿಸಿ ಹೊಚ್ಚಿ ಶಾಲುಗಳ ಭಾಮೆ
ಅಚ್ಚ ಕುಂದಣದಕ್ಷಂತಿ ಕಸ್ತೂರಿ ತಿಲಕವಿಟ್ಟಳು ಭಾಮೆ ೨

ಅಂದರವಿಂದ ಪಾದಕ್ಕೆ ನೌಪುರಂದಿಗೆಯಿಟ್ಟಳು ಭಾಮೆ
ದುಂಡುಮಲ್ಲಿಗೆ ಚೆಂಡು ಚೆಂಡಿಕೆ ಕಟ್ಟಿ ಸುತ್ತಿದ್ದಳು ಭಾಮೆ ೩

ಕಡಗ ಕಂಕಣ ತೋಳ ಬಾಪುರಿ ಉಡಿದಾರುಂಗುರಗಳಿಟ್ಟು ಭಾಮೆ
ತೊಡರುಬಿಡಿಸಿ ಮುತ್ತಿನ ಹಾರ ಜಡಿತಾಗ್ಹಾಕಿದಳು ೪

ಎಂಟು ಮುತ್ತಿನ್ವೊಂಟಿ ಕರ್ಣಕುಂಡಲವಿಟ್ಟಳು ಭಾಮೆ
ವೈಕುಂಠಪತಿಗೆ ವಜ್ರಮಾಣಿಕ್ಯ ಮುಕುಟವ್ಹಾಕಿದಳು ೫

ಮಿಂದು ಮಡಿಯನುಟ್ಟು ಗಂಧಕುಂಕುಮ[ವ]ನಿಟ್ಟಳು ಭಾಮೆ
ಕುಂದಣದಾಭರಣ ಕುಶಲದಿಂದ ಧರಿಸಿದಳು ಭಾಮೆ ೬

ತಂದು ನಿಲುವುಗನ್ನಡಿ ನಿಲಿಸಿ ಪೊಂದಿ ನಿಂತಳು
ಇಂದು ನಮ್ಮಿಬ್ಬರ ಚೆಲ್ವಿಕೆಗೆ ಸರಿಯಿಲ್ಲೆಂದಳು ೭

ಸುಂದರಾಂಗ ನಿನ್ನ ಸತಿಯರೊಳು ಚೆಂದ ಚೆಲ್ವಿಕೆಯು
ಇಂದು ನಮ್ಮಿಬ್ಬರ ಚೆಲ್ವಿಕೆ ವರ್ಣಿಸಲ್ಯಾರಿಂದಲಾಗೋದೊ ೮

ಸರಸಿಜಾಕ್ಷನ್ನ ಕೂಡ ತಾ ಭಾಳ ಸರಸವಾಡುತಲಿ ಭಾಮೆ
ಅರಸು ಭೀಮೇಶಕೃಷ್ಣ ನಿನ್ನಗಲಿರಲಾರೆನುತಲಿ ಭಾಮೆ ೯

## ವಚನ—೩೫

ಕರೆಸಿ ಬ್ರಾಂಬರನು ಕುಳ್ಳಿರಿಸಿ ಪೀಠಗಳ್ಹಾಕಿ
ತರಿಸಿಟ್ಟಳಾಗ ತಾಂಬೂಲ ಮಂತ್ರಾಕ್ಷತೆಯು
ಸುರಿಸಿ ಹಣ ಹೊನ್ನು ದಕ್ಷಿಣೆರಾಸಿ ಹರಿ ಸಹಿತ
ಚರಣದಲಿ ಬಿದ್ದ್ಹೇಳಿಕೊಂಬೋ ಮಾತುಗಳು ಮತ್ತೇನೆಂದರೆ–

## ಧ್ವನಿ—೩೬

ಕೊಡುವೆ ನಾನು ಶ್ರೀಕೃಷ್ಣನ ದಾನವ
ಹಿಡಿವೋರೆಲ್ಲ ಬನ್ನಿರಿ ನೀವು ಪ.

ಮಚ್ಛನಾಗಿ ನಿಗಮವ ಕದ್ದಸುರನ
ಶಿಕ್ಷಿಸಿ ವೇದತಂದವನೀತ
ಅಚ್ಚ ಕ್ಷೀರಾಂಬುಧಿ ಕಡೆದಮೃತವನು
ಭಕ್ತಜನಕೆ ಬೀರಿದ ಪ್ರಖ್ಯಾತನ ೧

ಆದಿದೈತ್ಯ ಹಿರಣ್ಯಾಕ್ಷನ ಸೀಳಿ
ಮೇದಿನಿ ತಂದ್ಧರವಿದನೀತ
ಕಾದಿ ಕನಕಕಶ್ಯಪನ ಕರುಳ ವನ-
ಮಾಲೆ ಕೊರಳಲ್ಹಾಕಿದ ನಾರಸಿಂಹನ ೨

ಸಕಲಲೋಕ ವ್ಯಾಪಿಸಿದನು ಮೂರು ಪಾ-
ದಕೆ ಭೂಮಿಯ ಬೇಡಿದನೀತ
ಶಖದಿಂ(ಶಂಕುವಿಂ ?)ದಲಿ ಕ್ಷತ್ರಿಯರ ಕುಲಕೆ ನಾ-
ಶಕನೆನಿಸಿದ ಈ ಋಷಿಕುಲಜಾತನ ೩

ಸಿಂಧು ಸೇತುವೆ ಕಟ್ಟಿ ಜಾನಕಿಯ
ತಂದ ರಾಮಚಂದ್ರನುಈತ
ಇಂದುದ್ವಾರ ಕೆ[ಯ]ಲ್ಹದಿನಾರುಸಾವಿರ
ಮಂದಿ ಹೆಂಡಿರನಾಳುವ ಯದುನಾಥನ ೪

ಬೌದ್ಧನಾದ ಭೀಮೇಶಕೃಷ್ಣನು
ಶುದ್ಧನಾದನಿರುದ್ಧನಯಿತ
ಮುದ್ದು ತೇಜಿಯನೇರುತ ತಿರುಗ್ಯಾಡುವೊ
ಪದ್ಮನಾಭ ಕಲಿಮರ್ದನ ಹರಿಯ ೫

## ವಚನ—೩೭

ಅಂದ ಮಾತನು ಕೇಳಿ ಆಲೋಚನೆ ಮಾಡಿ
ಬಂದ ಬ್ರಾಂಬರು ಭಕ್ತಿಯಿಂದ ಕೈ ಮುಗಿದಾಗ
ಸಂದೇಹದಿಂದ ಸರ್ವೋತ್ತಮನ ದಾನವನು
ಇಂದೊಲ್ಲೆನೆನುತ ಮಾತಾಡುವುದು ಮತ್ತೇನೆಂದರೆ-

## ಧ್ವನಿ—೩೮

ಒಲ್ಲೆ ಒಲ್ಲೆ ಒಲ್ಲೆನೆಂದರು ನಿನ್ನ ಪತಿಯ
ಗುಣಗಳೆಲ್ಲ ಕೇಳಿ ಬಲ್ಲೆವೆಂದರು ಪ.

ಮುಪ್ಪಿನವರು ನೋಡೆ ನಾವು ಚಿ-
ಕ್ಕ ಪ್ರಾಯದ ಸತಿಯು ನಮಗೆ
ಮತ್ತೆ ನಿನ್ನ ಪತಿಯು ಒಯ್ದು
ಭ್ರಷ್ಟರಾದೇವಲ್ಲೆ ನಾವು ೧

ಅರುವತ್ತಾರು ವರುಷ ನಮಗೆ
ವರ ಪ್ರಾಯದ ಹೆಂಡಿರಿರಲು
ವರಜೋಡವರಿಬ್ಬರನು ಮಾಡಿ
ತಿರುಗೋದಡವೀ ಪಾಲೆ ನಾವು ೨

ದೊಡ್ಡ ತುರುವು ಕಟ್ಟಕೊಂಡು
ತಿದ್ದಿ ಕಚ್ಚೆ ಹಾಕಿಕೊಂಡು
ಮಧ್ಯಾಹ್ನ ಕ್ಕುದಿನಾರು ಮನೆಯು
ಸುದ್ದಿ ತರುವೋಳು ನಮ್ಮ ಮಡದಿ ೩

ಹುಟ್ಟ ಬ್ರಹ್ಮಚಾರಿಮಗನು
ಪುತ್ರನೊಬ್ಬ ಮನೆಯೊಳಿರಲು
ಮತ್ತೆ ಕನ್ಯೆ ತಂದು ಮದುವೆ
ಮಾಡು ಮಾಡೆಂದು ಕಾಡಿದರಪ್ಪೈಗೆ ೪

ಕರೆವೋ ಗೋವು ಮನೆಯೊಳಿಲ್ಲ
ತಿರಿದು ತಂದ ಮಜ್ಜಿಗೆಯು
ಸುರಿವೆ ನಾ ಕ್ಷೀರಾನ್ನವೆಂದು
ಬರಿಯ ದುಃಖಬಡುವೋರಲ್ಲ ೫

ಶಕ್ರಪರಿವಿನನ್ನವುಂಡು
ಹೊಟ್ಟೆ ದೊಡ್ಡದೀತಗಿನ್ನು
ನಿತ್ಯ ನೈವೇದ್ಯಕನ್ನಎಷ್ಟು
ಇಟ್ಟರು ಸಾಲದೆಂಬುವ ೬

ಹಿರಿಯುರಿಂದ ನಡೆದು ಬಂದ
ಕರಿಯ ಕಲ್ಲು ಸಾಕು ನಮಗೆ
ವರ ವೈಕುಂಠಪತಿಯ ಪೂಜೆ
ಕರವೆ ಶಕ್ತಿ ಸಾಲದು ನಮಗೆ ೭

ಎಣ್ಣೋರಿಗೆ ಹೋಳಿಗೆಯ ಮ್ಯಾಲೆ
ಬೆಣ್ಣೆ ಕಾಸಿದ ತುಪ್ಪವಾದರೆ
ದೊನ್ನೆ ದೊನ್ನೆ ಹೊಡೆವೋದಕ್ಕೆ
ಧನ್ಯರೆನಿಸಿಕೊಂಡೆವೆ ನಾವು ೮

ಭಕ್ಷ್ಯ ಮಂಡಿಗೆ ಫೇಣಿ ಗೋದಿ–
ಕುಟ್ಟಿದ ಖೀರಾದರಿನ್ನು
ಹೊಟ್ಟೆ ಒಡೆದು ಜನಿವಾರೆಳೆಯು
ಚಟ್ಟೆಂದರೂ ನಾವು ಬಿಡಲಿಕ್ಕಿಲ್ಲ ೯

ಇಷ್ಟುಮಾತ್ರಕ್ಕೊ ಭೀಮೇಶ–
ಕೃಷ್ಣನ್ನ ದಾನ ಹಿಡಿವೋರಲ್ಲ
ದಕ್ಷಿಣೆಯನು ಕೊಟ್ಟರೆ
ದೊಡ್ಡ ಮುಟ್ಟಿಯಾದರೂ ಹೊತ್ತೇವೆಂದರು ೧೦

## ವಚನ—೩೯

ಸತ್ಯಭಾಮೆಯು ಮಾತಿಗುತ್ತರವ ಕೊಡುತಾಗ
ತಟ್ಟನೆ ಬಂದ ಬ್ರಾಂಬರು ತಿರುಗಿ ಪೋಗುತಿರೆ
ಅತ್ಯಂತದುಃಖದಿಂದಾ ಮುನಿಯು ಚರಣಕ್ಕೆ
ಗಟ್ಟ್ಯಾಗಿ ಬಿದ್ದ್ಹೇಳಿ ಕೊಂಬೋ ಮಾತುಗಳು ಮತ್ತೇನೆಂದರೆ–

## ಧ್ವನಿ—೪೦

ನಾರದ ನಿಮಗ್ಹರಿ ದಾನವ ಕೊಡುವೆ
ನಾರದ ನಿಮಗ್ಹರಿ ಪ.

ಕೃಷ್ಣನ ಗುಣಗಳ ಇಷ್ಟು ಹೇಳುತಲೀಗ
ತಟ್ಟನೆದ್ದರು ದ್ವಿಜರೆಲ್ಲ ೧

ವಿಷ್ಣು ದಾನವನೊಲ್ಲದಿದ್ದರೆ ನಿಮ್ಮ ಮುಂದೆ
ಬಿಟ್ಟು ಬಿಡುವೆ ಪ್ರಾಣವನ್ನು ೨

ಸುಂದರ ಸುಗುಣ ಗಜೇಂದ್ರವರದನ ಸಾ–
ರಂದ ನಿಮಗೆ ಕೊಡುವೆ ೩

ಸಂದೇಹ ಬ್ಯಾಡರವಿಂದಲೋಚನ
ಸದಾನಂದ ಮುಕ್ತಿಯು ಕೊಡುವ ೪

ವಾಸುಕೀಶಯನ ಭೀಮೇಶಕೃಷ್ಣನ ನೀವು-
ದಾಸೀನ ಮಾಡದಿರಿ ೫

ದಾಸರ ದಾಸನೆನಿಸುವ ನಿಮಗೆ
ಸಂತೋಷದಾಯಕನೀತನು ೬

## ವಚನ—೪೧

ಚರಣದಲಿ ಬಿದ್ದ್ಹೇಳಿಕೊಂಬೋ ಭಾಮೆಯು ನೋಡಿ
ಕರುಣ ಕಟಾಕ್ಷದಿಂದಾಗ ಮಾತಾಡಿದನು
ಪರಣಶಾಲೆಗಳು ಮೊದಲಿಲ್ಲ ಮಾಧವ[ನ]ನೊಯ್ದು
ಇಡುವುದಿನ್ನೆಲ್ಲಿ ಹೇಳೆನುತ ಮಾತಾಡುವುದು ಮತ್ತೇನೆಂದರೆ-

## ಧ್ವನಿ - ೪೨

ಏನೆಂಬೆಯೆಲೆ ಸತ್ಯಭಾಮಾ
ನಾನಿಡುವೆ ನಿನ್ನಲ್ಲಿ ಪ್ರೇಮ ಪ.

ಮನೆಮಾರು ಹೆಂಡಿರಿಲ್ಲ ಧನದ್ರವ್ಯ ಮೊದಲಿಲ್ಲ
ನಿನ ಪತಿಯು ಸಾಕೋ ಬಗೆ ಹ್ಯಾಗೆ ೧

ನಿನಕ್ಲೇಶ ಘನವಾಗಿ ಎನ ಮುಂದ್ಹೇಳುವಿ ಈಗ
ಎನ್ನಕಷ್ಟ ಕೇಳೋರೊಬ್ಬರಿಲ್ಲ ೨

ಆದದದ್ದಾಗಲಿ ಕೊಡು ಭೀಮೇಶ ಕೃಷ್ಣ[ನ]ದಾನ
ನಾ ಕೇಳಲಾರೆ ನಿನ್ನ ಸೊಲ್ಲ ೩

## ವಚನ—೪೩

ನುಡಿದ ನಾರಂದರ್ವಚನವ ಕೇಳಿ ಶ್ರೀಕೃಷ್ಣ
ಮಡದಿಯನು ಕರೆದು ತೊಡೆಯಲಿಟ್ಟು ಮುದ್ದಿಸುತ
ಕಡುಮೋಹದಿಂದ ಕಮಲಾಕ್ಷಿಗಲ್ಲವ
ಪಿಡಿದು ನುಡಿದ್ಹೇಳಿಕೊಂಬೋ ಮಾತುಗಳು ಮತ್ತೇನೆಂದರೆ-

## ಧ್ವನಿ—೪೪

ಬ್ಯಾಡ ಬ್ಯಾಡೆನ್ನನು ಮುನಿಗೆ
ಕೊಡಬ್ಯಾಡ ಬ್ಯಾಡ ಪ.

ಹಾಡಲಾರೆ ಪಾಡಲಾರೆ ನಾ ಭರದಿಂ-
ದೋಡಲಾರೆ ಈತನ ಹಿಂದೆ ೧

ಕೃಷ್ಣಾಜಿನದ ಪೆಟ್ಟಿಗೆ ವೀಣೆ ಹೊತ್ತು ನಾ
ಭೃತ್ಯನಾಗಿಯಿರಲಾರೆ ಆತಗೆ ೨

ಕ್ಷಣಕೊಂದು ಲೋಕವ ತಿರುಗುವಾತನ ಹಿಂದೆ
ಮೊಣಕಾಲು ನೊಂದರೇನು ಗತಿಯೆ ೩

ಇದ್ದೂರೊಳಗೆ ಎನ್ನ ಕೊಟ್ಟರೆ ನಾ ನಿನ್ನ
ಮುದ್ದು ಮುಖವ ನೋಡುತಿದ್ದು ಕಳೆವೆ ಕಾಲ ೪

ದ್ವಾರಕೆ ಜನರೊಳು ಕೊಟ್ಟರೆ ನಾ ನಿನ್ನ
ಮೋರೆ ನೋಡುತ ತಿರುಗಾಡಿ ಕಳೆವೆ ಕಾಲ ೫

ಮತ್ತೊಬ್ಬ ಸತಿಯು ಕಣ್ಣೆತ್ತಿ ನೋಡುವುದಿಲ್ಲ ನಿ-
ನ್ನುತ್ತಿಲಿರುವೆ ಎನ್ನ ವ್ಯರ್ಥವಾಗಿ ೬

ಬ್ಯಾಸರೀಕ್ಯಾದ ಭೀಮೇಶ ಕೃಷ್ಣನುಯೆಂದು
ದೇಶ ದೇಶದಿಹೊಗಳುವರೆನ್ನ ೭

## ವಚನ—೪೫

ಗಾಡಿಕಾರನೆ ನೀನು ಆಡುವೊ ಮಾತುಗಳ
ಕೇಳಿ ಸೋಜಿಗವಾಯಿತೀಗೆನ್ನ ಮನಕೆಂದು
ಮಾಡುವೆನು ಇದಕೆ ಅನುಮಾನವಿಲ್ಲೆನುತಾಗ
ಹೇಳಿ ಕೃಷ್ಣನ ಮುಂದೆ ಏನು ಮಾಡಿದಳೆಂದರೆ-

## ಧ್ವನಿ—೪೬

ಕೊಟ್ಟಳು ದಾನ ಕೇಶವನ ವಿಧಾನದಿ
ಕೊಟ್ಟಳು ದಾನ ಪ.

ಅಚ್ಚ ಮುತ್ತಿನ ಹರಿವಾಣದಿ ಕುಳ್ಳಿರಿಸಿ
ಅಚ್ಯುತಾನಂತನ ಮುಚ್ಚಿ ಸೆರಗು ೧

ದಕ್ಷಿಣೆ ಸಹಿತ ಮಂತ್ರಾಕ್ಷತೆ ಉದಕವ
ಬಿಟ್ಟು ಮುನಿಯು ಕಮಲ್ಹಸ್ತದೊಳಗೆ ೨

ಭಕ್ತಿಯಿಂದಾಗ ಭೀಮೇಶಕೃಷ್ಣಾರ್ಪಣವೆಂದು
ಹಸ್ತಗಳನು ಮುಗಿದು ಸಾಷ್ಟಾಂಗಕ್ಕೆರಗಿ ೩

## ವಚನ—೪೭

ಮುತ್ತೈದೆ ಆಗು ಮೂಲೋಕದೊಡೆಯಳು ಆಗು
ಪುತ್ರರ ಪಡೆದು ಸೌಭಾಗ್ಯವಂತ್ಯಾಗೆಂದು
ಮತ್ತೊಂದು ಕ್ಷಣ ಅಗಲದಿರು ಕೃಷ್ಣನೆ(ನ ಎ?)ನುತಾಗ
ಕೊಟ್ಟರೀಕೆ[ಗೆ] ಹರಿಕೂಡ ಮಾತನಾಡುವುದು ಮತ್ತೇನೆಂದರೆ–

## ಧ್ವನಿ—೪೮

ಏಳೀರೇಳು ಲೋಕವ ಸುತ್ತಿ ತಿರುಗೋದ–
ಕ್ಯಾಕಾಗಿರು ಎನ್ನಿಹ್ಹಿಂದೆ
ಭಾಳ ಬುದ್ಧಿಗಳ್ಹೇಳುವೆ ನಾ ನಿನ್ನ ಗ–
ಯ್ಯಾಳಿ ತನವ ಬಿಡು ಮುನ್ನ ಪ.

ಅಂಟಿಸಿದೆನು ಕೃಷ್ಣಾಜಿನದ ಪೆಟ್ಟಿಗೆ
ಕಂಠದಿ ಕಟ್ಟಿನ್ನ ಗಂಟು
ಎಂಟರ ಮ್ಯಾಲೆರಡೆಂಟುಸಾವಿರ ಸತಿಯರ ಬಿಟ್ಟಿರು ವೈ–
ಕುಂಠ ಒಂಟಿಗನಾಗ್ಯೋಡಾಡುವೆ ಭಕ್ತರ
ಬಂಟ ನಿನಗೆ ಎನ್ನ ಕೇಳೋ ಜಂಟ ೧

ಹೆತ್ತತಾಯಿ ತಂದೆಯರನು ಮರೆತು
ಭೃತ್ಯನಾಗಿರೊ ಸಲ್ಲ
ಸತ್ಯಭಾಮೆ ರುಕ್ಮಿಣಿಯರ ಹಂಬಲ
ಬಿಟ್ಟಿರು ಭೋಗಗಳೆಲ್ಲ
ಸೊಟ್ಟ ಕುಬ್ಜೆಯಲ್ಲಾದರು ನೀ ಮನಸಿಟ್ಟಿರು(ರೆ?) ನಾ ಬಿಡೋನಲ್ಲ ೨

ಹಗಲಿರುಳೆನ್ನದೆ ಗೋಪೇರಮನೆ ಘೃತ ದಧಿ ಕ್ಷೀರಾನ್ನಗಳೆಲ್ಲ
ಅಗರು ಚಂದನ ಪರಿಮಳ ಕುಸುಮವು ಈ

ಬಗೆ ಬಗೆ ಸುಖ ಬಯಸದಿರೆಲ್ಲ
ಖಗನ್ಹೆಗಲೇರಿ ನೀ ಗಗನಕ್ಹ್ಯಾರ್‍ಹೋದರೆ
ಬಿಗಿದೆಳೆತರುವೆ ಭೀಮೇಶಕೃಷ್ಣನೆ ೩

## ವಚನ—೪೯

ನಾರದಾಡಿದ ಮಾತ ನರಸಖನು ತಾ ಕೇಳಿ
ಓರೆ ನೋಟದಿ ಪ್ರೈಯಾರಿ ಮುಖವನು ನೋಡಿ
ಧಾರೆ ಕಣ್ಣಿಂದುದುರುವಂತೆ ಜಲ ಸುರಿಸುತ್ತ
ಹೋಗುತಿರೆ ಕೃಷ್ಣ ನೋಡೇನುಮಾಡಿವಳೆಂದರೆ–

## ಧ್ವನಿ—೫೦

ಅಮ್ಮ ನಾ ಹ್ಯಾಗೆ ಮಾಡಲಿಯಿನ್ನು
ಬ್ರಹ್ಮನ ಸುತ ಏನಾಟ ಮಾಡಿದ ನೋಡಮ್ಮ
ನಾ ಹ್ಯಾಗೆ ಮಾಡಲಿಯಿನ್ನು ಪ.

ನಾನಾ ಪರಿಯಲೆನ್ನ ಬೋಧಿಸಿ ಸಾಧಿಸಿ
ಆನೆವರದನ್ನಾಕ್ಷಣ ಕರೆದೊಯ್ದ ೧

ಅಕ್ಕ ರುಕ್ಮಿಣಿ ದೇವಕ್ಕಿದೇವಿಯು ಬಂದು
ಲೆಕ್ಕಿಸದೆನ್ನನು ಧಿಕ್ಕರಿಸುವರೆ ೨

ವಾರಿಗೆ ಪುರುಷನ ಓಡಿಸಿದವಳೆಂದು ಸೋಳ ಸಾ–
ವಿರಮಂದಿ ಬಾಧಿಸೋರೆನ್ನ ೩

ಕಂಗಳ ಮುಂದಿದ್ದ ರಂಗಮೂರುತಿ ಕೊಟ್ಟು
ಭಂಗ ಬಡುವೆ ಭಾಳ ಸವತಿಯರೊಳಗೆ ೪

ಮುತ್ತು ಮಾಣಿಕ್ಯ ನವರತ್ನದಾಭರಣವ
ಬಿಷ್ಮ(ಸುಟು?)ಮಂಚದಿ ಮುಡಿಬಿಟ್ಹೊರಳುತಲಿ ೫

ಇರಲಾರೆ ನಾನಿಂದು ವಿರಹ ತಾಪಗಳಿಂದ
ಅರೆಘಳಿಗ್ಹ್ಯೊಳು ಪ್ರಾಣ ತೊರೆವೆನೀಗೆನುತ ೬

ಕೃಷ್ಣ ಕೃಷ್ಣನೆಂದೆದೆ ಘಟ್ಟಿಸುತ ಭೀಮೇಶ–
ಕೃಷ್ಣನಿಲ್ಲದ ಪ್ರಾಣ ಬಿಟ್ಹೋಗಲೆನುತ ೭

### ವಚನ—೫೧

ಅತಿ ದುಃಖದಿಂದ ಮಲಗಿರಲು ಮಲಮಗ ತನ್ನ
ಪಿತನ ಕೊಟ್ಟರೋಷದಿಂದ ಶರಬಿಟ್ಟನಗೆ
ವ್ಯಥೆಬಡಿಸುತಿರಲು ಎದೆಯಲ್ಲನಂಗನ ಬಾಣ
ಪೃಥಿವಿಮ್ಯಾಲೆ ಬಿದ್ದ್ಹೊರಳುತ ಕೃಷ್ಣ ಕೃಷ್ಣೆನುತ
ಪತಿವಿರಹತಾಪದಿಂದ

### ಧ್ವನಿ—೫೨

ಇಂತೀಪರಿಯಲಿ ಮಿಡುಕುತ ಭಾಮೆ ತಾ
ಮಂಚದ ಮ್ಯಾಲೆ ಬಿದ್ದಿರಲಾಗ
ಸಂತೋಷದಿ ನಾರದ ಬೀದಿಯಲಿ ಶ್ರೀ–
ಕಾಂತನ ಕೂಡಿ ಬಂದನು ಬ್ಯಾಗ ೧

ಮುಂದೆ ತಂಬೂರಿಯ ಮೀಟುತ ನಾರದ
ಹಿಂದ್ಹೆಗಲಲಿ ಗಂಟನು ಹೊತ್ತ
ಇಂದಿರೇಶನ ಕಾಣುತಲಾ ಸತಿಯರು
ಇಂದೇನಿದು ಸೋಜಿಗವೆನುತ ೨

ಕೃಷ್ಣರಾಯರ ಕೂಡೆತ್ತ ಪೋಗುವಿರೆಂದು
ಮಿತ್ರೆಯರೆಲ್ಲ ಕೇಳುತಲಿರಲು
ಮತ್ತೊಬ್ಬರು ಕೇಳುವುದೇನು ಕಾರಣ
ಭೃತ್ಯನಾದನು ನಿಮ್ಮರಸೆನಗೆ ೩

ಸರ್ವಸ್ವತಂತ್ರಳು ಸತ್ಯಭಾಮೆ
ಶ್ರೀಹರಿದಾನವ ಕೊಟ್ಟಳು ನೋಡಿ
ಇರುವೆಯಂತೆ ಸತಿಯರು ನೀವೆಲ್ಲ
ಬಿರಿಬಿರಿ ಕಣ್ ಕಣ್ ಬಿಡುವುದೆ ೪

ಕೊಟ್ಟೆಲ್ಲರಿಗೀ ಉತ್ತರ ಭೀಮೇಶ–
ಕೃಷ್ಣನ ಕೂಡಿ ನಡೆದರಾಗ
ಕೆಟ್ಟೆವೆನುತ ಕಂಗೆಟ್ಟು ಸತಿಯರು
ಅತ್ತೆ ದೇವಕ್ಕಿ ಮುಂದರುಹಿದರು ೫

## ವಚನ—೫೩

ಹರಿ ನಾರದರು ಕೂಡಿ ತೆರಳಿಪೋದ್ವಾರ್ತೆಯನು
ಆರುಹುತಿರಲಾಗ ಸೊಸೆಯರು ಬಂದು ದೇವಕ್ಕಿ
ಭರದಿಂದ ಬಂದು ಬಲರಾಮನ ಸಹಿತಾಗಿ
ಮರುಗುತಲಿ ಬಿದ್ದ ಸೊಸೆ ನೋಡಿ ದೇವಕ್ಕಿ
ಮತ್ತೇನೆಂದಳು ಎಂದರೆ–

## ಧ್ವನಿ—೫೪

ಇದು ಏನು ಮಾಡಿದೆಯೋ ಚಿದುರೆ ಭಟಾರಿ
ಯದುನಾಥ[ನ]ನೆಲ್ಲಿ ಕಳುಹಿಸಿದೆಯೆ ವೈಯಾರಿ ೧

ದಾರಿಗೆ ಕೊಟ್ಟಿ ದಾನವನು ಗಯ್ಯಾಳಿ
ದಾರು ಕಲಿಸಿದರ್ಹೇಳೆ ನಿನಗಿಂಥ ಚಾಳಿ ೨

ಕೊಂದು ಹಾಕುವ ಕಂಸನೆಂದು ಕೃಷ್ಣನ್ನ
ಅಂದು ಗೋಕುಲದಿ ಬಚ್ಚಿಟ್ಟಿ ನಾ ಇನ್ನು ೩

ನಂದ ಯಶೋದೆಕಂದನ ಕೊಟ್ಟಿ ದಾನ
ಇಂದು ನಿನ ಮನಕಾಯಿತೇನೆ ನಿಧಾನ ೪

ದಂಗುಡಿ ಹೆಣ್ಣೆ ನಿನ್ನಂಗುಡಿ ಭಾಳೆ
ಮಂಗಳಾಂಗನ ಎಲ್ಲಿ ಮಾರಿದಿ ಹೇಳೆ ೫

ಧಕ್ಕುಡಿಗಿತ್ತಿ ಬಹು ಧೈರ್ಯದ ಗರತಿ
ಕೊಟ್ಟು ಕೃಷ್ಣಯ್ಯನ ಬಿಟ್ಟ್ಯಾಶ್ಚರ್ಯಗೆಯಿರುತಿ ೬

ಚೆಲುವೆ ನೀನೆಂದು ಮುದ್ದಿಸಿದ ಕೋಮಲೆ
ತಲೆಯ ಮ್ಯಾಲೇರಿ ಕುಳಿತ್ಯಲ್ಲೆ ಹೊಯ್ಮಾಲಿ ೭

ಸರ್ಪನಂದದಿ ನಿನ್ನ ದರ್ಪವಿನ್ನೆಷ್ಟೆ ಕಂ–
ದರ್ಪನಪ್ಪನ ಅಂಜಿಕಿಲ್ಲ ನಿನ ಸಿಟ್ಟೆ ೮

ತೋರೆ ತೋರೆ ತಾರಾಪತಿಯುವದನನ್ನ
ತೋರದಿದ್ದರೆ ನಾನು ಬಿಡುವೆನೇ ನಿನ್ನ ೯

ರಾಜನಲ್ಲಿ ಕೆಲಸವಿಲ್ಲ ಭೋಜನ ದಕ್ಷಿಣೆಯಾಸ್ಯೆನಗಿಲ್ಲ
ಮೂರ್ಜಗದೊಡೆಯನ ಕೊಡುವೋನಲ್ಲ ಬಿಡುಬಿಂಕಗಳೆಲ್ಲ ೭

ಅಷ್ಟಮಹಾಸತಿಯರು ತಾವು ಚಿತ್ರದಾಗಿನ ಗೊಂಬೆಯಂತೆ
ಎಚ್ಚರವಿಲ್ಲದೆಯಿರುವೋರು ಬಿಡೋ ನಮ್ಮಚ್ಯುತ[ನ]ನೀಗೆನುತ ೮

ಅಚ್ಯುತನ ಬಿಡುವೋದಕ್ಕೆ ಹಚ್ಚಿಕೊಂಡ್ಡು ದಿನಾರುಕಣ್ಣು
ಸಾಕ್ಷಾತ ಶಿವ ಬ್ರಹ್ಮನು ಬರಲೀಗಂಜುವ[ವ] ನಾನಲ್ಲ ೯

ಪುತ್ರಭಿಕ್ಷೆಯನ್ನು ಬೇಡಿ ಹೆತ್ತ ದೇವಕ್ಕಿಯು ತಾನು
ಉಟ್ಟಸೆರಗು ಒಡ್ಡಿ ಬೇಡಿಕೊಂಬುವಳೊ ನಿಮ್ಮ ೧೦

ಕಂಸಗಾರುವಂದಿ ಸುತರ ಹಿಂಸೆಬಡಿಸಿದಳು ಕೊಟ್ಟು ಮ—
ನಸು ಬಾರದು ಮಗನೊಬ್ಬನ ಕೊಡಲಿಕ್ಕೀಗೆನಗೆ ೧೧

ನಿಷ್ಠುರ ಮಾತ್ಯಾಕೆ ನಿಮಗೆ ಬಿಟ್ಟು ಹೋದರೆ ಕೃಷ್ಣನ್ನ
ಇಟ್ಟ ಬಲರಾಮೆಂಬುವ ಹೆಸರು ತಪ್ಪಲಿ ನನಗೆಂದ ೧೨

ಹಮ್ಮಿನ ಮಂಥ ನಿಮಗ್ಯಾಕೊ ನಮ್ಮ ಕೃಷ್ಣನ್ನ ಬಿಡುವುದಕೀ—
ಬ್ರಹ್ಮನ ಸುತನಲ್ಲಿ ನಾನು ಸುಮ್ಮನೆ ಮನೆಗ್ಹೋಗು ೧೩

ರಂಗನ ತೂಕವ ತೂಗಿ ಬಂಗಾರವ ಕೊಡುವೆ ನಿನಗೆ
ಮಂಗಳಾಂಗನ ಬಿಡುಬಿಡೆನುತ ಸಾಷ್ಟಾಂಗಕ್ಕೆರಗಿದ ೧೪

ಕಡಲಿ ಕಾಳಿನರ್ಥ ಚಿನ್ನ ಕಡಿಮೆ ಆದರೂ ನಾ ಇನ್ನು
ಬಿಡುವೋನಲ್ಲ ಭೀಮೇಶಕೃಷ್ಣನ ನಡೆ ಹೋಗುವೋಣೆಂದ ೧೫

## ವಚನ—೫೭

ತಟ್ಟನೆ ಬಂದ ನಾರದ ಕೃಷ್ಣರೊಡಗೂಡಿ
ಸತ್ಯಭಾಮೆಯು ಮನೆಯು ಪಟ್ಟಸಾಲಿಯು ಒಳಗೆ
ಕಟ್ಟಿ ಚಿಂತಾಲು ನವರತ್ನದಾಭರಣಗಳ
ಬಿಚ್ಚಿ ಬಿಚ್ಚ್ಯಾಕುತಿರಲಚ್ಯುತಗೆ ಸರಿಯಾಗದು

## ಧ್ವನಿ—೫೮

ಸತ್ರಾಜಿತನು ಸಂಪಾದಿಸಿದ ಸಕಲ ಸ-
ಮಸ್ತ ಭಂಡಾರಗಳು ಸ್ವತ್ತೀಸರ ಚಂದ್ರ-
ಹಾರ ಮೋಹನಮಾಲೆ ಕೃಷ್ಣಗೆ ಸರಿ ಆಗದು ೧

ಅಷ್ಟ ಮಾಸತಿಯರ ಆರಮನೆಬಂಗಾರ
ಹಸ್ತಿ ಮ್ಯಾಲೇರಿ ಬಂದು ಹಸ್ತಕಡಗ ವಂಕಿ
ಹರಡಿ ಕಂಕಣ ದ್ವಾರ್ಯ ಲೆಕ್ಕವಿಲ್ಲದೆ ಬಿದ್ದವು ೨

ಸೋಳಸಾವಿರ ಸತಿಯರ ಬಂಗಾರವು ಆನೆ ಮ್ಯಾ-
ಲ್ಹೇರಿ ಬಂದು ನಾಗಮುರಿಗೆ ಸರಿಗೆಯು ಗೊಂಡೆ
ಹೆರಳುಬಂಗಾರ ರಾಸಿಯು ಬಿದ್ದವು ೩

ತಾಯಿ ದೇವಕ್ಕಿ ಯಶೋದ ರೋಹಿಣಿ
ಬಲರಾಮ ರೇವತಿಯರ್ವಸ್ತ್ರ ವಾಲೆ ಮೂಗುತಿ
ಚಂದ್ರಬಾಳ್ಯ ಬುಗುಡಿ ತಂದು ತೂಗೋ ತಕ್ಕಡಿಲಿಟ್ಟರು ೪

ಹಾಲಕಡಗ ಬಿಂದಲಿ ಗುಂಡು ಆಸಲೀವು
ಬಾಲನತ್ತಿಗೆ ಮುರುವು ನೀಲದ ಬಾವುಲಿ ಚೌ-
ಕುಳಿ ಚಳತುಂಬು ಪೇರಿಸಿದರು ರಾಸಿಗೆ ೫

ಪಟ್ಟದರಸು ಉಗ್ರಸೇನನ ಮನೆ ಭಾಗ್ಯ ಬೊಕ್ಕಸ-
ದ್ದುಣಗಳಲ್ಲಿ ಕಪ್ಪ ಖಜಾನೆ ಬರಿದು ಮಾಡಿ ತಂ-
ದ್ದುಣ ಭರ್ತಿಯಾಗದು ಕೃಷ್ಣಗೆ ೬

ಕಟ್ಟಿ ಕರಿಮಣಿ ಕಟ್ಟಿದ ಭೀಮೇಶಕೃಷ್ಣನ
ಸತಿಯರೆಲ್ಲ ಸುತ್ತ ನಿಂತರು ಸುಗುಣಜಾಣೆಯರು
ವೈದೀಕಮುತ್ತೈದೇರಂದದಿ ೭

## ವಚನ—೫೯

ಬಂದು ಬಲರಾಮ ಭಾಳಾಲೋಚನೆ ಮಾಡಿ
ಗುಂಜಿ ತೂಕಾನರಿಲ್ಲಿನ್ನ ಮನೆಯಲ್ಲಿ ಚಿನ್ನ
ಸಂದೇಹವಿಲ್ಲ ಸರ್ವೋತ್ತಮನು ಮುನಿಯು ಬಿ-
ನ್ನಿಂದೆ ಪೋಗುವುದು ನಿಜನೆಂದನಾಗ

ಕೇಳುತಾ ಮುನಿ ರಾಮನಾಡುವೋ ಮಾತುಗಳ
ಏಳಯ್ಯ ಕೃಷ್ಣ ಏಳೇಳೆಂದು ಎಬ್ಬಿಸುತ
ಭಾಳ ಶೌರ್ಯಗಳು ಬಲರಾಮನಾಡಿದ ಪಂಥ
ಕೇಳಿ ಸೋಜಿಗವಾಯಿತೀಗೆನ್ನ ಮನಕೆಂದನು
ಭರಣಭಂಡಾರ ಬರಿದಾಯಿತೋ ನಿಮ್ಮಲ್ಲಿ
ಕರುಣ ಕಕುಲಾತಿ ದಯ ಬರದ್ಹೋಯಿತೆನ್ನಲ್ಲಿ
ಚರಣಧಾವತಿ ಆದರಾಗಲಿ ಈ ನೀಲ–
ವರಣ ನಮಗಿರಲಿ ಸುವರಣ ನಿಮಗಿರಲೆಂದನು
ಎದ್ದು ಫೋಗುತಲೆ ಕುಣಿದಾಡುತಿರಲಾಮುನಿಯು
ಬಿದ್ದ್ಹೋಳಿಕೊಂಡು ಬ್ಯಾಗನೆ ಬಂದು ಯಶೋದ
ಸುಜ್ಞಾನಿಗಳು ಸಿಟ್ಟು ಮಾಡಲಾಗದುಯೆಂದು
ಪದ್ಮಾಕ್ಷಿ ಕುಳ್ಳಿರಿಸುತಿದ್ದಳಾ ಮುನಿಗಳನ್ನು
ತೂಗೋ ತಕ್ಕಡಿಯಲ್ಲಿ ಕುಳಿತ ಕೃಷ್ಣನ ಮುಂದೆ
ಬ್ಯಾಗನೆ ಬಂದು ದೇವಕ್ಕಿ ಯಶೋದೆಯರು
ನಾಗಶಯನನೆ ನಿನ್ನಾಸ್ಯೆಗೆ ಬಿಟ್ಟಿರಲೆನುತ
ಆಗ ದುಃಖಿಸುತ ಮಾತಾಡುವುದು ಮತ್ತೇನೆಂದರೆ–

## ಧ್ವನಿ—೬೦

ಬಂದು ದೇವಕ್ಕಿ ತನ ಕಂದನ ಕರಪಿಡಿದು
ಮುಂದೇನು ಗತಿಯೊ ಶ್ರೀಕೃಷ್ಣ
ಎಂದು ಭಾರ್ಗವರಾಮರಂತೆ ನೀಯೆನ್ನ ಶಿರವ
ಕೊಂದು ಹಾಕುವುದೇ ಲೇಸೀಗ ೧

ಮಗನೆ ನಿನ್ನಗಲಿ ಒಂದರಗಳಿಗೆ ಹನ್ನೊಂದು
ಯುಗವಾಗಿ ತೋರುವುದೆನ್ನ ಮನಕೆ
ಜಗದೊಳಿಲ್ಲೆನ್ನಂಥ ಹಗರಣದ ಸಂಸಾರ
ನಗೆಗೇಡಾಯಿತು ಲೋಕದೊಳಗೆ ೨

ಆರು ಮಂದಿ ಸುತರ ಕ್ರೂರ ಕಂಸಗೆ ಕೊಟ್ಟು
ಮಾರಜನಕನೆ ನಿನ್ನ ನೋಡಿ
ಕಾಲಕಳೆಯುತಲಿದ್ದೆ ಕಂಡು ಸೈರಿಸದೀಗ
ಮಾರಿಯಾದಳು ಈ ಸೊಸೆಯೆನಗೆ ೩

ಅಕ್ಕರೆಯ ಸುತನ ತನ ತೆಕ್ಕೆಯೊಳ್ ಬಿಗಿದಪ್ಪಿ
ಉಕ್ಕಿ ಹರಿಯುತ ಕಣ್ಣ ಜಲವು
ದುಃಖದಿಂದಿರುವೋ ಮಾತೆಯ ನೋಡಿ
ಶ್ರೀಕೃಷ್ಣ ಬಿಕ್ಕಿಬಿಕ್ಕಳುತಿದ್ದ ತಾನು ೪

ಅಮ್ಮಯ್ಯ ಕೇಳು ನಿನ್ನ ನೊಮ್ಮಗ ಬರೆದ ಲಿಖಿತ
ಎನ್ನ ಹಣೆಯಲ್ಲಿ ತಪ್ಪುವುದೆ
ಬ್ರಹ್ಮಪಿತ ಭೀಮೇಶಕೃಷ್ಣನ
ಮಾತಿಗೆ ಹೇಳಲಿನ್ನೇನು ಮಾಡಲಿನಕೆನುತ ೫

## ವಚನ—೬೧

ತನ್ನ ಮಾತೆಯರ ಪ್ರಳಾಪ ನೋಡುತ ಕೃಷ್ಣ
ಸನ್ನೆಸಂಜ್ಞವ ಮಾಡಿ
ಸತ್ಯಭಾಮೆಯ ಕರೆದು
ಕಣ್ಣೀರು ಒರೆಸಿ ಕಮಲಾಕ್ಷಿ ಗಲ್ಲವ ಹಿಡಿದು
ಕರ್ಣದಲ್ಲಿ ಹೇಳುತಿರುವಂಥ ಮಾತುಗಳು ಮತ್ತೇನೆಂದರೆ—
ಪಟ್ಟದರಸಿಯು ಮನೆಗೆ ತಟ್ಟನೆ ನೀ ಪೋಗಿ
ಶ್ರೇಷ್ಠ ರುಕ್ಮಿಣಿ ಕರೆದುತಂದರೆ ನಿನಗೀಗ
ಅಷ್ಟು ಕಾರ್ಯಗಳು ಕೈಗೂಡುವುದೆನುತಿರಲು
ಸಿಟ್ಟುಬಿದ್ದು ಭಾಮೆ ಸಿಟ್ಟಿನಿಂದ್ಹರಿ ನೋಡುತ
ಅಯ್ಯಯ್ಯೊ ಕೃಷ್ಣ ನೀನಾಡುವೊ ಮಾತುಗಳು
ಸೈಯೊ ಸೈ ನಿನ್ನ ಸೊಗಸಿನ ರಾಣಿ ರುಕ್ಮಿಣಿಯು
ಕೈಯಲ್ಲಿ ಕೊಟ್ಟು ನೋಡುವುದ್ಯಾತಕೆನ್ನ ಕೊರಳ-
ಕೊಯ್ಯಬಾರದೆ ನಿನ್ನ ಚಕ್ರದಿಂದ
ಸರಿ ಸವತಿಯೆನಗಾಡೋ ಸರಿಬಂದ ಮಾತುಗಳ
ಪರಮ ಹರುಷವು ಕೇಳಿ ನಿನ್ನ ಕಿವಿಗಾನಂದ
ಇರಲಾಗದಿನ್ನು ಈ ಪ್ರಾಣ ನಿನ ಪಾದಕ್ಕೆ ಬಿಡುವೆನೆಂದೆನುತ
ಬಿದ್ದಳು ಧರಣಿಯಲ್ಲಾಗಲೆ
ಬಿದ್ದ ಭಾಮೆಯನು ಬಿಡದಾಗ ಕರದಿಂದೆತ್ತಿ
ಹದ್ದುವಾಹನ ಹರುಷದಿಂದ ಮಾತಾಡಿದನು
ಪದ್ಮಾಕ್ಷಿ ನಿನಗೆ ಪಂಥವು ಬ್ಯಾಡ ಬ್ಯಾಡೆನುತ
ತಿದ್ದಿ ಮುಂಗುರುಳು ತೀವ್ರದಿ ಪೋಗಿಬಾರೆಂದನು

## ಧ್ವನಿ—೬೨

ಹೋಗಿಬಾ ಬ್ಯಾಗ ಭಾಮೆ ನಾಗವೇಣಿ ರುಕ್ಮಿಣಿ ಮನೆಗೆ
ಹೋಗಿಬಾ ಬ್ಯಾಗ ಭಾಮೆ ಪ.

ಕರೆದು ಮನ್ನಿಸಿ ನಿನ್ನ ಮರುಗಿ ಮಾತನಾಡುವೋಳು
ಜರದ ಸೀರೆ ಕುಪ್ಪುಸ ವಜ್ರಾಭರಣವಿಟ್ಟು ಕಳುಹೋಳೀಗ ೧

ಕುಟಿಲಕುಂತಳೆ ನಿನ್ನ ನೋಡಿ ಕಠಿಣ ಮಾತನಾಡೋಳಲ್ಲ
ಹಟವು ಬ್ಯಾಡ ನಿನಗೆ ದುಷ್ಟಸಿಟಪಿ ಎನ್ನ ಮಾತು ಕೇಳಿ ೨

ಏ ಶುಭಾಂಗಿ ನಿನ್ನ ನೋಡುದಾಸೀನವನು ಮಾಡೋಳಲ್ಲ
ಭೀಮೇಶಕೃಷ್ಣ ಕರೆದನೆಂದರೆ ಸೋಸಿಲಿಂದ ಬರುವಳೀಗ ೩

## ವಚನ—೬೩

ಅಂತರಂಗದ ಮಾತನ್ಹೇಳಿ ಅಭಯವ ಕೊಟ್ಟು
ಕಂತುಪಿತ ತನ್ನರಸಿಯನು ಕಳುಹುತಿರಲಾಗ
ಸಂತಾಪದಿಂದ ಶಿರ ಬಾಗಿ ಬಾಗಿಲ ಮುಂದೆ
ನಿಂತ ಭಾಮೆಯ ವಾರ್ತೆ ಕೇಳುತಾ ರುಕ್ಮಿಣಿಯು
ಸಂತೋಷದಿಂದ ಕರ ಪಿಡಿದು ಕರೆತಂದಾಗ
ಮಂಚದ ಮ್ಯಾಲೆ ಕುಳ್ಳಿರಿಸಿ
ಮುಖನೋಡುತ್ತ ಚಿಂತೆಯೇಸಿದು ಚಂದ್ರನಂತಿದ್ದ
ಮುಖಕಮಲ ಸಂಪಿಗೆಯಂತೆ ಬಾಡಿದ ಬಗೆ ಪೇಳೆಂದು
ಪಂಚರತ್ನದ ಮುತ್ತು ಮಾಣಿಕ್ಯದಾಭರಣ
ಕಾಂತೆ ನೀ ತೆಗೆದ ಕಾರಣವ ಹೇಳೀಗ ಯೆಂ—
ಬಂಥ ಮಾತುಗಳ ಕೇಳುತ ಸತ್ಯಭಾಮೆ ಮತ್ತೀನೆಂದಳು ಎಂದರೆ—

## ಧ್ವನಿ—೬೪

ಇದು ನೋಡಿದು ನಾರದರಾಟ
ಮಾಡಿದ ನಗೆಪಾಟಿದು ನೋಡಿದು ಪ.

ಅಕ್ಕಯ್ಯ ಕೇಳೆ ಈ ದುಃಖ ಸಮುದ್ರದೊ—
ಳ್ಹೊಕ್ಕು ಮುಳುಗಿದೆನೆ ಎನ್ನೆತ್ತುವರಿಲ್ಲ ೧

ಏನು ಹೇಳಲಿ ಸುಜ್ಞಾನಿ ನಾರದ ಬಂದ
ದಾನವಾಂತಕನ ದಾನವ ಕೊಂಡೊಯ್ದ ೨

ರಂಗನ ಸರಿತೂಕ ಬಂಗಾರ ಕೊಡುವೋದು
ಗುಂಜಿತೂಕುಳಿಯುದ್ಹಾಗಿಟ್ಟು ತೂಗಿದೆವೆ ೩

ಮೇರು ಮಂದರದತ್ಹೊರೆ ಬಂಗಾರವ
ಭಾರ ಸಾಲದು ನೋಡೆ ಶ್ರೀರಮಣನಿಗೆ ೪

ಭೀಮೇಶಕೃಷ್ಣನ ಬಿಡಿಸಿಕೊಂಬುವುದಕ್ಕೆ
ನೀನೆ ಬರುವುದೆ ನಿನ್ಹೊರತ್ಯಾರಿಲ್ಲ ೫

## ವಚನ—೬೫

ಅಷ್ಟುವಾರ್ತೆಯು ಕೇಳುತಾಗ ರುಕ್ಮಿಣಿ ನಗುತ
ಇಷ್ಟು ಮಾಡಿದನೆ ನಾರದ ನಿನ್ನ ಮನೆಯಲ್ಲಿ
ಇದೆಷ್ಟು ಕಾರ್ಯಗಳು ಇದಕ್ಯಾತಕೀ ಭಯ ಚಿಂತೆ
ಬಿಟ್ಟುಬಿಡು ನಾ ಬಿಡಿಸಿಕೊಡುವೆನೀಗೆಂದೆನುತ
ತಟ್ಟನಾ ಪುನುಗು ಕಸ್ತೂರಿ ಸಂಪಿಗೆಯೆಣ್ಣೆ
ಪಚ್ಚ ಕರ್ಪೂರವ ಪರಮ ಆದರದಿ ಪೂಸುತಲಿ
ಹಚ್ಚಿ ಅರಿಷಿಣ ಚಿನ್ನಕೊಪ್ಪರಿಗೆ ನೀರೆರೆದು
ಹಿಕ್ಕಿ ಜೈತರಿಗೆ ತಳುಪ್ಹಾಕಿ ರಾಗಟಿ
ಚಂದ್ರಗುತ್ತಿದ ಚೌರಿ ಕ್ಯಾದಿಗೆ ಹೆರಳುಬಂಗಾರ
ಮುತ್ತಿನ ಗೊಂಡ್ಯ ಮೊಣಕಾಲಿಗಲೆವುತ ಭಾವೆ
ಕುತ್ತಿಗಿಯಲ್ಹರಳು ಕೆತ್ತಿದಡ್ಡಿಕೆ ಮುತ್ತು
ಕಟ್ಟಾಣಿ ಸರ ಪದಕ ಸರಿಗೆಯೇಕಾವಳಿಯು
ಪುತ್ತಳಿ ಸರ ಚಂದ್ರಹಾರ ಮೋಹನಮಾಲೆ
ಹಸ್ತ ಕಡಗವು ದ್ವಾರ್ಯ ಹರಡಿ ಕಂಕಣ
ತೋಳಲೊಪ್ಪುತಿರಲ್ವಂಕಿ ನಾಗಮುರಿಗೆ ನವರತ್ನ
ಕೆತ್ತಿದ್ದ ಬಾಜುಬಂದಿಗೆ ತಕ್ಕ ಹೊಸ ಗೊಂಡ್ಯ
ಪಚ್ಚೆ ಮಾಣಿಕ್ಯದ್ವಜ್ರ ಹಚ್ಚಿದ್ದ ಹರಳ್ವಾಲೆ
ಅಚ್ಚಮುತ್ತಿನ ದ್ರಾಕ್ಷಿಬಳ್ಳಿ ಝಾಲರ ಬುಗುಡಿ
ಚಿತ್ರವಾಗಿದ್ದ ಚಂದರ ಬಾಳ್ಯದ ಬೆಳಕು
ಅತ್ತಿತ್ತ ಗಲ್ಲದ ಮ್ಯಾಲ್ಹೊಳೆಯುತಿರಲಾಗಾಣಿ—

ಮುತ್ತಿನ ಮುಕುರ್‍ಯ ಕುಂದಣ ಕೆಂಪಿನ ಕಾಂತಿ
ಚಿಕ್ಕ ಕೋಮಲ ಪಾದಕ್ಕೆ ರುಳಿ ಪೈಜಣವು
ಹತ್ತು ಬೆರಳಿಗೆ ಮುದ್ರೆ ಪಿಲ್ಯ ಕಾಲುಂಗುರವು
ಉತ್ತಮ ಬಡನಡುವಿನಲ್ಲುಡಿಸುತಿದ್ದಳಾ ಬಣ್ಣ ಬಿಳುಪಿನ ಸೀರೆ
ಭಾಳ ಜರತಾರಂಚು ಸಣ್ಣ ಮುತ್ತಿನ ಸೆರಗು
ಸರಿಯಾದ ನಿರಿಯಲ್ಲಿ ರನ್ನ ಮಾಣಿಕ್ಯ ಪಟ್ಟಿ
ರತ್ನದಂಚಿನ ಕುಬುಸ ಕಣ್ಣ ಕಾಡಿಗೆ ಹಚ್ಚಿ
ಕಸ್ತೂರಿ ಕುಂಕುಮವ ಚೆನ್ನವಾಗಿದ್ದ ಕೇಸರಿ ಗಂಧ ಬುಕ್ಕಿಟ್ಟು
ಮನ್ಮಥನಪಿತನರಸಿಯನ್ನು ಶೃಂಗರಿಸುತ
ಭಕ್ತಿಯಿಂದಾಗ ಮೈ ತೊಳೆದು ತಾ ರುಕ್ಮಿಣಿಯು
ಬಿಚ್ಚಿ ಜರತಾರಿ ಪೀತಾಂಬರವ ನಿರಿಮುಟ್ಟಿ
ಪಚ್ಚೆ ಮಾಣಿಕ್ಯದ್ವಜ್ರದ್ವಸ್ತುಗಳ ತಾನಿಟ್ಟು ಹಚ್ಚಿ
ಕುಂಕುಮವ ಅರಿಷಿಣ ಗಂಧ ಬುಕ್ಕಿಟ್ಟು
ಅಚ್ಚ ಮಲ್ಲಿಗೆ ಪಾರಿಜಾತ ಇಬ್ಬರು ಮುಡಿದು
ಸತ್ಯಭಾಮೆಯು ಸರಿಗೆ ತಾನು ಶೃಂಗಾರವಾಗಿ
ಜತ್ತಾಗಿ ನಿಂತು ನೋಡುತ ನಿಲುವುಗನ್ನಡಿಯ
ಅಚ್ಯುತನ ಬಿಡಿಸಿಕೊಂಬುವೆನೆಂಬೊ ಸಂಭ್ರಮದಿ
ತುಪ್ಪ ಮಂಡಿಗೆ ಕ್ಷೀರ ಸಕ್ಕರೆಯ ಸವಿದುಂಡು
ಕರ್ಪೂರದ ವೀಳ್ಯ ಕೈಯಲ್ಲಿ ಪಿಡಿದ್ಹಾಕುತಲಿ
ಮತ್ತಾಗ ಮಂದಗಮನೆಯರು ಬರುತಿರಲಾಗ
ಎತ್ತಿ ಹಿಡಿದರು ಹವಳಮುತ್ತಿನ ಛತ್ರಿಗೆ
ಸುತ್ತ ದಾಸಿಯರು ಚಾಮರಗಳನು ಬೀಸುತಲಿ
ಮೆಟ್ಟಿದರು ಮುತ್ತು ಮಾಣಿಕ್ಯದ್ಹೊನ್ನಾವಿಗೆಯ
ಸರ್ಪವೇಣಿಯರು ಸಂಭ್ರಮದಿ ಕರಗಳ ಪಿಡಿದು
ಇಟ್ಟರೊಂದ್ಹೆಜ್ಜೆ ಘಲಿರೆಂಬೋ ನೂಪುರ ಗೆಜ್ಜೆ
ಅಕ್ಕತಂಗಿಯರ ಅರವಿಂದಮುಖಕಾಂತಿಗಳ
ಅರ್ಕ ನೋಡುತ ನಾಚಿನಡೆದನಾ ಗಗನಕ್ಕೆ
ನಕ್ಷತ್ರ ಅಡಗುತಿರಲಾ ಚಂದ್ರಮನ ಕಳೆಗ್ಹೋತ್ತಿ
ಬಿದ್ದವು ಹಗಲು ಹೊತ್ತಿನ ವ್ಯಾಳ್ಯದಲಿ
ಜಾಜಿಮಲ್ಲಿಗೆ ಹೂವಿನಂಥ ರುಕ್ಮಿಣಿ ಸರಿಗೆ
ಸೂಜಿಮಲ್ಲಿಗೆ ಮೊಗ್ಗಿನಂತೆ ಸತ್ಯಾಭಾಮೆ
ರಾಜವನಿತೆಯರು ರಹಸ್ಯದಿ ಮಾತನಾಡುತಿರೆ

ಬಾಜಾರದೊಳಗೆ ಬರುತಿರಲು ಭಾಳರ್ಥಿಯಲಿ
ಸೋಜಿಗವ ಮಾಡಿ ನೋಡುತ ನಿಂತು ಸವತಿಯರು
ರಾಜಿನ ಬಳೆಯು ಕರಿಮಣಿ ಕಟ್ಟಿ ನಮಗೀಗ
ಮೋಜು ನೋಡೀ ಮುತ್ತು ಮಾಣಿಕ್ಯದಾಭರಣ
ಸಾಜ(ಸಹಜ?)ವಲ್ಲೀ ಸತ್ಯಭಾಮೆ ತಾನಿಟ್ಟಿಹುದು
ಈ ಜಗದೊಳಿನ್ನಿಂಥ ಧೈರ್ಯಶಾಲಿಗಳೆಂದು
ಆ ಜಾಣೆಯರು ಮಾತನಾಡುತಿರಲಲ್ಲಲ್ಲಿ
ಮೆಲ್ಲನೆ ಬರುವೋ ರುಕ್ಮಿಣಿ ಭಾಮೆಯರ ನೋಡಿ
ವಲ್ಲಭೆಯು ಕರೆದು ವಸುದೇವ ತೋರಿದನಾಗ
ಚೆಲ್ವೆಯರು ಬರುವೋ ಚಂದವ ನೋಡೆ ದೇವಕಿ
ಎಲ್ಲಿ ನಿನಸರಿ ಪುಣ್ಯ ಇಲ್ಲ ಈ ಜಗದೊಳಗೆ
ನಿನ್ನಲ್ಲಿ ಭೀಮೇಶಕೃಷ್ಣನು ಪುಟ್ಟಿದಾಕಾರಣಕ್ಕೆ
ಕಂಡೆವು ಇಂಥ ಸೊಸೆಯರನು ನಾವೆಂದು
ಉಲ್ಲಾಸ ಉಕ್ಕೇರಿ ಚೆಲ್ಲಾಡುತಿರಲಾಗ
ಘಲ್ಲು ಘಿಲ್ಲೆನುತ ಗಜಗಮನೆಯರು ಬಂದರಾ
ಪುಲ್ಲನಾಭನ ಪದ್ಮಪಾದಕ್ವಂದನೆ ಮಾಡುತ

## ಧ್ವನಿ—೬೬

ಬಂದು ರುಕ್ಮಿಣಿ ಅತ್ತೆ ಮಾವನ ಚರಣಕ್ಕೆ
ಚೆಂದದಿಂದೆರಗಿದಳಾಗ
ಕಂದರ ಪಡೆದು ಮುತ್ತೈದ್ಯಾಗಿರೆನುತ ಆ-
ನಂದದಿಂದ್ಹರಸಿದರಾಗ ೧

ನೋಡಿ ನಾರಂದರ ಜೋಡು ಪಾದಗಳಿಗೆ
ಮಾಡಿದಳಾಗ ವಂದನೆಯ ಕೈ-
ಗೂಡಿತೇ ನಿಮ್ಮ ಕಾರ್ಯಗಳು
ಎಂದೆನುತ ಮಾತಾಡಿ ತಾ ನಗುತ ನುಡಿದಳು ೨

ಪಕ್ಕನೆದ್ದಳು ಲಕ್ಕುಮಿಾರಮಣನ ಪಾ-
ದಕ್ಕೆರಗಿದಳು ಭಕ್ತಿಯಲಿ
ಮುಕ್ಕಳಾಟಕೆ ನೀವು ಮರೆಯಲಿಲ್ಲವೇಯೆಂದು
ನಕ್ಕು ಹಾಸ್ಯಗಳ ಮಾಡಿದಳು ೩

ಚಿಕ್ಕಂದ್ಯಶೋದ ನಿಮ್ಮ ತೊಟ್ಟಿಲು ತೂಗಿದ್ದು ಅತ್ತೆ
ದೇವಕ್ಕಿ ನೋಡಲಿಲ್ಲ ಇವತ್ತು
ತಕ್ಕಡಿಯಲ್ಲಿ ತೂಗಿಸಿಕೊಂಬೋದು
ಹೆತ್ತವರಿಗಿದು ಚೆಂದವಲ್ಲ[ವೆ] ೪

ಬಾಲತ್ವತನದಲ್ಲಿ ಲಾಲಿಯನ್ಹಾಡಿದ್ದು
ಆಗ ದೇವಕ್ಕಿ ನೋಡಲಿಲ್ಲ
ಈಗ ತಕ್ಕಡಿಯಲ್ಲಿ ತೂಗಿಸಿಕೊಂಬೋದು
ತಾಯೇರಿಗಿದು ಚೆಂದವಲ್ಲ[ವೆ] ೫

ಬೆಟ್ಟವ ಬೆರಳಿಂದೆತ್ತಿದ ಹರಿಯು ಸ-
ಮರ್ಥಗೆ ಸರಿಯು ಬಂಗಾರ-
ವಿಟ್ಟು ತೂಗುವುದೆನ್ನ ಭಾವನವರಿಗಿದು
ಆಶ್ಚರ್ಯವಲ್ಲವೆಂ(ವೆ ಎಂ?)ದೆನುತ ೬

ರುಕ್ಮಿಣಿ ಮಾತು ಕೇಳುತಲೆ ನಾರಂದ ತಾ
ಮತ್ತೆ ರಾಮರ ಮುಖ ನೋಡಿ
ಅಕ್ಕಯ್ಯ ನೀನು ಆಡಿದ ಮಾತು ನಿಜವೆಂದು
ನಕ್ಕನು ಮುಗುಳುನಗೆಯಲಿ ೭

ತಕ್ಕಡಿ ಸಹಿತ ಪ್ರದಕ್ಷಿಣೆಯನು ಮಾಡಿ
ಹಸ್ತವ ಮುಗಿದು ನಡೆದಳು
ಮುತ್ತು ಮಾಣಿಕ್ಯದ ವೃಂದಾವನದ ಚಿನ್ನ-
ಕಟ್ಟೆಯನೇರಿ ಬ್ಯಾಗದಲಿ ೮

ಗಂಧ ಕುಂಕುಮ ದೀಪ ಧೂಪ ನೈ-
ವೇದ್ಯವು ತೆಂಗಿನಕಾಯಿಫಲಗಳು
ದುಂಡುಮುತ್ತುಗಳುಡಿ ತುಂಬಿ
ಶ್ರೀ ತುಳಸಿಗೆ ಮಂಗಳಾರತಿಯನೆತ್ತಿದಳು ೯

ಅಚ್ಯುತಾನಂತನ ಸರಿ ಆಗಬೇಕೆಂದು
ಮುಚ್ಚಲೋಚನೆ ಮಾತನಾಡಿ
ಪಚ್ಚದಂ(ಚ್ಚೆಯಂ?)ತ್ಹೊಳೆವೊ ಶ್ರೀ ತುಳಸಿದಳವನೊಂದು-
ಬಿಚ್ಚಿದಳು ತನ್ನ ಕರದಲಿ ೧೦

ಬಿಚ್ಚಿದ ದಳವ ಬ್ಯಾಗದಲಿ ರುಕ್ಮಿಣಿ ಮನ–
ದಿಚ್ಛೆ ಪೂರ್ಣವ ಮಾಡೋದೆನುತ
ಅಚ್ಚಮುತ್ತಿನ ಹರಿವಾಣದೊಳಗೆಯಿಟ್ಟು
ಹೊಚ್ಚಿದಳು ಸೂಕ್ಷ್ಮದ್ವಸ್ತ್ರವನು ೧೧

ಬಂಗಾರದ ಬಾಳೆಸುಳಿಯಂತೆ ಹೊಳೆಯುತ
ಬಂದು ನಿಂತಳು ಸಭೆಯೊಳಗೆ
ತಂದು ಹಾಕಿದ ಚಿನ್ನ ತೆಗೆಯಬೇಕೆನುತಲಿ
ಚೆಂದದಿಂದಾಜ್ಞೆ ಮಾಡಿದಳು ೧೨

ಪುಟ್ಟಪುಟ್ಟಲಿ ತೆಗೆದರು ಚಿನ್ನಾಭರಣವ
ಒಟ್ಟದರೊಂದು ರಾಶಿಯನು
ಇಟ್ಟಳು ತಂದು ತುಳಸೀದಳ ಭೀಮೇಶ–
ಕೃಷ್ಣಾರ್ಪಣವೆಂದಳಾಗ ೧೩

ವಚನ—೬೭

ತೊಲೆ ಜೋದು ಮಾಳಿಗೆಯು ತಲೆಗೆ ತಾಕುವಂತೆ
ಚೆಲುವ ಕೃಷ್ಣನ ತಕ್ಕಡಿಯೇಳುತಿರಲಾಗ
ನೆಲದಲ್ಲಿ ಜಡಿದು ಕುಳಿತಿರುವೊ ತುಳಸಿಯು ನೋಡಿ
ಬಹು ಜನರು ಭಾಳ ಸಂಭ್ರಮು ನೋಡುತಿದ್ದರಾಗ–

ಧ್ವನಿ—೬೮

ಎದ್ದಯೆದ್ದ ನಮ್ಮ ರಂಗನು ರುಕ್ಮಿಣಿ
ಗೆದ್ದೆವೆನುತ ಹಿಡಿದವೆ ಕಾಳೆ
ಸುದ್ದಿ ಕೇಳುತ ಸುರಲೋಕದ ಜನರು
ಪದ್ಮದ್ಹೂವಿನ ಮಳೆ ಕರೆದರಾಗ ಪ.

ಭೇರಿ ಬಡಿದು ತುತ್ತೂರಿ ಹಿಡಿದವು
ಚೀರುತಿದ್ದವು ಚಿನ್ನದ ಕಾಳೆ
ನಾರದಪ್ರಿಯ ನಮಗೊಲಿವೋನೆಂದೆನುತ
ಸಾರುತಿದ್ದರು ಪುರದೊಳಗೆಲ್ಲ ೧

ಅಕ್ಕರದಿಂದ ದೇವಕೀದೇವಿಯು
ತೊಡೆಯಲಿಟ್ಟು ಕುಳಿತಳು
ರುಕ್ಮಿಣಿಯನು ಮತ್ತು ದಿನಾರು ಸಾವಿರಸತಿಯರೆಲ್ಲ
ಸುತ್ತ ನಿಂತರು ಸುಖ ಸುರಿಸುತಲಿ ೨

ನಂದಗೋಪ ವಸುದೇವ ಯಶೋದೇರು
ಚೆಂದದಿಂದಲಿ ರುಕ್ಮಿಣಿಯ ನೋಡಿ
ಇಂದು ನಿನಗೆ ಸರಿ ಈ ಲೋಕದೊಳ-
ಲ್ಲೆಂದು ನುಡಿದರತಿ ಹರುಷದಲಿ ೩

ಅಂಗನೆ ರುಕ್ಮಿಣಿ ಆ ಸೋಳ ಸಾಸಿರ
ತಂಗ್ಯೇರ ಕರೆದು ಹೇಳುತ ನಿಮ್ಮ
ಬಂಗಾರವೆಲ್ಲ ಭಾಗವ ಮಾಡಿ ನೀವೀಗ
ಶೃಂಗಾರವಾಗಿರೆಂದೆನುತಿರಲು ೪

ಆ ಸಮಯದಿ ಸೋಳಸಾಸಿರ ಜನ ಸಂ-
ತೋಷದಿಂದಾಗಲಂಕಾರವಾಗೆ
ಶೇಷಶಯನ ಭೀಮೇಶಕೃಷ್ಣನು ಉ-
ಲ್ಲಾಸದಿ ನಿಂತು ನೋಡುತಲಿರಲು ೫

ವಚನ—೬೯

ಎಲ್ಲ ನಾರಿಯರು ಭಾಳುಲ್ಲಾಸದಿಂದಿರಲು
ಮಲ್ಲಿಗೆಮುಡಿ ಬಾಗಿ ನಿಂತ ಭಾಮೆಯ ಕೃಷ್ಣ
ಇಲ್ಲಿ ಬಾರೆಂದು ಪಲ್ಲವ ಪಾಣಿಗಳ ಪಿಡಿದು
ಫುಲ್ಲಾಕ್ಷ ತನ್ನ ತೊಡೆಯಲ್ಲಿಟ್ಟನತಿ ಹರುಷದಿ
ನಾರಿ ವೈಯಾರಿ ಸುಂದರಿ ಸುಕುಮಾರಿ ನಿನ್ನ
ಮೋರೆ ಬಾಡಿಹೋದ್ಯಾಕೆ ಮಂದಗಮನೆಯೆ ಪೇಳು
ನೀರೆ ನಿನ್ನಗಲಿ ಇರಲಾರದಿಲ್ಲಿಗೆ ಬಂದೆ
ದಾರು ದಾರೇನೆಂದರ್ಹೇಳೆನ್ನ ಮುಂದೆನುತಲಿ
ಮುಡಿಗುರುಳು ತಿದ್ದಿ ಮುಖಬೆವರುಗಳನೊರೆಸುತ್ತ
ತೊಡರು ಬಿಡಿಸ್ಯಾಕಿ ಮುತ್ತಿನ ಕಂಠಿ ಕೊರಳಲ್ಲಿ
ಸಡಗರದಿ ಸತ್ಯಭಾಮೆಯ ಮುಖವ ನೋಡುತ್ತ
ಕಡಲಶಯನನು ಕರುಣದಿಂದ ಮಾತಾಡುತಿದ್ದ

ದೃಢ ಮನಸಿನಲಿ ನೀನು ಮಾಡಿದಂಥ ದಾನ
ಕೊಡುವರಿನ್ಯಾರು ಈ ಲೋಕದೊಳು ನಾ ಕಾಣೆ
ಮಡದಿ ನಿನ್ನ ಸರಿಯಾರು ಮುದ್ದಿನರಗಿಳಿ ನಿನ್ನ
ಬಿಡಪೊಂದುಕ್ಷಣವು ನಿನ್ನೊಡಗೂಡಿಕೊಂಡಿರುವೆನು
ಕೊಟ್ಟದಾನಕ್ಕೆ ಸಂತುಷ್ಟನಾದೆನೆ ನಾನು
ಇಷ್ಟ ಫಲಗಳ ಬೇಡು ಈಗ ನೀಡುವೆನೆನುತ
ಭಕ್ತಜನರೊಡೆಯ ಭೀಮೇಶಕೃಷ್ಣನುತಿರಲು
ತಟ್ಟನೆದ್ದಾ ಮುನಿಯು ಮಾತನಾಡುವುದು ಮತ್ತೇನೆಂದರೆ-

## ಧ್ವನಿ—೭೦

ಹರಿನಾರಾಯಣ ಹರಿನಾರಾಯಣ
ದುರಿತ ನಿವಾರಣನೆ ರಂಗಯ್ಯ ರಂಗ
ಹರಿನಾರಾಯಣನೆ ಪ.

ದೇವ ದೇವೋತ್ತಮ ದೇವ ಶಿರೋಮಣಿ
ದೇವಲೋಕಕ್ಕೆ ಪೋಗುವೆ ೧

ಎನ್ನಪರಾಧವ ಮನ್ನಿಸಿ ಮರೆಯದೆ
ನಿನ್ನ ಲೋಕವ ಸೇರಿಸೊ ೨

ನಿತ್ಯಮುಕ್ತನೆ ಈ ಜಗತ್ತಿನೊಳು ವ್ಯಾಪ್ತಎನ್ನ
ಮುತ್ತ್ಯನಲ್ಲವೇ ಮಾಧವ ೩

ಕಂತುಪಿತನೆ ಎನ್ನ ಪಂಥಗೆಲಿಸಿದ್ಯೋ ಶ್ರೀ-
ಕಾಂತ ಎನ್ನನು ಪಾಲಿಸೊ ೪

ಇಷ್ಟ ದಾಯಕನೆ ಕೇಳಿಂದು ಎನಗೆ ಭೀಮೇಶ-
ಕೃಷ್ಣ ಅಪ್ಪಣೆ ಪಾಲಿಸೊ ೫

## ವಚನ—೭೧

ಹರಿಯು ಅಪ್ಪಣೆಗೊಂಡು ಹರುಷದಲಿ ನಾರಂದ
ಸಿರಿದೇವಿ ಕೊಟ್ಟ ಶ್ರೀತುಳಸಿ ಶಿರದಲ್ಲಿಟ್ಟು
ಕರದಿಂದ ವೀಣೆ ಬಾರಿಸುತ ಗಾಯನಗಳಿಂದ
ತಿರುಗಿ ಪೋದನು ತ್ರಿಲೋಕಗಳಿಗೆ

## ಧ್ವನಿ—೭೨

ಆರತಿ ಬೆಳಗಿರೆ ಹರಿಗೆ ಭಾ-
ಮೆ ರುಕ್ಮಿಣಿ ಸಹಿತ ಕೃಷ್ಣನಿಗೆ ಪ.

ಅಷ್ಟ ಮಾಸತಿಯರೆಲ್ಲ ನೆರೆದು
ಸುತ್ತ ನಿಂತು ಚಾಮರವ ಬೀಸುತಲಿ
ಅಷ್ಟಗಂಧ ಕುಂಕುಮ ಪರಿಮಳವ
ಹಚ್ಚಿ ಭಾಮೆ ರುಕ್ಮಿಣಿ ಹರುಷದಲಿ ೧

ಹಡೆದ ದೇವಕಿ ಪಡೆದ ಯಶೋದ
ಮುಡಿಸಿ ಮಲ್ಲಿಗೆ ಪಾರಿಜಾತವನು
ಸಡಗರದಿ ಕರದಲಾರತಿ ಪಿಡಿದು
ಕಡಲಶಯನನ್ನ ಪಾಡಿ ನೋಡುತಲಿ ೨

ಸಾಸಿರ ನಾಮವ ಕೊಂಡಾಡುತಲಿ
ಆ ಶುಭಾಂಗಸ ಅತಿ ಹರುಷದಲಿ
ಲೇಸಾದಕ್ಷಂತಿನಿಟ್ಟ್ಹರಸುತಲಿ ಭೀ-
ಮೇಶಕೃಷ್ಣನ್ನ ಪಾಡಿ ನೋಡುತಲಿ ೩

೯

## ಶಕುಂತಲೆ-ದುಷ್ಯಂತಮಹಾರಾಜನ ಹಾಡು

### ಧ್ವನಿ—೧

ನಾಗಭೂಷಣ ಸುತಗೆ ಎರಗಿ
ನಾಲ್ಕು ಮುಖದ ಬ್ರಹ್ಮನರಸಿಗೆ
ನಾನು ಬೇಡಿಕೊಂಬೆ ವರಗಳ ನೀಡಬೇಕೆನುತ ೧

ಪೃಥಿವಿಯೊಳು ದುಷ್ಯಂತರಾಜನು
ಅತಿ ಧಾರ್ಮಿಕನೆಂದೆನಿಸಿಕೊಂಬುವ
ಸತಿ ಶಕುಂತ[1][ಲೆಯ][1]ನಗಲಿ ಕೂಡಿದ
ಕಥೆಯ ಹೇಳುವೆನು ೨

ಭೂಮಿಗೊಡೆಯ ಭೀಮೇಶಕೃಷ್ಣನು
ಈ ಮಹಾಭಾರತದ ಕಥೆಯನು
ನೇಮದಿಂದಲಿ ನಮಿಸುವೆನು ದ-
ಯ ಮಾಡಲೆನಗಿನ್ನು ೩

### ವಚನ—೨

ಹೇಳಿದರು ವೈಶಂಪಾಯನರು ಇದ
ಕೇಳಿದರು ಜನಮೇಜಯರಾಯರೀ ಕಥೆ
ನಾಡಿದರು ನರಸಖನರಾಯಗೆ ನಾನು
ಹೇಳುವೆ ನಾಲಿಗಿಂದಲಿ ನುಡಿಸಿ ನಡೆಸುವುದು

### ಧ್ವನಿ—೩

ವಸುಧೆಯೊಳ್ ರಾಜಋಷಿಯು ವಿಶ್ವಾಮಿತ್ರರೀ-
ಗ್ಹಸಿವು ತೃಷೆ ಚಳಿ ನಿದ್ರೆಯಲಿ
ವಶವಲ್ಲವೆ ಮಳೆಗಾಳಿ ಸಿಡಿಲು ಮಿಂಚು
ಬಿಸಿಲು ಬ್ಯಾಸಿಗೆ ತಾಪವ ಸಹಿಸಿ ೧

---
೧. ೯

ಋಷಿತಪಸನೆ ನೋಡುತ ದೇವತೆಗಳು
ಶಚಿಪತಿಯೆದುರು ಬಂದರುಹಿದರು
ನಸುನಗುತಾಗಿಂದ್ರನು ಆ–
ಕ್ಷಣ ಮೇನಕೆಯು ಕರೆಸಿ ಮಾತಾಡಿದನು ೨

ಶೀಘ್ರದಿಂದ ನೀನ್ಹೋಗಿ ಆ ತಪಸಿಗೆ
ವಿಘ್ನ ಮಾಡಿ ಬಾರೆಂದೆನಲು
ಸ್ವರ್ಗಾಧೀಶನ ಆಜ್ಞವ(ಜ್ಞೆಯು?)ಕೇಳುತ
ಬಗ್ಗಿ ಶಿರವ ಮಾತಾಡಿದಳು ೩

ಶ್ರೇಷ್ಠ ಮುನಿಯು ತಪ ಕೆಡಿಸಿ ಬಂದರೆ ಮುಂ–
ದೆಷ್ಟು ಪಾಪ ದೋಷವು ನಮಗೆ
ಸಿಟ್ಟಿನ ಮುನಿ ಕಣ್ ಬಿಟ್ಟು ನೋಡಿದರೆ
ಸುಟ್ಟು ಭಸ್ಮ ಮಾಡುವೋನಾತ ೪

ಕಾಮದಿ ನಿನ್ನನು ಕರೆದು ಮೋಹಿಸುವೋನು
ಪ್ರೇಮದಿಂದ ಮಾತಾಡುವೋನು
ಭೀಮೇಶಕೃಷ್ಣಗೆ ಇದು ಸಮ್ಮತವು
ನೀ ಮಾಡಿದ ಪಾಪ ಕ್ಷಮಿಸಿಕೊಂಬ ೫

### ವಚನ—೪

ನಾಗವೇಣಿಯು ನಗುತ ಆಗ ಶೃಂಗಾರವಾಗಿ
ರಾಗಟೆ ಗೊಂಡ್ಯಪ್ಹೆರಳ್ಹಂದಲೆಯುತಿರಲು ಪು–
ನ್ನಾಗ ಸಂಪಿಗೆ ಮಾಲೆ ಮಲ್ಲಿಗೆಯು ಮುಡಿದು ತಾ
ನಾಗಮುರಿಗೆ ವಂಕಿ ಬಳೆ ದ್ವಾರ್ಯ ಕಂಕಣವು
ನಾನಾಪರಿ ನವರತ್ನದಾಭರಣ ಹೊಳೆಯುತಲಿ
ಹಾರ ಪದಕಗಳು ಹರಳ್ವಾಲೆ ಸರಪಳಿ ಚಂದ್ರ–
ಬಾಳ್ಯ ಬುಗುಡಿಯು ಗಲ್ಲಕೊಲಿವೊ ಗೊಂಚಲಾಮುತ್ತು
ಮೂಗಿನಲಿ ಬುಲಾಕು ಮುಕುರ್ಯ ಮುತ್ತಿನ ಝೂಕು(ಝುಲಕು?)
ಬ್ಯಾಗುಟ್ಟು ಬಿಳಿಯ ಪತ್ತಲ ವಜ್ರದ ಪಟ್ಟಿ
ಕಾಲ ರುಳಿ ಪೈಜಣವು ಕಮಲಾಕ್ಷಿ ತಾ ಕಣ್ಣ
ಕಾಡಿಗೆಯನ್ಹಚ್ಚುವಳು ಕುಡಿಯಂತೆ ಕುಂಕುಮವು
ತೀಡಿದ್ದ ತಳಪು ಮುಂಗಾರು ಮಿಂಚುಗಳಂತೆ

ಭಾರಿ ಬಂಗಾರಕ್ಕೆ ಬಾಗಿ ಬಳುಕುತ ಬರಲು
ನೂರಿಂದ(ರದಿಂದ?)ನೋಡುತಲಿ ದಾರೆಂದು ತಿಳಿಯುವಲೆ
ತಾರೆಗಳು ಗುಂಪಾಗಿ ತಾವಿಳಿದು ಬಂದವೊ
ಸೂರ್ಯ ಚಂದ್ರಮ ಗಗನ ಬಿಟ್ಟು ಬರುತಿಹರೇನೊ
ಈಗಿಂದ್ರನ್ನ ಜಾತ್ರ ಯುಂಥ ಝಳಕು ಬೆಳಕೇನೊ
ಕೋಲು ಮಿಂಚಿನ ಕಾಂತಿ ಮುನಿಗೆ ಹುಟ್ಟಿತು ಭ್ರಾಂತಿ
ನೋಡಬೇಕೆಂದೆನುತ ಬಿಟ್ಟಿದ್ದನಾ ತಪಸು
ಹಾರಿ ಬಂದಾಗಪ್ಸರ ಸ್ತ್ರೀಯಳನು ಕಂಡು
ಮಾರನ ಶರದಿಂದ ಮೋರೆ ನೋಡುತ
ಉಟ್ಟ ಸೀರೆ ಜರತಾರಿ ಸೆರಗ್ಗು ಹಿಡಿದು ನಿಲ್ಲಿಸಿದನಾಗ

ಧ್ವನಿ—೫

ಇಂದುವದನೆ ತಾನು ಇಂದ್ರಲೋಕದಿಂದ
ಬಂದಳಾ ಮೇನಕೆಯು
ಕಂಡಾಗ ವಿಶ್ವಾಮಿತ್ರಮುನಿ ತಾ ಭ್ರಮೆ-
ಗೊಂಡು ಮಾತಾಡಿದನು ೧

ಲೋಕಸುಂದರಿ ದಾವಲೋಕದಿಂ ಬಂದೆಯೆ
ಪಾಕಶಾಸನಪ್ರಿಯಳೆ
ನಾ ಕಂಡು ಬಿಡಲಾರೆನು ನಿನ್ನೀಗೆನುತಲಿ
ತಾ ಕೈಯ ಪಿಡಿದನಾಗ ೨

ಸುರಲೋಕದವರಿಗೆ ನರಲೋಕದ-
ವರಂಗಸಂಗವುಂಟಾಗುವುದೆ
ಪರಮ ಜ್ಞಾನಿಗಳಿಗೆ ತರವಲ್ಲವಿದು ಎನ್ನ
ಸೆರಗನು ಬಿಡಿರೆಂದಳು ೩

ವಸಂತ ಕಾಲದಿ ವನದೊಳು ಮಲ್ಲಿಗೆ
ಕುಸುಮವ ಕಂಡವರು
ಎಸೆವೊ ಪರಿಮಳ ಸುವಾಸನೆಯ ಬಿಡುವೋರೇನೆ
ವಶವಲ್ಲ ನಮಗೆಂದನು ೪

ನಿಷ್ಠೆ ನಿರುತದಿಂದ ಮಾಡಿದ ತಪಸೆಲ್ಲ
ಕೆಟ್ಟುಹೋಗುವುದರಿಯಾ

ಎಷ್ಟು [1][ಶ್ರಮಪಟ್ಟು][1] ಮಾಡಿದರ್ಹಾನಿಯಾಗೋದು
ವಸಿಷ್ಠರು ನಗುವೋರೀಗ ೫

ಮನಸಿಜನ ಬಾಣ ಮನದಲ್ಲಿ ನೆಟ್ಟರೆ
ಘನವಾದ ಗಾಯವಿದು
ನಿನ ಅಂಗ ಸಂಗದಿಂದಲಿ ಮಾಯುವುದು
ಮಾಯಾರಮಣನ ಮಾಯವಿದು ೬

ಜಗದೊಳಗಿದು ಭಾಳ ನಗೆ ಹಾಸ್ಯವಾಗೋದು
ಸುಗುಣ ಸುಮ್ಮನೆ ನೀ ಪೋಗೊ
ಮುಗಳುನಗೆ ನಗುತ ಮೋಹಗಳಿಂದ ಮೇನಕೆ-
ಹೆಗಲ ಮ್ಯಾಲೆ ಕೈಯನಿಟ್ಟ ೭

ವಾರಿಜಮುಖಿಯು ಸ್ವೀಕಾರ ಮಾಡುತಲಿ
ವಿಹಾರದಿಂದ ರತಿಯು
ತಾನಿಟ್ಟು ರಮಿಸ್ಯಾಕೆಯಂಗಸಂಗವ
ಮಾಡುತ್ತ ಮನಸುಖ ಹೊಂದಿದ ೮

ಆಕ್ಷಣ ಗರ್ಭವ ಧರಿಸಿ ತಾ ಪಡೆದಳು
ನಕ್ಷತ್ರ ಮಾಲೆಯಂತೆ(ಥ?)
ಅಚ್ಚಮುತ್ತಿನ ಗೊಂಬೆಯಂಥ ಕೂಸನು ತಾ ನಿ-
ರೀಕ್ಷಿಸಿ ನೋಡುತಲಿ ೯

ಒಂದು ಕೈಯಿಂದ ಕೂಸನು ಎತ್ತಿ ತಾನು ಮ-
ತ್ತೊಂದು ಕೈಯಿಂದ ಮುನಿ ಅಂ-
ಗದಲ್ಲುಟ್ಟ ವಸ್ತ್ರಗಳ ಪಿಡಿದು ನಿನ್ನ
ಕಂದನ ಹಿಡಿಯೆಂದಳು ೧೦

ಕೆಟ್ಟೆನು ನಾನಿಂಥ ದುಷ್ಟಕಾರ್ಯವ ಮಾಡಿ
ಭ್ರಷ್ಟನಾದೆನು ಲೋಕದಿ
ಮುಟ್ಟವಲ್ಲೆನು ನಿನ್ನ ಕೂಸನೆನುತ ಮೋರೆ
ಮುಚ್ಚಿಕೊಂಡಳುತಿದ್ದನು ೧೧

1 ಶ್ರಂಬೊಟ್ಟು

ಒಣಗಿದೆಲೆಯ ಮ್ಯಾಲೆ ಅಣುವಿನ ಆ ಮುನಿ
ಚರಣದಲ್ಲೆ ಬಿಸುಟು ಕ-
ರುಣವಿಲ್ಲದಲೆ ಕಣ್ಣೆತ್ತಿ ನೋಡದೆ ದಾರಿ
ಹಿಡಿದಳು ತನ ಲೋಕಕೆ ೧೨

ಜಂತದ ಗೊಂಬೆಯಂಥ ಶಿಶುವನು ನೋಡಿ
ಸಂತಾಪದಿಂದ ಮುನಿ ಶ್ರೀ-
ಕಾಂತ ಭೀಮೇಶಕೃಷ್ಣನು ಸಲಹುವನು ಹೀ-
ಗೆಂತೆಂದು ನಡೆದನಾಗ ೧೩

## ವಚನ—೬

ಹಡೆದವರು ಬಿಟ್ಹೋಗೆ ಅಡವಿ ಅರಣ್ಯದಲಿ
ಒಡಲ್ಹಸ್ತಿ ಒಣಗಿ ಬಾಯಿಬಿಡುತ ಸಂತಾಪದಲಿ
ಗಡಗಡನೆ ತಾನಾಗ ಹುಡಿಯಲ್ಲಿ ಹೊರಳುತಲಿ
ಪಡಪಡನೆ ಕಣ್ಣೀರ ಸುರಿಸುತಲಿ ಅಳುತಿರಲು
ಗಿಡಗಿಡವಿ ಕುಳಿತ ಪಕ್ಷಿಗಳೆಲ್ಲ ನೋಡುತಲಿ
ಹಿಡಿದು ಜೇನುತುಪ್ಪ ತಂದು ಬಾಯೊಳಗ್ಹಾಕಿ
ಗುಡಿಗಟ್ಟಿ ನಿಂತವಾ ಬಿಸಿಲು ಬೀಳದೆ(ದಂತೆ?)ಶಿಶುವಿಗೆ

## ಧ್ವನಿ—೭

ಪರ್ಣದ್ಹಾಸಿಕೆಯಲಿ ಮಲಗಿದ ಶಿಶುವ ಸುಪ-
ರಣಗಳು ನೋಡುತಾಗ
ಕಿರಣ ಬೀಳದಲೆ ಸೂರ್ಯಗೆ ಮೋರೆ ಮಾಡುತ ತ-
ಮ್ಮ ರೆಕ್ಕೆ ಪಸರಿಸುತಾಗ ೧

ಹಸ್ತಿ(ಸಿದು?)ನೀರಡಿಸಿ ಬಂದವು ಕಾಡಾನೆಗಳೆಲ್ಲ
ಜತ್ತಾಗಿ ನಿಂತು ನೋಡುತಲಿ
ಮತ್ತೊಂದು ವ್ಯಾಘ್ರ ಮೃಗವು ಬಾರದಂತಾಗ
ಸುತ್ತುಗಟ್ಟಿ ನಿಂತವಲ್ಲಿ ೨

ನಸುಗಿ(ಕಿ?)ನೊಳಗೆ ಸ್ನಾನ ನೇಮ ಹೋಮದ ಜಪತಪ ಅ-
ನುಷ್ಠಾನ ಮುಗಿಸುತ್ತ
ಕುಶಸಮಿಧಿ(ಸಮಿತ್ತು?) ಫಲಪುಷ್ಪ ತರಬೇಕೆಂದೆನುತಲಿ
ಋಷಿಗಳು ಬಂದರಡವಿಗೆ ೩

ಬಣ್ಣ ಬಣ್ಣದ ಪಕ್ಷಿಗಳ ನೋಡಿ ತಾವಾಗ
ಸಣ್ಣ ಕೂಸಿನ ಧ್ವನಿ ಕೇಳಿ
ಕಣ್ವ ಋಷಿಗಳು ಬಂದರು ಕರುಣದಲೊಂದು
ಹೆಣ್ಣು ಕೂಸನು ಕಂಡರಾಗ ೪

ಜ್ಞಾನದೃಷ್ಟಿಲಿ ನೋಡಿ ತಂದೆ ತಾಯಿಯರನು
ನಾನೇ ರಕ್ಷಕ ಇದಕೆಂದು
ತಾವೆತ್ತಿಕೊಂಡು ಕಾವಿಯು ಮರೆ ಮಾಡಿ
ಕುಟೀರಕ್ಕೆ ಕರೆತಂದರಾಗ ೫

ಎರೆದು ಕ್ಷೀರವನ್ಹಾಕಿ ಮರಕೆ ತೊಟ್ಟಿಲ ಕಟ್ಟಿ
ಅರಿವೆಯನ್ಹಾಸಿ ಹೊದಿಸುತ್ತ
ಸರ್ವ ಋಷಿಗಳಿಗೆ ತೋರುತ ತಮ್ಮ ಮಗಳನಾ-
ಶೀರ್ವಾದ ಮಾಡಿ ಹರಸುತ ೬

ಇಂಥ ಮಗಳ ಪಕ್ಷಿಗಳು ಪಾಲಿಸಿದುವು ಹೀ-
ಗಂತ(ಗೆಂದು?)ತಿಳಿದು ಮನದಲ್ಲಿ
ಸಂತೋಷದಲಿ ನಾಮಕರಣ ಮಾಡುತಲಿ ಶಾ-
ಕುಂತಲ ಎಂಬೊ ಹೆಸರಿಟ್ಟು ೭

ದಿನದಿನ ಚಂದ್ರನಂದದಿ ಬೆಳೆಯುತಲಿದ್ದ
ಮಗಳ ನೋಡುತ್ತ ಮಹಾಮುನಿಯು
ಸುಗುಣೆ ನಿನಗೆ ಸುಂದರನಾದ ವರನೆ(ನ ಎ?)ಲ್ಲಿ
ಹುಡುಕಲ್ಯಾಗೆಂದು ಮಿಡುಕುತ ೮

ಮುದ್ದು ಮಗಳನು ಮೋಹಿಸುತ ಪಟ್ಟದ ದೊರೆ
ಇದ್ದಲ್ಲೆ ಬಂದು ವಿವಾಹಕ್ಕೆ
ಪದ್ಮಾವತಿಯು, ಭೀಮೇಶಕೃಷ್ಣನ ದಯ
ವಿದ್ದರಾಗೋದು ಇದೆಂದ ೯

### ವಚನ—೮

ಅರಸು ನಮಗಳಿಯನಾಗಲಿಯೆಂದು ಕುಂತಲೆಗೆ
ಹರಸುತಾಶೀರ್ವಾದ ಮಾಡಿ ಸಂತೋಷದಲಿ

ನಿಯುತ ನಿಷ್ಠೆಯಲಿಂದ ಸೋಮತೀರ್ಥದಲಿ ತಪಾ
ಚರಿಸುತಿದ್ದರು ಋಷಿಗಳು

### ಧ್ವನಿ—೯

ನಡೆದ ನಡೆದ ದೂರ ದುಷ್ಯಂತರಾಜನು
ಹಿಡಿದು ಬಾಣ ಬಿಲ್ಲು ಮೃಗವ ಹೊಡೆವೆನೆನುತಲಿ ಪ.

ಹತ್ತಿ ಸಿಂಹಾಸನದ ಮ್ಯಾಲಿರ್ಥಿಯಲಿ ಕುಳಿತಿರೆ
ಭೃತ್ಯರು ಬಂದಾಗ ಬ್ಯಾಟಿಗ್ಹೋಗಿರೆಂದರು ೧

ಕರಿಯಪುರದ ದೊರೆಯು ದುಷ್ಯಂತರಾಜನು ಸರ್ವ
ಜನರ ಪರವು ದಯದಿ ಪಾಲಿಸುತಿದ್ದನು ೨

ಕೋಟಿಜನರು ಈಟಿ ಗಾಣ (ಗುರಾಣಿ ?)ಬಿಂದವ್ವ (?) ಧರಿಸಿದರು
ಕಠಾರಿ ಕತ್ತಿ ಪಿಡಿದು ಪುರದಿ ಥಾಟಿಸುತಲಿ ೩

ಕರಡಿ ಹುಲಿಯು ಸಿಂಹ ಖಡ್ಗಾ ಮೃಗವ ಕಾಣುತ
ಹೊಡೆದು ಕೆಡವಿ ಬಾಣಬಿಲ್ಲು ಬಿಡುತ ನಿಂತನು ೪

ಅಡವಿಯಲ್ಲಾ ಭರ್ಟಿಸುತ್ತ ಒಂದು ಚಿಗರೆಯು
ಹೊಡಿವೋನೆನುತ ತಾನು ಎದೆಯೊಡೆದು ಓಡಿತು ೫

ಅರ್ಧದೇಹದೊಳಗೆ ಅರ್ಧದೇಹ ಅಡಗಿಸಿ ಉಬ್ಬಿ-
ಸಿದೆಯ ಅಗಲ ಮಾಡಿಕೊಂಡು ಓಡುತ ೬

ಹುಲ್ಲತಿಂದು ತಿರುಗಿ ಬಾಯಲ್ಲಿ ಜಗಿಯುದೆ
ಅಲ್ಲಿದಲ್ಲೆ ಉಗುಳುತ ನೋಡುತ ಓಡುತ ೭

ಚಿಗರೆ ಮುಂದೆ ಓಡಿತೆನ್ನ ಕುದುರ್ಹಿಂ(ರೆ ಹಿಂ?)ದಾದವು
ಉಗುಳಿದಲ್ಲಿ ಜೊಲ್ಲಿನ ದಾರಿ ಹಿಡಿ ನೀನೆಂದನು ೮

ಧಡಧಡನೆ ರಥವ ನೀನು ನಡೆಸೊ ಸಾರಥಿ
ಹೊಡೆದನು ಭೀಮೇಶಕೃಷ್ಣನ ದಯದಿ ಪಡೆದ ಕೀರುತಿ ೯

### ವಚನ—೧೦

ಅಂತವಮಾತನು ಕೇಳುತಾಗ ಸಾರಥಿ ತ್ವರಿಯದಿಂದ
ರಥನಡೆಸಲಾ ತೇಜಿ ಮೈಚಪ್ಪರಿಸಿ
ಮುಂದೆರಡು ಕಿವಿ ನೆಟ್ಟಗಾಗಿ ನಿಂತಿರಲಾಗ

ಮುಂದೆ ಕೂದಲು ಕುತ್ತಿಗೆಯಲ್ಲಿ ಬಿದ್ದಿರಲು
ಹಿಂದೆ ಬಾಲವು ನೆಟ್ಟಗಾಗಿ ಮೈ ಜಿವರುತಲಿ
ಹೊಂದದಲೆ ನೆಲಕೆ ಕಾಲ್ಕೆದುರುತೋಡುತಲಿರಲು
ಮುಂದೆ ಕೆಂಧೂಳು ಮುಸುಕಿದೆ ಹಿಂದಕ್ಕೋಡ್ಹೋಗುವುದು
ಅಂದಾಗ ದೂರದೊಂದ್ದ ಮರಗಳ ಗುಂಪು
ಒಂದಾಗಿ ತೋರುವುದು ರಥ ಬರುವೊ ರಭಸಕ್ಕೆ
ಗುಂಡುಕಲ್ಲು ತಗ್ಗು ದಿಟ್ಟಿ ಗಿಡ ಸಾಪಾಗಿ
ಕುಂಬಾರನ ಚಕ್ರದಂತೆ ತಿರುಗಲು ಭೂಮಿ
ಮುಂದೆ ಗಿರಿ ದೊಡ್ಡ ಪರ್ವತ ಕೋಡುಗಲ್ಲುಗಳು
ಅಂದಣವು ಬರುವೊ ಭರಕಾ ಭಗರಿ(ಬುಗುರಿ?)ಯಂ[ತೆ] ತಿರುಗೆ
ಮುಂದೋಡಿಸುತ ರಥವ
ಕಂಡನಾ ಚಿಗರೆಯನು ತಕ್ಕೊಂಡು ಬಾಣವ ಬಿಲ್ಲು
ಬಿಡುವಂಥ ಕಾಲದಲಿ ಬಂದರಿಬ್ಬರು ಬ್ರಾಂಬರೊಂದಾಗಿ
ಒದರುತಲಿ ಸಿಂದ್ರೊ ಸಿಂದ್ರೋ ರಾಜ ನೀನು ಮಾಡುವ ಕಾರ್ಯ
ಚೆಂದವಲ್ಲೆಂದಾಗ ಮುಂದೆ ಮಾತಾಡುವುದು ಮತ್ತೇನೆಂದರೆ–

## ಧ್ವನಿ—೧೧

ರಾಜ ನಿನಗೀ ಚಿಗರೆಬ್ಯಾಟೆಯು ಸಹಜವಲ್ಲಿದು ನೋಡಿಕೊ
ಮಾಜದ್ಹೇಳುವೆ ಮಾತಲಾಲಿಸಿ ಸೋಜಿಗವು ಸುಮ್ಮನೆ ಬಿಡೊ ಪ.

ಅಂಜಿ ಓಡಿಹೋಗುವರ ಬೆ–
ನ್ನ್ಹಿಂದೆ ಬಾಣವ ಬಿಡುವ್ರೋರೆ
ಚೆಂದವಲ್ಲಿದು ಛ(ಕ್ಷ ?) ತ್ರಿಕುಲಕೆ
ಕುಂದು ಬರುವುದು ತಿಳಿದುಕೊ ೧

ಋಷಿಗಳಾಶ್ರಮದಲಿ ಬೆಳೆದ
ಹಸುಮಾಗಾಯಿ ಚಿಗರೆಯು
ಹಸುರು ಮೇಯಲು ಬಂದರಿದನು
ಅಸುವನ್ಹೀರಿ ನೀ ಕೊಲ್ಲ್ರೋರೆ ೨

ನಮ್ಮ ಆಶ್ರಮದಲ್ಲಿ ಬೆಳೆದ
ಸಣ್ಣಮರಿ ಈ ಚಿಗರೆಯು
ಕಣ್ವ ಋಷಿಗಳ ಕರುಣದಿಂದಲಿ
ಬೆಳೆದಿತೀ ಗಂಡೆರಳೆಯು ೩

ಕೃಷ್ಣ ಸಾರಾವ್ಮೃಗವ ನೀನು
ಬಿಟ್ಟು ಬಾಣವ ಬಿಸುಟರೆ
ಇಷ್ಟವಾದ ಮಾತು ಕೇಳಿದರೀಗ
ನಿನಗೊಂಪ್ಪೇಳುವೆ ೪

ಇತ್ತ ಮಾಲಿನೀ ನದಿಯು
ನೋಡದರ್ಥತ್ತಿಲೆ (ರವೆ ?) ಕುಠೀರವು
ಸತ್ಯವಂತರು ಕಣ್ವಋಷಿಗಳ
ಪುತ್ರಿಯಾದ ಶಕುಂತಲೆ ೫

ಚಿತ್ರದಾಗಿನ ಗೊಂಬೆ ಚಿನ್ನದ
ಪುತ್ಥಳಿಯಂತ್ಹೊಳೆವಳು
ಪತ್ನಿಯಾದರೆ ನಿನ್ನ ಸರಿ
ಪುಣ್ಯಕ್ಕೆ ಜೋಡಿನ್ನಿಲ್ಲವೊ ೬

ಜನಕನಾಜ್ಞೆಯಿಂದಲಾಕೆ ವನಕೆ
ಬರುವಳೀಕಾಲದಿ
ದಿನಕರನ ಪ್ರಕಾಶ ಹೊಳೆವಳು
ಮನಕೆ ಬಂದರೆ ಮಾಡಿಕೊ ೭

ಅರಸನರಸಿಯು ಆಗಲೆನುತ
ಹರಸುತಾತ ಮುರುಗಳಿಗೆ
ನಿರುತ ನಿಷ್ಠೆಲಿ ಸೋಮತೀರ್ಥದಿ
ತಪವ ಚರಿಸಲು ಪೋದರು ೮

ಆಶ್ರಮಕ್ಕೆ ಪೋದರೆ ನಿಮ-
ಗೀ ಶ್ರಮ ಪರಿಹಾರವು
ಭೂಸುರೊಡೆಯ ಭೀಮೇಶಕೃಷ್ಣನೆ
ತಾಸನ್ನೀ (ನ್ನಿಹಿ ?) ತನಾಗಿರುವನು ೯

ವಚನ—೧೨

ಅಂದ ಮಾತನು ಕೇಳಿ ಅಂಗಿ ರುಮಾಲುಗಳು
ಉಂಗುರುಡಿದಾರ ಕುಂಡಲ ಮುಕುಟ ಭುಜಕೀರ್ತಿ
ಅಂದಣಮೊಳಿಟ್ಟು ಆಯುಧ ಬಿಸುಟು ತ-

ನ್ಹಿಂದೆ ಬಂದ ಜನರನು ಬ್ಯಾಟಿ ಬಿಡಿಸವರನಲ್ಲಿಟ್ಟು
ಬಂದು ಸಾಷ್ಟಾಂಗಕ್ಕೆರಗಿದನಾಗ ಮುನಿಗಳಿಗೆ ಅವ
ರಿಂದ ಆಶೀರ್ವಾದಗಳ ಕೊಂಡು ತಾನಾಗ
ಬಂದು ಮಾಲಿನಿಯೆಂಬೊ ನದಿಯ ತೀರವನಾಗ
ಕಂಡಿಳಿದನಾ ರಾಜನು

## ಧ್ವನಿ—೧೩

ಬಂದ ಬಂದ ಬಂದ ಮಹಾರಾಜ
ಸುಂದರ ಸೂರ್ಯನ ತೇಜ ತಾ ಬಂದ ಪ.

ಸ್ನಾನ ಸಂಧ್ಯಾನ ಅನುಷ್ಠಾನ ಮಾಡಿಕೊಂಡು
ಮಾಡುತ ಹರಿಧ್ಯಾನ ಬಂದ ೧

ನವಣೆ ಹುಲ್ಲುಗಳನು ತಿಂದು ತಿಂದು
ಉಗುಳುತಿದ್ದವು ಗಿಳಿಹಿಂಡು ನೋಡಿ[ಬಂದ] ೨

ಬಂಡಿಯಲ್ಲಿಪ್ಪೆಯ ಹಿಂಡಿ ಕುಟ್ಟಿ-
ಕೊಂಡು ಹಚ್ಚಿದರು ತಮ್ಮ ಮುಂದಿ ನೋಡಿ ಬಂದ ೩

ಹರದಿ ಶಕುಂತಲೆ ಇದನು ಹಚ್ಚಿ
ಎರೆದುಕೊಂಬುವಳೊ ಏನೆಂದು ಬಂದ ೪

ಒದ್ದೆ ಹೆಜ್ಜೆಗಳನು ಕಂಡು ಶುದ್ಧ ಸ್ನಾನ
ಮಾಡಿದರು ಋಷಿ ಹಿಂಡು ಎಂದು ಬಂದ ೫

ಸುಗುಣೆ ಶಕುಂತಲೆಯಿರುವೊ ಸ್ಥಳ ಇರಲು
ಬಹುದು ಇಲ್ಲೆಂದು ಬಂದ ೬

ಮುದ್ದು ಶಕುಂತಲೆ ಇರುವೋ ಸ್ಥಳ
ಇದ್ದರಿಲ್ಲಿರಬಹುದೆಂದು ತಾ ಬಂದ ೭

ಅತ್ತಿ ಅಶ್ವತ್ಥ ತೆಂಗು ಅಡಿಕೆವನ
ಸುತ್ತ ಕಾರಂಜಿ ಕಮಲಗಳ ನೋಡಿ ಬಂದ ೮

ಮರದ ನೆರಳು ತಂಪಿನಲಿ ಬಳ್ಳಿ
ಮರೆಮಾಡಿಕೊಂಡು ಕುಳಿತಲ್ಲೆ ತಾ ಬಂದ ೯

ಮೂರು ಮಂದಿ ಗೆಳತಿಯರ ತಾ
ದೂರದಿ ಕಂಡ ಮಹಾರಾಜನೋಡಿ[ಬಂದ] ೧೦

ಶ್ರೀಶ ಭೀಮೇಶಕೃಷ್ಣನು ಇಲ್ಲಿ
ವಾಸವಾಗಿರುವೋನು ತಾನು ಎಂದು ಬಂದ ೧೧

## ವಚನ—೧೪

ಗೆಳತಿಯರು ಮೂವರೊಂದಾಗಿ ಬರುತಿರಲಾಗ
ಥಳಥಳನೆ ಹೊಳೆವೊ ಶಕುಂತಲೆಯು ಕಾಣುತಿರೆ
ಕಳಿತ ಬಾಳೆಹಣ್ಣು ತುಪ್ಪ ಸಕ್ಕರೆ ಕ್ಷೀರ
ಕಲಿಸಿ ಕುಡಿದಂತಾಯಿತಾ ದೊರೆಯು ಉದರಕ್ಕೆ
ಹರುಷದಲಿ ಕೇಳಿತು ಅವರಾಡೋ ಮಾತುಗಳು ಮತ್ತೇನೆಂದರೆ–

## ಧ್ವನಿ—೧೫

ಬಡಬಡ ನಡೆಯಿರೆ ಗಿಡಕೆ ನೀರೆರೆಯೋಣ
ತಡಮಾಡದೆ ತಾರಾಮುಖಿಯೆ ಸಖಿಯೆ ಪ.

ಉಟ್ಟ ನಾರುಮಡಿ ಕಟ್ಟಿದಜಡೆ ಮುಡಿ
ತೊಟ್ಟು ಅಡಿಕೆ ಹಾಳೆ ಕುಪ್ಪಸವನ್ನು ೧

ಬನ್ನಿಯು ಮರಕೀಗ ಬನ್ನಿ ನೀರ್ಹಾಕಿ ಸು–
ವನ್ನಿ (ಸುರಹೊನ್ನೆ ?) ಸುರಗಿ ಶಾವಂತಿಗೆ ವನಕೆ ೨

ಅನಸೂಯ ನೀ ಹೋಗಿ ಹಲಸು ನೇರಲೆ ನಿಂಬೆ
ನೆನಸಿ ನಮ್ಮನ್ನು ಬಾಯ ಬಿಡುವೋ ದಾಳಿಂಬ್ರೆ ೩

ಆವರೀ ಕ್ಯಾದಿಗೆ ಅರಳುತಾವರೆ ನೊಗ್ಗು ಪ್ರೇ–
ಮದಾ (ಪ್ರಿಯಂವದ ?) ನೀ ನೀರ ಪ್ರೇಮದಿಂದೆರೆಯೆ ೪

ಅರಿಷಿಣಂಜೂರಗಿಡ ಮೆಣಸು ಯಾಲಕ್ಕಿಗೊನೆ
ತುಳಸಿ ಗಿಡಕ್ಕೆ ನಾನಾದರಿಸಿ ಹಾಕುವೆನೆ ೫

ತುಳಸಿಗಿಡವ ನೀನು ಬೆಳೆಸಿ ನೀರ್ಹಾಕಲು
ಅರಸು ಬರುವೋ ಫಲ ಫಲಿಸೋದೆ ನಿನಗೆ ೬

ಸಖಿಯರ ಮಾತಿಗೆ ಸುಖಿದಿ ಶಕುಂತಲೆ
ನಕಲಿ ಹಾಸ್ಯವ ಮಾಡಬ್ಯಾಡಿರೆ ಎನಗೆ ೭

ಸೋಮನ ಮಕ್ಕಳು ಭಾನುತಾಪಕ್ಕೆ ಬೆದರಿ
ಮೋರೆ ಬಾಡೋದು ನೋಡಿ ಮೊದಲೆ ನೀರೆರೆಯೆ ೮

ಇಂದಿನ ರಾತ್ರಿಲಿ ಇಂದು ಬರುವನೆಂದು
ಕಂದಬ್ಯಾಡಿರೆಂದ್ಹೇಳಿ ಕೋಮಲ ಗಿಡಕೆ ೯

ಎಳೆಯ ಮಾವಿನ ಗಿಡ ತಳಿಲು ಹಸಿರು ಕೆಂಪು
ಬಿಳಿಯ ಮಲ್ಲಿಗೆ ಬಳ್ಳಿ ಸುತ್ತಿಕೊಂಡಿಹುದೆ ೧೦

ಹಸಿರುಗಿಡದ ಮ್ಯಾಲೆ ಮೊಸರುಚೆಲ್ಲಿದಂತೆ ಅ-
ನಸೂಯ ನೀ ನೋಡೆ ಕುಶಲ ಕೋಮಲೇರ ೧೧

ಸೂಜಿಮಲ್ಲಿಗೆಬಳ್ಳಿ ಸುತ್ತಿಕೊಂಡಂತೆ ದೊಡ್ಡ
ರಾಜ[ನ] ನೀನ್ಹೊಂದಿನಿಂತರ್ಹೀಗೆ ಕಾಂಬುವುದೆ ೧೨

ಸಾಕುಸಾಕಮ್ಮ ಇಂಥ ಪ್ರೋಕ ಮಾತುಗಳಾಡಿ ಯಾ-
ತಕೆನ್ನನು ವ್ಯಥೆಬಡಿಸುವಿರೀಗ ೧೩

ಭೀಮೇಶಕೃಷ್ಣನ ದಯವು ಇದ್ದರೆ
ನಾವೀಗಾಡಿದ ಮಾತು ಸುಳ್ಳಾಗುವುದೇನೆ ೧೪

## ವಚನ—೧೬

ನಾಗವೇಣಿಯು ತಾನು ಸಾಗಿ ಮುಂದಕೆ ಬಂದು
ಸೋಗೆಗಣ್ಣಿಂದ ಆಗರದ (ಅಗರು ?) ಗಿಡ ನೋಡುತಲಿ
ಮಾಗಿದ ಫಲಪುಷ್ಪ ಪಾರಿಜಾತವ ತೆಗೆದು
ಬಾಗಿ ಬಳುಕುತ ಬಾಳೆಸುಳಿಯಂತೆ ಹೊಳೆಯುತಲಿ
ಸೋಗಿನ ಗೊಂಬೆ ಸುಂದರಿ ಸುಗುಣಾಲಂಕಾರಿ
ಸೂರ್ಯನ ಕಿರಣ ಬೀಳುತಲೆ ಸೂಕ್ಷ್ಮಾಂಗಕ್ಕೆ
ಬ್ಯಾಗಡಿಯಂಥ ಮುಖ ಬೆವೆತು
ಭಾನುತಾಪ ತಾಳಲಾರದೆ ತನ್ನ
ಸಖಿಯರನು ಕರೆದು ತಾನ್ಹೇಳುತಿರುವಂಥ
ಮಾತುಗಳು ಮತ್ತೇನೆಂದರೆ—

## ಧ್ವನಿ—೧೬

ಸಖಿ ಬಾ ಸಖಿ ಬಾ ಸೆಕೆ ಭಾಳೆನಗೆ
ಸೆಕೆ ಭಾಳ ಬ್ಯಾಸಿಕೆ ಬೆವರಿಕೆ ನೋಡೆ ಪ.

ಕರ ಬೀಸಿ ಕರೆದು ಸುಂದರಿ ತನ್ನ ಸಖಿಯುರ ವಜ್ರದ
ಗೊಂಬೆಯುಂತೆ ಒಯ್ಯಾರಿ ಮೋಹನಾಕಾರಿ ಸಖಿ ಬಾ ೧

ಕುಂಬಳ ಬುರುಡೆಲಿ ತಂದು ನೀರ್ಹಾಕುತ್ತ
ಹೊಂದಿದೆ ಶ್ರಮು ಗಾಳಿ ಬಂದು ಬೀಸಿರೆ ನೀವು ೨

ಕರುಣವಿಲ್ಲವೆ ಕಣ್ವಋಷಿಗಳು ನಿನ್ನಲ್ಲಿ ಕೊಡ
ಹೊರಿಸುವ್ರೋರು ಈ ಗಿಡವ ಪಾಲಿಸುವ್ರೋರು ೩

ಕರುಣವಿಲ್ಲವೆ ಕಣ್ವಋಷಿಗೆಂಬೊ ಮಾತೆನ್ನ
ಕರಣಕ್ಕೆ ಕಠಾರಿ ಇರಿದಂತಾಗುವುದಲ್ಲೆ ೪

ತಂದೆ ಸಾಕಿದ ಗಿಡ ತಂಗಿಯುರೆನಗೆಂದು ಆ-
ನಂದದಿಂದ ನೀರು ತಂದೆರೆವೆನೆ ನಾನು ೫

ಕದಪಿನ ಮ್ಯಾಲೆ ಕಪ್ಪುಕಣ್ಣು ನೀರ್ಹರಿವೋದು ತಕವು
ಕೂದಲು ಒರೆಸ್ವೊದ್ದೆ ಆಗೇದೆ ನೋಡೆ ೬

ಅಚ್ಚಮುತ್ತಿನ ಎಳೆಯುಂತೆ ಬೆವರು ನೀರು
ಕುತ್ತಿಗಿಂದ್ಹರಿವೋ ತಾಪ ಎಷ್ಟುಸೈರಿಸಲ್ಹೇಳೆ ೭

ಕುಪ್ಪಸ ಬಿಗಿವೋದೀಗುಬ್ಬಸವಾಗೋದು
ಕಕ್ಕಸ ಬಡಿಸೋದು ಬಿಚ್ಚಿ ಕಂಚುಕವ ೮

ಬಿಗಿದ ಕುಪ್ಪಸ ಬಿಚ್ಚಿ ಬಿಸುಟೀವೆ ನಿನ್ನಂಗ ದೊ-
ರೆಗಳು ಕಂಡು ಮೋಹಿಸದೆ ಬಿಡುವರೇನೆ ೯

ನಾರಿ ನಿನಗೆ ನವಯೌವನ ಬಂದಿತು
ಸೀರೆ ಕುಪ್ಪಸ ಬಯ್ದ್ರೇನು ಮಾಡುವುದ್ಹೇಳೆ ೧೦

ಅಂದ ಮಾತಿಗೆ ಅನಸೂಯ ತಾ ನಗುತಲಿ
ಮಂದಹಾಸ್ಯದಲೊಂದು ಮಾತನಾಡಿದಳಾಗ ೧೧

ಪ್ರೀತಿ ಸಖಿಯರೆಂದು ಮಾತ್ಹೇಳಿಕೊಂಡರೆ
ಮಾತು ಮಾತಿಗೆ ಮೋಹ ಬಡಿಸೋದ್ಯಾತಕೆ ನೀವು ೧೨

ಅನಸೂಯಾಡಿದ ಮಾತ ಅರಸುಕೇಳುತ ತನ್ನ
ಮನಸಿನೊಳಗೆ ತಾನೆ ಮಾತನಾಡಿಕೊಂಬ ೧೩

ಇಂಥ ಕುಂತಲೆಗೆ ನಾ ಕಾಂತನಾದರೆ ಲೋಕದಿ ಎ-
ನ್ನಂಥ ಪುಣ್ಯವಂತರಿನ್ನಿಲ್ಲೆಂದ ೧೪

ಶ್ರೀಕಾಂತ ಭೀಮೇಶಕೃಷ್ಣನ ದಯದಿಂದ
ಈ ಕನ್ಯೆ ಎನಗಾಗಬೇಕೆಂದು ನುಡಿದನು ೧೫

ವಚನ—೧೮

ಎದ್ದು ಕುಂತಲೆಯು ತಾ ತಿದ್ದಿ ಮುಂಗುರುಳು ಬೆವ-
ರಿದ್ದ ಮುಖವನು ಮುಂಜೆರಗಲೊರೆಸುತ್ತ
ಪದ್ಮಪಾದಗಳಿಂದ ಹೆಜ್ಜೆಯಿಕ್ಕುತಲಿ
ಮುಂದಿದ್ದ ಗಿಡಗಳ ನೋಡಿ ಮಾತನಾಡುವುದು ಮತ್ತೇನೆಂದರೆ-

ಧ್ವನಿ—೧೯

ಗಿಡಗಿಡ ನೋಡಿ ಶಕುಂತಲೆಯು ಸಣ್ಣ
ಮಡಿಗೆ ನೀರು ಚೆಲ್ಲುತ ತೊಳೆಯು[ತ]
ತಡಮಾಡದೆ ತಂದೆ ಬರುವನು ನೀನು
ಬಿಡುವುದು ಫಲಪುಷ್ಪಗಳೆನುತ ಪ.

ಸಣ್ಣ ಮಾಧವಿಗಿಡ ಅದರಂದ
ಬಣ್ಣದ ಎಲೆ ಹೂ ಕಾಯಿಂದ
ಕಣ್ವಪುತ್ರಿ ನೋಡಿ ಕಣ್ಣುಗಳಿಂದ
ಬಣ್ಣಿಸಿ ಮಾತನಾಡುವೊ ಚೆಂದ ೧

ತಂದು ತಂದು ನೀರ್ಹಾಕುತಿರೆ
ಆದರಿಂದೆದ್ದಿತು ಒಂದಾಭ್ರಮರ
ಮುಂದಗಮನೆ ಮೈ ಮೈಗೆ ಸುತ್ತು-
ರಿದು ಹೋಗೆಂದರೆ ಮುಂದಕೆ ಪೋಗದಲ್ಲಿ ೨

ಸ್ತನದ ಮ್ಯಾಲೆ ಬಂದು ಕೂಡುವುದೆ
ಎದೆ ಬಗಲಲಿ ಸುತ್ತಿ ಸುತ್ತ್ಯಾಡುವುದೆ
ಸುಳಿಗುರುಳಿನ ಮ್ಯಾಲೆ ಸುಮ್ಮನೋಡ್ಯಾಡಿ
ಕರ್ಣದಲಿ ಬಂದ್ವಾರ್ತೆಗಳ್ಹೇಳುವುದೆ ೩

ಅನಸೂಯ ಪ್ರೇಮದ ಇವನ್ಯಾರೆ
ಮನಸಿಜನಂತೆನ್ನ ಮನಕೆ ತೋರೆ
ಕನಕ ಕನ್ನಡಿಯಂಥ ಗಲ್ಲದಲ್ಹತ್ತಿ
ಚುಮ್ಮನೆ ಕೊಡುವುದು ತುಟಿ ಬಾಯಲ್ಲಿ ೪

ಹೊಡೆದರ್ಹೋಗದು ಇದಕೇನು ಥಾಡಿ
ಬಂದಡರೋದು ಮೋರೆ ಮೋರೆಗೆ
ಪೀಡೆ ತಡೆಯುಲಾರಿದರ ಬಾಧೆಯು ಜೋಡಿ ಈ
ಗಿಡದಿಂದೆದ್ದಿತು ನೋಡೀಗುಂಗಾಡಿ ೫

ಸಂತೋಷದಲಿ ವನಕೆ ಬಂದು ನಿ-
ರಂತರ ನೀರು ಚೆಲ್ಲುವೆ ನಾನು
ಎಂಥ ಭ್ರಮರ ಎದೆ ಒಡೆಸಿ ಎನ್ನನು
ಸಂತಾಪಕ್ಕೆ ಗುರಿ ಮಾಡುವುದೀಗ ೬

ಬಿಡುಬಿಡು ಅಂದರೆ ಬಿಡೋದಲ್ಲ
ಬಿಡಿಸುವ್ಹೋದು ಭೀಮೇಶಕೃಷ್ಣನೆ ಬಲ್ಲ
ತಡೆಯಲಾರಿದರ ರಾಗದ ಸೊಲ್ಲ
ಬಂದ್ಹೊಡೆದೋಡಿಸುವ ಪುರುಷರಿಲ್ಲ ೭

### ವಚನ—೧೦

ಕರಿಗಮನೆಯುಳ ಮುದ್ದು ಚರಣ ಶಿರ ಪರಿಯಂತ್ರ
ಹರಿದಾಡುವಂಥ ಭ್ರಮರವ ನೋಡಿ ಬೆರಗಾಗಿ
ದೊರೆಯು ತನ್ನೊಳಗೆ ತಾ ಮಾತನಾಡಿಕೊಂಬ
ಭ್ರಮರ ಮಾಡಿದ ಪುಣ್ಯ ಭಾಳಾಗಿ ಕಾಂಬುವುದು
ಧರಿಸಿ ವೈರಾಗ್ಯ ತಪಾಚರಿಸಿ ಶ್ರೀಹರಿಯನ್ನು
ಒಲಿಸಿಕೊಂಡ್ವರವ ಪಡಕೊಂಡು ಬಂದಿಹುದೇನೊ
ಸರಸಿಜಾಕ್ಷಿಯು ಕೂಡ ಸರಸವಾಡುವುದೀಗ ನಟ
ಪುರುಷನಂತೆ ಕೀಟಕ ಮಾಡುವುದು ಚರಿಯು

ಕಟಿ ಜಾನು ಜಂಘೆ ಇವಳ ಹವಳ ಕುಡಿಯಂಥ
ತುಟಿಗೆ ಚುಮ್ಮನೆ ಕೊಡುವುದೀ ಮುದ್ದು ಮುಖವನ್ನು
ಮಿಟಿಮಿಟಿ ನೋಡುವುದು ಮಿಂಚಿನಂಥ ದೇಹ
ಅನುಸರಿಸಿ ಮಾಡುವುದು ಎನ್ನ ಕ್ಲೇಶಬಡಿಸುವುದು
ಎನಕಿಂತ ಮೊದಲೀಕೆ ಅಂಗಕಾಲಿಂಗನೆಯು ಕೊಡುತಿರುವುದಿದು ನೋಡಿ
ಎನಗ್ವಿರಹ ತಾಪಗಳು ಸೈರಿಸುವುದ್ಹ್ಯಾಗೆ
ಸೈರಣೆ ಆಗದೆನಗಿನ್ನು ಪರಮ ಸುಂದರಿಯು
ಚೆಲ್ವಿಕೆ ರೂಪಲಾವಣ್ಯ ಸರ್ವಗುಣ ಈಕೆಯಲ್ಲಿರುವೊ ಶುಭಲಕ್ಷಣವು
ಸರಿಯಾಗಿ ವರಣಿಸುವುದೆನಗೆ ಅಸಾಧ್ಯವಿದು
ಸರೋವರದೊಳಗಿದ್ದ ಕಮಲಕ್ಕೆ ಹಾಂಸಿ (ಹಾವಸೆ ?)ಗಟ್ಟಿದರೆ
ಕಮಲದ ಚಂದ ಕಡಿಮ್ಯಾಗೋದೇನಿನ್ನು
ಈ ಕಮಲಾಕ್ಷಿ ಮೈಗೆ ತೊಟ್ಟಿರುವಂಥ ಅಡಕೆಹಾಳೆಯ ಕುಪ್ಪಸವು
ತೋಳಿಗದು ಚೆಂದಕಾಂಬುವುದು ಈ
ಚಿಗರೆವಾಹನನಾದ ಚಂದ್ರಮನ ಮೈಯ್ಯಲ್ಲಿ
ಇರುವೋ ಕಪ್ಪಿನಲಿ ಕಾಂತಿಯು ಕಡಿಮೆ ಆಗುವುದೆ
ವರಮೋಹನಾಂಗಿ ಚಂದ್ರಮನಂತೆ
ಮುಖದಲ್ಲಿ ಇರುವೊ ಆಕಾಶದೊಳು ತಿರುಗೊ ನಕ್ಷತ್ರಗಳು
ಕರಿದಾದರೇನೀಕೆ ಕಾಂತಿ ಕಡಿಮ್ಯಾಗುವುದೆ
ಪರಮ ಪತಿವರತಿ ಪಾವಕನಂತೆ ಇರುವೋಳೀ ಪರಿಮಳದ ಪುಷ್ಪ
ಪುರುಷರು ಮುಟ್ಟಿದ್ಹಾಗಿಲ್ಲ ಚಿಗುರು ಕುಡಿ ಚೂಟಿದರ
ರಸ ದಾರು ನೋಡಿಲ್ಲ ಸುರಿದು ಜೇನುತುಪ್ಪದ ರುಚಿ ತಿಳಿದಿಲ್ಲ
ಕೊರೆದು ಎಜ್ಜವನು ಹಾಕಿಲ್ಲ ಈ ರತ್ನಕ್ಕೆ
ಸರಿಯಾದ ವರ ಧರೆಯಮ್ಯಾಲ್ಹುಟ್ಟಿದ್ಹಾಗಿಲ್ಲ
ಸುರಲೋಕದೊಳಗಿದ್ದ ರಂಭೆ ಊರ್ವಶಿಯೊ
ಮೇನಕೆಯೊ ಈ ಸಖಿಯು ದಾರೆಂದೆನಗೆ ತಿಳಿದಿಲ್ಲ
ಎನಗಾದರಿನ್ನು ಪೂರ್ವೀಕರಾದಂಥ ರಾಜರು
ಹಿರಿಯರೆಲ್ಲ ಮಾಡಿದ ಪುಣ್ಯದ ಫಲವು
ಫಲಿಸಿದರೆ ನಾನೀಕೆ ಒಲಿಸಿಕೊಂಬುವೆ ಹರಿಯ
ಕಿರಿಯಮಗ ತನ್ನ ಬಾಣವ ಬಿಟ್ಟು ಬಾಧಿಸುವ
ಹರನ್ವೈರಿ ತಾನೀಗ ಎನಗ್ವೈರಿ ಆಗುವನೊ
ಹಿರಿಯ ಮಗನಾದರು ಎನಗೆ ಈಕೆಯನು ಕೂಡಿಸಿ ಗಂಟನ್ಹಾಕಿಹನೊ
ಹಾಕದಿರುವನೊ ಇವರಿಬ್ಬರಪ್ಪ ಭೀಮೇಶಕೃಷ್ಣನು

ತನ್ನ ಕರುಣದಲಿ ಕರಿಮಣಿಯು ಮಾಂಗಲ್ಯ ಕಟ್ಟಿಸಲೆಂದು
ಹರಿಯು ಪ್ರಾರ್ಥಿಸುತ ಕುಳಿತಿರುವಂಥ ಕಾಲದಲಿ
ಭ್ರಮರದ ಬಾಧೆ ತಾಳದಲೆ ಶಕುಂತಲೆಯು
ತನ ಸರಿಗೆಳತಿಯರ ಕರೆದು ಮಾತನಾಡುವುದು ಮತ್ತೇನೆಂದರೆ—

## ಧ್ವನಿ—೨೧

ನೋಡೆ ನೋಡೀಹುಳ ಮಾಡುವ ಚರಿಯು
ಕೂಡದೆ ಕುಣಿ ಕುಣಿದಾಡೋದೀಪರಿಯು ಪ.

ದಾಯಾದಿಯೊ ದಾರೆಂದು ತಿಳಿಯದೆನ್ನ
ಮಾಯದಿಂದೀ ಭ್ರಮರಾಗಿ ಬಂದಿಹುದೆ ೧

ಕಟಿಪಿಟಿ ಮಾಡುವೋದ್ಘಟವೇನಿದಕೆನ್ನ
ಜಠರದೊಳಗೆ ಸಂಕಟ ಹುಟ್ಟಿಸುವುದು ೨

ಅಂಗವ ಕಚ್ಚೋದು ಭಂಗಬಡಿಸೋದೆನ್ನ
ಕಂಗಳಿಂದಲಿ ನೋಡೀ ಗುಂಗಾಡಿಯನೆ ಹೊಡಿ ೩

ಹಾಡುತ್ತೋಡ್ಯಾಡಿವೆ ಝೋಡಿ ಹುಳವು ರಾಗ
ನೋಡಲಾರೆನೆ ನಾನು ಝಾಡಿಸೋಡಿಸೆ ನೀನು ೪

ಭೀಮೇಶಕೃಷ್ಣಗೆ ಬೇಡಿಕೊಂಬುವೆ ನಾನು ಕಾಯೋ
ನಿನಗೆ ಕೋಟಿ ಕಾಯಿ ಒಡೆಸುವೆನು ೫

## ವಚನ—೨೨

ಇಂಥ ಬಲವಂತ ಭ್ರಮರವನೋಡಿಸುವುದು
ನಮ್ಮಂಥ ಮಕ್ಕಳ ಕೈಲಾಗುವುದೇನಮ್ಮ
ದುಷ್ಯಂತರಾಜನೆಂಬಂಥ ಅರಸು ಬಂದು
ನಿಂತೊಡೆದುರೀ ಭ್ರಮರ ಅಂತರದಲ್ಹಾರುವುದು
ಹಾಗೆಂತೆಂಬ ಮಾತು ಕೇಳುತಲಾಗ ಆ ರಾಜ
ಸಂತೋಷದಿಂದ ಶುಭವ್ಯಾಳೆಯಿದು ಎನಗೆಂದು
ನಿಂತನವರೆದುರು ಬಂದಾಗ ನಿಮಗೇನು ಬಂದಂಥ ಭಯ ಬ್ಯಾಡೆನುತಲಿ

## ಧ್ವನಿ—೨೩

ಸುಂದರಿಯರಂದ ಮಾತನು ಕೇಳಿ ಬಂದ ರಾಜ
ಸುಂದರಿಯರಂದ ಮಾತನು ಪ.

ಸುಂದರಿಯುರಂದ ಮಾತಿಗೆ ಬಂದ ರಾಜ ಭ್ರಮರವನ್ನು
ಒಂದುಕ್ಷಣವೊಳ್ಹಾರಿಸಿ ಆನಂದ ಕೊಟ್ಟನಾ ಸಖಿಯರಿಗೆ ೧

ತುಳಸಿವೃಂದಾವನ ಕಾರಂಜಿ ಥಳಥಳಿಸುವೊ ಗಚ್ಚಿನ ಕಟ್ಟೆ
ಬೆಳಸಿದಶ್ವತ್ಥಗಿಡತಂಪಿನಲಿ ಕುಳಿತು ಮಾತನಾಡೀಗೆಂದನು ೨

ಆತನ ನೋಡುತಲೆ ಭಯವು ಪ್ರೀತಿ ಮೋಹ ನಾಚಿಕೆ ಪಾರಿ-
ಜಾತಗಿಡದ್ಹಿಂದಡಗಿ ನಿಂತು ಆತನಂಗ ನೋಡುತಿಹಳು ೩

ಬಿಸಿಲಿನಲ್ಲಿ ದಣಿದು ಭಾಳ ಹಸಿದು ಬಳಲಿ ಬಂದಿರೀಗ
ಕುಶಲದಿಂದ ಕುಳಿತೀಗೊಂದು ಮಾತನಾಡಬಹುದೀಗೆಂದರು ೪

ದಾವ ದೇಶದ ಜನರು ನಿಮ್ಮನು ನೆನಸುವೋರೊ ಮನಸಿನಲ್ಲಿ
ನೀವು ಬಂದ ಕಾರಣ ನಿಮ್ಮ ನಾಮವೇನೆಂದು ಕೇಳಿದರಾಗ ೫

ಪುರುವಂಶದಲಿ ಪುಟ್ಟಿದ್ದಹಸ್ತಿನಾಪುರದ ರಾಜನೆಂಬುವರೆನಗೆ
ಕರೆವೊ ನಾಮ ದುಷ್ಯಂತನೆಂದು ಇರುವ ವಾರ್ತೆ ಹೇಳಿದೆನೆಂದ ೬

ಇಬ್ಬರಿಲ್ಲೆ ಬಂದಿರಿ ಮತ್ತೊಬ್ಬಳಲ್ಲೆ ನಿಂತಿಹುದೇನು
ನಿರ್ಜನದಲಿ ಬರಬಹುದೆಂದೆಬ್ಬಿಸಿ ಕರೆತನ್ನಿರೀಗ ೭

ಬಾರೆ ಬಾ ಶಕುಂತಲೆ ನಿನ್ನ ಭಾರಿ ರಾಜರು ಕರೆಯುತಾರೆ
ನೀರೆ ನೀನು ಮಾಡಿದ ಪುಣ್ಯಫಲವು ಫಲಿಸಿತೆಂದರಾಗ ೮

ನಡುಗ ಹಾವಭಾವಗಳಿಂದ ತೊಡೆ ಭಾವು ನಡುಸಣ್ಣ ಚೆಂದ
ಕಡೆಗಣ್ಣಿನ ವಾರೆನೋಟದಿಂದ ಬಳಿಸೋಳು ಪ್ರೀತಿ ಮೋಹಾನಂದ ೯

ಮುಂದೆ ಬಂದು ಕುಳಿತನು ಮುಂಗಾರ ಮಿಂಚಿನಂತ್ಹೊಳೆಯುತಲಿ
ಇಂದು ಈಕೆ ಲಕ್ಷಣ ನೀಶ್ಯಾನಂದನೆಯಂತೆ ತೋರುವಳೆಂದ ೧೦

ಯಾರಮಗಳು ಈಕೆ ಈ ಕುಟೀರದಲ್ಲಿ ಬೆಳದಳ್ಯಾಗೆ ನೀರೆ ನೋಡಲು
ಮಾರನ ರತಿಯೊ ಮಾತಿನರಗಿಳಿ ಚೆನ್ನದ ರತಿಯೊ ೧೧

ವಿಶ್ವಾಮಿತ್ರ ಮೇನಕೆಯಲ್ಲಿ ಹುಟ್ಟಿದಾಣಿಮುತ್ತಿನ ಗೊಂಬೆ
ಎತ್ತಿ ತಂದು ನಮ್ಮ ಋಷಿಗಳು ಪುತ್ರಿಯಂತೆ ಸಾಕಿದರಿವಳ ೧೨

ರಾಜಪುತ್ರಿ ರಾಜರ ಮಡದಿ ಆಗಬಹುದೀಗರಸುಮಲ್ಲಿಗೆ
ರಾಜಿಯಿಂದ ರಮಿಸ ಬಹುದೀಲಾಜಾ ವಚನ(?) ಪ್ರತಿಮೆಯನ್ನು ೧೩

ಸಂದೇಹಡಗಿ ತನ್ನ ಮನಸು ಹೊಂದಿತ್ತು ನಿಮ್ಮಲ್ಲಿ ಬಂದು
ಸಿಂಧುಸುತನ ಸೋಲಿಸೋಮುಖ ಎತ್ತೊಂದು ಮಾತನಾಡೀ-
ಗೆಂದನು ೧೪

ಕಂತುಪಿತ ಭೀಮೇಶಕೃಷ್ಣ ಕರುಣದಿಂದ ಮಾಡಿಸಲ್ವಿವಾಹ
ಸಂತೋಷದಿ ಸಾಮ್ರಾಜ್ಯವಾಳಿ ಸಂತಾನವನು ಪಡೆ ನೀನೆಂದ ೧೫

ವಚನ—೨೪

ನೋಡು ಮಾತಾಡಿಲ್ಲಿ ಕೂಡು ಕುಂತಲೆ ನೀನು
ಬೇಡು ಬೇಕಾದಿಷ್ಟ ನೀಡುವೆನು ನಾ ನಿನಗೆ
ಆಡಿದ ಮಾತು ತಪ್ಪುವನಲ್ಲ ನಾನೀಗ
ಮಾಡದಾಲೋಚನೆಯ ಮಾಡಿಕೊ ಎಂದೆನಲು
ಆಡಿದರಸನ ಮಾತು ಕೇಳಿ ಶಕುಂತಲೆಯು
ತಾನಾಡುತಿರುವಂಥ ಮಾತುಗಳು ಮತ್ತೇನೆಂದರೆ.

ಧ್ವನಿ—೨೫

ನೀಡೊ ನೀಡೊ ನೀಡ್ವವರವ
ಆಡಿದ್ವಚನ ಮಾಡೊ ಸತ್ಯ ಪ

ತಾತನಿಲ್ಲದ ವ್ಯಾಳ್ಯದಲ್ಲಿ ಆತುರದಲಿ ಬಂದು ನೀವು
ಮಾತುಕೊಟ್ಟು ಮದುವೆಯಾದರೆ ತಾತ ಬಂದೇನೆಂಬುವರೆನಗೆ ೧

ನಿನ್ನವೇಷಯಿಂದಲವರಾ ಘನ್ನ ತಪವ ಮಾಡುವರು
ಎನ್ನ ಕರೆತಂದು ವರ ಪ್ರಸನ್ನನಾದನವರಿಗ್ಗುರಿಯು ೨

ರಂಭೆರತಿ ಗೊಂಬೆಯನ್ನು ಹಂಬಲಿಸುವುದ್ಯಾತಕಿನ್ನು
ಕುಂದು ಬರುವುದೆನಗಿನ್ನೇನು ನಂಬಲಾರೆ ನಿಮ್ಮನೆ ನಾನು ೩

ಮುಚ್ಚುಮರೆಯ ಮಾತಿದೇನು ಮೆಚ್ಚಿಬಂದೆ ನಿನಗೆ ನಾನು
ಇಚ್ಛೆಪೂರ್ಣ ಮಾಡುವೆ ಎನ್ನಚ್ಛದರಸಿಯಾಗೆ ನೀನು ೪

ಸ್ವಚ್ಛವಾದ ಚಂದ್ರಮನಂತೆ ಮುಚ್ಚಲೋಚನೆ ಮುಖಬಾಯಿಂದ
ಅಚ್ಚುಮುತ್ತು ಉದುರುವಂತೆ ಅಪೇಕ್ಷೆಯ ಮಾತಾಡಿದಳು ೫

ಪಟ್ಟದರಸಿ ಸುತಗೆ ರಾಜ್ಯಪಟ್ಟಗಟ್ಟೋರೀಲೋಕದೊಳಗೆ
ಎನ್ನೊಟ್ಟಿಲ್ಹುಟ್ಟಿದ ಸುತಗೆ ಅರಸು ಪಟ್ಟಗಟ್ಟೋದೆ ಇಷ್ಟವೆನಗೆ ೬

ಸರ್ಪವೇಣಿ ನಿನ್ನ ಮಾತಿಗೆ ಒಪ್ಪಿಕೊಂಡು ವಚನವೀಗ
ಕೊಟ್ಟೆ ನಿನ್ನ ಸುತಗೆ ಅರಸುಪಟ್ಟಗಟ್ಟುವೆ ನಿಜವೀಗೆಂದನು ೭

ಅಂಗುಲಿಯಲ್ಲಿಟ್ಟ ವಜ್ರದುಂಗುರವನು ತೆಗೆದು ಸತಿಯು
ಮುಂಗೈ ಹಿಡಿದು ಮುದ್ರಿಕೆಯಿಟ್ಟ ಅಂಗನೆಗಾಲಿಂಗನೆ ಕೊಟ್ಟ ೮

ಚಂದದಿಂದ ಸತಿಯುಕೂಡ ಗಾಂಧರ್ವ್ವಾಹ ಮಾಡಿಕೊಂಡು
ಅಂದು ಸುರರು ಮಂತ್ರಾಕ್ಷತೆ ಮಂದಾರ ಮಲ್ಲಿಗೆ ಕರೆದರಾಗ ೯

ಕಟ್ಟಿ ಕರಿಮಣಿ ಮಂಗಳಸೂತ್ರ ಬುಕ್ಕಿಟ್ಟು ಗಂಧ ಕುಂಕುಮ
ಕುಸುಮ
ಹಚ್ಚಿದರನಸೂಯ ಪ್ರೇಮದ ಮುತ್ತಿನಾರತಿ ಬೆಳಗಿದರಾಗ ೧೦

ಹಣ್ಣು ಹಾಲು ಸಕ್ಕರೆ ಜೇನುತುಪ್ಪ ಘೃತವ ತಂದು ಜ್ಯಾಗ
ಇಟ್ಟುಭೂಮ
ಉಣಿಸಿ ವೀಳ್ಯ ಕೊಟ್ಟುಸಾಡ್ಯವ ಸುತ್ತಿದರಾಗ ೧೧

ಗಿಡವ ನೋಡಿ ಬರುವೆವೆನುತ ನಡೆದರನಸೂಯ ಪ್ರೇಮದ ತಾವು
ಮಡದಿ ಸಹಿತ್ವಿಹಾರ ಮಾಡುತ ಪಡೆದು ಗರ್ಭವ ಧರಿಸಿದಳಾಗ ೧೨

ನಾನು ಸ್ವಲ್ಪದಿವಸದಲ್ಲಿ ಆನೆವತಿಗೆ ಕರೆಸಿಕೊಂಬೆ ನೀನು
ಭೀಮೇಶಕೃಷ್ಣಸಂಪ್ರಿಧ್ಯಾನ ಮಾಡುತಿರು ಇಲ್ಲಿಂದ ೧೩

## ವಚನ—೨೬

ಸತಿಪತಿಯುರಿಬ್ಬರೊಂದಾಗಿ ಸಂತೋಷದಲಿ
ಅತಿಹರುಷದಿಂದ ಕುಳಿತಿರುವಂಥ ಕಾಲದಲಿ
ಗೌತಮಿಯೆಂಬೊ ಮುದುಕಿ ಮುಂದಕೆ ಬಂದು ಕೂಗುತಿರೆ
ಸತಿಯುರಿಬ್ಬರು ಸಾಗಿ ನಡೆದರಾಕ್ಷಣದಲ್ಲೆ
ಪತಿಯು ಬಿಟ್ಟಿದ್ದು ಕಾಲೇಳದೆ ಶಕುಂತಲೆಯು
ಅತಿ ದುಃಖದಿಂದ ತಿರುತಿರುಗಿ ನೋಡುತಲಿರಲು

ಪ್ರೋಗುತಲಿದ್ದ ಸತಿಯು ನೋಡುತಲಾಗ ಆ ರಾಜ
ಭಾಕ್ಷಿತದಿಂದ ಕರೆದು ತಾನಾಡುತಿರುವಂಥ ಮಾತುಗಳು
ಮತ್ತೇನೆಂದರೆ—

## ಧ್ವನಿ—೨೭

ಬಾರೆ ಬಾ ಬಾ ಮುಖಿಯೇ ಚಂದ್ರಮುಖಿ
ಬಾರೆ ಬಾ ಬಾ ಮುಖಿ ಪ.

ಎನ್ನ ಬಿಟ್ಟು ನೀ ಇನ್ನೆಲ್ಲ್ಹೋಗುವಿ
ನಿನ್ನಗಲಿ ನಾ ಇನ್ನ್ಹ್ಯಾಂಗಿರಲೆ ೧

ಪಟ್ಟದರಸಿಯು ಕನಿಷ್ಟಳ ಮಾಡಿ
ಅಷ್ಟ್ಟರೊಳಗೆ ನಿನ್ನ ಶ್ರೇಷ್ಠಳೆನಿಸುವೆನು ೨

ಭರಣ ಭಂಡಾರವ ನಿನಗೊಪ್ಪಿಸುವೆ ನಾ
ಕರುಣದಿಂದ ಕಣ್ಣೆತ್ತಿ ನೋಡೆನ್ನನು ೩

ಸರ್ಪವೇಣಿ ಕಂದರ್ಪನ ಶರವು
ಎನ್ನ್ಹೊಟ್ಟೆಯೊಳಗೆ ತಾ ನೆಟ್ಟು ಬಾಧಿಸುತ್ಹೋದೆ ೪

ಕಾಮ ಮೋಹಗಳಿಂದ ಕಲಸಿದನ್ಯಾಕೊ
ಭೀಮೇಶಕೃಷ್ಣ ತಾ ಬಿಡಿಸಿದನ್ಯಾತಕೊ ೫

## ವಚನ—೨೮

ಮಾಧವಿ ಮನೆಗ್ಹೋಗುತಿರೆ ತಡೆಯದಲೆ ಸಂತಾಪ
ಕಡುಕೋಪದಿಂದ ಗೌತಮಿ ಬಯ್ದು ಶಪಿಸುತ
ಧಡಧಡನೆ ಕಣ್ಣುದಕ ಉಕ್ಕೇರಿ ಉದುರುತಿರೆ
ನಡೆದ ನಡುಮಾರ್ಗದಲಿ ಬಂದ ವಿದೂಷಕನು
ಒಡಗೊಂಡು ಮೊರೆಸಹಿತ ಮಾತನಾಡುವುದು ಮತ್ತೇನೆಂದರೆ—

## ಧ್ವನಿ—೨೯

ಮಾತೆ ಕರೆದಳೀಗ ಮನೆಗೆ ಬಾರೊ ಭೂಪತಿ
ಯಾತಕಿಷ್ಟು ತಡವು ಮಾಡಿರಿ ಮಹೀಪತಿ ಪ.

ಇತ್ತ ಬ್ಯಾಟಿಗೆನುತ ಬಂದು ಇಲ್ಲಿನಿಂತ ಕಾರಣೇನು
ಹೆತ್ತ ತಾಯಿ ನಿಮ್ಮ ನೆನಸತ್ಯಂತ ಕ್ಲೇಶದಿ
ಭಕ್ತಿಯಿಂದ ಬ್ರಾಂಬರಿಗೆ ಸಂತರ್ಪಣೆಯ ಮಾಡುವೋಳು
ಸತ್ಯವಂತರು ನೀವು ಸಾರಿ ಬನ್ನಿರೆಂದನು ೧

ಅಚ್ಚ ವಜ್ರದ್ದರಳಿನಂಥ ಹೆಚ್ಚಿನ ಪದಾರ್ಥ ಕಂಡು ಚಿ-
ತ್ತ ಚಂಚಲವಾಗಿ ಭಾಳ ಚಿಂತೆಲಿದ್ದೆನು
ಮತ್ತೆ ನಾನು ಹೋಗಿ ಆ ಪದಾರ್ಥ ನೋಡಿ ಬರುವೆನರಿಯು
ಅತ್ತ ಕಳಿಸ್ದಿ ದೂಷಕನ್ನ ತಿರುಗಿ ನಡೆದನು ೨

ಯದುಕುಲೇಶ ದೇವಕ್ಕಿಯಲಿ ಜನಿಸಿದ ಘೀನೇಶಕೃಷ್ಣಗೆ
ಕನಕಕೋಟಿರತ್ನದಾ ದಭಿ?)ಷೇಕ ಮಾಡುವೆ
ಎಣಿಕೆಯಿಲ್ಲದ್ದಣವ ದ್ವಿಜರಿಗುಣಿಸಿ ದಕ್ಷಿಣೆ ಕೊಡುವೆನೊ ಹರಿಯೆ
ಎನ್ನ ಸತಿಯನು ಎನಗೆ ತೋರೆನುತ ನಡೆದನು ೩

### ವಚನ—೩೦

ಒದಗುತಲಿ ಮರುಗುತಲಿ ಕೊರಗಿ ಸುಮ್ಮನೆ ಬಿದ್ದ
ಕೊರಗುತಲಿ ಕಂದಿ ಕುಂದಿರುವೊ ಶಕುಂತಲೆಯ
ಪರಮ ಪ್ರೀತಿಂದ ಅನಸೂಯ ಪ್ರೇಮದ ನೋಡಿ
ಕರುಣದಿಂದೆತ್ತಿಕೊಂಡಾಗ ಸಮಾಧಾನಪ್ರದ. ಮತ್ತೆನೆಂದರೆ-

### ಧ್ವನಿ—೩೧

ಬಾರೇ ಬಾರಮ್ಮ ನಿನ್ನರಾಯನ್ನ ತೋರುವೆನು
ಕಳವಳಿಸುವುದ್ಯಾಕೆ ಬಾರೆ ಬಾರಮ್ಮ ಪ.

ಮಾನಿನಿಯ ಎತ್ತಿ ಮಾಲಿನೀತೀರಕೆ
ಮಾವಿನ ಗಿಡತಂಪಲಿ ಮಲಗಿಸಿದರು ೧

ಹಾಸುಬಂಡೆಯಲ್ಲಾಡುಸುತ ಮಲ್ಲಿಗೆ
ಬೀಸುತ ಗಾಳಿ ಪನ್ನೀರು ತಂದ್ಹಾಕುತ ೨

ಇಂದು ವದನೆಗರವಿಂದದೆಲೆಗಳ
ತಲೆಯ ಆಭರಣ ಚೆಂದದಲಿ ಮಾಡಿಟ್ಟರು ೩

ಕಮಲದೆಲೆಯ ಕಂಕಣ ವಂಕಿ ದ್ವಾರ್ಯವು
ಸರಿಗೆ ಸರವು ನಾಗಮುರಿಗೆ ಮಾಡಿಟ್ಟರು ೪

ಹುಡುಕುತ ಮಿಡುಕುತ ಹುಡುಗ್ಯೇರ ನೋಡುತ
ಧಡಧಡ ಮಾಲಿನೀದಡಕೆ ತಾ ಬಂದನು ೫

ರಾಜರೆ ನಿಮ್ಮ ರಾಣಿಗೆ ನಾವು ಮಾಣಿಕ್ಯ-
ವ್ವಸ್ತ್ರವ ಮಾಡಿ ತಂದಿಟ್ಟಿವು ೬

ಋಷಿಗಳ ಮಕ್ಕಳಿಗ್ಗುಸುರೆಲೆ ಭರಣವೆಂದ-
ರಸು ನೋಡುತ ನಸುನಗುತ ಮಾತಾಡಿದ ೭

ತೊಡೆಯ ಮ್ಯಾಲಿಟ್ಟ ಮುಡಿಜಿವ್ವರಿಸುತ
ಮಡದಿ ನಿನಗೆ ಸಂತಾಪ ಬ್ಯಾಡೆಂದನು ೮

ಗಲ್ಲವ ಪಿಡಿದು ಫುಲ್ಲನೇತ್ರದ ಜಲ
ಶಲ್ಯದ ಸೆರಗಿನಿಂದ್ವರೆಸಿ ಮುದ್ದಿಸುತ ೯

ಆನೆ ಕುದುರೆ ಅಂದಣ ಪಲ್ಲಕ್ಕಿಯು
ನಾನು ಕಳಿಸಿ ನಿನ್ನ ಕರೆಸಿಕೊಂಬುವೆನೆಂದ ೧೦

ಭೀಮೇಶಕೃಷ್ಣನ ದಯದಿಂದೆಲ್ಲರು
ಕ್ಷೇಮದಿಂದಿರಿಯೆಂದರಸುತಾನ್ಹರಸಿದ ೧೧

ವಚನ—೩೨

ಪತ್ನಿಸಹಿತ ರಾಜ ಅರ್ಥಿಂದ ಕುಳಿತಿರಲು
ಅತ್ತ ಕಾಡಾನೆ ಒದರುತ್ತ ಬರುತಿರಲಾಗ
ಇತ್ತ ಕುಟೀರಕ್ಕೆ ಕಳಿಸಿ ಶಕುಂತಲೆಯ
ಮತ್ತೆ ಬಂದಾಗ ತನ್ನ ಸೇನಾನಾಯಕರ ಕೂಡಾಡೊ
ಮಾತುಗಳು ಮತ್ತೇನೆಂದರೆ-

ಧ್ವನಿ—೩೩

ಸಾಕುಸಾಕು ಸಾಕು ಬ್ಯಾಟಿ ಸಾಕು
ಸುಮ್ಮನ್ಹೋಗಿರೊ ಮನೆಗೆ ಪ.

ಬ್ಯಾಟೆಯಿಂದ ಬಲವು ನಮಗೆ ಕೀರ್ತಿ ಬರುವ್ರೋದಿನ್ನು ನಿಮಗೆ
ಕಾಟವು (ಟಿಯು ?)ಕಾಡ್ಹಂದಿ ಕಾಡಾನೆಭಯವು ಭಾಳ ಜನಕೆ ೧

ಸರೋವರವನು ಹೊಕ್ಕು ನೀರು ಕಲಕು ಮಾಡಿ ಕೆಡಿಸುತಾವೆ
ದುಡುಕಿನಿಂದ ಬಂದ ಜನರ ಕೆಡವಿ ನುಗ್ಗು ಮಾಡುತಾವೆ ೨

ಕಲಕುನೀರು ಆದರೇನು ಕಲಹವೇನೊ ಅವರ ಕೂಡ
ಹಲವು ಜೀವರ ಕೊಲ್ಲುವಂಥಾ ಚಲವು ಏನಿದು ಇನ್ನು ನಿಮಗೆ ೩

ಜಿಂಕೆಹಿಂಡು ಮರಿಗಳ ತಮ್ಮ ಕೊಂಕಳಲ್ಲೆ ಅವಚಿಕೊಂಡು
ಟೊಂಕ ಹೊಟ್ಟೆ ಮಾಂಸ ಮುದ್ದೆಮಾಡಿ ಮಲಗಿಸುತಾವೆ ದೇಹ ೪

ಬೆನ್ನು ಬೆನ್ನುಹೊಂದಿಕೊಂಡು ಕಣ್ಣುಮೋರೆಯೆತ್ತಿಕೊಂಡು
ಸುಮ್ಮನೆ ಸುತ್ತ ನೋಡುತಾವೆ ನಿಮ್ಮ ಭಯಕಂಜೋಡುತಾವೆ ೫

ಅಡವಿ ಆನೆ ಹೊಡೆವರೀಗ ನಡೆದಾವು ಋಷಿ ಆಶ್ರಮಕ್ಕೆ
ತಡವಲವರು ತಡೆಯದಗ್ನಿಕಿಡಿಯು ಮಳೆಯು ಸುರಿಸೋರಿನ್ನು ೬

ಸೂರ್ಯಕಾಂತಿಮಣಿಯು ತಾನು ಸುಖವ ಕೊಡುವುದು ನೇತ್ರಗಳಿಗೆ
ಸೂರ್ಯನೆದುರು ಹಿಡಿದರಗ್ನಿ ಸುರಿಸದೆ ತಾ ಬಿಡುವುದೇನೊ ೭

ಅರಣಿಯೊಳಗಿನಗ್ನಿಯಂತೆ ಹೊರಗೆ ತೋರದಿರುವುದಿನ್ನು
ಪರಮ ಬಾಧೆಬಡಿಸಲವರು ಸುರಿದು ಭಸ್ಮ ಮಾಡುವ್ರೋರು ೮

ಬಾಣದ್ಹಗ್ಗ ಕಡಿದುಬಿಡಿರಿ ಈ ಸಾಣೆಹಿಡಿದಾಯುಧವು ಕತ್ತಿ ಘಾಳಿ
ದಣಿದಾನೆ ಮಲಗಿಕೊಳ್ಳಿ ಈ ಪ್ರಾಣಿಗಳಿಲ್ಲಿ ಸುಖದಿಂದಿರಲಿ ೯

ಬುದ್ಧಿ ಹೇಳಿ ಸರ್ವರಿಗೆ ಬಂದಿದ್ದ ಜನರ ಕೂಡಿಕೊಂಡು
ಮುದ್ದು ಶಕುಂತಲೆಯು ನೆನೆಸುತಿದ್ದ ತನ್ನ ಮನಸಿನೊಳಗೆ ೧೦

ಸಂತೋಷದಿ ದುಷ್ಯಂತದೊರೆ ಶಕುಂತಲನ್ನ ನೆನೆಸುತಾಗ
ದಂತಿಪುರದಿ ಭೀಮೇಶಕೃಷ್ಣನ ಅಂತರಂಗದಿ ಸ್ಮರಿಸುತಿದ್ದ ೧೧

ವಚನ—೩೪

ಅತ್ತ ಅರಸ್ಹೋಗಿ ತನ ಪತ್ನಿಯನು ನೆನೆಸುತಿರೆ
ಇತ್ತ ಶಕುಂತಲೆಯು ವಿರಹತಾಪಗಳಿಂದ
ಮತ್ತೆನ್ನ ಪತಿಯನೆ ಕಾಂಬುವುದ್ಹ್ಯಾಗೆಂದು
ತಪ್ಪಿಸ್ಮೃತಿ ಮೈಯಲ್ಲಿ ಬಿದ್ದಿರುವೊ ಕಾಲದಲಿ
ಸತ್ಯವಂತರು ದೂರ್ವಾಸರು ಬಂದಾಗ

ಮುಚ್ಚಿ ಕಣ್ತೆಗೆಯದಲೆ ಕುಳಿತ ಕುಂತಲೆ ನೋಡಿ
ಅತ್ಯಂತ ಕೋಪದಿಂದಾಗ ಮಾತಾಡುವುದು ಮತ್ತೇನೆಂದರೆ—

### ಧ್ವನಿ—೩೫

ಗರುವೇನೆ ನಿನ್ನಹಂಕಾರವೇನಿದು ಭಾಳ ಗರುವೇನೆ
ಗರುವೇನೆ ನಿನ್ನಹಂಕಾರವೇನಿದು ನಮ್ಮ ಪರವ್ಯಿಲ್ಲದಿರುವೋದು
ತರವೇನೆ ಇಂಥ ಗರುವೇನೆ ಪ.

ಗೋಡೆ ಮ್ಯಾಲ್ಬರೆದಂಥ ಆ ಗೊಂಬೆಯಂದದಲಿ ಮಾ-
ತಾಡದೆ ಕುಳಿತಿದ್ದೀ ಮೂಢಮತಿಯೆ ನಿನ್ನ ೧

ಬಂದಮುನಿಗಳಿಗೆ ವಂದಿಸಿ ಆಸನ
ತಂದು ಹಾಕದಲಿಂಥ ಮಂದಮತಿಯೆ ನಿನ್ನ ೨

ಆದರದಿಂದೆನ್ನ ಪೂಜೆ ಮಾಡದೆ
ಮದವೇರಿದ ಗಜದಂತೆ ಮಲಗಿ ಮಾತಾಡದ ೩

ಮಾಗಿದ ಫಲಪುಷ್ಪ ಮುಂದೆ ತಂದಿಡಪ್ಹಾಗ
ಸೋಗಿನ ಗೊಂಬ್ಯಂತೆ ಸುಮ್ಮನೆ ಕುಳಿತಿದ್ದಿ ೪

ಸಿಟ್ಟಿನ ಮುನಿಯೆಂಬೋದಿಷ್ಟು ನೀ ಅರಿಯೇನೆ
ಕೊಟ್ಟುಬಿಡುವೆ ಶಾಪ ಕಟ್ಟಿಕೊ ಸೆರಗಲಿ ೫

ಶರತವೇನೆನ್ನಲ್ಲಿ ಗುರುತ ನೀ ಅರಿಯೇನೆ
ದೊರೆ ತಾನು ನಿನ್ನೀಗ ಮರೆತು ಬಿಡಲಿ ಎಂದ ೬

ಭೀಮೇಶಕೃಷ್ಣನ ಭಕ್ತರೆಂದರಿಯದೆ
ಪಾಮರನಂತಿದ್ದಿ ಪಂಥಗಾರುತಿ(ರ್ತಿ ?) ನಿನ್ನ ೭

### ವಚನ—೩೬

ಕೊಟ್ಟು ಶಾಪವನು ಮುನಿ ತಟ್ಟನೆ ತಿರುಗುತಿರೆ
ಅಷ್ಟೊತ್ತಿಗನಸೂಯ ಪ್ರಿಯಂವದ ಬಂದು ಕೇಳುತಿರೆ
ಗಟ್ಟ್ಯಾಗಿ ಬಿದ್ದು ಮುನಿಪಾದಕ್ವಂದನೆ ಮಾಡಿ
ಹಸ್ತಗಳ ಮುಗಿದ್ಹೇಳಿಕೊಂಬೊ ಮಾತುಗಳು ಮತ್ತೇನೆಂದರೆ—

## ಧ್ವನಿ—೩೭

ಬಿಡು ಬಿಡು ಬಿಡು ಮುನಿ ಕೋಪವನು
ಕೊಡು ಕೊಡು ಕೊಡು ಉಶ್ಶಾಪವನು ಪ.

ಗಂಡ ಬಿಟ್ಹೋದರೆ ಕೆಂಡದಂಥ ಜ್ವರ
ಮಂಡಿ ಎತ್ತದೆ ಮಲಗಿದ ಮಗಳನು ನೋಡಿ ೧

ಎಚ್ಚರವಿಲ್ಲದೆ ಹುಚ್ಚರಂದದಿ
ಮುಚ್ಚಿ ಮುಸುಕು ತೆಗೆಯದೆ ಮಲಗಿರುವಳು ೨

ಅರಸಿನಲ್ಲಿ ಮನ ಸ್ಮರಿಸಿಬಿಟ್ಟವಳಂತಃ-
ಕ್ಕರಣ ಮರೆಸಿಬಿಡುವರೆ ೩

ಹಿಂದೆ ಮಾಡಿದ ಪಾಪಪುಣ್ಯದ ಫಲವ
ಮುಂದೆ ಉಂಬೋದು ಮುನಿಗಳಿಗರಿಕಿಲ್ಲವೆ ೪

ಆಡೋಮಕ್ಕಳ ನೋಡಿ ಆಲಿಸಿ ಲಾಲಿಸಿ
ನೋಡುತ ಮುನಿ ಮಾತಾಡಿದನಾಗ ೫

ಪಟ್ಟದರಸು ತಾನಿಟ್ಟುಂಗುರವು
ದೃಷ್ಟಿಗೆ ಬೀಳಲಾಕ್ಷಣ ನೆನಪಾಗಲಿ ೬

ಕನಕದುಂಗುರ ಕಣ್ಣಿಗೆ ಬಿದ್ದಾಕ್ಷಣ
ಘನ ಪತಿವರತಿಯು ನೆನಪಿಗೆ ಬರಲಿ ೭

ಅಂಗನೆ ಅಂಗುಲಿ ಉಂಗುರ ಆ ದೊರೆ
ಕಂಗಳಿಂದಲಿ ನೋಡಿ ಕರೆದು ಮನ್ನಿಸಲಿ ೮

ಭೀಮೇಶಕೃಷ್ಣನ ದಯದಲಿ ರಾಜ್ಯವ ಆ-
ಳೋ ಮಗನ ಪಡೆದರಸನ ಕೂಡಲಿ ೯

## ವಚನ—೩೮

ಮುನಿ ಸಾಗಿ ಪೋಗುತಿರೆ ಆ ಕಣ್ವ ಋಷಿಗಳು
ಘನವಾದ ತಪಸು ಮಾಡುತಲಿ ವರಗಳ ಪಡೆದು

ಮನೆಗೆ ಬರುವಂಥ ಮಾರ್ಗದಲೊಂದು ಮನದೊಳಗೆ
ಬದಲು ಆಲೋಚನೆಯು ಹುಟ್ಟಿ ಮಾತಾಡಿ ಕೊಂಬುವುದು
ಮತ್ತೇನೆಂದರೆ–

## ಧ್ವನಿ—೩೯

ಯಾಕೋ ಎನ್ನ ಮನಸು ವ್ಯಾಕುಲವಾಗ್ಯದೆನ್ನ ಕೂಸು
ಹ್ಯಾಗಿರುವುದೊ ತಿಳಿಯದು
ಗೋಕುಲವರಸು ಹರಿ ಗೋವರ್ಧನೋದ್ಧಾರ
ಸಾಕಿ ಸಂರಕ್ಷಣೆಯ ಮಾಡಲಿನ್ನು ಪ.

ಬಲಗಣ್ಣು ಬಲಹುಬ್ಬು ಬಲಭುಜವು ಹಾರುತಪೆ
ಒಲವು ಬಂದಿರಬಹುದು ಎನ್ನ ಮಗಳಿಗೆ
ಬಲವಂತನಾದ ರಾಜನು ಬಂದು ಎನ್ನ ಮಗಳ
ಬಲಪಾಣಿ ಪಿಡಿದು ಮದುವ್ಯಾದನೇನೊ ೧

ಶಕುನ ನೋಡಿದರೆ ಸುಮುಖವಾಗಿ ಬರುವುದು
ಸಕಲ ಸೌಭಾಗ್ಯಕಧಿಕಾರಿಯೆಂದು
ಶಿಖರದಂಥ ಮಗನ ಪಡೆವಳಂ[ತೆ] ತೋರುವುದು
ಸುಖವು ದೂರಾಗಿ ಕಾಂಬೋದು ಮಗಳಿಗೆ ೨

ದೂರ ಬರುತಿರಲಿಕ್ಕೆ ದಾರಿಯನು ನೋಡುತೆ–
ದುರಿಗೆ ಬಂದು ತಾ ಕರವ ಪಿಡಿದು
ಭಾರವಾದ ಗಂಟ ಇಳಿಸಿಕೊಂಡೆನ್ನ ಕು–
ಟೀರಕ್ಕೆ ತಾನು ಕರದೊಯ್ವಳೀಗ ೩

ಹಸ್ತ ಬಂದಿರೆಂದು ಹಣ್ಣು ಹಾಲನು ಕೊಟ್ಟು
ಎತ್ತಿ ಚಾಮರದ ಗಾಳಿಯ ಬೀಸುತ
ಅಪ್ಪಯ್ಯ ನೀವೀಗ ದಣಿದು ಬಂದಿರೆಂದು
ಒತ್ತುತಿದ್ದಳು ಎನ್ನ ಪಾದವನ್ನು ೪

ತಾತ ಬಂದಿರಾ ಎಂದು ಮಾತನಾಡಿಸುವಳು
ಪ್ರೀತಿಯಿಂದೆನ್ನ ನೋಡ್ಹಿಗ್ಗುವಳು
ಭೀತಿ ಭಯವೇನೊ ಭೀಮೇಶಕೃಷ್ಣನೆ ಬಲ್ಲ
ಯಾತಕೆನಕಂದ ತಾ ಬಾರದಿದ್ದಾಳೊ ೫

## ವಚನ—೪೦

ಮನೆಗೆ ಬಂದ ಮುನಿಯು ಹೆಗಲ ಗಂಟನು ಬಿಸುಟು
ಮಲಗಿದ್ದ ಮಗಳ ನೋಡುತಲಿ ಮನ ಮರುಗುತಲಿ
ಯುಗಳಲೋಚನೆಯಿಷ್ಟು ಭಯ ಚಿಂತೆ ಯಾತಕೆನುತ
ಮಗಳ ಮನ್ನಿಸಿ ಮಾತನಾಡಿಕೊಂಬುವುದು ಮತ್ತೇನೆಂದರೆ—

## ಧ್ವನಿ—೪೧

ಏಳು ಏಳಮ್ಮಯ್ಯ ಏಳೆನ್ನ ಗಿಳಿಯೆ
ಏಳು ಏಳಮ್ಮಯ್ಯ ಹೇಳು ಮಾಜದೆ ಮಾತುಗಳ ಶಕುಂತಲೆಯೆ ಪ.

ಮಂದಗಮನೆ ಮಲಗಿದ ಕಾರಣೇನು
ಸಂದೇಹ್ಯಾತಕೆ ಎನ್ನ ಮುಂದ್ಹೇಳದೇನು ೧

ತಂದೆ ಕೇಳು ಕರಿಪುರದೊರೆ ಬಂದು ತಾನು
ಕಂಡು ಎನ್ನನು ಮಾಡಿಕೊಂಡು ನಡೆದನು ೨

ಸಂತೋಷವಾಯ್ತೇ ಶಕುಂತಲೆ ಎನಗೆ ದು-
ಷ್ಯಂತರಾಜನ ನೀ ಏನಂತ(ನೆಂದು?) ಕೇಳದೆಯೆ ೩

ಕರಿಪುರದಲಿ ಸಿಂಹಾಸನದೊರೆಪಟ್ಟ ಎನ್ನ
ಸುತಗಾಗಲೆಂದ್ವಚನವ ಕೊಟ್ಟ ೪

ನಾ ಮಾಡಿದ ತಪಸ್ಸಿಗೆ ಭೀಮೇಶಕೃಷ್ಣ ತಾನು
ಒಲಿದು ಕೊಟ್ಟ ಎನ್ನ ಮನೋಭೀಷ್ಟ ೫

## ವಚನ—೪೨

ಬಸಿರ್ಯೆಂದು ತಿಳಿವ್ದು ಸಿರು ಸೀರೆ ಜರಿಕುಪ್ಪಸವ
ಉಡಿಸಿ ಹಚ್ಚುತಲಿ ಅರಿಷಿಣ ಗಂಧ ಕುಂಕುಮವ
ಉಣಿಸಿ ಮೃಷ್ಟಾನ್ನ ಪರಿಪರಿ ಭಕ್ಷ್ಯ ಪಾಯಸವ
ಬೆರಸಿಮಲ್ಲಿಗೆ ಪಾರಿಜಾತ ಸಂಪಿಗೆ ಹೂವು
ಮುಡಿಸಿ ಮುತ್ತೈದೇರು ಮುದ್ದು ಶಕುಂತಲೆಗೆ
ಸರಸದಿಂದ್ಹಾಡಿ ಪಾಡುತ ಪ್ರೇಮದನಸೂಯ
ಹರುಷದಿಂದಾರತಿಯ ಬೆಳಗ್ಹರಸುತಿದ್ದರಾಗ

### ಧ್ವನಿ—೪೩

ಕೂಸು ಹುಟ್ಟಿತು ಶಕುಂತಲೆಗೆ ಮುದ್ದು ಕೂಸು ಹುಟ್ಟಿತು
ದೇಶಾಧಿಪತಿ ಸಿಂಹಾಸನೇರುವ ದೊರೆಕೂಸು ಹುಟ್ಟಿತು ಪ.

ನವಮಾಸ ತುಂಬಲು ನಾರಿ ಶಕುಂತಲೆ[ಗೆ]
ದಿವಾಕರ ಪ್ರತಿಮೆಯಂತುದಿಸಿದುತ್ತಮ ಸುತ ೧

ಜನಕ ದುಷ್ಯಂತರಾಯನ ರೂಪ ಲಾವಣ್ಯ
ಕನಕ ಪುತ್ಥಳಿಯಂತೆ ಜನಿಸಿದ ಮಗನಾಗ ೨

ಮುಘುವಿಟ್ಟು ಜಾತಕ ಬರೆದು ಋಷಿಗಳೆಲ್ಲ ಎ-
ರೆದು ಮಂತ್ರಾಕ್ಷತೆ ಸುರಿಸುತಾರತಿ ಮಾಡೆ ೩

ಮೂರನೆ ದಿನ ಮೂಬಟ್ಟಲು ಮುದದಿಂದ
ಏಳುದಿನದಿ ಎಳೆ ಕಟ್ಟುಡಿದಾರವಾಗ ೪

ನಾವು ಗೆಪ್ಪಿ ವೀಗೆಂದು ನವದಿನವಲಿ ವೀಳ್ಯ
ಬೀರಿ ಶಾವಿಗೆ ಬೆಲ್ಲದ ಕಡುವು ಮಾಡುಣಿಸುತ ೫

ದಶರಾತ್ರಿ ಮೀರಲು ಎರೆದು ಈರಲು ಮಾಡಿ
ಉಣಿಸಿ ಮೃಷ್ಟಾನ್ನ ಉತ್ತಮ ಪತಿವ್ರತೆಗೆ ೬

ಭೀಮೇಶಕೃಷ್ಣನ ದಯ ಪಡೆಯೆಂದ್ಹರಸುತ
ಭರತರಾಯನೆಂದ್ಹೆಸರನಿಟ್ಟಾಗ ಜೋಗುಳ ಪಾಡಿ ೭

### ವಚನ—೪೪

ದಿನದಿನದಿ ಸೋಮನಂದದಲಿ ಬೆಳೆವಂಥ ಮೊಮ್ಮಗನ ನೋಡುತಲಿ
ಮನದೊಳಗ್ಹಿಗ್ಗುತಾ ಋಷಿಯು ಮುನಿಜನರ ಕೂಡಿ
ಜಾವಳ ಜುಟ್ಟು ಮಾಡುತಲೆ ಘನವಾದ
ಧನುರ್ಬಾಣಗಳ ವಿದ್ಯೆ ಕಲಿಸುತಲಿ
ಖಗ ಮೃಗದ ಬೇಟೆಯಾಡುತಲಿದ್ದನಾ ಬಾಲಕ

### ಧ್ವನಿ—೪೫

ಬಾರೆಲೆ ಬಾ ಬಾ ನರಿಯೆ ಎನ್ನ ಭಾಳ
ಪರಾಕ್ರಮ ನೀನರಿಯೆ ಪ.

ಕರಡಿ ಕಾಡ್ಹಂದಿ ಕಾಡ್ಹುಲಿ ಕೋಣ ಎನ್ನೆ-
ದುರಿಗೆ ಬಂದು ನೋಡೆನ್ನತ್ರಾಣ
ಬಿಡುವೆ ನಾ ನಿನ್ನ ಎದೆಗೆ ಬಾಣ ಬಿ-
ಟ್ಟೊಡೆದ್ಹಾರಿಸುವೆ ನಿನ್ನ ಪ್ರಾಣ ೧

ಸಿಂಹನ ಕಿವಿ ಬಾಲವನ್ಹಿಡಿದು ತಮ್ಮವ್ವಜನ
ಎದುರಿಗೆ ಎಳೆದು
ಬೌವ್ವಬಂದಿತು ನೋಡೆಂದಂಜಿಸುತಲಿ
ಸಂಹಾರವ ಮಾಡುವನದನ ೨

ಅಡವಿಚಿಗರೆ ಗಜ ಆರ್ಭಟಿಸಿ ಬರುವ
ಮೃಗವ ಬೇಟೆಯಲ್ಲೊರೆಸಿ
ಪಡೆದ ಭೀಮೇಶಕೃಷ್ಣನ ದಯವೆಂದು
ನೋಡುತ ಋಷಿಗಳು ಹರುಷದಲ್ಹರಸಿ ೩

ವಚನ—೪೬

ಭಾಳ ಬಲವಂತ ದುಷ್ಯಂತ ರಾಜನ ಸುತನು
ಆಳಬೇಕರಸುತನವೆಂದಾಗ ಮನದಲ್ಲಿ
ತಾವು ಆಲೋಚಿಸುತ ತಾಯಿ ಮಕ್ಕಳ ಕರೆದು
ಹೇಳುತಿರುವಂಥ ಮಾತುಗಳು ಮತ್ತೇನೆಂದರೆ-

ಧ್ವನಿ—೪೭

ತಮ್ಮಯ್ಯ ನೀನ್ಹೋಗಿಬಾರೊ
ನಿಮ್ಮಮ್ಮನ ಕೂಡ ಪ.

ನಿಮ್ಮಯ್ಯನ ಸಿಂಹಾಸನವೇರೊ
ನಮ್ಮೆಲ್ಲರಿಗ್ಹರುಷವನು ತಾರೊ ೧

ಅಜ್ಜನಿನ್ನ ಬಿಟ್ಟು ನಾ ಒಂದ್ಹೆಜ್ಜೆಯಿಡುವೋನಲ್ಲ ಈಗ
ಮುದ್ದುಮೋಹಗಳೆಲ್ಲ ಬಿಟ್ಟೆನ್ನೆಡ್ಹೋಗೆಂಬುವೋದ್ಯಾತರ ಸಿಟ್ಟು ೨

ಮುದುಕ ನಿನ್ನ ಬಿಟ್ಟು ನಾನು ಬದುಕಲಾರೆ ನಿನ್ನೀ ಪ್ರಾಣ-
ಪದಕವೆಂದು ಸಾಕಿದಿಯೆನ್ನ ಸದಾಕಾಲದಿ ಸೇವಿಸುವೆ ನಿನ್ನ ೩

ಮಾತಾಪಿತರ ಕೂಡಿಸ್ಹೋಗಿ ತಾತನ ಸಿಂದಾಸನವೇರೊ ಪ್ರ-
ಖ್ಯಾತನಾಗಿ ಬೆಳೆದು ನೀ ಯಯಾತಿಕುಲಕೆ ಕೀರ್ತಿ ನಡೆಸೊ ೪

ಸತಿಪತಿಯರ ಕೂಡಿಸೊ ನೀ ಪಿತನ ಸಾಮ್ರಾಜ್ಯವ ನೀನಾಳೊ ಶ್ರೀ-
ಪತಿ ಭೀಮೇಶಕೃಷ್ಣನ ಕೊಂಡಾಡೊ ಹಿತದಿಂದಿಲ್ಲಿ ನೀ ತಪಸನೆ
ಮಾಡೊ ೫

## ವಚನ—೪೮

ತಾಯಿ ಮಕ್ಕಳನೊಡಂಬಡಿಸಿ ಮಹಾಮುನಿಗಳು
ಪ್ರೇಮದ ಶಿಷ್ಯನ್ನ ಕರೆದು ಮಾತ್ಹೇಳಿದರು
ಕಾಲ ಎಷ್ಟಾಗಿಹುದು ನೋಡಿಬಾರೆನುತಿರಲು
ಬ್ಯಾಗ ಬಂದಾ ಗಗನ ನೋಡಿ ಮಾತಾಡಿದನು
ಏನು ಹೇಳಲಿ ಮುನಿಯೆ ಕಾಲ ಮಹಾತ್ಮೆಯನು
ಕಾಲಿಲ್ಲದ್ಹೇಳವನ್ನ ಕೂಡ್ಯೊಂದು ಗಾಲಿರಥ
ಏರುವನು ಮ್ಯಾಲಕ್ಕೆ ಘೋರ ತಾಪಗಳಿಂದ
ತಾರೆಗಳನಡಗಿಸುವ ತೃಣ ಜಲವನೊಣಗಿಸುವ
ಅರವಿಂದನೆಂಬೊ ಸಖ ಅವನ ನೋಡ್ಹಿಗ್ಗುವನು
ಕ್ರೂರಮನುಜರು ಮ್ಯಾಲಕ್ಕೇರುವೊ ಕಾಲವಿದು
ನಾ ತಿರುಗಿ ನೋಡುತಿರೆ ಮತ್ತೊಬ್ಬ ಮಹಾಪುರುಷ
ವನಗಳಿಗೆ ದನಗಳಿಗೆ ಜನಗಳಿಗೆ ಮನಗಳಿಗೆ
ತಮುವ ಕೊಡುವಂಥ ತಾರಾಕಾಂತ ಗುಣವಂತ
ಬಲವಂತ ಬಲು ಪುಣ್ಯವಂತ ಪ್ರಭು ಇರುವ-
ನೀ ಜಂಬೂದ್ವೀಪಕ್ಕೆ ದೀಪದಂತೀಗ
ಪರಮ ಧಾರ್ಮಿಕದೂರಿಗೀಳಿವಂಥ ಕಾಲವಿದು
ಅವನ ಸಖ ಕುಮುದನೆಂಬುವನು ಮುಖ ಮುಚ್ಚುವನು
ಇದು ಒಂದು ಕಾಲಮಹಿಮೆಯು ಕಂಡೆ ನಾನೀಗ
ಗಗನ ಕೆಂಪಾಗಿಹುದು ಖಗಪಕ್ಷಿ ಕುಕ್ಕುಟವು
ಕೂಗುತಲಿ ಓಡ್ಯಾಡುವುದು ಕಂಡುಬಂದೆನೆನಲು
ಸುಗುಣ ಶಿಷ್ಯನ ಮಾತು ಕೇಳಿ ಮುನಿ ನಗುತಾಗ
ಮಗಳು ಮೊಮ್ಮಗನ ಕರೆದ್ಹೇಳುತಿರುವಂಥ ಮಾತುಗಳು ಮತ್ತೇ
ನೆಂದರೆ–

## ಧ್ವನಿ—೪೯

ಹೋಗಿ ಬಾ ನೀನ್ಹೋಗಿಬಾರಮ್ಮ ಶಕುಂತಲೆ ಲೇ-
ಸಾಗಿ ಸರಸದಿ ಪತಿಯ ಕೂಡಮ್ಮ ಪ.

ಸರ್ವಋಷಿಗಳ ಚರಣಕ್ಕೆರಗುತ ನಾನ್ಹೋಗಿ ಬರುವೆ
ಪರಮನುಗ್ರ[ಹ]ದಿ ಪಾಲಿಸುವುದೆನುತ
ಹರುಷದಿಂದಪ್ಪಣೆಯ ನೀಡುತ್ತ ಹರಸ್ವೀಳ್ಯ ಕೊಡುತ ೧

ಹೊಕ್ಕು ವನದೊಳು ಗಿಡವ ನೋಡುತ್ತ
ಅಕ್ಕರದಿ ಬೆಳೆಸಿದಕ್ಕತಂಗಿಯರೆನಗೆ ನೀವೆನುತ
ಹಸ್ತಿನಾವತಿಗ್ಹೋಗಿಬರುವೆ ನಮ್ಮಪ್ಪ ನಿಮ್ಮ ರಕ್ಷಿಸುವನೆನುತ ೨

ತಂದೆಗೆರಗಿದ ಮಗಳ ನೋಡುತ್ತ ಮು-
ತ್ತೈದೆ ನೀನಾಗೆಂದನಾಶೀರ್ವಾದ ಮಾಡುತ್ತ
ಇಂದು ಭೀಮೇಶಕೃಷ್ಣನ ದಯದಿಂದ ಸುಖದಿ ಬಾಳೆಂದು ಹರಸುತ ೩

## ವಚನ—೫೦

ಅತ್ಯಂತ ಕರುಣದಿಂದ ಕಣ್ವಋಷಿ ತಾನು
ಮತ್ತೊಬ್ಬ ಮುನಿಪನ್ನ ಕರೆದು ಮಾತ್ಹೇಳಿದನು
ಸತ್ಯವಂತೆಯು, ಸುತನ ಸಹಿತಾಗಿ ನೀ ಪೋಗಿ
ಪಟ್ಟದರಸನ ಪಾದಕೊಪ್ಪಿಸಿಬಾರೆನುತ
ಮತ್ತೊಂದು ಮಾತನ್ಹೇಳುವುದು ರಾಜನ ಮುಂದೆ
ಲಕ್ಷಾಧಿಕಾರಿ ನಾ ಭಿಕ್ಷುಕನ ಮಗಳೆಂದು ಅ-
ಲಕ್ಷ್ಯಮಾಡದಲೆ ಸಂರಕ್ಷಿಸಬೇಕಿನ್ನು
ಹುಟ್ಟ ಬಡವನು ನಾನು ತಿರಿದು ತಂದ ದುಡ್ಡು
ಎಷ್ಟಾಗೋದಾ ದೊರೆಯ ಭಾಗ್ಯ ಭಂಡಾರಕ್ಕೆ
ಕೊಟ್ಟು ಕಳಿಸುವೆನು ಯಥೇಚ್ಛ ಆಶೀರ್ವಾದ
ಮತ್ತೆ ನನ್ನ ಮಗಳ ಸಂರಕ್ಷಿಸದಿದ್ದರೆ
ಕೊಟ್ಟು ಬಿಡುವೆನು ಶಾಪ ತಿಳಿದುಕೋ ಎಂದ್ಹೇಳು
ಮತ್ತೆ ಬರುವಂಥ ಮಾರ್ಗದಲಿ ಸರೋವರವ
ತಟ್ಟನಿಳಿದು ಸ್ನಾನ ಮಾಡುತಿರೆ ಕುಂತಲೆಯು
ಬೆಟ್ಟನುಂಗುರ ಸಡಲಿ ಬೀಳುತಿರೆ ಜಲದೊಳಗೆ
ಬೆನ್ಹತ್ತಿ ಬಂದಂಥ ಅನಸೂಯ ಪ್ರೇಮದ ನೋಡಿ
ಮತ್ತೊಬ್ಬ ಜಾಲಗಾರನ ಕರೆದು ಪೇಳಿದರು

ಪ್ರಯತ್ನದಿಂದಾ ಮುದ್ರಿಕೆಯ ತೆಗೆದು ಕೊಂಡೊಯ್ದು
ಕೊಟ್ಟರಾ ರಾಜ ಭಾರ್ಯೆ ಕೊಡುವೋನೆನುತ
ಇಷ್ಟು ತಿಳಿಯದಲೆ ಶಕುಂತಲೆಯು ತಾನಾಗ
ಹಸ್ತಿನಾವತಿಯ ಪಟ್ಟಣಕೆ ಬಂದಳಾಗ

ಧ್ವನಿ—೫೧

ನೋಡು ನೋಡು ನೋಡಿರುದುರಾಜಮುಖಿಯಳ
ಬಾಡಿ ಬಳುಕುತವರ ಮುಂದೋಡೋ ಮುನಿಗಳ ಪ.

ಚಂದ್ರ ಸೂರ್ಯರಂತೆ ಹೊಳೆವೊ ಚಂದ ಚೆಲುವರ
ಕಂದ ಕಂದರ್ಪನಂತೆ ತೋರೋ ರೂಪವ ೧

ಸಾಕ್ಷಾತ್ಹರಿಯ ವಕ್ಷಸ್ಥಳದ ಲಕ್ಷ್ಮೀದೇವಿಯೊ ಅಂತ-
ರಿಕ್ಷದಿಂದ ಇಳಿದು ಬಂದ ಮೋಕ್ಷದಾಯಕಿಯೊ ೨

ಮುದ್ರೆ ನಾಮ ಪದ್ಮಮಣಿಯು ಮಾಲೆ ತುಳಸಿಯೊ
ಛಿದ್ರಶಾಟಿ ಕುಂಬಳ ಲೋಟಿ ಕುಶಲಂಗೋಟಿಯೊ ೩

ಬತ್ತಿಕೊಂಡ ದೇಹ ಬೆನ್ನಿಗ್ಹತ್ತಿದುದರವು
ನೆತ್ತಿಜಡೆಯು ನಿತ್ಯ ನಿರಾಹಾರಿ ತಪಸಿಯೊ ೪

ಜಪದ ಮಣಿಯು ಜೋಡು ಕರದಿಂದೆಣಿಸಿ ಗುಣಿಸುತ
ಗುಪಿತದಿ ಭೀಮೇಶಕೃಷ್ಣನ ಜಪಿಸುತಿರುವರೊ ೫

ವಚನ—೫೨

ಮುಂದೆ ಕಳಿಸ್ಯಾಮುನಿಯು ಹಿಂದಕ್ಕೆ ಪೋಗುತಿರೆ
ಕಂದನ ಕರಪಿಡಿದು ಬಂದಳಾ ಗಜಗಮನೆ
ಚೆಂದದಿಂದಾ ಸಭಾಸಂದಲಿಯೊಳಗಿನ್ನು ಕುಂದಣದ ಪೀಠದಲಿ
ಕುಳಿತ ಪತಿಪಾದಕ್ಕೆ ವಂದಿಸೆಂದ್ಹೇಳಿ ಶಕುಂತಲೆಯು ತಾನ್ವಜ್ರ
ಕಂಬಕ್ಕೆ ಹೊಂದಿ ನಿಂತಳು ಶಿರವ ಬಾಗಿಕೊಂಡು

ಧ್ವನಿ—೫೩

ಬಂದವರ್ಯಾರೊ ಈ ಭರಸಭೆಯಲ್ಲಿ
ಚಂದ್ರ ಸೂರ್ಯರ ಕಾಂತಿ ತೋರುವುದಿಲ್ಲಿ
ಎರಗಿದ ಕಂದನ ಬಿಂಬಿಂ ನೋಡಿ
ತರಳ ನೀ ದಾರೆಂದ್ಹೇಳೆನುತ ಮಾತಾಡಿ ೧

ದೊರೆ ನಿಮ್ಮ ಉದರದಿ ಜನಿಸಿದ ಕಂದ
ಕರೆದು ಮನ್ನಿಸಿದರೀಗಾಗ್ವುದಾನಂದ ೨

ಸುತನಲ್ಲ ಪಿತನಲ್ಲ ಅನೃತವದೆಲ್ಲ ಶ್ರೀ-
ಪತಿಯು ಭೀಮೇಶಕೃಷ್ಣನು ತಾನೆ ಬಲ್ಲ ೩

## ವಚನ—೫೪

ಕಾಂತನಾದಂಥ ದುಷ್ಯಂತರಾಜನು ಆಡು-
ವಂಥ ಮಾತುಗಳ ಶಕುಂತಲೆಯು ಕೇಳುತಿರೆ
ಚಿಂತೆ ಘನವಾಗಿ ಚಿತ್ರದೊಳಗಿನ ಗೊಂಬೆ-
ಯಂತೆ ಮುಂದತ್ತ ಬರುವಂಥ ಸತಿಯುಳೀಗಾಡು-
ವಂಥ ಮಾತುಗಳು ಮತ್ತೇನೆಂದರೆ-

## ಧ್ವನಿ—೫೫

ನುಡಿವರೇನೊ ಪ್ರಾಣಕಾಂತ ನುಡಿವರೇನೊ
ಸಡಗರದಲಿ ಬಂದ ಬಾಲೆಯು
ಮಡದಿ ಅಲ್ಲವೆಂದು ಒಡನೆ ಪ.

ಸಾರ್ಯ ಬರದಿರು ಸಾರಸಾಕ್ಷಿ ದೂರ ನಿಲ್ಲೆ-
ದುರು ಬರದೆ ಮೋರೆ ನೋಡಲು ಮಾರನ್ನ
ಶರ ಶರೀರದಿ ಬಂದು ಸೇರುವುದು ೧

ಬಂದು ನಮ್ಮ ವನಕೆ ನೀವು ಗಾಂಧರ್ವ್ವಿವಾಹ
ಮಾಡಿಕೊಂಡು ಕಂದಗರಸುತನವ ಕೊಡುವೆ-
ನೆಂದಾಗ್ವಚನ ನೀಡಲಿಲ್ಲವೆ ೨

ಇಂದುವದನೆ ನಿನ್ನ ಮುಖವ ಎಂದೂ
ಕಂಡರಿಯೆನೆ ನಾನು ಸಂದು ಗುರುತೇಸಿದ್ದರೆ ತೋರು
ಸುಂದರಾಂಗಿ ಸುಮ್ಮನೆ ಪೋಗು ೩

ಬೆರಳಲ್ಲುಂಗುರ ಕಾಣದಿರಲು
ಮರುಳುಗೊಂಡಂತಾಗಿ ಮನದಿ ತರಳನ್ನಾದರು
ಕರೆದುಕೊಳ್ಳಿ ತೆರಳಿ ಪೋಗುವೆ ಕಾನನಕೀಗ ೪

ವೇಶ್ಯೆಯಂತೆ ನೀನು ಭಾಳ ದೇಶದೇಶ ತಿರುಗಿ ಬಂದು
ಏಸುಮಂದಿ ರಾಜರನ್ನು
ಮೋಸಮಾಡಿ ಬಂದೆ ಹೀಗೆ ೫

ಸತ್ಯವಂತೆ ಕಣ್ವಋಷಿಗಳ ಪುತ್ರಿಯೆನಿಸಿಕೊಂಡು ನಾನು
ವ್ಯರ್ಥವಾಯಿತೆನ್ನ ಜನ್ಮ
ಎತ್ತ ಪೋಗಲಿನ್ನು ಹರಿಯೆ ೬

ಚೆಲ್ವೆ ನಿನ್ನ ಚೆಂದ ನೋಡಿ ಎಲ್ಲ ಜನರು ಮೋಹಿಸುವರು
ನಲ್ಲನಲ್ಲವೆ ನಿನಗೆ ನಾನು
ಬಲ್ಲ ಭೀಮೇಶಕೃಷ್ಣ ತಾನು ೭

ವಚನ—೫೬

ದೊರೆ ಆಡೊ ಕರುಣವಿಲ್ಲದ ಕಠಿಣ ನುಡಿ ಕೇಳಿ
ತರತರನೆ ನಡುಗುತಲಿ ಕಿರುಬೆವರು ಸುರಿಯುತಲಿ
ದೊರೆ ಮುಖವ ತಾ ನಿಂತು ಬಿರಿಬಿರಿ ನೋಡುತ್ತಿರೆ
ಭರದಿಂದ ಕೆಂಡದಂಥ ಕಿಡಿಗಳ್ಹಾರುತಿರೆ
ಉರಿವೊ ಪಾವಕನಂತೆ ತೋರುತ್ತಿರೆ ಜನಕೆಲ್ಲ
ಉರಿದುಬಿಡುವಳೊ ಸಭಾ ಹುರಿದುಬಿಡುವಳೊ ಎನುತ
ನೆರೆದ ಜನರೆಲ್ಲ ಸಂತಾಪದಲಿ ನೋಡುತಿರೆ
ಹೊರಗಿಂದ ಬಂದನಾ ಜಾಲಗಾರನು ತಾನು
ದೊರೆ ನಿಮ್ಮ ನಾಮಮುಂಗುರವೆಂದು ಕೊಡುತಿರಲು
ಅದ ನೋಡಿ ಅಂತರಂಗದಲಂತಃಕರಣ್ಹುಟ್ಟಿ ಇದಕೇನು
ಮಾಡಲೆಂದೆನುತ ಕುಳಿತಿರಲಾಗ ಪರಮ
ಕೋಪಗಳಿಂದ ತಿರುಗಿದಳು ಶಕುಂತಲೆ

ಧ್ವನಿ—೫೭

ಸಿಟ್ಟನಿಂದೆದ್ದ[ಳು] ಶಕುಂತಲೆ ತನ್ನ
ಹೊಟ್ಟೆಯೊಳಗೆ ರೋಷ ಹುಟ್ಟಿತು ಭಾಳ ಪ.

ದೊರೆಗೆ ಕರುಣ ಬಾರದ್ಹೋಯಿತು ನಮ್ಮ ಸ-
ರ್ವಋಷಿಗಳ ದಯ ತಪ್ಪಿತು ನಮಗೆ
ಕರೆದು ಮನ್ನಿಸುವೋರ್‍ಯಾರಿಲ್ಲೀಗ
ಸುರದೇವತೆಗಳು ಸುಮ್ಮನೆ ನೋಡುತಿಹರು ೧

ತಂದೆ ಮಂದಿರಕೆ ನಾ ಹೋದರೆ ಇನ್ನು
ಸಂದೇ[ಹ] ಹುಟ್ಟಿಏನೆಂಬನೊ ತಾನು
ಮುಂದೆ ಕಾನನಕೆ ಪೋಗುವೋಣ ಅಗ್ನಿ-
ಕೊಂಡವ ಮಾಡಿ ಬಿಡುವೋಣೀ ಪ್ರಾಣವನು ೨

ಕಾಮನೋಹಗಳಿಂದ ಎನ್ನ ಮಾಡಿಕೊಂಡಾ
ಪತಿಯೆ ತಾನು ಮರೆತನೊ ಇನ್ನಾ-
ಭೀಮೇಶಕೃಷ್ಣ ಮುನ್ನ ತಾ
ದಯಮಾಡಿ ಸಲಹಬೇಕೊ ಎನ್ನ ೩

ವಚನ—೫೮

ಪ್ರೊಡವಿಗೊಡೆಯನೆ ದುಷ್ಯಂತನೆ ಕೇಳು ನಿನ್ನ
ಮಡದಿ ಹೌದೀಕೆ ನೀ ಮಾಡಿಕೊಂಡದ್ದು
ಪಡೆದ ಸುತ ಹೌದು ನೀ ಕೊಡು ರಾಜ್ಯಪಟ್ಟವನು
ದೃಢವಾದ ವಾಕ್ಯ ದೇವತೆಗಳೆಲ್ಲರು ಸಾಕ್ಷಿ
ನುಡಿದ ಆಕಾಶವಾಣಿಯು ಕೇಳುತಾ ರಾಜ
ಕಡು ಹರುಷದಿಂದೆದ್ದನು

ಧ್ವನಿ—೫೯

ಕೇಳಿದಿರಾ ನೀವು ಕೇಳಿದಿರಾ
ಆಡಿದಾಕಾಶವಾಣಿಯು ನುಡಿಗಳ ಪ.

ಅಂಬರದಲಾಡೊ ಗಂಭೀರ ಧ್ವನಿವಾಕ್ಯ
ತುಂಬಿದಾ ಸಭೆಯೆಲ್ಲ ಕೇಳುವಂತೆ
ರಂಭೆ ಶಕುಂತಲೆಯು ಕೂಡಿಕೊಂಡಿರಿಯೆಂದು
ಸಂಭ್ರಮದಿಂದ ಆಡಿದ ನುಡಿಗಳ ೧

ಘನ ಪತಿವರತೀಕೆ ಘನವಾದ ಗುಣ ಮಹಿಮೆ
ಜನರೆಲ್ಲ ಮನಗೊಟ್ಟು ಕೇಳುವಂತೆ
ವನಜ ಮಲ್ಲಿಗೆ ಕುಸುಮ ಸುರರೆ-
ಲ್ಲನೆರೆದೀಕೆ ಶಿರದ ಮ್ಯಾಲೆ ಕರೆದದ್ದು ನೋಡಿದಿರಾ ೨

ಎದ್ದು ರಾಜನು ತನ್ನ ಮುದ್ದು ಶಕುಂತಲೆಯು
ಪದ್ಮಪಾಣಿಯು ಪಿಡಿದು ಕರಕೊಂಡು ವಜ್ರಮಾಣಿ-

ಕ್ಯದ ಸಿಂಹಾಸನದಿ ಕುಳ್ಳಿರಿಸಿ
ಭದ್ರೆ ನಿನಗಿನ್ನು ಭಯ ಬ್ಯಾಡೆನುತಲಿ ೩

ಬಾಲೆ ಶಕುಂತಲೆಯು ನೀಲ ಕುಂತಳ ತಿದ್ದಿವ-
ಶಾಲನೇತ್ರದ ಜಲವನ್ನೊರೆಸುತಾಗ
ಬಾಲಕನು ಸತಿಸಹಿತ ಕೂಡಿಕೊಂ-
ಡಾಲಯಕೆ ತಾಯಿ ಚರಣಕ್ಕೆ ಎರಗಿಸಿದನಾಗ ೪

ಹರುಷದಿಂದ ತಾಯಿ ಹರಸಿ ಮೊಮ್ಮಗ ಸೊಸೆಗೆ
ಎರೆಸಿ ಪಿತಾಂಬರವನುಡಿಸಿ ಬ್ಯಾಗ
ತರಿಸಿ ಮಾಣಿಕ್ಯದಾಭರಣವನು ಇಟ್ಟು
ಅರಸು ಸಿಂಹಾಸನದಿ ಕುಳ್ಳಿರಿಸಿ ಬ್ಯಾಗ ೫

ಹಸ್ತಿನಾವತಿ ರಾಜ್ಯ ಭರತರಾಯಗೆ ಬ್ಯಾಗ
ಪಟ್ಟಾಭಿಷೇಕ ಮಾಡಿದ ರಾಜನು
ಅತ್ಯಂತ ಹರುಷದಿಂದಾಗ ಸತಿ ಸುತ ಸಹಿತ
ಅರ್ಥಿಯಿಂದಿರುತಿದ್ದನಾ ರಾಜನು ೬

ಸಾಮಜಪುರದಲ್ಲಿ ಆ ಮಹಾ ದುಷ್ಯಂತರಾಯ
ಶಕುಂತಲೆಯು ಕೂಡಿಕೊಂಡು
ಭೀಮೇಶಕೃಷ್ಣನ ದಯದಿಂದ ತಾ ಬ್ಯಾಗ
ಕ್ಷೇಮದಿಂದಿರುತಿದ್ದನಾ ರಾಜನು ೭

## ವಚನ—೬೦

ಕಾಂತನಾದಂಥ ದುಷ್ಯಂತರಾಜನು ತನ್ನ
ಕಾಂತೆ ಶಕುಂತಲೆಯು ಕೂಡಿಕೊಂಡ ಕಥೆಯು
ಸಂತೋಷದಿಂದ್ಹೇಳಿ ಕೇಳಿದ ಜನಕೆಲ್ಲ
ಸಂತಾನ ಸಂಪತ್ತು ಸಾಯುಜ್ಯಪದವಿ ಶ್ರೀ-
ಕಾಂತ ಭೀಮೇಶಕೃಷ್ಣನು ಒಲಿದು ವರಗಳ ಕೊಡುವನು

## ಧ್ವನಿ—೬೧

ಮಾಡೋಣೆ ಮುತ್ತೈದೇರು ಜೋಡು ಜ್ಯೋತಿ ಆರತಿ
ಹಾಡಿ ಪಾಡಿ ಹರುಷದಿಂದ ಮಾಡುತಾಶೀರ್ವಾದವ ಪ.

ಸಂತೋಷದಲಿ ಕಲಸಿಕೊಂಡು ಕೆಂಪು ಕದಲಾರತಿ
ಶಕುಂತಲೆ ದುಷ್ಯಂತರಾಯಗೆ ಮಂತ್ರಾಕ್ಷತೆಗಳ್ಹಾಕುತ ೧

ರತ್ನ ವಜ್ರ ಮುತ್ತು ಮಾಣಿಕ್ಯದ್ವಸ್ತವಿಟ್ಟೊಯ್ಯಾರದಿ
ಬಿಟ್ಟ ಪತಿಯ ಮುಖವ ನೋಡಿ ಅತ್ಯಂತ್ಹರುಷದಿ ನಗುತ ೨

ಕಾಮ ಮೋಹದಿ ಶಕುಂತಲೆಯು ಕರೆದು ತೊಡೆಯಲಿಟ್ಟ
ಭೀಮೇಶಕೃಷ್ಣನ್ನ ದಯವ ಪಡೆದ ಪಟ್ಟದರಸಿಗೆ ೩

## ರತಿಕಲ್ಯಾಣ

### ಧ್ವನಿ—೧

ಶರಣು ಶ್ರೀ ಗಣರಾಯ ನಿನ್ನಯ
ಚರಣ ಕಮಲಕೆ ಎರಗಿ ಪೇಳುವೆ
ವರ ಮತಿಯನು ಪಾಲಿಸುವುದು ಕರುಣದಿಂದ ೧

ಹರದಿ ಸರಸ್ವತಿ ನಿಮ್ಮ ಪಾದಕೆ
ಶಿರವ ಬಾಗುವೆ ಸಿಂಧುಶಯನ ಕು–
ಮಾರನ್ವಿವಾಹದ ಕಥೆಗೆ ಪಾಲಿಸು ಪರಮ ಮಂಗಳವ ೨

ಅಷ್ಟ ದೇವತೆಗಳಿಗೆ ವಂದಿಸಿ
ಇಷ್ಟ ಫಲಗಳ ಬೇಡಿ ಭೀಮೇಶ–
ಕೃಷ್ಣನನುಜೆ ಕೃಷ್ಣೆ ಮಹಿಮೆಯ ಪೇಳ್ವೆನೀಗ ೩

### ವಚನ—೨

ಈ ರೀತಿಯಿಂದೆರಗಿ ಇಷ್ಟದೇವತೆಗಳಿಗೆ
ಮಾರನ ಮದುವೆ ವಿಸ್ತಾರದಿಂ ಪೇಳುವೆನು
ಶ್ರೀರಮಣ ಸತಿ ಸತ್ಯಭಾಮೆ ರುಕ್ಮಿಣಿಸಹಿತ
ದ್ವಾರಾವತಿಯಲ್ಲಿದ್ದ [ಅ]ಪಾರಮಹಿಮನು ಹರುಷದಿ

### ಧ್ವನಿ—೩

ಬಂದ ನಾರಂದನಾಗ ಹರುಷದಲಿ
ಕಂಡು ಮನ್ಮಥನ ಬ್ಯಾಗ ಪ.

ವೀಣೆ ಪಾಣಿಗಳ[ಲಿ] ಪಿಡಿದು ಮಿಾಟುತಲಿ
ವಾಣಿ ಮಾವನ ನುಡಿಸುತ ಜಾಣೆ ರು–
ಕ್ಮಿಣಿಸುತನ ಮಂದಿರಕೆ ಬರುತಿರಲು
ಆಣಿ ಮುತ್ತಿನ ಜ್ಯೋತಿಯಂತೆ ಹೊಳೆಯುತಲಾಗ ೧

ಮಾರ ನಾರದನ ನೋಡಿ ತನ ಶಿರವ
ಬಾಗಿಸ್ವಂದನೆಯು ಮಾಡಿ
ಬ್ಯಾಗದಿಂದಲಿ ಅರ್ಘ್ಯ ಪಾದ ಪೂಜೆಯು ಮಾಡಿ
ಈಗ ಬಂದಿರುವ ಕಾರಣವ ಹೇಳಬೇಕೆಂದವನು ೨

ಹರನ್ವೈರಿ ನೀ ಶಂಬರಾಸುರನ ಕೊಂ-
ದಿರುವೊ ಕೀರ್ತಿಯು ಲೋಕದಿ
ಬಿರುದ ನಾ ಕೇಳಿ ಭೀಮೇಶಕೃಷ್ಣನ ಸುತನೆ ನೀ-
ನಿರುವ ಸ್ಥಳದಲಿ ಬಂದೆ ಈಗ ನೋಡುವೆನೆನುತ ೩

## ವಚನ—೪

ಇಂತೀಪರಿ ಮಾತಿನಿಂದ ಮನ್ಮಥನ
ಸಂತೋಷವಂ ಬಡಿಸಿ ಕಾಂತೆ ರತಿಯಿದ್ದ
ಅಂತಃಪುರಕೆ ತಾವ್ ತೆರಳಿ ನಿಂತು ನೋಡುತಲಿ
ಶಿರಬಾಗಿ ವಂದನೆ ಮಾಡುವಂಥ
ರತಿ ನೋಡಿ ಮಾತಾಡುವುದು ಮತ್ತೇನೆಂದರೆ-

## ಧ್ವನಿ—೫

ರತಿ ಕೇಳೆನ ಮಾತ ಸತಿ ಶಿರೋಮಣಿಯೆ
ರತಿ ಕೇಳೆನ ಮಾತ
ಪತಿವರತೆಯೆ ನಾ ಒಂದ್ಹಿತವ ಹೇಳುವೆನೀಗ ಪ.

ಗಂಡ ಸಣ್ಣವನಾದರ್ಹ್ಯಂಡಿರಿಗಿದು ಭಾಳ
ಮಂಡಿಕುಗ್ಗಲ್ಲೆ ಭೂಮಂಡಲದೊಳಗೆ ೧

ವರಹೀನ ಪತಿಯು ಕೂಡಿರುವುದುಚಿತವಲ್ಲ
ಉರಿಯು ಬೀಳುವುದೆ ಲೇಸು [ಉ]ತ್ತಮ ಜನರಿಗೆ ೨

ಹಿಡಿವುದೀಪತಿಯು ಭೀಮೇಶಕೃಷ್ಣನ ಸೊಸೆ ಕೈ
ಹಿಡಿದು ಕಾಮನ ಸುಖಪಡುವೋದೆ ನಿಜ ಮುಂದೆ ೩

## ವಚನ—೬

ಹಿತದ ವಾಕ್ಯಗಳ ಹೇಳುತಲಿ ಮುನಿ ಪೋಗೆ ಮನ್ಮ-
ಥನ ಸತಿ ಸಪ್ತಜಂಹ್ವೆಗೆ ಆಹುತಿಯಾಗೆ

ರತಿ ಬ್ಯಾಗ ತಾ ಕಮಲಾವತಿಯು ರಾಜಗೆ ಮುದ್ದು
ಸುತೆಯಾಗಿ ಪುಟ್ಟಿ ಸುಗು[ಣೆ] ಜಾಣೆ ಮಂಗಳಗಾತ್ರೆ
ಅತಿ ಚೆಲ್ವೆ ರತ್ನ ಸುಂದರಿಯು ಮಗಳೆಂದೆನಿಸಿ
ಮತಿವಂತೆ ತನ್ನ ನಿಜಪತಿಯು ಧ್ಯಾನದಲಿ ಬೆಳೆ-
ಯುತಲಿದ್ದಳಾ ಕಾಲದಿ

## ಧ್ವನಿ—೭

ರತಿ ಅಗಲಿದಾಗ ಮನ್ಮಥನು ಚಿಂತೆಯುಲಿ
ಅತಿದುಃಖದಿಂದ ಇರುತಿರಲು ಭ್ರಾಂತಿಯುಲಿ ೧

ಅನ್ನ ವಸ್ತ್ರಗಳೊಲ್ಲ ಚಿನ್ನದಾಭರಣ
ಕಣ್ಣಲಿ ನೋಡಲೊಲ್ಲನು ಕಾಮದೇವ ೨

ಸೆಳೆಮಂಚ ಗಂಧ ಪರಿಮಳ ಅರಳು ಕುಸುಮ
ಬಿಳಿಯೆಲೆ ಅಡಿಕೆ ತಾಂಬೂಲ ತಾನೊಲ್ಲ ೩

ಕಡಗ ಕಂಕಣವು ಬಿಡಿಮುತ್ತಿನ್ಹಾರಗಳು
ಮೃಡನ್ವೈರಿ ತಾನೊಲ್ಲ ಉಡಿದಾರುಂಗುರವ ೪

ಕಂದಿ ಕುಂದಿದ ಸುತನ ನೋಡಿ ತಾನಾಗ
ಬಂದು ಭೀಮೇಶಕೃಷ್ಣನ ಅರಸಿ ಬ್ಯಾಗ ೫

## ವಚನ—೮

ಸುತನ ಬಳಲಿಕೆಯ ನೋಡುತಲೆ ರುಕ್ಮಿಣಿಯು ಮ-
ನ್ಮಥನೆ ನಿನಗಿಷ್ಟು ಸಂತಾಪವ್ಯಾಕೆಂದೆನುತ
ರತಿಗೆ ಮಿಗಿಲಾದ ಸತಿಯುಳ ತಾವೆನೆಂದೆನುತ
ಪತಿಯಿದ್ದ ಬಳಿಗೆ ಬಂದಳು ಬ್ಯಾಗನಾ ರುಕ್ಮಿಣಿ

## ಧ್ವನಿ—೯

ಬಂದು ರುಕ್ಮಿಣಿ ಗೋವಿಂದನ ಚರಣಕ್ಕೆ
ವಂದನೆಯನು ಮಾಡಲು
ಮಂದರೋದ್ಧಾರ ಮುಖ ನೋಡಿ ಹಿಗ್ಗುತ ಭಾಳಾ-
ನಂದಭರಿತನಾದನು ೧

ಸುಂದರ ಸುಗುಣೆ ನೀ ಬಂದ ಕಾರಣವ ಹೇ-
ಳೆಂದು ಮಾತುಗಳಾಡುತ
ಸಂದೇಹ ಬ್ಯಾಡರವಿಂದ ನೇತ್ರದಿ ಜಲ
ಬಿಂದು ಸುರಿವೋದ್ಯಾತಕೆ ೨

ನೂತನಾಂಗಿಯೆ ನವನೀತದಂದದಿ ಪಾದ
ನೋತು ಇಲ್ಲಿಗೆ ನಡೆದು
ಯಾತಕೆ ನೀ ಬಂದಕಾರಣ್ಹೇಳೆನುತಲಿ
ಪ್ರೀತಿಯಿಂದಲಿ ನುಡಿದ ೩

ಕರುಣಾಸಮುದ್ರನೆಂಬೊ ಬಿರುದು ಬಿಚ್ಚಿಟ್ಟು ಹೀಗೆ
ಬರಿಯ ಮಾತುಗಳ್ಯಾತಕೊ
ಮರುಗಿ ಸೊರಗಿದ ಮನ್ಮಥನ ನೋಡುತ ಮನ
ಕರಗ್ವಲ್ಲದೇ ನಿನಗೆ ೪

ಸ್ವಂತ ಪುತ್ರಗೆ ಸತ್ಯಲೋಕಪದವಿಟ್ಟ-
ಭ್ಯಂತರ್ಯಾತಕೊ ನಿನಗೆ
ಚಿಂತೆಯಿಲ್ಲವೆ ಚಿತ್ರಾಂಗಿ ಸತ್ಯಭಾಮೆ ಏ-
ನಂತ ಪೇಳಿದಳೊ ನಿನಗೆ ೫

ಚಿಕ್ಕ ಸತಿಸುತರಲ್ಲೆ ಅಕ್ಕರ ನಿನಗೆನ್ನ
ಮಕ್ಕಳ ಪರವ್ಯಿಲ್ಲವೊ
ರಕ್ಕಸಾಂತಕ ನಿನ್ನ ಪಾದದಲ್ಲೆನ್ನ ಪ್ರಾಣ
ಬಿಟ್ಟುಬಿಡುವೆನೆಂದಳು ೬

ರೋಷದಿ ನುಡಿದ ರುಕ್ಮಿಣಿಯ ಮಾತನು ಕೇಳಿ
ವಾಸುದೇವನು ನಗುತ
ಕ್ಲೇಶವ್ಯಾತಕೆ ಕೋಮಲಾಂಗಿ ನಿನ ಮನಕೆ ಸಂ-
ತೋಷ ಮಾಡುವೆನೆಂದನು ೭

ಕೇಳೆ ರುಕ್ಮಿಣಿ ನಾ ಇನ್ನೇಳು ದಿನಕ್ಕೆ ಕನ್ಯೆ
ತಾರದಿದ್ದರೆ ನೋಡಿಕೊ
ಸೋಳ ಸಾವಿರ ಸತಿಯರಾಳುವೋನಲ್ಲವೆಂದು
ಮಾಡೀಗ ಶಪಥವನು ೮

ಮಾರಗೆ ತಕ್ಕ ಕನ್ಯೆ ತರದಿದ್ದರೆ ಹದಿ-
ನಾರು ಸಾವಿರ ಸತಿಯರ
ನೀನೆ ಬಿಡುವುದೊ ಈಗೆನ್ನ ತಂಗಿಯು-
ರನೆ ನಾನೆ ಬಿಡಿಸುವೆನೆಂದಳು ೯

ರುಕ್ಮಿಣಿ ಕೂಡ ಪಂಥಮಾಡಿ ಭೀಮೇಶಕೃಷ್ಣ
ಚಕ್ರ ಕೈಯ್ಯಲ್ಲಿ ಪಿಡಿದು
ದಿಕ್ಕು ದಿಕ್ಕಿಗೆ ನೋಡುತಾಗ ಮನ್ಮಥಸಿಗೆ
ತಕ್ಕ ಕನ್ಯೆಯು ಕಾಣದೆ ೧೦

ವಚನ—೧೦

ಕಾಶಿ ಕರ್ನಾಟಕ ಕಂಭೋಜ ಗುರ್ಜ್ಜರ ಗೌಳ
ದೇಶ ಮಾರಾಷ್ಟ್ರ ದಿಗ್ದೇಶವೆಲ್ಲವ ತಿರುಗಿ
ಬ್ಯಾಸತ್ತು ಬಂದರ್ಧ ರಾತ್ರಿ ಅರಣ್ಯದಲಿ
ವಾಸುದೇವನು ಕುಳಿತಾಲೋಚನೆಯ ಮಾಡುತಾಗ

ಧ್ವನಿ—೧೧

ಬಂದ ನಾರಂದ ಭಾಳ ಹರುಷದಿಂದಲಿ
ಇಂದಿರೇಶ ಕುಳಿತ ಸ್ಥಳಕಾನಂದದಿಂದಲಿ ೧

ಅಡವಿ ಅರಣ್ಯ ಅರ್ಧರಾತ್ರಿವ್ಯಾಳ್ಯದಿ ಕ-
ರಡಿ ಹುಲಿಯು ಸಿಂಹಗಳು ಸಂಚರಿಸೋ ವ್ಯಾಳ್ಯದಿ ೨

ಯಾತಕಿಲ್ಲಿ ಕುಳಿತಿ ಹೇಳೊ ಲೋಕನಾಥನೆ
ಮಾತಾಪಿತರು ಮನೆಯಿಂದ್ಹೊರಗೆ ನೂಕಿಬಿಟ್ಟರೆ ೩

ಕೇಳೋ ಮುನಿಯೆ ರುಕ್ಮಿಣಿ ಕೂಡ ಮಾಡಿ ಪಂಥವ ಬಂದೆ
ಸೋಳಸಾವಿರ ಸತಿಯುರಗಲೋಕಾಲ ಬಂದಿತು ೪

ನಾಳೆಗೆಂಟು ದಿವಸವಾಯಿತು ನಾನಾ ದೇಶವ ತಿರುಗಿ
ನಾನು ಮಾರಗೆ ತಕ್ಕ ಕನ್ಯೆ ಕಾಣದ್ಹೋದೆನು ೫

ಆಜ್ಞೆ ಮಾಡೊ ಮುನಿಯೆ ಪರಮನುಗ್ರ[ಹ]ದಿಂದಲಿ
ಯಜ್ಞ ಬೀಳಲೇನೊ ನಾನು ಶೀಘ್ರದಿಂದಲಿ ೬

ಎಷ್ಟು ಸಾಹಸಬಟ್ಟರೂ ಭೀಮೇಶಕೃಷ್ಣಗೆ
ಹುಟ್ಟಲಿಲ್ಲ ಕನ್ಯೆಯೆಂದಪಹಾಸ್ಯ ಮಾಡುವರು ೭

ವಚನ—೧೨

ನಾರದನು ನಗುತ ನಾರಾಯಣಗೆ ತಾ ನುಡಿದ
ಮಾರಜನಕನೆ ನೀನು ದ್ವಾರಾವತಿಯನು ಪೊಕ್ಕು
ನಾರಿ ರುಕ್ಮಿಣಿಗೆ ಮುಖ ತೋರುವ್ಹೋದ್ಹ್ಯಾಗೆಂದು ಅ-
ಪಾರ ಮಹಿಮನೆ ನಿನಗುಪಾಯ ಹೇಳುವೆನೆಂದನು

ಧ್ವನಿ—೧೩

ಕೇಳೊ ಕೇಳೊ ಗೋಪಾಲ ಕೇಳೊ ಆ ಕ-
ಮಲರಾಜ ಭೂಪಾಲ ಕೇಳೊ ಪ.

ಪೃಥಿವಿಗೊಡೆಯ ಕಮಲಾವತಿ ರಾಜಗೆ
ಸುತೆಯಾಗ್ಹುಟ್ಟಿಹಳತಿ ಗುಣವಂತೆ ೧

ಅಂಗನಾಮಣಿ ಅರವಿಂದ ಲೋಚನೆ ಅ-
ನಂಗಗೆ ತಕ್ಕ ಕನ್ನಿಕೆ ನೋಡವಳು ೨

ನಡೆವರೆ ನವಯೌವನೆ ಬಳುಕ್ಯಾಡೋಳು
ಕಡು ಚೆಲ್ವಿಕೆ ಪುತ್ಥಳಿಗೊಂಬ್ಯವಳು ೩

ಬಂಗಾರದ ಬಾಳೆಸುಳಿಯಂತ್ಹೊಳೆವಳು
ಚಂದ್ರವದನೆ ರತಿ ಸುಂದರಿ ಸುಗುಣೆ ೪

ಹೆಚ್ಚಿನ ಪುರದೊಳು ಗಚ್ಚಿನ ಕನ್ನಡಿ ಚಿತ್ರ
ವಿಚಿತ್ರ ಗೋಪುರ ಹೊನ್ನ ಕಳಸ ೫

ಸುತ್ತ ಮುತ್ತ ಹೊಸ ಚಿನ್ನದ ಗೋಡೆಗೆ
ಹಚ್ಚಿ ಹರಿವೊ ಕಾರಂಜಿ ಕಾವುಲಿ(ಕಾಲುವೆ?)ಯು ೬

ಊರಿಡ ಬಲ ಉದ್ಯಾನವನಗಳು
ಬೇಡಿದ ಫಲ ಪುಷ್ಪವು ಕಡೆಯಿಲ್ಲ ೭

ಕತ್ತಿಕೈಭಟರು ಹತ್ತು ಸಾವಿರ ಮಂದಿ
ಹತ್ತಿತೇಜಿಯ ಹೊಸ್ತಿಲು ಕಾದಿಹರು ೮

ಕಾಳರಕ್ಕಸರ ಕಾದಿಹೊ ಭಂಟರು ಶ್ರೀ–
ಗಳ(ಸೃಗಾಲ?)ಸಂದದಿ ಧ್ವನಿ ಮಾಡುತಲಿಹರು ೯

ನೀ ಹೋದರೆ ತಾ ಧೇನುಪಾಲಕನೆಂದು
ಅಜ್ಞಾನಿ ರಾಜನು ಭಾಳ ಹೀನ ನುಡಿವ್ರೋನು ೧೦

ಭೀಮನ್ವಲ್ಲಭೆ ಕರಿ ಭೀಮೇಶಕೃಷ್ಣನೆ
ಮಾನಿನಿ ದ್ರೌಪದಿ ಮಾಡೋಳೀಕಾರ್ಯ ೧೧

ವಚನ—೧೪

ಮನಸಿ ಹೇಳಿ ಪ್ರೋಗುತಿರೆ ಘನಮಹಿಮ ತಾ ಬ್ಯಾಗ
ಮನಮುಟ್ಟಿ ಕರೆಯೆ ಮಂಗಳಗಾತ್ರೆ ದ್ರೌಪದಿಯು
ಕನಸು ಮನಸಲ್ಲಿ ಮಾಧವನ ಧ್ವನಿಯೆಂದೆನುತ
ವನಜಾಕ್ಷಿಯೆದ್ದು ವಾಸವಿಮಂಚದೊಳು
ಕುಳಿತು ಯೋಚಿಸುತಿದ್ದಳಾಕಾಲದಿ

ಧ್ವನಿ—೧೫

ಯಾಕೆ ಕರೆದನೆನ್ನ ಈಗ
ಲೋಕನಾಥ ಕೃಷ್ಣ ತಾನು ಪ.

ಧರ್ಮ ಭೀಮಾರ್ಜುನರು ನಕುಲ
ಸುಮ್ಮನಿರುವೋನಲ್ಲ ಸಾದೇವ
ನಮ್ಮ ಪತಿಗಳಾಜ್ಞೆಯ ಕೇಳದೆ ರಮ್ಮೆರಮಣನ ಬಳಿಗೆ ಪ್ರೋಗುವೆ ೧

ಇಂದು ನಾನು ಪೋಗಿ ಶ್ರೀ ಮು–
ಕುಂದನ ಪಾದಾರವಿಂದಕ್ವಂದಿಸಿ
ಕರಮುಗಿದು ನಿಲ್ಲೆ ಇಂದಿರೇಶಾನಂದಬಡುವ ೨

ಉಟ್ಟ ಸೀರೆಗಕ್ಷಯವೆಂದು
ಎಷ್ಟು ಅಭಿಮಾನವನು ಕಾಯ್ದ
ಇಷ್ಟ ಫಲಗಳ ಕೊಡೋ ಭೀಮೇಶಕೃಷ್ಣನಾಜ್ಞೆಯ ಮಿಾರುವಳಲ್ಲ ೩

## ವಚನ—೧೭

ಅರ್ಜುನನು ಮಲಗಿದ್ದ ಸಿಪ್ರೆ ಪ್ಯಾಳ್ಯಗಳಲ್ಲಿ
ವಜ್ರಮಂಚಪನಿಳಿದು ವೈರಾರಿ ತಾ ಜ್ಯಾಗ
ಹದ್ದುವಾಹನನು ಕುಳಿತಿದ್ದ ಸ್ಥಳದಲಿ ಬಂದು
ಪದ್ಮಪಾದಕೆ ಎರಗಿ ನಿಂತಳಾ ಕೋಮಲಾಂಗಿ

## ಧ್ವನಿ—೧೭

ಅಮ್ಮಾ ನೀ ಬಂದೆಯೇನೆ ದ್ರೌಪದೀದೇವಿ
ಸುಮ್ಮನಿದ್ದನೇ ಸಾದೇವ
ಧರ್ಮ ನಕುಲ ಬಿಟ್ಟರೇನೆ ಭೀಮಾರ್ಜುನ
ಅಮ್ಮಾ ನೀ ಬಂದೆಯೇನೆ ಪ.

ಅರಸರಪ್ಪಣೆ ಕೇಳದೆ ನಾ ಬಂದೆನು
ಸರಸಿಜಾಕ್ಷನೇ ನಿನ್ನಲ್ಲಿ
ಹರುಷದಿಂದೆನಗೆ ಆಜ್ಞೆಯ ಮಾಡೋ ನಿನ್ನ ಕಾರ್ಯ
ತ್ವರಿತದಿ ಮಾಡಿ ಹೋಗುವೆನೊ ಫಲ್ಗುಣನಲ್ಲಿ ೧

ಕಮಲಮುಖಿಯೆ ನೀ ಕೇಳೆ ಇರುವುದೊಂದು
ಕಮಲಾವತಿಯು ಪಟ್ಟಣ
ಕಮಲರಾಜಗೆ ಒಬ್ಬ ಕನ್ನಿಕ್ಕೆ ಹುಟ್ಟ್ಯಾಳಂತೆ ಕರೆದು
ಮನ್ಮಥಗೆ ಮಾಡುವುದೀಗ ನಿನ ಕಾರ್ಯ ೨

ಹರಿ ನಿನ್ನ ಕರಕಮಲದಾಯುವ ಮಾಡಿ
ಶಿರದಲ್ಲಿಟ್ಟೆನ್ನ ಬ್ಯಾಗ
ಪರಮಾನುಗ್ರ[ಹ]ವ ಮಾಡಿ ಪಾಲಿಸಿ ಕಳುಹೆನ್ನ
ದೊರೆಪುರಕ್ಹೋಗಿ ಬರುವೆನೊ ಭೀಮೇಶಕೃಷ್ಣ ೩

## ವಚನ—೧೮

ನಳಿನಮುಖಿ ನಗುತ ಅಪ್ಪಣೆಗೊಂಡು ತಾ ಘುಮ್ಮ-
ಘುಳಿರೆನುತಲ್ಯಾ ಬಾಳೆ ಸುಳಿಯಂತೆ ಹೊಳೆಯುತಲಿ
ತಳಿಲು ಮಾವಿನಪತ್ರ ಪೋಲ್ವ ಕೋಮಲ ಚರಣ
ಸುಳಿಯು ಕಾಲುಂಗುರದ ಸೂಕ್ಷ್ಮದ್ಹೆಜ್ಜೆಯ ನಿಡುತ
ರುಳಿ ಗೆಜ್ಜೆ ಪೆಂಡೆ ಪೈಜಣ ಧ್ವನಿಗಳಾಗುತಿರೆ

ಬಳೆ ಭಾರಿ ಕಂಕಣವು ಬೆರಳ ಹೊನ್ನುಂಗುರವು
ಗಿಳಿ ಕಮಲದ್ವಾರ್ಯ ಮುಂದ್ದರಡಿ ಹಸ್ತಕಡಗ
ನಳಿತೋಳಿನಲ್ವಂಕಿ ನಾಗಮುರಿಗೆಯು ಗೆಜ್ಜೆ
ಎಳೆಯು ಕಟ್ಟಾಣಿ ಮ್ಯಾಲೆ ಸರಿಗೆ ಅಡ್ಡಿಕೆ ಮುತ್ತು ಕೊ-
ರಳ ಪುತ್ಥಳಿ ಚಂದ್ರಸರ ಏಕಾವಳಿ ಪದಕ ಹ-
ರಳಿನ್ವಾಲೆಯು ಬುಗುಡಿ ಹೊಸ ಚಂದ್ರಬಾಳ್ಯಗಳು
ಝುಳಿ ಝುಳಿಸೊ ಜೊತೆ ಮುತ್ತಿನ ದ್ರಾಕ್ಷಿ ಬಳ್ಳಿಗಳು
ಹೊಳೆವೊ ಕುಂದಣ ಕೆಂಪಿನಾಣಿಮುತ್ತಿನ ಮುಕುರ್ಯ ಹ-
ವಳದಂಥ ರಂಗುತುಟಿ ಬಾಯಿತಾಂಬೂಲ
ಝುಳಕು ಮಿಂಚಿನ ಕಾಂತಿಯಂತ್ಹೊಳೆವೊ ಮುಖಕಮಲ
ಕದಪು ಕನ್ನಡಿಯಂತೆ ಕಣ್ಣ ಕಾಡಿಗೆ ಚಂದ
ಅದಕೆ ಸೋಲಾ ರತ್ನದ್ದುಲಗೆಯಂಥ [ಹ]ಣೆಯಲ್ಲಿ
ಸಣ್ಣ ಕುಂಕುಮ ಕೆಳಗೆ ಕುಡಿಹುಬ್ಬು
ತಳುಪು ತಿದ್ದಿರುವೊ ಮುಂಗುರುಳು ಮುತ್ತಿನ ಬಟ್ಟು
ಅರಳು ಮಲ್ಲಿಗೆಯು ಅರೆಚಂದ್ರ ರಾಗಟೆ ಗೊಂಡ್ಯ
ಹೆರಳುಬಂಗಾರ ಹಿಂಗಾಲಿನಲ್ಲಲೆಯುತಲಿ
ಬಿಳಿಯ ಹೂವಿನ ಕುಬುಸ ಬಿಗಿದು ಸೆಟ್ಟಿರೆ ಮೈಗೆ
ಸೆಳೆಸಡುಪಿನ್ಹೊಡ್ಯಾಣ ಸೀರೆ ಜರತಾರಂಚು
ನಿರಿಯು ಬುಟ್ಟಾದಾರಿ ನೀಲಮಾಣಿಕ್ಯ ಪಟ್ಟಿ
ಪರಮೋಹನಾಂಗಿ ಮೈಯಾರಿ ಜರಿಸೆರಗ್ಹೊದ್ದು
ಪರಿಮಳವು ಗಂಧ ಬುಕ್ಕಿಟ್ಟು ಘಮಘಮಿಸುತಲಿ
ಇಳೆಮ್ಯಾಲೆ ಇಳಿದು ಬಂದನು ಭಾನುಯೆಂಬಂತೆ
ಅಳಿಯುಗಾ ಮುಗಳ ಮಾಡುವೆನೆಂಬೊ ಸಂಭ್ರಮದಿ
ಭರದಿಂದ ಬರುವೊ ಭೀಮೇಶಕೃಷ್ಣನ ತಂಗಿಯನು ನೋಡಿ
ಬೆರಗಾದರಾ ಕಾವಲಿದ್ದ ಜನರು

## ಧ್ವನಿ—೧೯

ದಾರು ಬಂದವರೆಂದು ದಾರಿಯೊಳಡ್ಡಗಟ್ಟಿ
ಕ್ರೂರ ಖಳರು ನುಡಿದರಾಗಲೆ ೧

ದಾರಾದರೇನು ನಾನು ದಾರಿಯ ಬಿಡೋ ನೀನು
ರಾಯನಲ್ಲೊಂದು ಕಾರ್ಯ ಈಗ ಉಂಟು ೨

ಅರ್ಧರಾತ್ರಿಯಲ್ಲೇನು ಸುದ್ದಿ ಕಾರ್ಯಗಳುಂಟು
ಎಬ್ಬಿಸುವರೆ ಇಂಥ ನಿದ್ರೆಯಲ್ಲಿ ೩

ಈಗಲೆ ಎನ್ನ ಕಾರ್ಯ ಆಗುವೋ ಸಮಯವು
ಹೋಗಿಬರುವೆ ತೆಗೆಯೊ ಬಾಗಿಲನು ೪

ಗಂಡ ಬಿಟ್ಟವಳಂತೆ ಪುಂಡುಗಾರಿಕೆಯಿಂದ
ಕಂಡಕಂಡವರಲ್ಲಿ ಕೆಲಸವೇನು ೫

ಜೀವದಾಸೆಗಳಿಲ್ಲ ಕಾವಲಿದ್ದವರ ಯಮ–
ದೇವನ ಪುರಕಟ್ಟುವೆನೆನ್ನುತ ೬

ಕಿಡಿಕಿಡಿ ಕೆಂಡದಂತೆ ಬಿಡುತ ಕಣ್ಣುಗಳನು
ಸುಡುವಳೊ ನಮ್ಮನ್ನೀಕೆ ಬಿಡುವಳಲ್ಲ ೭

ಧಡಧಡನೋಡಿಬಂದು ಒಡೆಯಗೆ ದೂರಿದರು
ಕಡೆಯ ಬಾಗಿಲೊಳೊಬ್ಬ ಮಡದಿ ಬಂದು ೮

ನಿಮ್ಮಲ್ಲಿ ಕಾರ್ಯವಂತೆ ತ್ವರೆಗೊಂಡೆಸುತಲಿ
ಹಮ್ಮು ಕೊಬ್ಬಿನ ಮಾತು ನುಡಿವಳೀಗ ೯

ಕೇಳಿ ಕಂಗೆಟ್ಟು ರಾಜ ಭಾಳ ಆಶ್ಚರ್ಯಬಟ್ಟು
ಹೇಳಿದ ಕರೆಯಿರೆಂದು ಆಳುಗಳಿಗೆ ೧೦

ಹಸ್ತ ಮುಗಿದು ದಾರಿ ಬಿಟ್ಟರಾಕ್ಷಣದಲ್ಲಿ
ಪಟ್ಟಣದೊಳಗ್ಹೆಜ್ಜೆಯಿಕ್ಕುತಾಗ ೧೧

ಅಂಗಡಂಗಡಿ ಸಾಲು ಶೃಂಗಾರದ ಬೀದಿಯೊಳು ಬೆಳ–
ದಿಂಗಳು ಮೂಡಿದಂತೆ ಬಂದಳಾಗ ೧೨

ಬೆಳ್ಳಿ ಪಾವಟಿಗೆ ಬಂಗಾರದುಪ್ಪರಿಗೆ ಯೇರಿ
ಮೆಲ್ಲನೆ ಬಂದಳ್ಹೇಮಬಳ್ಳಿಯಂತೆ ೧೩

ತಟ್ಟನೆ ಎದ್ದು ರಾಜ ಪಟ್ಟದ್ವಲ್ಲಭೆಯ ಸಹಿತ
ಪಟ್ಟಮಂಚದಿ ಕುಳಿತು ನೋಡುತಿದ್ದ ೧೪

ಅರ್ಜುನನರಸಿ ತಾ ವಜ್ರದ ಗೊಂಬೆಯಂತೆ
ಗೆಜ್ಜೆಸರಪಳಿ ಘಲ್ಲುಘಿಲ್ಲೆನ್ನುತ ೧೫

ಚಂಚಲಾಕ್ಷಿಯು ಮುಖ ಮಿಂಚಿನಂತ್ಹೊಳೆಯುತ
ಪಾಂಚಾಲಿ ಬಂದು ಪರಮ ಹರುಷದಿಂದ ೧೬

ನಿಂತು ಭೀಮೇಶಕೃಷ್ಣ ನಿನ್ನದೀ ಕಾರ್ಯವೆಂದು
ಅಂತರಂಗದಲ್ಹರಿಯ ಸ್ಮರಿಸುತಾಗ ೧೭

## ವಚನ—೨೦

ಭೂಪರೈವರ ಮಡದಿ ದೀಪದಂತ್ಹೊಳೆಯೆ ನಾನಾ-
ಪರಿಯ ರತ್ನಕಾಂತಿಯು ರಾಜಮಂದಿರದಿ
ಈ ಪರಿಯ ಸೊಬಗು ಚೆಲ್ವಿಕೆಯೆಲ್ಲಿ ಕಾಣೆನೆನುತ
ದಾ[ವ]ಪುರದಿ ಬಂದಿರ್ದ್ಹೇಳೆನುತ ಮಾತಾಡುವುದು ಮತ್ತೇನೆಂದರೆ—

## ಧ್ವನಿ—೨೧

ಇಂದ್ರನ್ನ ಶಚಿಯೊ ಚಂದ್ರನ್ನ ರೋಹಿಣಿಯೊ
ಮಂದರೋದ್ಧರನ ಮಡದಿ ಮಾಲಕ್ಷುಮಿಯೊ ೧

ರತಿಯೊ ರೇವತಿಯೊ ಭಾರತಿಯೊ ಪಾರ್ವತಿಯೊ ಸರ-
ಸ್ವತಿಯೊ ದ್ರೌಪದಿಯೊ ಹರಿಸತಿ ಸತ್ಯಭಾಮ್ಯೊ ೨

ನಿನ್ನ ಪಡೆದವ ದಾವ ಧನ್ಯ ಮಹಾರಾಜ
ನಿನ್ನಾಳುವ ಪುರುಷ ಮಹಾ ಪುಣ್ಯವಂತನು ೩

ದಾರಮ್ಮ ನೀನು ಬಂದ ಕಾರಣವೇನು ಹೇಳು ನಿನ
ಕಾರ್ಯ ನಾ ಮಾಡಿ ಕೊಡುವೆನು ೪

ರಾಜ ದ್ರುಪದಗೆ ನಾನು ಮೋಹದ ಮಗಳು
ರಾಯ ದೃಷ್ಟದ್ಯುಮ್ನಗೆ ಭಗಿನಿ ಪಾಂಚಾಲಿ ೫

ಪಾಂಡುಭೂಪರೈವರ ಪಟ್ಟದ ರಾಣಿ
ಪುಂಡರೀಕಾಕ್ಷ ಕೃಷ್ಣಗೆ ನಾ ಕಿರಿ ತಂಗಿ ೬

ಬಂದಕಾರಣ ನಿನ್ನ ಮುಂದ್ಹೇಳುವೆ ರಾಜ
ಸಂದೇಹ ಬ್ಯಾಡ ಮಾಡೆನ್ನ ಕಾರ್ಯವನು ೭

ಅಣ್ಣ ಕೃಷ್ಣನ ಪುತ್ರ ಮನ್ಮಥೆಂಬುವಗೆ
ಕನ್ಯಾದಾನವ ಮಾಡಿ ಧನ್ಯ ನೀನಾಗು ೮

ಕೇಳಿ ಕಿವಿಯಲ್ಲಿ ಕಿಡಿಬಿದ್ದಂತೆ ರಾಜ
ಹೇಳಿ ಕಳಿಸಿದರ್‍ಯಾರು ಈ ಮಾತು ನಿನಗೆ ೯

ವತ್ಸಕಾಯುವ ಕೃಷ್ಣನ ಹೆಚ್ಚು ನಮಗೇನು
ಹುಚ್ಚು ಹಿಡಿದಿಲ್ಲೀಗೆನ ಪುತ್ರಿ ಕೊಡುವುದಕೆ ೧೦

ಕರುವ ಕಾಯುವ ಗೊಲ್ಲನ ಸರಿಬೀಗತನವು
ದೊರೆಗಳಿಗೆದುರೆನೆ ತರವಲ್ಲಿದು ನಮಗೆ ೧೧

ಹಾಗೆನ್ನಬ್ಯಾಡೊ ಎಲ ರಾಜ ಶ್ರೀಹರಿಯು ಮೂ-
ಲೋಕದೊಡೆಯ ಮುರಹರನ ಶ್ರೀಧರನ ೧೨

ಬಲ್ಲೆಬಲ್ಲೆನೆ ನಿಮ್ಮ ಗೊಲ್ಲ ಗೋವಳನ
ಗೊಲ್ಲತಿಯರ ಸೀರೆ ಕದ್ದೋಡಿದವನ ೧೩

ನಿನ್ನ ಸೆರಗಲಿ ಗಂಟ್ಹಾಕಿನ್ನೊಂದು ಮಾತು
ಕನ್ಯೆಬಿಡುವೊಳಲ್ಲೀಗ ನಿನ್ನಾಣೆ ನಾನು ೧೪

ನಡೆ ನಡೆ ಕಡೆ ನಿನ್ನ ಬಡಿವಾರದ ಮಾತು
ನುಡಿವ್ರೋದ್ಯಾತಕೆ ಇಲ್ಲೆ ನಡೆ ನಿನ್ನ ಮನೆಗೆ ೧೫

ಕೃಷ್ಣ ಕೃಷ್ಣ ಭೀಷ್ಮೇಶಕೃಷ್ಣ ಕಾಯೆನುತ
ಗಟ್ಯಾಗ್ಯೊವರುತಲಿ ತಟ್ಟನೆ ತಾ ತೆರಳಿದಳು ೧೬

## ವಚನ—೨೨

ಕೃಷ್ಣ ಕೃಷ್ಣಯೆಂದು ಗಟ್ಯಾಗಿ ಒದರುತಲಿ
ಎಚ್ಚರಿಸಿ ನಡೆದಳಾ ರತಿಯು ದ್ರೌಪದಿ ಬ್ಯಾಗ
ತಟ್ಟನೆದ್ದಾ ತಂದೆ ತಾಯಿ ಬದಿಯಲಿ ಬಂದು
ಚಿತ್ರದಾಗಿನ ಗೊಂಬೆಯಂತೆ ನಿಂತಿದ್ದಳಾಗ

## ಧ್ವನಿ—೨೩

ನಿದ್ರೆವ್ಯಾಳ್ಯದಿ ಮುದ್ದುಮೋಹನ್ನೆ ನೀನೆದ್ದು
ಬಂದಂಥ ಕಾರಣವೇನೆ ಬಂದೆ ಯಾತಕೆ ರತಿ ಸುಂದರಿ ೧

ದಾರು ಬಂದವರ್ಹೇಳೊ ನಿನ್ನಲ್ಲಿ ತಾವು ಕೂಗುತಿ-
ದ್ದರು ಹರಿ ಹರಿಯೆನುತ ೨

ತಂದೆ ನೀನಂದ ಮಾತುಗಳೇನು ಧರ್ಮನರಸಿ ದ್ರೌ-
ಪದಿಯಂತೆ ಮನ್ಮಥಗೆ ನಿನ್ನನು ಮಾಡುವಳಂತೆ ೩

ಹಿಂದೆ ಮಾಡಿದ ಪುಣ್ಯಫಲವೇನು ಇನ್ನು
ಸಂದೇಹ್ಯಾತಕೆ ಎನ್ನ ಕೊಡೋ ನೀನು ೪

ದನವ ಕಾಯುವರೆನ್ನ ಸರಿಯಲ್ಲ ಎನ್ನ
ಮನಕೆ ಬಾರದು ಕೃಷ್ಣನು ಗೊಲ್ಲ ೫

ಗೊಲ್ಲನೆಂಬುವರೇ ಶ್ರೀನಾಥಗೆ ಕೈ-
ವಲ್ಯ ಮುಕ್ತಿಯ ಕೊಡುವ್ಹೋ ದಾತಗೆ ೬

ಅರಸುತನಗಳಿಲ್ಲಾ್ಯದವ ಕೃಷ್ಣ ಅವನ
ಕರೆಸಿ ಕೊಡುವುದಿಲ್ಲೆನಗೆ ಇಷ್ಟ ೭

ಏಕಪಟ್ಟಣಕ್ಕೊಬ್ಬರಸು ನೀನು ಹದಿ-
ನಾಲ್ಕು ಲೋಕದ ದೊರೆ ಹರಿ ತಾನು ೮

ಬೇಡಿದಂತ್ಪರಕೆ ನಾ ಕೊಡುವೆನೆ ಮಾ-
ತಾಡೋದ್ಯಾತಕೆ ಸುಮ್ಮನಿರು ನೀನು ೯

ರುಕ್ಮಿಣಿ ಸೊಸೆ ಆಗದೀಕ್ಷಣ ಇನ್ನು
ಬಿಟ್ಟುಬಿಡುವೆ ಎನ್ನಯ ಪ್ರಾಣ ೧೦

ಬಿಡು ನಿನ್ನ ಚಲವ ಎಂದೆಂದಿಗು ನಾನು
ಕೊಡುವೋನೀಗಲ್ಲ ರುಕ್ಮಿಣಿಸುತಗೆ ೧೧

ಗದಗದ ನಡುಗಿ ಭೂಮಿಲಿ ಬಿದ್ದು ತಾನು
ಹೊರಳುತಿದ್ದಳು ಮುಖ ಬೆವರೆದ್ದು ೧೨

ಬಿದ್ದ ಮಗಳ ಬಿಗಿದಪ್ಪಿದ ಆಕೆ
ಪದ್ಮಮುಖದ ಬೆವರೊರೆಸಿದ ೧೩

ಮಗಳೆಂದು ಮುದ್ದಿಸಬ್ಯಾಡೆನ್ನ ಪ್ರಾಣ
ಬಿಡುವೋದು ನಿಜವು ಕೈ ಬಿಡು ಇನ್ನು ೧೪
ಕೊಡುವೆ ಭೀಮೇಶಕೃಷ್ಣನ ಸುತಗಿನ್ನು
ಬಿಡದಿರು ನಿನ್ನ ಪ್ರಾಣವ ಎನುತ ೧೫

ವಚನ—೨೪

ಪಟ್ಟದರಸಿಯು ಕಳುಹೆ ಪರಮ ಆದರದಿಂದ
ಹಸ್ತಗಳ ಪಿಡಿದು ಹರಿತಂಗಿಯನ್ನು ಕರೆತಂದು
ರತ್ನಪೀಠವನ್ಹಾಕಿ ರಾಜೋಪಚಾರದಲಿ
ಅತ್ಯಂತ ವಿನಯದಿಂದಾಡೋ ಮಾತುಗಳು ಮತ್ತೇನೆಂದರೆ—

ಧ್ವನಿ—೨೫

ಸಮರ್ಯ್ಯಾರಮ್ಮ ದ್ರೌಪದಿ ನಿನಗೆ ನೀ
ಕೋಮಲಾಂಗಿ ಕೊಡುವೆ ಕೃಷ್ಣನ್ನ ಸುತಗೆ
ಕಮಲಮುಖಿಯೆ ಕರುಣದಿ
ದಯಮಾಡೆನ್ನ ಮಗಳನು ಮಾಡಿಕೊಳ್ಳೆ ೧

ಅಮ್ಮಯ್ಯ ಕೇಳೀಗ ಇನ್ನೊಂದು ಮಾತುಂಟು
ನಿನ್ನ ಮುಂದ್ಹೇಳುವೆನು
ನಮ್ಮ ಅಕ್ಕನ ಮಗ ಕೌಂಡ್ರಿಕ(?)ನೆಂಬಾತ
ಘನ್ನ ಸಮರ್ಥನವ ೨

ಹುಟ್ಟಿದಾರಭ್ಯ ನಾ ಕೊಟ್ಟೆನವಗೆ ಮಾತ
ಪುತ್ರಿಯ ಕೊಡುವೆನೆಂದು
ದುಷ್ಟದುರ್ಜನ ಎನ್ನ ಕಟ್ಟಿ ಕೆಡವಿ ಕನ್ಯೆ-
ಯೆತ್ತಿಕೊಂಡೊಯ್ಯೋನವ ೩

ಬಂದದ್ದು ನೋಡಿಕೊಂಬುವನೆಂಬೊ ಧೈರ್ಯವು
ಇಂದು ನಿನಗೆ ಇದ್ದರೆ
ನಂದನೆಯಳ ಕೊಡುವೆನು ಎನ್ನ ಮಾತಿಗೆ
ಸಂದೇಹ ಬ್ಯಾಡೆಂದನು ೪

ಹೇಳಿದಳು ನಗುತ ಸಿಂಹಗಳ ಮಧ್ಯದಲಿ ಶ್ರೀ-
ಗಳಾ (ಸೃಗಾಲ?) ಬಂದುಳಿಯೋದೇನೊ

ಭಾಳ ಯೋಚನೆ ಬ್ಯಾಡ ಬಂದ ಭಯುವ ಮುಂದೆ
ನೋಡಿಕೊಂಬುವೆನೆಂದಳು ೫

ಬರೆದನು ಲಗ್ನಪತ್ರಿಕೆಯು ಕುಂಕುಮ ವೀಳ್ಯ
ತರಿಸಿಟ್ಟು ತಬಕಿನಲ್ಲಿ
ಹರಿಗೆ ನೀಯೆನ್ನ ಬಿನ್ನಪವ ಮುಟ್ಟಿಸು ಎಂದು
ಹರುಷಾಗ್ವಚನ ಕೊಟ್ಟನು ೬

ಲೇಸಾಯಿತೆನ್ನ ಕಾರ್ಯಗಳುಯೆಂದೆನುತಲಿ
ಸೋಸಿಲೆ ನಡೆದು ಬಂದು
ಭೀಮೇಶಕೃಷ್ಣನ ಪಾದಕ್ಕೆರಗಿ ಓಲೆಯು ಕೊಟ್ಟು
ನೀ ಸಲಹೆನುತಿದ್ದಳು ೭

### ವಚನ—೨೬

ಅತ್ತ ದ್ರೌಪದಿಗಭಯು ಕೊಟ್ಟು ಹರಿ ದ್ವಾರಕಾ-
ಪಟ್ಟಣಕೆ ಬಂದು ಪಟ್ಟದ ರಾಣಿ ರುಕ್ಮಿಣಿಗೆ
ಅಷ್ಟು ವಾರ್ತೆಯು ಹೇಳುತಾಗ ರತಿಸುಂದರಿಯು
ನಿಶ್ಚಯುವ ಮಾಡಿ ಬಂದದ್ದು ನಿಜವೆಂದೆನಲು
ಸತ್ಯಭಾಮೆಯು ಕೇಳಿ ಸಂಭ್ರಮದಲಿ ನಗುತ
ಪುತ್ರನ ಮದುವೆ ಉತ್ಸವ ನಾಳಿಗಿರಲಿನ್ನು
ಮತ್ತೀಗ ಸೋಳಸಾವಿರ ಮಂದಿ ಸತಿಯುರನು ಇ-
ವತ್ತಿಗೆ ನೀವು ವಿವಾಹ ಮಾಡಿಕೊಂಡಂತಾಯ್ತು
ದಕ್ಕಿಸಿಕೊಂಡ ನಮ್ಮಕ್ಕ ತಂಗಿಯುರನ್ನು
ಲಕ್ಕುವಿನಾಶನು ಘನ್ಯನಾದೀಮೂರ್ಜಗದೊಳಗೆ
ಸತ್ಯವಾಯಿತು ನಿನ್ನ ಶಪಥವೆಂದೆನುತಿರಲು
ಅತ್ಯಂತ ವಿನಯದಿಂದ ಭಾಮೆ ನುಡಿ ಕೇಳಿ
ಒಪ್ಪಿ ವೈಯಾರಿ ಮಾತಿಗೆ ಭಾಳ ನಸುನಗುತ
ಅಪ್ಪಿ ತನ್ನಂಕದಲಿ ಕುಳ್ಳಿರಿಸಿಕೊಂಡಾಗ
ಚಿತ್ರದಾಗಿನ ಗೊಂಬೆ ಚಿನ್ನದರಗಿಳಿ ನಿನ್ನ
ಬಿಟ್ಟಿಂದಿಗೇಳುದಿವಸವಾಯಿತೆ ನಿನ್ನಗಲಿ
ಕತ್ತಲು ಬೆಳಕುಯೆಂಬೋದು ತಿಳಿಯಲಿಲ್ಲೆನಗೆ
ಚಿತ್ತ ಚಂಚಲವಾಗಿ ಚಿಂತೆಯಿಂದಿರುತಿರಲು
ಮುಖ್ಯ ದ್ರೌಪದಿಯಿಂದ ಮುದ್ದು ಸತಿ ನಿನ ಕಂಡೆ

ರುಕ್ಮಿಣಿ ಮನಸಿಗೊಂದ್ದ ರುಷವಾಯಿತುಯೆನುತ
ಹೆತ್ತ ದೇವಕ್ಕಿ ವಸುದೇವಗ್ವಾರ್ತೆಯು ತಿಳಿಸಿ
ಹಸ್ತಿ ತೇಜಿಗಳ ಅಂದಣ ರಥವು ಪಲ್ಲಕ್ಕಿ
ಸಮಸ್ತ ಯಾದವರೆಲ್ಲ ಸಿದ್ಧವಾಗಿರಿಯೆನುತ
ಸತ್ಯಧರ್ಮರಿಗೆ ಪತ್ರವ ಬರೆದು
ಭೀಮೇಶಕೃಷ್ಣ ಸಂತೋಷದಿಂದಿರುತಿರುವ ಕಾಲದಲಿ
ಇತ್ತ ದ್ರೌಪದಿಯು ಹಸ್ತಿನಾವತಿಗೆ ಬರುತಿರಲು
ಅಷ್ಟೊತ್ತಿಗರ್ಜುನನು ಎಚ್ಚತ್ತು ನೋಡುತಿರಲು
ತನ ಮಿತ್ರೆಯನು ಕಾಣದೇನೆನುತಿದ್ದನು ಎಂದರೆ—

## ಧ್ವನಿ—೨೭

ಎದ್ದನರ್ಜುನ ರೋಷದಿಂದಲಿ
ಮುದ್ದು ಸತಿ ಮಂಚದಲಿ ಕಾಣದೆ
ಒದ್ದು ಹಾಸಿಕೆ ಎದ್ದು ಬಂದನು ಗದ್ರಿಸುತಲಾಗ ೧

ಅಣ್ಣ ಧರ್ಮಜ ಭೀಮ ಏಳಿರೊ
ತಮ್ಮ ನಕುಲ ಸಾದೇವ ಬನ್ನಿರೊ
ನಿಮ್ಮ ಸತಿ ಮತ್ತೆಲ್ಲಿ ಪೋದಳು ನಮ್ಮ ವಂಚಿಸುತ ೨

ಸುರರು ನರ ಕಿನ್ನರ ಗಂಧರ್ವರೊಳು
ಸರಿಯು ನಮಗಿನ್ನುಂಟೆ ಲೋಕದಿ
ಮರುಳು ಮಾಡಿದ ದಾವ ಪುರುಷನೊ ತಿಳಿಯಲಿಲ್ಲೀಗ ೩

ಕಂಡರಾಕೆಯನೊಂದು ಕ್ಷಣದಲಿ
ತುಂಡುಮಾಡುವೆನೆನುತ ಕರದಲಿ
ಗಾಂಡೀವವ ಪಿಡಿದಾಗ ಪಾರ್ಥ ಪ್ರಚಂಡಕೋಪದಲಿ ೪

ಹಾರಿಸುತ ಕುಡಿಹುಬ್ಬು ತನ್ನೆದೆ
ಬಾರಿಸುತ ಬಲಭುಜಗಳನು ಚ-
ಪ್ಪರಿಸುತ ಚೀರ್‍ಯಾಡಿ ಕೂಗುತ ವೀರ ಬೊಬ್ಬಿಡುತ ೫

ಹರವಿ ಕೂದಲು ಶಿರವ ತೂಗುತ
ಕರದಿ ಖಡ್ಗವ ಪಿಡಿದು ತಿರುಗುತ
ನರನು ತಾ ನರಸಿಂಹನಂತೆ ಉಗ್ಗರ(ಉಗ್ರ ?)ವ ತೋರಿಸುತ ೬

ವಲ್ಲಭರ ಭಯಕಂಜಿ ಅಳುಕುತ
ಮೆಲ್ಲಮೆಲ್ಲನೆ ಹೆಜ್ಜೆಯಿಕ್ಕುತ
ಮಲ್ಲಿಗೆ ಶಿರ ಬಾಗಿ ಬಳುಕುತ ಚೆಲ್ವೆ ಬರುತಿರಲು ೭

ಕಾಂತರೈವರು ಕಣ್ಣ ಬಿಡುತಿರೆ
ಎಂತು ಮಾಡಲೆಂದೆನುತ ಯೋಚಿಸಿ
ಶಾಂತಧರ್ಮರ ಬದಿಯಲ್ಲಿ ಬಂದು ನಿಂತಳಾಗ ೮

ಕಡಕಡನೆ ಹಲ್ಲ ಕಡಿಯುತರ್ಜುನ
ಜಡೆಮುಡಿಯ ಪಿಡಿದೆಳೆಯೆ ದ್ರೌಪದಿ
ನಡುಗುತಿರಲಾ ಮುಡಿದ ಮಲ್ಲಿಗೆ ಸಡಲಿ ಚೆಲ್ಲುತಿರೆ ೯

ಬಾಡಿ ತನ ಮುಖ ಧರ್ಮ ಭೀಮನ
ನೋಡಿದನು ಕಡೆಗಣ್ಣ ನೋಟದಿ
ಜೋಡಿಕೊಂಬುವೆ ಬಿಡಿಸೊ ನೀ ತಡಮಾಡೋದ್ಯಾಕಿಸ್ತು ೧೦

ಅಣ್ಣನಾಜ್ಞೆಯು ಕೇಳಿ ಭೀಮನು
ತಮ್ಮನೆದುರಿಗೆ ನಿಂತು ನಗುತಲಿ
ನಮ್ಮ ಸತಿ ಸೆರಗ್ಹಿಡಿದೆಳೆವ್ರೋದಿದು ಧರ್ಮವಲ್ಲೀಗ ೧೧

ಮದವೇರಿದ ಮದ್ದಾನೆಯಂದದಿ
ಒದರಿ ಕೂಗುವುದ್ಯಾತಕರ್ಜುನ
ಹುದವಿಸ ಸತಿ ಅಲ್ಲ(ಅಲ್ಲವೆ?) ದ್ರೌಪದಿ ಜಿದರಿಸುವುದ್ಯಾಕೊ ೧೨

ಸಾಕೊ ಅರ್ಜುನ ಸಲಹೋ ಪುರುಷರು
ನಾಲ್ಕು ಮಂದ್ಯಿರೆ ನಮ್ಮ ಎದುರಿಗೆ
ಆ ಗೋಪಾಲ ಪುರುಷ ನಿನಗಿಷ್ಟ್ಯಾಕೊ ಬಿಂಕಗಳು ೧೩

ಶ್ರೇಷ್ಠನಾದ ಯುಧಿಷ್ಠಿ(ರ?) ರಾಜಗೆ
ಪಟ್ಟದರಸಿಯೆಂದೆನಿಸಿಕೊಂಬೋಳು
ಸಿಟ್ಟುಮಾಡುವುದ್ಯಾತಕೆ ನೀ ದುಷ್ಟತನದಿಂದ ೧೪

ಮೂರು ದಿನದೊಳಗೀಕೆ ಮಹಿಮೆಯ
ತೋರಿಸುವೆ ಭೀಮೇಶಕೃಷ್ಣಗೆ ಕ್ರೋಧ
ಬರದೇನಾಕೆಯನು ನೀ ಬಾಧಿಸುವುದ್ಯಾಕೊ ೧೫

## ವಚನ—೨೮

ಭೀಮನ್ವಚನವ ಕೇಳಿ ಬಿಟ್ಟಾಗ ದ್ರೌಪದಿಯು
ಸೇವುದಿಂದಲಗ್ನಿಯು ಹೊಕ್ಕು ಬರಲೆಂದು
ತೂಗುಮಂಚದಲಿ ಮುಸುಕಿಟ್ಟು ಮಲಗಿರೆ ಪಾರ್ಥ
ಆಗ ಬೆಳಗಾಯಿತರವಿಂದನಾಭನ ಪತ್ರ
ಸಾಗಿ ಬಂದಿತು ಸಕಲವ್ರೋದಿಕೊಂಡನು ಧರ್ಮ
ಬ್ಯಾಗ ಸುಭದ್ರೆ ದ್ರೌಪದಿಯು ಕರೆದ್ಹೇಳಿದನು
ಈಗ ನಿಮ್ಮಣ್ಣ ಸೂರಿಗೆ ಪೈಣವೆಂದೆನಲು
ತೂಗೋ ತಕ್ಕಡಿ ಚಿನ್ನ ರತ್ನ ಮಾಣಿಕ್ಯವಜ್ರ-
ದಾಭರಣವಿಟ್ಟು ಜರಿಸೀರೆಗಳ ನಿರಿದುಟ್ಟು
ತೋರ ಮುತ್ತಿನ ಹಾರಭಾರಕ್ಕೆ ಬಳುಕುತಲಿ
ಬ್ಯಾಗಡಿ ಗೊಂಬೆಯಂಥ ಕೃಷ್ಣೆ ಸುಭದ್ರೆ ಹೋಗಿ
ಏರಿದರು ಹೊಸ ಮುತ್ತಿನಂದಣವನ್ನು
ಸಾದೇವ ನಕುಲ ಭೀಮಾರ್ಜುನರ ಸಹಿತಾಗಿ
ರಾಜಧರ್ಮರು ರಥವನೇರಿ ಬರುತಿರಲಾಗ
ನಾಗ ಹಯ ಪಲ್ಲಕ್ಕಿ ನಾನಾವಿಧ ವಾದ್ಯಗಳು
ಭೇರಿನಾದಗಳು ಕೇಳುತಿರಲು ದ್ವಾರಕೆಗೆ
ಸಾಗರಶಯನ ಸಂಭ್ರಮದಿ ಕರೆತರಲಾಗ
ಬಾಗಿ ಶಿರಗಳನೆ ಭಕ್ತಿಯಲಿ ವಂದನೆ ಮಾಡಿ
ಭಾವಮೈದುನರು ಭಾಳರ್ಥಿಯಿಂದಿರುತಿರಲು
ನಾಗವೇಣಿಯರು ನಾರಾಯಣಗೆ ವಂದಿಸುತ
ಬ್ಯಾಗ ಭೀಮೇಶಕೃಷ್ಣನ ಮಂದಿರಕೆ ಬಂದು
ಭಾಮೆ ರುಕ್ಮಿಣಿಸಹಿತ ಭಾಳ್ಹರುಷದಿಂದಿದ್ದರು

## ಧ್ವನಿ—೨೯

ಬೀಗರು ಬಂದರು ಕಮಲರಾಜನ ದೊಡ್ಡ
ಬೀಗರು ಬಂದರು ಕಮಲರಾಜನ ನಗರಿಗೆ ಪ.

ಕೋಟಿ ಆನೆ ಹಾಕಿದಂಬಾರಿ ಕೋಟಿ ರಥಕೆ ಕಟ್ಟಿದ ತೇಜಿ
ಈಟಿ ಗಾಣಿ(ಗುರಾಣಿ?) ಪಿಡಿದರ್ಹತ್ತು ಕೋಟಿ ಕಾಲಾಳು ಜನರು ೧

ಲಕ್ಷ ಹಿಲಾಲು ಮುಂದೆ ಲಕ್ಷ ಹಗಲುಬತ್ತಿ ಬೆಳಕು
ಲೆಕ್ಕವಿಲ್ಲದ ಬಿರುಸು ಬಾಣ ಉತ್ಸವದಿಂದ ಬಿಡಿಸುತಾಗ ೨

ಭೇರಿ ತುತ್ತೂರಿ ಸಾನಾಯು (ಶಹನಾಯ್?) ಸಕಲ ವಾದ್ಯಗಳಿಂದ
ಚೀರು—
ತಿರುವೊ ಚಿನ್ನದ ಕಾಳಿ ಮ್ಯಾಲೆ ಡಂಕಿ ಹೊಯಿಸುತಾಗ ೩

ನೀಲಮಾಣಿಕ್ಯದಾಭರಣವಿಟ್ಟು ಕಾಲಗೆಜ್ಜೆ ಕಟ್ಟಿ ಕುಣಿವೊ
ಮೇಲು ಮೇಲಾದ ಮ್ಯಾಳದವರು ತಾಳಮುಪ್ಪಲೆ ಬಡಿಸುತಾಗ ೪

ಚಿನ್ನ ಮಾಣಿಕ್ಯದಾಭರಣವಿಟ್ಟು ಹೊನ್ನ್ಹೂವಿನ ಬಾಸಿಂಗವ ಕಟ್ಟಿ
ರನ್ನ ಮಾಣಿಕ್ಯದ ರಥದ ಮ್ಯಾಲೆ ಮನ್ಮಥನ ಕುಳ್ಳಿರಿಸಿಕೊಂಡು ೫

ಉಗ್ರಸೇನ ಉತ್ತಮಕ್ರೂರ ಉದ್ಧವ ಸಾತ್ಯಕಿಯು ಸಾಂಬ
ಅಲ್ಲಿದ್ದ ಯಾದವರೆಲ್ಲರ ಕೂಡಿ ಮದ್ದಾನೆಗಳನೇರಿಕೊಂಡು ೬

ಪಂಚಪಾಂಡವರು ತಮ್ಮ ಪಾಂಚಾಲಿ ಸುಭದ್ರೆ ಸಹಿತ
ಪಂಚರತ್ನದಾಭರಣವಿಟ್ಟು ಮಿಂಚಿನಂತೆ ಹೊಳೆಯುತಾಗ ೭

ಸೋಳಸಾವಿರ ಸತಿಯರೆಲ್ಲ ಭಾಳ ಚಿತ್ರಭೂಷಿತರಾಗಿ
ವಾಲೆ ಮೂಗುತಿ ಒನಪಿನಿಂದ ನೀಲಮಂಪಣವೇರಿಕೊಂಡು ೮

ಮಿತ್ರೆ ಕಾಳಿಂದಿ ಭದ್ರೆ ಲಕ್ಷ್ಮಣ ನೀಲಾ ಜಾಂಬವಂತಿ
ಪಚ್ಚೆಮಾಣಿಕ್ಯದಾಭರಣವಿಟ್ಟು ಹಸ್ತಿಯೇರಿ ಹರುಷದಿಂದ ೯

ಹೆತ್ತದೇವಕ್ಕಿ ವಸುದೇವ ನಂದಗೋಪ ಯಶೋದ
ಮಿತ್ರೆ ರೇವತಿ ಸಹಿತ ಬಲರಾಮ ರಥವನೇರಿಕೊಂಡು ೧೦

ಹೆಡಗೆ ವಜ್ರವಸ್ತ್ರಗಳಿಟ್ಟು ಜಡತ ಮುತ್ತಿನ ಹಾರಗಳ್ಹಾಕಿ ಗ-
ರುಡ[ನ]ನೇರಿ ಭೀಮೇಶಕೃಷ್ಣ ಮಡದಿ ಭಾಮೆ ರುಕ್ಮಿಣಿಸಹಿತ ೧೧

### ವಚನ—೩೦

ಎಲ್ಲ ನಿಬ್ಬಣ ತೆರಳಿ ಬಂದೂರುಮುಂದಿರುವೊ
ಮಲ್ಲಿಗೆ ವನದಿ ಮುತ್ತಿನ ಡೇರೆಯನು ಹೊಡೆಸಿ
ಫುಲ್ಲನಾಭನು ಪುರೋಹಿತನ ಕರೆದ್ವಾಲೆಯನು
ಅಲ್ಲಿಂದ ಕೊಟ್ಟು ಕಳಿಸಿದನಾ ರಾಜಮಂದಿರಕೆ

## ಧ್ವನಿ—೩೧

ಗರ್ಗಾಚಾರ್ಯರು ಹರಿಯಾಜ್ಞೆಯ ಕೇಳಿ ಅ-
ನರ್ಘ್ಯವಾದ ಕಂಠಿಪದಕಗಳ
ಹಿಗ್ಗಿನಿಂದ್ಹಾಕಿಕೊಂಡ್ಹರಿಯ ತೇಜಿಯನು
ಶೀಘ್ರದಿಂದೇರಿ ಬಂದರು ಬ್ಯಾಗ ೧

ಶಾಲು ತಲೆಗೆ ಸುತ್ತಿದ ಗೋಲುಂಗುರ
ಸಾಲು ತುಳಸಿಮಣಿ ಮಾಲೆಗಳು
ನೀಲವಜ್ರದ ಕಡಕಿಟ್ಟು ಕಿವಿಯಲ್ಲಿ
ಮ್ಯಾಲೆ ಜರದ(ರಿಯ?) ಚಾದರ ಹೊದ್ದು ೨

ಹರಿಯ ಪುರೋಹಿತ ನಾನೆಂದೆನುತ
ಗರುವಿನಿಂದ ಮಾತಾಡುತಲಿ
ಅರಮನೆ ಮುಂದಶ್ವವನಿಳಿಯಲು ಕಂಡು
ದೊರೆ ಶಿರಬಾಗಿ ವಂದಿಸುತಿರಲು ೩

ಅರಸಗೆ ಆಶೀರ್ವಾದವ ಮಾಡುತ
ಹರುಷದಿಂದ ಪೀಠದಿ ಕುಳಿತು
ಅರಿಷಿಣದ್ವಾಲಿಯ ಕೊಟ್ಟು ಮೂರ್ಲೋಕದ
ಅರಸು ಶ್ರೀಕೃಷ್ಣ ಬರುವನೆನುತ ೪

ಧನ್ಯಧನ್ಯ ನೀನಾದೆಯೊ ದಾವ
ಜನ್ಮಜನ್ಮ ಸುಕೃತದ ಫಲವು
ಮನ್ಮಥನಯ್ಯನ ಬೀಗತನಾಗಲು
ಪುಣ್ಯರಾಶಿಯು ಫಲಿಸಿತೊ ನಿನಗೆ ೫

ಹೋಗಿ ಬರುವೆ ನಾ ನಾಗಶಯನನ
ಬ್ಯಾಗದಿಂದೆದುರುಗೊಂಬುವುದಕ್ಕೆ
ಈಗ ಬನ್ನಿರಿ ಇಂದಿರಾಪತಿಯಲ್ಲಿಗೆ
ಸಾಗಿ ಪೋಗುವೆನೆಂದೆನುತ ೬

ಚೆಂದ ಚೆಂದದ ಉಡುಗೊರೆ ವೀಳ್ಯವನು
ತಂದುಕೊಟ್ಟನು ತಬಕಲಿ ರಾಜ
ಬಂದು ಭೀಮೇಶಕೃಷ್ಣನ ಬಳಿಗಾಗಲೆ ಆ-
ನಂದವಾದ್ವಾರ್ತೆ ಹೇಳಿದರಾಗ ೭

## ವಚನ—೩೨

ಆಗ ರಾಜನು ತನ್ನ ಊರು ಶೃಂಗರಿಸಿದ
ಬಾಗಿಲಿಗೆ ಕಟ್ಟಿ ಬಂಗಾರದೆಲೆ ತೋರಣವ
ಮ್ಯಾಲೆ ಹರವಿದರು ಹಂದರಕೆ ಚಿನ್ನದ ಗರಿಯು
ತೂಗು ಬಿಟ್ಟರು ಹವಳ ಮುತ್ತಿನ ಗೊಂಚ್ಯಗಳ
ಸಾಲುಗನ್ನಡಿ ನಿಲಿಸಿ ಸಕಲ ಬಜಾರಕ್ಕೂ
ಹಾದಿಯಲಿ ಹಗಲು ಬತ್ತಿ ಬಿರುಸುಬಾಣಗಳು ವಿ-
ಶಾಲವಾದ ಚಿತ್ರಮಂಟಪ ಸರೋವರವು
ಮೇಲುಮೇಲುಪ್ಪರಿಗೆ ಮ್ಯಾಲೆ ಮುಕ್ತಿನ ಗೊಂಬೆ ಹಿ-
ಲಾಲು ದೀವಟಿಗೆ ಕೈಯಲ್ಲಿ ಹಿಡಿದು ಕುಳಿತಿರಲು
ಬೀದಿಯಲಿ ಗಂಧ ಪರಿಮಳದ ತೊಳೆಯನು ಕೊಟ್ಟು
ಆನೆ ಪಲ್ಲಕ್ಕಿ ಕಾಲಾಳು ಕುದುರೆ ದಂಡು
ಭೇರಿ ನೌಬತ್ತು ಬಾರಿಸುತ ಮಂಗಳವಾದ್ಯಗಳ
ಚೀರೋ ಚಿನ್ನದ ಕಾಳೆ ಜೆಲುಮ ಪಾತರದವರು
ಊರ ಬ್ರಾಂಬರು ಉತ್ತಮದ ಮುತ್ತೈದೇರು
ರಾಜ ತನ್ನರಸಿ ಸಹಿತಾಗ ಶೃಂಗಾರವಾಗಿ
ಮಾಣಿಕ್ಯ ಮುತ್ತು ಬಿಗಿದ್ವಜ್ರದ್ವಸ್ತ್ರಗಳುಟ್ಟು
ತೋರಮುತ್ತಿನ ಹಾರ ಪದಕಪಟ್ಟಿಯು ಕಾಂತಿ
ಬ್ಯಾಗ ಮಲ್ಲಿಗೆ ಮುಡಿದು ಬಿಳಿಯ ಪತ್ತಲವುಟ್ಟು
ಬ್ಯಾಗಡಿ ಗೊಂಬೆಯಂಥ ರತ್ನ ಸುಂದರಿಯು
ಮ್ಯಾಲೆ ಜರತಾರಿ ಚಾದರ ಹೊದ್ದು ಬರುತಿರಲು
ಚಾಮರವ ಬೀಸಿ ಛತ್ತುರಿಗೆ ಹಿಡಿಯಲು
ಮುಂದೆ ಮಾಗಧರು ವಂದಿ ಭಟರುಗಳು ಹೊಗಳುತಿರಲು
ಸಾಗಿ ಬಂದ ಸಾಗರಕ್ಕೆ ಬಂದು ನದಿ ಕೂಡಿದ್ಹಾಗೆ
ಭೀಮೇಶಕೃಷ್ಣನ ಸಕಲ ಸಾಮ್ರಾಜ್ಯ ನೋಡಿ ಬೆರಗಾಗಿ
ತಲೆದೂಗಿ ವಂದನೆಗಳನು ಮಾಡಿ ನಿಂತನು
ಮಾರಜನಕನ ಎದುರಿಗಾಗ

## ಧ್ವನಿ—೩೩

ಗಡಿಬಿಡಿ ಮಾಡುತಿಬ್ಬರು ಪುರೋಹಿತರಾಗ
ನಡೆದುಬಂದರು ಲೋಕಮೊಡೆಯನಿದ್ದಲ್ಲೆ ೧

ರಾಜಾಧಿರಾಜ ಕೃಷ್ಣನೆ ಕೇಳಯ್ಯ ಕಮಲ-
ರಾಜ ನಿಂತನು ಬಂದು ರಾಣಿ ಸಹಿತಾಗಿ ೨

ಎಷ್ಟು ಕೃಷ್ಣನು ಧರ್ಮರಾಯ ನಕುಲಾರ್ಜುನರ ಅ-
ಲ್ಲಿದ್ದ ವಾಸುದೇವ ಸಾದೇವರ ಒಡಗೂಡಿ ೩

ಉದ್ಧವ ಸಾತ್ಯಕಿಯು ಬಲರಾಮ ಭೀಮರ ಕೂಡಿ
ಉಗ್ರಸೇನನ ಮುಂದೆ ಮಾಡಿ ಬರುತಿರಲು ೪

ನಡೆದು ಬಂದನು ರಾಜ ಸಡಗರ ಸಂಪತ್ತಿನಲಿ
ಹಿಡಿ ಹಿಡಿ ಬುಕ್ಕಿಟ್ಟು ಕುತ ಕಡಲಶಯನಗೆ ೫

ಹರಿ ದೊರೆಗಳಿಬ್ಬರೊಂದಾಗೆದುರುಗೊಂಬುವುದ
ಹರ ಬ್ರಹ್ಮಾದಿಗಳು ನೋಡ್ವರುಪಬಡುವೋರು ೬

ಎಷ್ಟು ರುಕ್ಮಿಣಿ ಸತ್ಯಭಾಮಾ ರೇವತಿ ಸಹಿತ ಅ-
ಲ್ಲಿದ್ದಷ್ಟ ಮಾಸತಿಯರಿಂದೊಡಗೂಡಿಕೊಂಡು ೭

ಭದ್ರಾ ದ್ರೌಪದಿ ಸೋಳಸಾವಿರ ಸತಿಯರ ಸಹಿತ
ಗೆಜ್ಜೆ ಸರಪಳಿ ಒಂದೊಂದ್ಹೆಜ್ಜೆಯಿಡುತಿರಲು ೮

ಅರಸು ತನ್ನರಸಿಯ ನೋಡಿ ಮಾತಾಡಿದನು
ಸರಸರನೆ ನಡೆಮುಂದಕೆ ಸರಸವ್ಯಾಕೆಂದ ೯

ಕೃಷ್ಣ ರುಕ್ಮಿಣಿ ಭಾಮೇರಿಗಕ್ಕರದಿಂದಲಿ ನುಡಿದ
ವತ್ಸಕಾಯುವೋರ್ಹೆಂಡರಿಗೆಷ್ಟು ಅಹಂಕಾರ ೧೦

ರಾಯ ಧರ್ಮರ ಪಟ್ಟದರಾಣಿ ದ್ರೌಪದಿಯನ್ನು
ರಾಜನರಸಿಗೆ ಎದುರು ಮಾಡಿ ನಿಲಿಸೆಂದ ೧೧

ಆಡಿದ ಕೃಷ್ಣನ ಮಾತ ಕೇಳಿದ ಕಮಲರಾಜ
ಬಾಗಿ ತನ್ನ ಶಿರವ ಕೈ ಜೋಡಿಸಿದನಾಗ ೧೨

ಮೂಢ ಮೂರ್ಖನು ನಾ ನಿನಗಾಡಿದಪರಾಧವನು
ನೋಡಿ ತಪ್ಪಿಡಿಯದೆ ದಯವ ಮಾಡೊ ನೀನೆಂದ ೧೩

ಕರೆದಾಲಿಂಗನೆಕೊಟ್ಟು ಕರದಿ ಬುಕ್ಕಿಟ್ಟುಕುತ
ವರನ ಪೂಜಿಸಿದರು ಪರಮ ಸಂಭ್ರಮದಿ ೧೪

ದುಂಡುಮಲ್ಲಿಗೆ ಕುಂಕುಮ ಗಂಧ ಪರಿಮಳದಿಂದ ತಂ-
ದುಡುಗೊರೆ ವೀಳ್ಯವ ಕೊಟ್ಟರು ಜನರಿಗೆಲ್ಲ ೧೫

ದಕ್ಷಿಣೆ ತಾಂಬೂಲ ತಬಕಲಿ ಸೂರೆಮಾಡುತಲಿ
ಹೆಚ್ಚಿನರಮನೆಗೆ ಕರೆತಂದಿಳಿಸಿದರಾಗ ೧೬

ಮಂಡಿಗೆ ಫೇಣಿಗಳು ಘೃತಸಕ್ಕರೆ ಪರಮಾನ್ನಗಳ
ಉಂಡ ಭೀಮೇಶಕೃಷ್ಣ ಸುತ ಸತಿಯರ ಸಹಿತ ೧೭

## ವಚನ—೩೪

ಬೆಳಗಾಗಲಿದ್ದು ಮಂಗಳ ಸ್ನಾನವನು ಮಾಡಿ
ಎರಡು ಮನೆಯಲಿ ನಾಂದಿಗಳನಿಟ್ಟು
ಅಷ್ಟವರ್ಗಗಳ ಮಾಡುತಲಿ ಅಳಿಯನ್ನಾಗ ಕರೆತಂದು
ಹರಳು ತೆತ್ತಿಸಿದ ಹಸೆಜಗುಲಿ ಮಂಟಪದಿ ಕುಳ್ಳಿರಿಸಿ
ಕುಂದಣ ರತ್ನಮಾಣಿಕ್ಯದಾಭರಣ
ಹೊಳೆವೊ ಮುತ್ತಿನ ಹಾರ ಕಂಠಿ ವರ ಉಪಚಾರ
ಸರಿಯಾಗಿ ಕೊಟ್ಟು ಶತಸಾವಿರ್ವರದಕ್ಷಿಣೆಯು
ಮಗಳು ಮಂಗಳಗೌರಿಯನ್ನು ಪೂಜಿಸುತಿರಲು
ಎಳೆಯ ಕರಿಮಣಿಯ ಕಟ್ಟಿದರು ಮಂಗಳಸೂತ್ರ
ನಳಿನಾಕ್ಷಿ ರುಕ್ಮಿಣಿಯು ನಗುತ ಸೊಸೆಯನು ನೋಡಿ
ಕೊರಳ ಕಂಠಾಭರಣ ಕಟ್ಟಾಣಿ ಸರಪದಕ
ಉರುಗಮುರುಗಿ ವಂಕಿ ವಜ್ರಬಾಜುಬಂದು
ಹರಡಿ ಕಂಕಣ ಹಸ್ತಕಡಗ ಹಿಂಬಳೆ ದ್ವಾರ್ಯ
ಮುರಡಿ ಸರಪಳಿ ಗೆಜ್ಜೆ ರುಳಿ ಪೆಂಡೆ ಪೈಜಣವು
ಹೆರಳುಬಂಗಾರ ಅರಚಂದ್ರರಾಗಟೆ ಗೊಂಡ್ಯ ಗಿಳಿಬಾಳ್ಯ ಬುಗುಡಿ
ಮುತ್ತಿನ ಗಂಟೆ ಸರಪಳಿಯು ಕಳೆಯುಳ್ಳ ಮುಖ ಕೆಂಪುಕಾಂತಿ
ಮುತ್ತಿನ ಮುಕುತ್ಯ ಹೊಳೆವೊ ಬುಲಾಕು ಬೇಸರಿ
ಗಲ್ಲಕರಿಷಿಣವು ಪಣೆಗೆ ಕಸ್ತೂರಿ ಕುಂಕುಮ ಕಣ್ಣ ಕಾಡಿಗೆಯು
ಮುಡಿಗೆ ಮಲ್ಲಿಗೆ ಪಾರಿಜಾತ ಮುತ್ತಿನ ದಂಡೆ
ಬಿಳಿ ಅಷ್ಟಪತ್ರಿಕೆಯು ಬಿಗಿದ ಮುತ್ತಿನ ಕುಬುಸ

ನಡುವಿನಲ್ಲಿಟ್ಟಳಾ ನವರತ್ನದ ಪಟ್ಟ
ಪರಿಮಳವು ಗಂಧ ಪರಿಪರಿ ಅಲಂಕಾರದಲಿ
ಕಡುಮುದ್ದು ಸುರಿಪ್ರೋ ಮುಗಳನು ನೋಡಿ
ಮಹಾರಾಜ ಸಡಗರದಲೆತ್ತಿಕೊಂಡಾಗ
ಮನ್ಮಥನಲ್ಲಿ ಬಿಡಿಮುತ್ತು ಬಿಗಿದ ಸಿಂಹಾಸನದಿ ಕುಳ್ಳಿರಿಸಿ
ನೋಡುತಲಿ ಜನರೆಲ್ಲ ಎವೆಯಿಕ್ಕದ್ಹಾಗಿರುತಿರಲು
ಪಿಡಿದು ವೀಣೆಯ ನಡೆದು ಬಂದಾಗ ನಾರದನು
ಕಡಲ ಶಯನನೆ ಎನ್ನ ಕರೆಸಲಿಲ್ಲ್ಯಾಕೆಂಥ
ಮದುವೆ ಸಂಭ್ರಮಕೆನ್ನ ಮರೆತ್ಯಾ ಸೀನೆಂದೆನಲು
ಮುನಿ ಮಾತು ಕೇಳಿ ಮುಗುಳ್ನಗೆ ನಗುತ
ಶ್ರೀ ಕೃಷ್ಣ ಮನೆ ಬಾಗಿಲೆಲ್ಲಿ ನೀವಿರುವ ಸ್ಥಳ ಮತ್ತೆಲ್ಲಿ
ತಿಳಿಸಿದರೆ ನಾ ನಿಮ್ಮ ಕರೆಸಿಕೊಂಬುವೆನೆನಲು
ಹರುಷವಾಯಿತು ನಿನ್ನ ಮಾತು ಕೇಳುತ ನಮಗೆ
ಕೆಲಸ ಕಾರ್ಯಗಳುಂಟು ಹೋಗಿ ಶುಭ ಮುಹೂರ್ತ
ಕಾಲಕೆ ಬರುವೆನೆನುತ ಭೀಮೇಶಕೃಷ್ಣಗೆ ಹೇಳಿ
ಸರಸರನೆ ನಡೆದ ಕೌಂಡ್ರಿಕ ಪಟ್ಟಣಕ್ಕೆ

## ಧ್ವನಿ—೩೫

ಓಡುತೋಡುತ ಬಂದ ನಾರದ
ಮಾಡುತಲಿ ಮಾಧವನ ಭಜನೆಯ
ನೋಡುತಲಿ ಕೌಂಡ್ರಿಕನೆದುರು ಮಾತಾಡುತಿರಲಾಗ ೧

ಮಾವ ಮಾಡಿದ ಕೃತ್ಯಗಳ ಕೇಳೀ
ಗೋವಳನ ಮನೆಗ್ಹೆಣ್ಣು ಕೊಟ್ಟನು
ಹ್ಯಾವವಿದ್ದರೆ ಹೋಗಿ ಕರೆತಾ ಸಾವಿಗಂಜದಲೆ ೨

ಮೂಢ ಮೂರ್ಖನೆ ನಿನ್ನ ಸೃಷ್ಟಿಯ
ಮಾಡಿದಂಥ ಬ್ರಹ್ಮ ಪಣೆಯಲಿ
ಖೋಡಿಲಿಖಿತವ ಬರೆವನಿದಕೇನ ಮಾಡಲಿನ್ನೇನು ೩

ಹೇಡಿ ಮನುಜ ನೀನಾದರಾ ರತಿ
ಮಾಡಿಕೊಳ್ಳದೆ ಬಿಟ್ಟರೀಗಿನ್ನು
ಏಡಿಯಂದದಿ ಮುಖವು ಇಲ್ಲವೆ ಓಡ್ಯಾಡುವುದೆ ನೀನು ೪

ಮಂದಬುದ್ಧಿಯು ಮದಡ ಪಾಮರ
ಒಂದು ವಾರ್ತೆಗಳರಿಯದಿದ್ದಿಯೊ
ಕುಂದು ಬಂದಿತೊ ನಿನ್ನ ಮನಕಾನಂದವಿನ್ಯಾಕೊ ೫

ಬಲ್ಲೆ ಬಲ್ಲೆನು ನಿನ್ನ ಶೌರ್ಯವ
ಗೊಲ್ಲ ಕೃಷ್ಣಗೆ ಅಂಜಿ ಕುಳಿತೆಯೊ
ಗಲ್ಲಿ ಮೀಸೆಗಳ್ಯಾತಕಿವು ತೆಗಿ ಗಲ್ಲದಲ್ಲಿ ೬

ಪದುಮ ಲೋಚನೆಯಿಂದ ಸುಖದಿ ನೀ
ಮುದದಿ ಮುಪ್ಪಿನ ತನಕ ಬಾಳುವಿ
ಒದೆಸು ಬಂದರೆ ಒಂದು ದಿನ ನಿನ್ನೇನು ಮಾಡುವುದೊ ೭

ಅಂದ ಮಾತುಗಳನು ಕೇಳಿ ರೋಷದಿ
ಅಂದಣವ ತರಿಸೇರಿದಾಕ್ಷಣ
ಬಂದ ಕಮಲಾವತಿಯ ಮಂದಿರಕೆ ತಾನು ೮

ಸೊಕ್ಕಿ ಮದವೇರಿದ ಗಜಗಳಂತೆ ಉರಿಯುತ
ಹೊಕ್ಕ ಸಭೆಯೊಳು ಬೆಕ್ಕು ಮೂ–
ಷಕ ನೋಡಿದಂತೆ ಕಂಡನಾ ರತಿಯ ೯

ಒಂಟಿರಟ್ಟೆಯಲ್ಪಿಡಿದು ಎತ್ತಿದ
ಕಂಠದಲ್ಲಿ ಕುಳ್ಳಿರಿಸಿ ಕೊಂಡನು
ಸುಂಟರ ಗಾಳ್ಯಯಂತೆ ಹಾರಿವ ತನ್ನ ರಥಕಾಗ ೧೦

ಗಡಗಡನೆ ರಥ ನಡೆಸುತಿರಲು
ನಡುಗುತಲಿ ಬಿದ್ದ್ಹೊರಳುತಾ ರತಿ
ಬಿಡಿಸಿಕೊಂಬುವರಿಲ್ಲವೆನುತಾರ್ಭಟಿಸಿ ಕೂಗುತಿರೆ ೧೧

ಬಂದು ಭೀಮೇಶಕೃಷ್ಣನ ಅರ–
ವಿಂದ ಪಾದಕೆ ಬಿದ್ದ ರಾಜನು
ಮುಂದೆ ಗತಿಯೇನಿದಕುಪಾಯವ ಚಿಂತಿಸೀಗೆಂದ ೧೨

ವಚನ—೩೬

ಫಕ್ಕನೆದ್ದಳು ಸತ್ಯಭಾಮೆ ಸರ್ವೋತ್ತಮಗೆ
ನಕ್ಕು ನುಡಿದಳು ನಿಮ್ಮ ಸೊಸೆಯ ತರುವುದಕಿನ್ನು

ಚಕ್ಕನೆ ಏಳೊ ಏಳದಲ್ಯಾಕೆ ಕುಳಿತಿದ್ದಿ
ಮತ್ತ್ಯಾರ ಭಯವೊ ಮಾಧವನೆ ನಿನಗೆಂದೀಗ
ರುಕ್ಮಿಣಿಯ ತರುವ ಕಾಲಕೆ ರುಕುಮ ನಿನ್ನ
ಬೆನ್ನಟ್ಟಿ ಬರುತಿರೆ ಗಡ್ಡ ಕೆತ್ತಿ ಪನ್ನಿಯ ತೆಗೆದಿ
ಮತ್ತೀಗ ರತಿಯ ರಥದಿಂದೆ ಹೋಗುವಿ ನೀನು
ಕೊಟ್ಟು ಬರಬ್ಯಾಡ ಕೌಂಡ್ರಿಕಗೀ ಮಾಸೆಯನು
ಅಕ್ಕ ರುಕ್ಮಿಣಿ ರತ್ನ ಸುಂದರಿಯು ಸಮನಾಗಿ
ದುಃಖ ಪ್ರಳಾಪ ಸಂತಾಪದಿಂದಿರುತಿರಲು
ಚಕ್ಕಂದವೇನೊ ಅವನನೆ ನೋಡಿ ನಿನಗೀಗ
ಚಿಕ್ಕರತಿ ತಂದು ನಮ್ಮಕ್ಕಗೊಪ್ಪಿಸುಯೆನಲು
ಅಕ್ಕರದ ಸತಿಯ ನುಡಿ ಕೇಳಿ ಭೀಮೇಶಕೃಷ್ಣ
ಚಕ್ರವನು ಪಿಡಿದು ನಡೆದಾಗ ಕೌಂಡ್ರಿಕನಿಂದೆ

### ಧ್ವನಿ—೩೭

ಬಂದ ಕಮಲರಾಜ ಭೂಪ ಹಿಂದೆ ಕೃಷ್ಣ ಬರಲು ಕೋಪ-
ದಿಂದ ಕೌಂಡ್ರಿಕನ ಮಾತಾಡಿಸಿದನು ೧

ಹಿಂಡು ಹಿಂಡು ಕಮಲರಾಜನ ದಂಡು ರಥಕೆ ಸುತ್ತಿ-
ಕೊಂಡು ಪುಂಡ ಎನ್ನ ಮಗಳ ಬಿಡು ಬಿಡೆಂದ ರಾಜನು ೨

ನೀನು ಮಾವ ನಾನು ಅಳಿಯ ಗೋವಳನಕೆಂತ ಕಡೆಯ
ಮಾಡೆ ಅವನ ಮಡುಹಿ ರತಿಯನೊಯ್ವೆಯೆಂದನು ೩

ದುಷ್ಟ ದುರುಳ ನಿನ್ನ ಎದೆಯ ಕುಟ್ಟಿ ಕೆಡೆವೆನೆನುತಲಾಗ
ಮೆಟ್ಟನಿಂತು ಬಾಣವನ್ನು ಬಿಟ್ಟರಾಜನು ೪

ಬಂದ ಕಮಲರಾಜನ ಬಾಣ ಖಂಡ ತುಂಡ ಮಾಡಿ ನಡುವೆ
ಒಂದು ಬಾಣ ಬಿಡಲು ಮೂರ್ಛೆಗೊಂಡ ರಾಜನು ೫

ದೊರೆಯು ಮೂರ್ಛೆಗೊಂಡನೆಂದು ಹರಿಯು ಭಾಳ ಕುಪಿತನಾಗಿ
ಶಿರವ ತರಿವೆನೆನುತ ಶರವ ಬಿಟ್ಟನಾಗಲೆ ೬

ಬಿಟ್ಟಬಾಣ ತಡೆದು ಬಿಡಲು ಕೃಷ್ಣನೆದೆಗೆ ಕಾರ್ಮುಕವನು
ಮೂರ್ಛೆಗೊಂಡಂತಾದ ಮಾಯಕಾರ ಕೃಷ್ಣನು ೭

ಕಂತುಪಿತನು ಬಿಡಲು ಯುದ್ಧ ಕುಂತಿ ಸುತರು ರೋಷದಿಂದ
ನಿಂತು ಯುದ್ಧ ಮಾಡುತ ಬಿಟ್ಟಾಕುಂತಾಯುಧಗಳ ೮

ಅರ್ಜುನನ ಬಾಣ ಹುಲ್ಲು ಕಡ್ಡಿಯಂತೆ ಮುರಿದು ತೂರಿದು
ಅರ್ಧ ಚಂದ್ರಾಯುಧವ ಬಿಟ್ಟ ನೆಲಕೆ ಕೆಡಹಿದ ೯

ಬಲನು ಮುಸಲನ್ಹೊತ್ತು ಹಲಾಯುಧನು ಯುದ್ಧ ಮಾಡುತಿರಲು
ಬಲಗೆ ಬಲ್ಲಾಯುಧವ ಬಿಟ್ಟು ಕೆಡಹಿದಾಕ್ಷಣ ೧೦

ಉದ್ಧವ ಸಾತ್ಯಕಿಯು ಸಾಂಬ ಪ್ರದ್ಯುಮ್ನ ಸಾದೇವ ಸಕಲ
ಮುದ್ಗರಾಯುಧ ಪಿಡಿದು ಯುದ್ಧ ಮಾಡುತಿದ್ದರು ೧೧

ಬಂದವೀರ ಸುರರನೆಲ್ಲ ಖಂಡ ತುಂಡ ಮಾಡಿ ನಡುವೆ
ಬಂಡಿ ಬಲಾಯುಧವ ಬಿಟ್ಟ ನೆಲಕೆ ಕೆಡಹಿದ ೧೨

ಉಗ್ರಸೇನನಕ್ರೂರ ವಸುದೇವ ವಸುಧೆಪಾಲ ಧರ್ಮ ಯು–
ದ್ಧಕೆನುತ ಬಂದು ಸನ್ನದ್ಧರಾದರು ೧೩

ಹಿಂಡು ಹಿಂಡು ಜನವು ಬರಲಿ ರುಂಡವ ಹಾರಿಸಿ ಬಿಡುವೆನೆನುತ
ಶುಂಡದಂಡದಂತೆ ಕರಗಳೆತ್ತಿ ನಿಂತನು ೧೪

ಎದ್ದು ನಿಂತು ರಣದ ಒಳಗೆ ತಿದ್ದಿ ತನ್ನ ಮೀಸೆಗಳನು
ಮುದ್ದುರತಿಯ ಮುಖವ ನೋಡಿ ನಗುತಲಿದ್ದನು ೧೫

ಅಲ್ಲಿವಾರ್ತೆಗಳನು ತಂದು ಎಲ್ಲ ರುಕ್ಮಿಣಿಗ್ಹೇಳುತಿರಲು
ತಲ್ಲಣಿಸುತ ಬಿದ್ದಳಾಗ ರತ್ನಸುಂದರಿ ೧೬

ಹಿಡಿದು ಭೀಮೇಶಕೃಷ್ಣರಾಯನ ಮಡದಿ ರುಕ್ಮಿಣಿ ಚರಣವನ್ನು
ನಡುಗುತ್ಹೇಳಿಕೊಂಡಳು ಪ್ರಾಣ ಬಿಡುವೆನೆನುತಲಿ ೧೭

## ವಚನ—೩೮

ರಂಭೆರುಕ್ಮಿಣಿ ನೀವು ಬಂದ ಜನರೊಳಗಿನ್ನು
ಗಂಡು ನೊಣವಿಲ್ಲದಂತಾಯಿತೀ ಕಾಲದಲೀ–
ಸಂಗ್ರಾಮಕೆ ನಿಲ್ಲೋಣ ಹೆಂಗಸರಿದ್ದರೀಗಿನ್ನು
ಇಂದು ವಿಚಾರಿಸುತ ಈಗ ಕಳುಹೆಂದ್ಹೇಳಿಕೊಂಡಳಾಗಂಬುಜಾಕ್ಷಿ

## ಧ್ವನಿ—೩೯

ಹೇಳೆ ರತ್ನಸುಂದರಿ ಮಾತು ಕೇಳಿದಳಾಗ ರುಕ್ಮಿಣಿಯು
ಬಾರಮ್ಮ ದ್ರೌಪದಿ ನಿನ ಕೀರ್ತಿ ತೋರೀಗೆಂದಳು ೧

ಹರದಿ ರುಕ್ಮಿಣಿ ದ್ರೌಪದಿ ಹೊದ್ದ ಜರಿಯ ಸೆರಗನ್ಹಿಡಿದುಕೊಂಡು
ಸರ್ವರು ಬಿದ್ದಂಥ ಪರಿಯ ನೋಡೀಗೆಂದಳು ೨

ದ್ವಾರ್ಯದ ಕೈಹಿಡಿದು ಸತ್ಯಭಾಮೆ ತಾ ಮಾತಾಡಿದಳು
ನಾನು ಮಾಡಿದ ಕಾರ್ಯವಾರುತಿದ್ಪವೋರೆಂದಳು ೩

ಪಂಥಗಾರಳೆ ನೀ ನಮಗೆ ಇಂಥ ಕದನದ ಕನ್ಯೆಯನ್ನು
ಎಂತು ಮಾಡಿದಿ ಇದಕುಪಾಯ ಚಿಂತಿಸ್ಹೇಳೆಂದಳು ೪

ಕೆಂಡ ತಾಯಿ ತಂದೆ ಹೋಮಕುಂಡ ನಿನ್ನ ತೌರುಮನೆಯು ಭೂ-
ಮಂಡಲದೊಳು ನಿನ್ನ ಕೀರ್ತಿ ಕಂಡವರ್ಯಾರಿಲ್ಲ ೫

ದುಷ್ಟ ದುಶ್ಯಾಸನನು ನಿನ್ನ ಮುಟ್ಟಿ ಮುಡಿ ಪಿಡಿದೆಳೆಯೆ ಸೀರೆ
ಜಿಟ್ಟದಂತೆ ತೋರಿದ ಮಾಯವೊಂದಿಷ್ಟು ತೋರೆನಗೆ ೬

ಬಂದು ಸೈಂಧವ ನಿನ್ನ ಹಿಡಿದುಕೊಂಡು ರಥದೊಳೋಡುತಿರುವಾ-
ಗಂಪೇ ಬಿಡಿಸಿ ಕೊಂಡ ಧೈರ್ಯವ ಇಂದು ತೋರೆನಗೆ ೭

ನೂರು ಮಂದಿ ಕೀಚಕರನುಪಾಯದಿಂದ ಕೊಲಿಸಿ ನೀನು
ಭಾವ ಮೈದುನರನ್ನು ಮಡುಹಿ ಆಳಿದೆ ಪಟ್ಟವ ೮

ಜ್ಞಾನಿ ದೂರ್ವಾಸರನು ನೀನು ಸ್ನಾನಕ್ಕೆಂದು ಕಳಿಸಿ ತಿರುಗಿ
ಬಾರದಂತೆ ತೃಪ್ತಿಪಡಿಸಿದ ಮಾಯ ತೋರೆನಗೆ ೯

ಅಣ್ಣ ಧರ್ಮರೆದುರು ನೀನರಣ್ಯವಾಸದಲ್ಲಿ ನೇರಿ-
ಲ್ಹುಣ್ಣಿಗೆರಡು ತೂಬು ಮಾಡಿದಿ ಘನ್ನಗುಣಸಿಧಿಯೆ ೧೦

ಇಷ್ಟು ಗುಣವಿದ್ದರು ಭೀಮೇಶಕೃಷ್ಣನ್ನೊಲಿಸಿಕೊಂಡವ್ಯಾಲೆ ಇ-
ದೆಷ್ಟು ಕಾರ್ಯವೆ ನಿನ್ನ ಮಗಳ ತಟ್ಟನೆ ತರ ಹೋಗೆ ೧೧

## ವಚನ—೪೦

ಅಂದ ಮಾತನು ಕೇಳಿ ಅತಿರೋಷದಿಂದಾಗ
ಬಂದು ಕೌಂಡ್ರಿಕನಂದಣಕಡ್ಡ ಕಟ್ಟುತಿರೆ

ಮುಂದೆ ಪೋಗುವುದ್ಯಾಕೆ ಮೂರ್ಖ ಎನ ಮಗಳ ಬಿಡುಬಿ-
ಡೆಂದು ಮಾತಾಡಿದಳು ಕೋಪದಿಂದ

## ಧ್ವನಿ—೪೧

ಕೆಟ್ಟ ಮನುಜ ನಿನಗೆಷ್ಟ್ಹೇಳಿದರು
ಹುಟ್ಟವಲ್ಲದೆ ಜ್ಞಾನ ಬುದ್ಧಿ
ಕೃಷ್ಣೆ ಮಾತು ಕೇಳುತ ಭುಜ ಚಪ್ಪರಿ-
ಸ್ಯಟ್ಟಹಾಸದಿ ನಗುತಿದ್ದ ೧

ಯಾಕೆ ನಗುವುದೊ ಪೋಕಮನುಜನೆ
ಸಾಕಾಯಿತೆ ನಿನ್ನ ದೇಹಯಿನ್ನು
ಆಕಳ ಪಾಲನ ತಂಗಿ ನಿನ್ನನು ಕ-
ಟ್ಟ್ಹ್ಯಾಕುವೆನೀ ರಥದಲ್ಲೆ ೨

ಪತಿತ ನಿನ್ನ ಹತ ಮಾಡುತ ನಾ ಶ್ರೀ-
ಪತಿ ಸೊಸೆಯನು ಕರದೊಯ್ವೆ
ರಥಿಕರಥಿಕರನೆ ಮಡುಹಿದೆ ನಾ ದ್ರೌ-
ಪತಿ ನಿನಗಂಜುವನಲ್ಲ ೩

ಕೊಯ್ದು ನಿನ್ನ ಕುತ್ತಿಗೆ ಯಮಲೋಕ-
ಕೆಯ್ದಿಸುವೆನು ನಾ ನಿನ್ನ
ಐದು ಮಂದಿಗರಸ್ಯಾಗಿರೋದೆ ನನ್ನಾ-
ಯುಧಕಾಹುತಿ ಆಗೆಂದ ೪

ಹದ್ದು ಕಾಗೆಗ್ಹಬ್ಬವ ಮಾಡುಣಿಸುವೆ
ಒದ್ದು ಸೀಳಿ ನಿನ ದೇಹ
ಯುದ್ಧರಣದಿ ಸಂಹರಿಸುವೆನಾ-
ನೆಂದೊಬ್ಬಾಣವ ಬಿಡುತಿದ್ದ ೫

ರೋಷದಿಂದ ಭೀಮೇಶಕೃಷ್ಣನ ನಿಜ
ದಾಸಿಯೆನಿಸಿ ನಾನಿನ್ನು

ನಾಶ ಮಾಡದೆ ಬಿಡುವೆನೆ ನಿನ್ನೀಗೆನು-
ತ ಶಿರ ತೂಗಿದಳಾಗ ೬

ವಚನ—೪೨

ಪುಂಡ ಕೌಂಡ್ರಿಕ ನಿನ್ನುದರ ಬಗೆದೋಕುಳಿಯ
ಕೊಂಡವನು ಮಾಡಿ ರಕ್ತವ ಸೂರೆಮಾಡುತಲಿ ಪ್ರ-
ಚಂಡ ನಿನ ಶಿರವ ನಾ ಚೆಂಡನಾಡುವೆನೆಂದು ಭೂ-
ಮಂಡಲ್ಲಿಡಿಯುವೆ ನಿಂತು ಬೆಳೆದಳಾ ಗಗನಕಾಗ

ಧ್ವನಿ—೪೩

ನೋಡಿರೀ ದ್ರೌಪದಿ ಚರಿಯ ಕೊಂಡಾಡಿರೀಕೆಯ ಮಹಾ ಶೌರ್ಯ
ಆಡುತಾಡುತ ಮಾತುಗಳ ತಾ ನೋಡುತಲಿ ಕೌಂಡ್ರಿಕಸಂಗವ
ಮಾಡುತಲಿ ಅವನ್ಹತವ ಶಿರ ಚೆಂಡಾಡಿದ ಗಂಭೀರ ಗುಣಗಳ ಪ.

ಉರ್ವಿ ಮ್ಯಾಲೂರಿ ಪಾದವನು ನಿಂತು
ದೂರ ಬೆಳೆಸಿ ಶರೀರವನು ಸ್ಥೂಲವಾಗಿದ್ದ ಕಾಯವನು ಕಂಡು ತಾ
ಬೆರಗಾದ ಮಾಯವನು ಸೂರ್ಯ ಚಂದ್ರಮ
ತಾರಾ ಗಣಗಳು ತೋರುತಿರಲಾ ಮುಖದ ಮಧ್ಯದಿ
ಮಾರಿ ದುರ್ಗಿ ಚೆಂಡಿಯೊ ಮಾಂಕಾಳಿಯೊ ಮಹಾಘೋರ ರೂಪವ ೧

ಉಟ್ಟಳು ಬಿಳಿಯ ಪತ್ತಲವ ಮ್ಯಾಲೆ
ತೊಟ್ಟು ಕುತ್ತನಿಯ ಕುಪ್ಪಸವ
ಪಟ್ಟಿ ಕುಂಕುಮ ಹಚ್ಚಿ ನೊಸಲೊಳು ಇಂಥ
ದುಷ್ಟನ ಮ್ಯಾಲೆ ಸಾಹಸವೊ ಅಷ್ಟಭುಜ
ಅಷ್ಟಾಯುಧಂಗಳ ಕತ್ತಿ ಖಡ್ಗವ ಪಿಡಿದು ತಿರುಗುತ
ಕೆಟ್ಟ ಕೌಂಡ್ರಿಕನ್ನ ಎದೆಯ ಮೆಟ್ಟಿ ಸೀಳುವೆನೆನುತಲಾಗ ೨

ಆಲಯದಂಥ ಕಿವಿಗಳು ಬಂಡಿ-
ಗಾಲಿಯಂಥ[ಹ]ರಳಿನ್ವಾಲೆಗಳು
ಜೋಲು ಬಿದ್ದಂಥ ತುಟಿಗಳು ದೊಡ್ಡ
ಭೇರಿಯಂತಿದ್ದ ಸ್ತನಗಳು ಕಾಮನ-
ಬಿಲ್ಮಾಡಿದಂತೆ ನೀಲವೇಣಿಯ ಹುಬ್ಬುಗಳು ವಿ-
ಶಾಲ ನೇತ್ರದಿ ಕಿಡಿಗಳು ಹೂಬಾಣದಂತಾಗ್ಹಾರುತಿರಲು ೩

ರಥ ಚಕ್ರದಂಥ ನೇತ್ರಗಳು ತಿರು-
ಗುತಲಿದ್ದ ಕಣ್ಣುಗುಡ್ಡೆಗಳು ಉ-
ನ್ನತವಾದ ಮೂಗು ಮಾಟಗಳು ಪ-
ರ್ವತದಂತೆ ಹೊಟ್ಟೆ ಪಿಸ್ತ್ನಗಳು
ಮಿತಿಯುಯಿಲ್ಲದೆ ತೆರೆದು ಬಾಯಾರ್ಭಟದಿ ಕೋರೆಹಲ್ಲು ನಾಲಿಗೆ
ಶತಯೋಜನ ಪರಿಯಂತ್ರ ಚಾಚಿ ಅತಿ ಭಯಂಕರವಾಗಿ
ತೋರ್ಪಳು ೪

ಭೂಮಿಯಲ್ಲಲಿವಂಥ ಹೆರಳು ಬಂಗಾ-
ರ ಮಾಣಿಕ್ಯದ್ವಸ್ತ್ರಗಳು ಮ್ಯಾ-
ಲೆ ಮಲ್ಲಿಗೆ ದಂಡೆ ಅರಳು ನಿಂತು ಕಾ-
ಲ್ಯಮನಂತೆ ಕಾಂಬುವಳು ಸಾಲುಕುಂಬಳ ಕಾಯಿ
ಸಮನಾದಾಣಿಮುತ್ತಿನ ಮುಕುರ್‍ಯ ಪ್ರತ್ಥಳಿ ಹಾರ ನೋ-
ಹನ್ಮಾಲಿಗಳು ಜೋಕಾಲಿಯಂತೊಲಿದಾಡುತಿರಲು ೫

ಕಂಡು ಕಣ್ಣುಗಳ ಮುಚ್ಚುತಲಿ ಉಟ್ಟು
ಕೊಂಡ ವಸನಗಳುಚ್ಚುತಲಿ ಮುಂದೆ ಮೂತ್ರಗಳ
ಬಿಡುತಲಿ ದಂತದಿಂದ ನಾಲಿಗೆಯು ಕಚ್ಚುತಲಿ
ಇಂದು ಈಕೆ ಎನ್ನ ಪ್ರಾಣವ
ಕೊಂಡು ಹೋಗುವಳೆನುತ ಎದೆ ಝು-
ಲ್ಲೆಂದು ಎಚ್ಚರವಿಲ್ಲದೆ ನಾರಂದ ತಂದ ಮೃತ್ಯುಯೆನುತ ೬

ಬಡಬಡನ್ನಲ್ಲ ಕಡಿಯುತಲಿ
ಘುಡಿ ಘುಡಿಸುತ ಘನ ಘೋಷದಲಿ
ಘಡ ಘಡನ್ನಲ್ಲ ಮುರಿಯುತಲಿ ಧಡ
ಧಡ ರಥದಿಂದ ಕೆಡೆಯುತಲಿ ಛಡಛಡನೆ
ಸಿಡಿಲಂತೆ ಗರ್ಜಿಸಿ ಒಡಲು ಬಗೆದು ಕಿತ್ತು ಕರುಳ
ಹಿಡಿದು ಸೂರ್‍ಯಾಡುತಲಿ ರಕ್ತವ ಆಡವಿಯುಲ್ಲಾರ್ಭಟ ಮಾಡುತ ೭

ಅವನಿಯುಲ್ಲಾದ ಕಾರ್ಯಗಳು ಇಂಥಾ
ಪವನನ್ವಲ್ಲಭೆಯು ಶೌರ್ಯಗಳು
ಅಮರಾದಿ ಸುರರೆಲ್ಲ ಅರಳು ಪುಷ್ಪ ಮಳೆ ಕರೆದರು
ದೇವತೆಗಳು ದುಂದುಮಿ ಭೇರಿಗಳು ದಂಥ-

ಣವೆಂದು ಬಾರಿಸೆ ಬ್ರಹ್ಮಭವರು ಇಂದು ದ್ರೌಪದಿಗೀಗ ಜೈ
ಜೈಯೆಂದು ಗುಣ ಕೊಂಡಾಡುತಿಹರು ೮

ಭೀಮನ್ವಲ್ಲಭೆಯು ನೋಡುತಲಿ ಕೃಷ್ಣ
ತಾ ಮಹಾ ಹರುಷಬಡುತಲಿ
ಕಾಮ್ಯ ಧರ್ಮಾರ್ಥ ನೀಡುತಲಿ ಎನ್ನ ಪ್ರೇಮಕ್ಕೆ ಪಾತ್ರಳೆನಿಸುತಲಿ
ಕಾಮಿನಿ ದ್ರೌಪದಿಯ ಮಹಿಮೆ ಕೇಳಿದ ಸಜ್ಜನರಿಗೆಲ್ಲ
ಭೂಮಿಪತಿ ಭೀಮೇಶಕೃಷ್ಣನು ತಾ ಒಲಿದು
ಮನೋಭೀಷ್ಟ ಕೊಡುವನು ೯

## ವಚನ—೪೪

ಯುದ್ಧಮಂಡಲದಲ್ಲಿ ಬಿದ್ದ ಯಾದವರೆಲ್ಲ
ಪದ್ಮನಾಭನು ನೋಡೆ ಕರುಣ ಕಟಾಕ್ಷದಲಿ
ನಿದ್ರೆ ತಿಳಿದೆಚ್ಚರಾದಂತಾಗ ಜನರೆಲ್ಲ
ಎದ್ದು ಕುಳಿತರು ಯದುಕುಲೇಶನ ಕೃಪೆಯಿಂದಲಿ

## ಧ್ವನಿ—೪೫

ಇದು ಏನಣ್ಣ ಈಕೆಯು ದಾವ್ಹೆಣ್ಣ
ಇದು ಏನಣ್ಣ ಈಕೆಯು ದಾವ್ಹೆಣ್ಣ ಪ.

ಬೆದರುತ ನಾನು ಮುಚ್ಚುವೆ ಎನ್ನ ಕಣ್ಣ
ಬಂದು ನೋಡಿದ ಭೀಮಸೇನನಾಗ ತನ್ನರಂ-
ಭೆ ದ್ರೌಪದಿ ಮುಖವನು ತಾ ಬ್ಯಾಗ ಹಿಡಿಂಬಿ ರಾಕ್ಷಸಿಗೆ
ಮೀರಿದಳೆಂದಾಗ ೧

ನೋಡು ನೋಡಯ್ಯ ಈಕೆಯ ದೇಹ ತುಂಡು
ಮಾಡೊ ಮಾಡೊ ಮಹಾತ್ಮಳ ಕಾಯು ನೀ ಬೇಡಿದ
ಖಡ್ಗ ಕೊಡುವೆನರ್ಜುನರಾಯ ೨

ನೋಡಲಾರೆನು ಈಕೆ ರೂಪವನು ಇಂಥ
ಕಾಡರಕ್ಕಸಿಯ ಪ್ರತಾಪವನು
ಮಾಡುವೊಳ್ಯಾರಲ್ಲ್ಹೀಳಿಂಥ ಕೋಪವನು ೩

ಮತ್ಸ್ಯಯೆಸೆದು ತಂದ ಮಡದಿ ಸಖಿ ಐವ-
ರಚ್ಛದ್ವಲ್ಲಭೆ ಪಟ್ಟದರಸ್ಯೊ ಈಕೆ ನೀ
ರೊಚ್ಚಲಿ ಕೊಲ್ವೆನೆಂಡಾ ದ್ರೌಪದಿ ನೋಡಾಕೆ ೪

ಏಳು ಮಲ್ಲಿಗೆ ತೂಕ ಎನ್ನರಸಿ ಸೀಮೆ
ಹಾಳು ಮಾಡುವ್ಹೋದೀ ಕಾಳ ರಾಕ್ಷಸಿ ನಾವು
ಬಾಳುವುದ್ಹ್ಯಾಗೀಕೆಯ[ನ]ನುಸರಿಸಿ ೫

ಅಂಜದಿರಯ್ಯ ಧನಂಜಯ ನಿನ್ನ
ಕಂಜಾಕ್ಷಿ ದ್ರೌಪದಿಯುನೆ ನೋಡಯ್ಯ
ಮುಂದಕೆ ಪ್ಹೋಗಿ ನೀ ಬಂದು ಮಾತನಾಡಯ್ಯ ೬

ಸುಳ್ಳಾಡಿಯೆನ್ನ ಭಯ ಬಡಿಸೋರೇನೊ ಕಾಡು-
ಕಲ್ಲಿಗೆ ರತ್ನ ಹೋಲಿಸುವ್ರೋರೇನೊ ಎದೆ
ಝಲ್ಲೆಂದ್ಹಿಂದಕೆ ಬಿದ್ಹೋಗುವೆನೊ ನಾನು ೭

ಅಂದ ಮಾತುಗಳು ಸುಳ್ಳೆಂಬೊರೇನೊ ಇನ್ನು
ಸಂದೇಹ ಬ್ಯಾಡೊ ಸುರೇಂದ್ರಸೂನು ವಂದಿಸಿ
ಪಾದಕ್ಕೆರಗಿ ಕೈ ಮುಗಿಯೊ ನೀನು ೮

ಬಗ್ಗಿ ನಮಿಸಲ್ಹೋದ ಫಲ್ಗುಣನನು ಹಿಂದೆ
ಜಗ್ಗಿಯೆಳೆದ ಭೀಮ ಸದ್ಗುಣನು
ಭಾಗ್ಯವಂತೆ ಭಾರತಿ ನಿಜತಿಳಿಯೊ ನೀನು ೯

ಬಲವಂತಳೀಕೆ ನಮ್ಮೈವರನ್ನು ಬಾಳೆ-
ಫಲದಂತೆ ನುಂಗಿ ನೀರು ಕುಡಿವ್ರೋಳಿನ್ನು ಈಕೆಬದಿ-
ಯಲ್ಹೋಗಿರುವೊದಸಾಧ್ಯವಿನ್ನು ೧೦

ನಾ ನಿನಗಭಯ ಕೊಡುವೆನೊ ಪಾರ್ಥ ನೀ
ಭೀಮೇಶಕೃಷ್ಣನ ಕರುಣಕೆ ಪಾತ್ರ
ಪ್ರೇಮದಿ ಸಲಹುವ ಸಮರ್ಥಳು ದ್ರೌಪದಿ ೧೧

## ವಚನ—೪೬

ಅರ್ಜುನನು ನೋಡಿ ಅತಿ ಆಶ್ಚರ್ಯದಿಂದಿರಲು
ನಿರ್ಜರೇಶನು ಕೃಷ್ಣ ನಗುತ ಮಾತಾಡಿದನು
ಭದ್ರೆ ನಿನ್ನುಗ್ರ ರೂಪವು ಕೋಪ ಸಾಕಿನ್ನು

ಇಲ್ಲಿದ್ದ ಜನರೆಲ್ಲ ಭಯಪಟ್ಟು ಓಡುತಲಿಹರು
ಶುದ್ಧ ಸುಂದರಿ ಕೋಮಲಾಂಗಿ ಕರುಣವ ಮಾಡಿ
ಎದ್ದು ಬಾರೆಂದ್ಯದುಕುಲೇಶನ ಕೃಪೆಯಿಂದಲಿ

## ಧ್ವನಿ—೪೭

ಎದ್ದಳಿದ್ದಳಮ್ಮ ಕೌಂಡ್ರಿಕನೆದೆಯು
ಒದ್ದು ಸೀಳಿದಳಮ್ಮಾ ದ್ರೌಪದಿ
ಎದ್ದಳಮ್ಮ ದ್ರೌಪದಿ ಕಾಲ ಗೆಜ್ಜೆ ಧ್ವನಿಗಳಾಗುತಿವೆ
ಮುದ್ದು ನಿಜರೂಪವನು ಧರಿಸಿ ಪದ್ಮನಾಭಗೆ ಕರವ ಮುಗಿದು ಪ.

ಗಂಗೆಯಲ್ಲಿ ಸ್ನಾನವ ಮಾಡಿ
ಮಿಂದು ಮಡಿಯನುಟ್ಟುಕೊಂಡು
ಮುಂದೆ ಕೂದಲು ತಿದ್ದಿ ತುರುವು
ಹಿಂದೆ ಬೆನ್ನಿಗಲೆಯುತಾಗ ೧

ಪೃಥಿವಿಯಲ್ಲಿ ಚಂದ್ರಮ ಸೂರ್ಯ
ಜತ್ತಿಲಿಳಿದು ಬಂದಂತಾಗೆ
ಎತ್ತಿ ರತಿಯು ತನ್ನ ಬಗಲೊಳು
ಅರ್ಥಿಯಿಂದ ನಗುತಲಾಗ ೨

ಕಮಲರಾಜ ರತ್ನಸುಂದರಿ
ಬಳಲುತಿದ್ದ ಸ್ಥಳಕೆ ಬಂದು
ಹೊಳೆವೊ ಪುತ್ಥಳಿ ಗೊಂಬೆಯಂಥ
ಮಗಳನಿಳಿಸಿ ನಿಂತಳಾಗ ೩

ಎದ್ದು ಕಮಲರಾಜ ದ್ರೌಪದಿ
ಪದ್ಮ ಪಾದಕೆ ಎರಗಿ ನಿಂತು
ಭದ್ರೆ ನಿನ್ನ ಸರಿಸಮರ್ಥರ ಮೂ-
ರ್ಜಗದೊಳಗೆ ಕಾಣೆನೆನುತ ೪

ಧನ್ಯ ಧನ್ಯಳೆಂದು ದ್ರೌಪದಿ
ಮನ್ನಿಸುತಲಿ ಮಾತನಾಡೆ
ಎನ್ನ ಮಗಳು ನಿನಗೆ ಒಪ್ಪಿದ-
ಳಿನ್ನು ನೀ ರಕ್ಷಿಸುವೋದೆನುತ ೫

ಧರ್ಮ ಭೀಮಾರ್ಜುನರು
ನಕುಲ ಸರ್ವ ವೃತ್ತಾಂತವ
ಸಾದೇವ ಪರವು ಹರುಷದಿಂದ ಕೇಳಿ
ಪಟ್ಟದರಾಣಿ ಮಹಿಮೆಯನ್ನು ೬

ಕೃಷ್ಣೆಮುಖವ ನೋಡಿದ ಭೀಮೇಶ-
ಕೃಷ್ಣ ನಗುತ ನುಡಿದನಾಗ
ನಕ್ಷತ್ರದೊಳಗೆ ಚಂದ್ರಮರಂತೀ-
ಕ್ಯಷ್ಟೂರೊಳಗಿನ್ನಧಿಕಳೆಂದ ೭

## ವಚನ—೪೮

ಕಡು ಹರುಷದಿಂದ ಕಮಲರಾಜ ದ್ರೌಪದಿಗೆ ಎ-
ರಡು ಕರ ಮುಗಿದು ಸ್ತುತಿ ಮಾಡುತಿರಲಾಕ್ಷಣದಿ
ಬಡಬಡನೆ ಬಂದು ನಾರದ ನರಹರಿಗೆ
ತಡವ್ಯಾತಕಿನ್ನು ಶುಭಮುಹೂರ್ತ ಮೀರುವುದೆನುತ
ಉಡಿಸ್ಯಷ್ಟಪತ್ರಿಕೆ ಹಿಡಿದರಂತರಪಟವ
ಬಡಿದು ಭೇರಿಯು ಗಂಟೆ ನುಡಿದು ಮಂಗಳಾಷ್ಟಕವ
ಪಿಡಿದರಿಷಿಣಕ್ಕಿ ಬೊಗಸೆಯಲಿ ಮನ್ಮಥ ರತಿಗೆ
ಮುಡಿ ಶಿರದಲ್ಹಾಕಿ ಮುತ್ತೈದೆತನ ಪಡೆಯೆಂದು
ದೃಢವಾಗಿ ಕಟ್ಟಿ ಕರಿಮಣಿಯು ಮಂಗಳಸೂತ್ರ
ಕಡಗ ಬಳೆ ಮುಂದೆ ಕಟ್ಟಿದರು ಕಂಕಣ ಹರಸಿ
ಉಡಿಜೀರಿಗೆ ಕಟ್ಟಿ ಕಾಮನ ವಲ್ಲಿಯಲಿ
ಬಿಡಿ ಮುತ್ತು ತುಂಬಿಕೊಟ್ಟಳು ಮರದ ಬಾಗಿಣವ
ತೊಡಿಸಿ ಕಾಚಾಳಿ ಕುಪ್ಪಸ ಕಂಜಲೋಚನೆಗೆ
ಮುಡಿಯುಂಗುರವು ನಿಂಚು ಪಿಲ್ಯ ಕಾಲುಂಗುರವು ಮೆ-
ಲ್ಲಡಿಯಿಡುತಲ್ಹೋಗಿ ಅರುಂಧತಿಯು ನೋಡುತಲಾಗ
ನಡೆಸಿದರು ಲಾಜಹೋಮವ ಅಗ್ನಿಕಾರ್ಯಗಳ
ಸಡಗರದಿ ಗಂಧ ಕುಂಕುಮ ಕುಸುಮ ಪರಿಮಳವು
ಕಡು ಹರುಷದಿಂದ ವೂಟಣೆ(ಉರುಟಣೆ?)ಮಾಡೊ ಉತ್ಸವದಿ
ಮಡದಿ ರುಕ್ಮಿಣಿ ಭಾಮೆ ಮುತ್ತಿನಾರತಿ ಬೆಳಗೆ ಜಗ-
ದೊಡೆಯ ಭೀಮೇಶಕೃಷ್ಣನು ನೋಡಿ ಸುಖಬಡುತಿದ್ದನು

## ಧ್ವನಿ—೪೯

ಜೈ ಜೈ ಆ ರತಿರಮಣನಿಗೆ
ಜೈಜೈ ಆ ನಮ್ಮ ರತಿ ಪ್ರದ್ಯುಮ್ನಗೆ
ಜೈ ಜಯವೆಂದು ಪಾಡಿರೆ ಜನರು ಪ.

ಚಿತ್ರಮಯದ ಹಸೆಗಳ ಬರೆದು
ರತ್ನ ಮಾಣಿಕ್ಯ ಮಣಿಗಳನ್ಹಾಕಿ ಮತ್ತೆ ಮ-
ನ್ಮಥ ರಾಯ ಹಸೆಗೇಳೇಳೆಂದು
ಅರ್ಥಿಂದ ಕರೆದು ಕುಳ್ಳಿರಿಸಿದರು ೧

ಏಳೇಳು ಕಮಲರಾಜನ ಸುತೆಯೆ
ಏಳೇಳು ಕಮಲನಾಭನ ಸೊಸೆಯೆ
ಏಳಮ್ಮ ಕಮಲ ಸುತನ ಸತಿ ರತಿಯೆ ನೀ-
ಯೇಳೆಂದು ಹಸೆಗೆ ಕರೆದರಾಗ ೨

ಮೆಲ್ಲಮೆಲ್ಲನೆ ಹೆಜ್ಜೆಯನಿಡುತ
ಲುಲ್ಲು ರುಳಿಯು ಗೆಜ್ಜೆ ಘಲುರೆನುತ
ಫುಲ್ಲಾಕ್ಷದಿಂದ ಪತಿಯ ಮುಖ ನೋಡುತ
ಚೆಲ್ವೆಬಂದಳು ಚೆಂದದಿ ನಗುತ ೩

ಕಾಮನ ಕಡೆನೋಟದಿ ನೋಡಿ
ಸಾಮಜಗಮನೆ ಸಂಭ್ರಮದಿಂದ
ಹೇಮಬಟ್ಟಲಿನೊಳಗರಿಷಿಣ ತಕ್ಕೊಂಡು
ಪ್ರೇಮದಿ ನಿಂತು ನುಡಿದಳಾಗ ೪

ಇಕ್ಷು ಬಿಲ್ಲನು ಕೈಯಲಿ ಪಿಡಿದು ಮೂ-
ರಕ್ಷಧಾರಿಗೆ ಅಂಜುತಲ್ಹೋಗಿ
ಮಚ್ಛದೊಳಡಗಿದ ಮುಖವ ತೋರಿದರೆ ನಾ
ಹಚ್ಚುವೆನೀಗರಿಷಿಣವೆಂದಳು ೫

ಸಜ್ಜನರಿಗೆ ಸನ್ಮತವಲ್ಲೀ-
ಬುದ್ಧಿ ನೋಡಿದರ್ವಿಪರೀತವೆಲ್ಲ
ಇದ್ದ ಗುಣಗಳ ವರ್ಣಿಸುತಲಿ ಪಣೆಗೆ ನಾ-
ತಿದ್ದಿ ಕುಂಕುಮ ಹಚ್ಚುವೆನೆಂದಳು ೬

ಶಂಬರನರಮನೆಯಲಿ ಬೆಳೆದು
ಹೆಂಡತಿಯಿಂದ ಶಿಕ್ಷಿತನಾಗಿ ಕೊಂದು
ಶಂಬರನ ಸೀಳಿದ ಕರಗಳಿಗೆ ನಾ–
ಗಂಧವ ಹಚ್ಚೇನೆಂದಳು ನಗುತ ೭

ಅಟ್ಟಹಾಸದಿಂದ ಆಡುತಲ್ಹೋಗಿ
ಸಿಟ್ಟಿನ ಶಿವನೆದುರಿಗೆ ನಿಂತು
ಬಿಟ್ಟ ಬಾಣವನು ಅಸಂಗನ ದೇಹಕ್ಕೆ ಬು–
ಕ್ಕಿಟ್ಟು ಪರಿಮಳ ಹಚ್ಚುವೆನೆಂದಳು ೮

ಕಂದರ್ಪನ ತೊಡೆಯಲಿ ನಿಂತು
ಅಂಬೆ ಬರೆದಳತಿ ಹರುಷದಿಂದ
ಮಂದಾರ ಮಲ್ಲಿಗೆ ಮಾಲೆ ಕೊರಳಿಗೆ ಹಾಕಿ
ಬಂದೆರಗಿದಳು ಭಕ್ತಿಯಿಂದ ೯

ಸರ್ಪವೇಣಿಯು ಸರಸದಿ ನಗುತ
ಉಪ್ಪಕ್ಕಿಯಿಡುತ ಸಂಭ್ರಮದಿಂದ
ಕರ್ಪೂರದ್ವೀಳ್ಯ ಕೈಯಲಿ ಕೊ–
ಟ್ಟು ಪತಿಹೆಸರೊಪ್ಪದಿಂದ್ಹೇಳಿ ಕುಳಿತಳಾಗ ೧೦

ಸತ್ಯಭಾಮೆಯು ಸುತನನು ನೋಡಿ
ಅತ್ಯಂತ ವಿನಯ ಮಾತುಗಳಾಡಿ
ಉತ್ತರವಿದರೊಂದಿಗೆ ರತಿಗೆ ಕೊಟ್ಟು
ಉತ್ಸವದೂಟಣಿ ಮಾಡೆಂದಳು ೧೧

ಅರ್ಧರಾತ್ರಿಯಲ್ಲೆನ್ನಾಳಾಪದಿಂದ
ಬಿದ್ಹೊರಳುತ ಬೆವರಿದ ನಿನ್ನ
ಮುದ್ದುಮುಖವ ತೋರಿದರೆ ನಾ ಅರಿಷಿಣ
ವಿಧ್ಯುಕ್ತದಿಂದ ಹಚ್ಚುವೆನೆಂದನು ೧೨

ಪ್ರದ್ಯುಮ್ನ ಪುರುಷನಾಗಲಿಯೆನುತ
ವಾಗ್ಬಾಣದಿಂದ ಪಿತನ ಜಯಿಸಿ[ದ]
ಶುದ್ಧ ಸುಂದರಿ ನಿನ್ನ ಪಣೆಯು ತೋರಿದರೆ ನಾ–
ತಿದ್ದಿ ಕುಂಕುಮ ಹಚ್ಚುವೆನೆಂದನು ೧೩

ಬಂದಿ ಕಂಕಣ ಬಾಜುಬಂದನಿಟ್ಟು
ಗೊಂಡ್ಯ ಮಲಕು ನಾಗಮುರಿಗೆಯಿಟ್ಟು
ದುಂಡು ಹರಡಿ ಹಸ್ತಕಡಗ ಕೈ ತೋರಲು
ಗಂಧವ ಹಚ್ಚೇನೆಂದನು ನಗುತ ೧೪

ಅಳಲುತ ಬಳಲುತ ಇಳೆಯಲ್ಲಿ
ಎಳೆಯು ಕಾಳಿಂಗ ಪೋಲುವ ನಿನ್ನ ಹೆ-
ರಳಿಗೆ ತಕ್ಕಂಥ ಅರಳು ಮಲ್ಲಿಗೆ ಮುಡಿಸಿ ಪರಿ-
ಮಳ ಬುಕ್ಕಿಟ್ಟು ಹಾಕುವೆನೆಂದನು ೧೫

ಕುಸುಮಶರ್ದ್ದೆ ಸರ್ದ್ದೀಳೆ ರತಿಯೆನುತ
ಅತಿ ಬ್ಯಾಗದಿಂದ ಸತಿಯರೆಲ್ಲ
ಮಿಸುನಿ ಮಾಣಿಕ್ಯದಕ್ಷತೆಗಳನಿಡುತಲಿ
ಶಶಿಮುಖಿಯರಾರತಿ ಬೆಳಗೆ ೧೬

ಕಾಮ ರತಿಯು ಕರುಣದಿ ನೋಡಿ
ಭೀಮೇಶಕೃಷ್ಣ ಸಂಭ್ರಮದಿಂದ
ಈ ಮಹಾಸುಖ ಸಂತೋಷ ದ್ರೌಪದಿಯಿಂದ
ನಾಮೀಗ ಕಂಡೆನೆಂದನು ನಗುತ ೧೭

ವಚನ—೫೦

ಊಟಣಿಯು ನೋಡೋ ಪರಮೋತ್ಸವದಿ ಜನರೆಲ್ಲ
ಊಟಕ್ಕೊತ್ತಾಯಿತೆಂದೆನುತಾಗ ಶ್ರೀಕೃಷ್ಣ
ಕೋಟಿ ಬ್ರಹ್ಮಣ್ಯ(ಬ್ರಾಹ್ಮಣರು?)ಭಾಳ್ವಸ್ತರೆಂದೆನುತಾಗ ಕಿ-
ರೀಟಿ ಸಾರಥಿ ಕೃಷ್ಣ ನಡಿದು ಬಂದನು ತನ್ನ ಮಂದಿರಕ್ಕೆ

ಧ್ವನಿ—೫೧

ಹರಿಯನುಪಚರಿಸಿದನು ರಾಜನು ಬ್ಯಾಗ
ಪರಮ ಸಂಭ್ರಮದಿ ತಾನು
ಕರದಲಕ್ಷತೆ ಪಿಡಿದು ರಾಜನು ರತ್ನ ಸುಂ-
ದರಿಯು ಸಹಿತ ನಡೆದು

ಚರಣಕ್ವಂದನೆ ಮಾಡಿ ಕರವ ಮುಗಿದು ನಿಂತು
ಸರ್ವಜನ ಸಹಿತಾಗಿ ನೀವೆನ್ನರಮನೆಗೆ ದಯಮಾಡಿರೆಂದ ೧

ಸಾಲುದೀವಿಗೆಯನ್ಹಚ್ಚಿ ಚಿತ್ರದ ರಂಗ-
ವಲ್ಲಿಗಳನು ಹಾಕಿಸಿ
ಮೇಲು ಕಟ್ಟಲಿ ಪಟ್ಟಸಾಲೆ ಶೃಂಗರಿಸಿ
ನೀಲ ಮಣಿಗಳನ್ಹಾಕಿ ಚಿನ್ನದ ಬಾಳೆಲೆ ಬಟ್ಟಲುಗಳಿಟ್ಟು ೨

ಉಪ್ಪು ಚಟ್ಟಣಿ ರಸವು ಕೋಸಂಬರಿ
ಎಪ್ಪತ್ತು ಬಗೆಯ ಶಾಖವು ಚಿತ್ರಾ-
ನ್ನ ಮೊದಲೆ ದಧ್ಯನ್ನ ಕೇಸರಿಭಾತು ಹಪ್ಪಳ ಸಂಡಿಗೆಯು
ಅಪ್ಪಾಲತಿರಸಾಂಬೋಡೆಗಳ ಬಡಿಸೆ ೩

ಶಾವಿಗೆ ಬಟ್ಟವಿ ಗೌಲಿ ಮಾಲತಿ ಪರಡಿ
ಪಾಯಸಂಗಳ ಬಡಿಸೆ ಮೇಲು ಮಂಡಿಗೆ
ಬುಂದ್ಯಲಾಡು ಪದರ ಫೇಣಿ ಹೋಳಿ-
ಗೆಣ್ಣೋರಿಗೆ ಕರ್ಜೀಕಾಯಿ ಚಕ್ಕುಲಿ ತಂದು ಬಡಿಸೆ ೪

ಮುಂಡು ಗುಳ್ಳೋರಿಗೆಯು ಬದಿಯಲಿ ದಿವ್ಯ
ಚೆಂದದ ಬೀಸೋರಿಗೆಯು
ಚಂದ್ರನಂತ್ಹೊಳೆವ ಶಾವಿಗೆಯು ಫೇಣಿಯು ಶಿಖಿಯು-
ದುಂಡೆ ತೊರಣಗಡುವು ಚೂರ್ಮಾಲಾಡು ಬೇಸರಿ ತಂದು ಬಡಿಸೆ ೫

ಸಾರು ಸಾಂಬಾರಗಳು ಕಾಸಿದ ಪಳದ್ಯ
ಕಲಸು ಮೇಲೋಗರವು ಬಾಗಿ ಮಾಡಿದ ಸಣ್ಣಕ್ಕಿ
ಶಾಲ್ಯಾನ್ನವು ಬ್ಯಾಗ ಬ್ಯಾಳೆಯು ತವ್ವೆ
ನಿಂಬೆ ಮಾವಿನುಪ್ಪಿನಕಾಯಿ ಬಡಿಸೆ ೬

ಮುತ್ತಿನ್ಹರಿವಾಣದಲಿ ಭೂಮುವ ತಂದು
ರತ್ನ ಸುಂದರಿಯಿಡಲು ಮತ್ತೆ ತಮತಮ್ಮ
ಪತಿಗಳ್ಹೆಸರ್ಹೇಳುತ ಅರ್ಥಿಯಿಂದಾ-
ರತಿಯ ಬೆಳಗಾಪೋಶನವ ಹಾಕಿಸಿದರಾಗ ೭

ಹಾಲುತುಪ್ಪದ ಕಾವಲಿ (ಕಾಲುವೆ ?) ಹರಿಸುತ
ಜನಕೆ ನೋಡಿ ಬಡಿಸುವೋರು ಕಡೆಯಿಲ್ಲ

ಮ್ಯಾಲೆ ತಬಕಲಿ ಬಿಳಿಯ ಸಕ್ಕರೆ ಸೂರ್ಯಾಪುತ ಆಗ
ರಾಜನು ಬಂದು ಕರಗಳ ಮುಗಿದು ತಾ ಕೃಷ್ಣಾರ್ಪಣೆಂದ ೮

ಉಂಡು ಕೆನೆಮೊಸರನ್ನವ ಕೈತೊಳೆದ್ವಾಕಿ-
ಕೊಂಡು ತಾಂಬೂಲವನು
ಚೆಂದದಿಂದೀರೀತಿಯಿಂದ ನಾಲ್ಕುದಿನ ಸಂಭ್ರ-
ಮದಿ ಭೀಮೇಶಕೃಷ್ಣಾನಂದವಿ ಮಾಡಿದನು ಮದುವೆ ೯

## ವಚನ—೫೨

ಅರ್ಥಿಯಿಂದಾಗ ಐದನೆ ದಿನವು ಬರುತಿರಲು
ಕಟ್ಟಿ ಸುರಿಗೆಯುಲಿರೆದು ಸೂಕ್ಷ್ಮದ್ವಸ್ತ್ರವನುಡಿಸಿ
ಚಿತ್ರವಿಚಿತ್ರದಕ್ಕಿಲಿ ಸಾಡ್ಯಗಳ ಬರೆದು
ಮತ್ತೆ ಮನ್ಮಥ ರತಿಯು ಕರೆದವ್ವಸೆ ಜಗುಲಿಗಾಗ

## ಧ್ವನಿ—೫೩

ಬಂದಳಮ್ಮ ರತಿಯು ಸೋಮಬಿಂಬದಂದದಿ
ಮಂದಗಮನೆ ಮಾರನ್ನ ಮುಖವ ನೋಡಿ ನಗುತಲಿ ಪ.

ಬಿಚ್ಚಿ ಜರಿ ಪೀತಾಂಬರವುಟ್ಟು ಹಚ್ಚಿ ಕುಂಕುಮ ಹೊಳೆಯುತ
ಪಚ್ಚೆಮಾಣಿಕ್ಯಪ್ರಜ್ರದ್ವಸ್ತ್ರಗಳಿಟ್ಟೊಪ್ಪ್ಯಾರ ಮಾಡುತ ೧

ಲುಲ್ಲು ರುಳಿಯು ಪೈಜಣ ಗೆಜ್ಜೆ ಘಲ್ಲುಗಿಲ್ಲೆನುತ ಮೆಲ್ಲ-
ಮೆಲ್ಲನೆ ಹೆಜ್ಜೆಯಿಕ್ಕುತ ಬಿಲ್ಲಿನಂತೆ ಬಳುಕುತ್ತ ೨

ಕಡಗಕಂಕಣ ಕಮಲದ್ವಾರ್ಯರ್ಮ ಝಳಕುಜಿಳಕಲ್ಹೊಳೆಯುತ
ಸಡಗರದಿ ಮನ್ಮಥನ ಕರಗಳ್ಹಿಡಿದು ಹಿಗ್ಗಿ ನಲಿಯುತ ೩

ಹರಳು ಮಾಣಿಕ್ಯದ್ಹಾರ ಪದಕ ಸಿರಿಯ ಮ್ಯಾಲೋಲಾಡುತ
ಅರಳುಮಲ್ಲಿಗೆ ಆಣಿ ಮುತ್ತಿನ ಹೆರಳುಬಂಗಾರ್ಹೊಳೆಯುತ ೪

ಕುಸುಮಶರನ ನೋಡಿ ಕುಶಲದಿಂದ ನಾಚಿ ನಲಿಯುತ
ಸೊಸೆಯು ಭೀಮೇಶಕೃಷ್ಣಗೆಂಬೊ ಹೆಸರು ಪಡೆದಳೆನ್ನುತ ೫

## ವಚನ—೫೪

ಚೆಂದದಿಂದ ರತ್ನಸುಂದರಿಯು ತಾ ಬ್ಯಾಗ
ಸಿಂಧೂಪ[ವ]ಸ್ಥೊತ್ತು ಶಿರದಲ್ಲಿ ಮಲ್ಲಿಗೆ ಮುಡಿದು
ಮುಂದ್ಹೊನ್ನ ಕಳಸ ಮಂತ್ರಾಕ್ಷತೆಯು ಚೆಲ್ಲುತಲಿ
ಬಂದು ಸುತ್ತಿದಳು ಸುಖದಿಂದ ಸಾಡ್ಯವಸು ಬ್ಯಾಗ

## ಧ್ವನಿ—೫೫

ಮಾಡಿದರಾ ರತಿ ಮದುವೆ ಸಂಭ್ರಮವ
ಕೊಂಡಾಡುತಲಾ ಕೃಷ್ಣಕೀರ್ತಿಯನ್ನು ಪ.

ಒಪ್ಪದಿ ಕೊಡುವೆ ಎನ್ನಪ್ಪಿನಾಸೆಯನು
ಸಿಮ್ಮಪ್ಪಿಯೆನಗೆ ಬೇಕೆಂದು ಸರ್ಪವೇಣಿಯು ನುಡಿಯೆ ೧

ಭಾಳ ಹಣವು ಹೊನ್ನು ಜಾಕೋದೆನ್ನಕ್ಕಿಗಜ
ಕೇಳಿಕೊಂಡರು ಕೊಡಲಾರೆನೆಂದನಾ ಮಾರ ೨

ಕುಂದಣ ತೊಟ್ಟಿಲೊಳು ಕಂದನ್ನಾಡಿಸಿ ಎತ್ತಿ-
ಕೊಂಡು ಮನ್ಮಥ ಹಿಡಿಯೆಂದು ಕೊಟ್ಟಳಾ ರತಿಯು ೩

ಅಬ್ಬರದಿಂದ ನಿನ್ನ ಕೂಸು ಅಳುತದೆನ್ನ
ಕಬ್ಬು ಬಿಲ್ಲನೆ ಕಾಡಿಬೇಡಿ ತಿಂಬೋದು ಕರೆಯೆ ೪

ಕೃಷ್ಣ ಮೊದಲಾದ ಸಮಸ್ತ ಹಿರಿಯರಿಗೆಲ್ಲ
ಒಪ್ಪಿಸಿಕೊಟ್ಟು ಮಗಳ ನೇತ್ರ ಒರೆಸುತ ರಾಜ ೫

ಮನ್ಮಥರಾಯಗೆ ಮಗಳನೊಪ್ಪಿಸಿಕೊಟ್ಟು ಧನ್ಯ
ನಾನಾದೆನೆಂದು ಕೈಯನ್ನು ಮುಗಿದ ರಾಜ ೬

ಸಕಲ ಭಕ್ಷ್ಯ ಪರಮಾನ್ನ ಸಕ್ಕರೆ ಘೃತ ಕ್ಷೀರ
ಲಕ್ಕುಮೀರಮಣ ಭೀಮೇಶಕೃಷ್ಣಗುಣಿಸಿ ದಣಿಸಿದ ೭

## ವಚನ—೫೬

ಮಂದಗಮನೆಯರು ಒಂದೊಂದ್ಹೆಜ್ಜೆಯಿಕ್ಕುತಲಿ
ಹಂದರದೊಳಗೆ ಹರುಷದಲಿ ಸುಳಿದಾಡುತಿರೆ ಆ-

ನಂದದಿಂದಾದರುಪಚಾರದಲಿ ಆ ರತ್ನ-
ಸುಂದರಿಯು ಬ್ಯಾಗ ಕರೆತಂದಳಾ ಮಂದಿರಕ್ಕೆ

ಧ್ವನಿ—೫೭

ಕಮಲರಾಜನ ಮಂದಿರದಲಿ
ಕಮಲ ಮುಖಿಯರತಿ ಶೃಂಗಾರದಿ
ಸಮಾರಂಭ ಸಂತೋಷದಲಿ ಪ.

ಜತ್ತಿಲ್ಹಾಕಿ ಕುಂದಣಮಣೆಯು
ಸತ್ಯಭಾಮಾಕೃಷ್ಣ ರುಕ್ಮಿಣಿಯು ಅಷ್ಟಮಾ-
ಸತಿಯರಿಂದ ಸೋಳಸಾವಿರ
ಪತ್ನೇರ ಸಹಿತ ಕುಳಿತನಾಗ ೧

ರಾಮರೇವತಿ ದೇವಕ್ಕಿ ವಸು-
ದೇವ ನಂದಗೋಪ ಯಶೋದೆಯರು
ರಾಯ ಉಗ್ರಸೇನನು ಬಂದುಕುಳಿತನು
ಯಾದವ ಜನರ ಸಹಿತವಾಗಿ ೨

ವಜ್ರದ್ವಸ್ತ್ರ ಝುಳಿಝುಳಿರೆನುತ ಕಾಲ
ಗೆಜ್ಜೆಸರಪಳಿ ಘಿಲು ಘಿಲುರೆನುತ
ಅರ್ಜುನರಾಯನ ಅತಿ ಮೋಹದ ರಾಣಿ
ಮುದ್ದು ಸುಭದ್ರೆ ಮುಂದೊಪ್ಪಿರಲು ೩

ಅರಸು ಧರ್ಮ ಭೀಮಾರ್ಜುನರು
ಸರಸದಿ ನಕುಲ ಸಾದೇವರಾಯ
ಪುರುಷರೈವರ ಮುಂದೆ ಪುತ್ಥಳಿಗೊಂಬ್ಯಂತೆ
ಕುಳಿತು ದ್ರೌಪದಿ ಥಳಥಳಿಸುತಿರೆ ೪

ಗಂಧ ಕುಂಕುಮ ಅರಿಷಿಣ ಕೊಡಿಸಿ
ದುಂಡುಮಲ್ಲಿಗೆ ಹಾರಗಳ್ಹಾಕಿ
ಬಂದ ಬೀಗರಿಗೆ ಬುಕ್ಕಿಟ್ಟುಗ್ಗ್ಯಾಡುತ
ತಂದು ತಾಂಬೂಲ ತಬಕಿಲ್ಹಿಡಿಸಿ ೫

ಅಚ್ಚಜರದ(ರಿಯ?) ಸೀರೆಗಳನು ಕುಪ್ಪಸ
ಚಾದರ ಶಾಲುಗಳನು

ಬಿಚ್ಚಿ ಬಿಚ್ಚಿ ಕೊಡುವೋರು ಕಡೆಯಿಲ್ಲ
ಹೆಚ್ಚಿನುಡುಗೊರೆ ವೀಳ್ಯಗಳನು ೬

ಹೇಮರತ್ನಮಾಣಿಕ್ಯದ್ವಸ್ತ್ರ ಸತ್ಯ–
ಭಾಮೆ ಕೃಷ್ಣ ರುಕ್ಮಿಣಿಗಿಟ್ಟ–
ಭೀಮೇಶಕೃಷ್ಣನ ತಂಗಿ ದ್ರೌಪದಿ–
ಗಾನೆಯಲ್ಲ್ಯೇರತಿ ಭಾಗ್ಯವ ಕೊಟ್ಟ ೭

## ವಚನ—೫೮

ಆನೆ ಪಲ್ಲಕ್ಕಿ ಕಾಲಾಳು ಕುದುರೆಯ ದಂಡು
ಭಾಳಸಂಪತ್ತು ಬಳುವಳಿ ಆಕಳ ಹಿಂಡು
ಜಾಳಿಗೆ ಹೊನ್ನು ಜರತಾರಿಜವಳಿಯ ಪೆಂಡಿ
ಮಾಣಿಕ್ಯ ಮುತ್ತು ಮಗಳಿಗೆ ಕೊಟ್ಟ ಮಹಾರಾಜನು

## ಧ್ವನಿ—೫೯

ಕೊಡು ಕೊಡು ಅಪ್ಪಣೆ ಕೊಡು ರಾಜ ಕೇಳಿದ ದ್ವಾರಕೆ–
ಗುಡುರಾಜ ಕೊಡು ಕೊಡು ಅಪ್ಪಣೆ ಕೊಡು ರಾಜ ಪ.

ಚಿನ್ನದ ಕೊಳವಿಲಿ ರನ್ನದೋಕುಳಿ ತುಂಬಿ
ಮನ್ಮಥನ ಸಹಿತ್ಹರಿ ದೊರೆಗಳು
ಮನ್ಮಥನ ಸಹಿತ್ಹರಿ ದೊರೆಗಳೆಲ್ಲರು ಕೂಡಿ
ಚೆನ್ನಾಗಾಡಿದರೋಕುಳಿಯನು ೧

ಬಂಗಾರ್ದ ಕೊಳವಿಲಿ ರಂಗಿನೋಕುಳಿ ತುಂಬಿ
ಸುಂದರಿ ಸುಭದ್ರೆ ದ್ರೌಪದಿಯು
ಸುಂದರಿ ಸುಭದ್ರೆ ದ್ರೌಪದಿ ರುಕ್ಮಿಣಿ ಭಾಮೆ
ಚೆಂದಾಗಾಡಿದಾರೋಕುಳಿಯನು ೨

ಓಕುಳಿಯಾಡಿ ಅನೇಕ ಸಂಭ್ರಮದಿಂದ
ಹಾಕಿದರಂಬಾರಿ ಗಜಗಳಿಗೆ
ಹಾಕಿದರಂಬಾರಿ ಗಜದ ಭೇರಿ ಚಿ–
ನ್ನಾಕಾಳಿ(ಕಹಳೆ?) ಭೇರಿ ಬಡಿಸುತ ೩

ಕನ್ಯಾದಾನವ ಮಾಡಿ ಧನ್ಯನಾದೆಯೊ ನೀನು
ಇನ್ನೇನೊ ನಿನ್ನ ಮನೋಭೀಷ್ಟ
ಇನ್ನೇನೊ ನಿನ್ನ ಮನೋಭೀಷ್ಟವ ಬೇಡೊ
ಮನ್ನಿಸಿ ಕೊಡುವೆ ಮಹಾರಾಜ ೪

ಪತ್ನಿಸಹಿತ ಬಂದು ಪಾದಕ್ಕೆರಗಿ ನಿಂತು
ಹಸ್ತವ ಮುಗಿದು ಹರಿಗಾಗ
ಹಸ್ತವ ಮುಗಿದು ಹರಿಗ್ಹೇಳಿಕೊಂಡನು
ಭಕ್ತಿ ಮುಕ್ತಿಗಳ ಕೊಡುಯೆನುತ ೫

ಮಲ್ಲಿಗೆ ಶಿರಬಾಗಿ ಘಲ್ಲುಘಿಲ್ಲೆನುತಲಿ
ಮೆಲ್ಲನೆ ಬರುವೋ ಮಗಳನು
ಮೆಲ್ಲನೆ ಬರುವೋ ಮಗಳ ನೋಡುತ ರಾಜ
ಚೆಲ್ಲಿದ ಕಣ್ಣ ಜಲಗಳ ೬

ಅತಿ ಮೋಹದಿಂದ ತಾ ರತಿಯನೆತ್ತಿಕೊಂಡು
ಮನ್ಮಥನ ಸಹಿತಾಗಿ ರಥವನು
ಮನ್ಮಥನ ಸಹಿತಾಗಿ ರಥವನೇರಿಸಿ
ದ್ವಾರಾವತಿಗೆ ಸಂಭ್ರಮದಿ ಕಳುಹಿದ ೭

ಅರಸು ಧರ್ಮರ ಕರವಿಡಿದು ಕಮಲರಾಜ
ತರಿಸಿದ ದಿವ್ಯ ರಥವನು
ತರಿಸಿದ ದಿವ್ಯ ರಥವನೇರಿಸಿದ
ದ್ರೌಪದಿ ಸಹಿತಾಗಿ ಪಾಂಡವರನು ೮

ಮಡದಿರುಕ್ಮಿಣಿ ಭಾಮೇರೊಡಗೊಂಡು ಶ್ರೀಕೃಷ್ಣ
ಗರುಡನೇರಿದನೆ ಹರಿಬ್ಯಾಗ
ಗರುಡನೇರಿದನೆ ಹರಿಬ್ಯಾಗ ದ್ವಾರಕಾ–
ಪುರದಿ ಬಂದಿಳಿದ ಪರಮಾತ್ಮ ೯

ಬಿಡಿಮುತ್ತಿನ ಪಡಿ ಎಡವುತಲಾ ರತಿ
ನಡೆದು ಬಂದ್ಳೊಕ್ಕಳರಮನೆಯ
ನಡೆದು ಬಂದ್ಳೊಕ್ಕಳರಮನೆದ್ವಾರವ
ಪಡಗರ ಕೇಳಿ ಜನರೆಲ್ಲ ೧೦

ಗಕ್ಕನೆ ತೆಗೆದಾಳ್ಹೊಗಕ್ಕಿ ರಾಸಿಯನು
ಮಾಣಿಕ್ಯದ್ಹಾರವನು ಕೊರಳಿಗೆ
ಮಾಣಿಕ್ಯದ್ಹಾರವನು ಕೊರಳಿಗ್ಹಾಕಿದಳು
ದೇವಕ್ಕಿ ಸಂಭ್ರಮದಿ ನಗುತಲಿ ೧೧

ತುಪ್ಪಹಾಲಿನ ಚಟ್ಟು ಅರ್ಥಿಂದ ಕಡೆದು
ತಮ್ಮತ್ತಿಯ ಸೆರಗಲೊರೆಸುತ
ತಮ್ಮತ್ತಿಯ ಸೆರಗಲೊರೆಸುತ ರುಕ್ಮಿಣಿ
ಅಪ್ಪಿಮುದ್ದಿಡುತ ಸೊಸೆಯನು ೧೨

ಕಾಮ ರತಿಯ ಕಲ್ಯಾಣದ ಕಥೆಯನು
ಪ್ರೇಮದಿ ಕೇಳಿ ಜನರೆಲ್ಲ
ಪ್ರೇಮದಿ ಕೇಳಿ ಜನರು ಕೊಂಡಾಡಲು
ಭೀಮೇಶಕೃಷ್ಣನೊಲಿವನು ೧೩

## ವಚನ—೬೦

ಅತಿ ಭಕ್ತಿಯಿಂದ ದ್ರೌಪದಿಯು ಮನ್ಮಥಗೆ ತಾ
ರತಿ ತಂದು ಲಗ್ನ ಮಾಡಿದ ಕಥೆಯು ಕಲ್ಯಾಣ
ಹಿತದಿಂದ ಹೇಳಿ ಕೇಳಿದ ಜನರಿಗೆಲ್ಲ ಶ್ರೀ–
ಪತಿ ಒಲಿದು ಕೊಡುವ ಕಾಮಿತ ಫಲವ ಕರುಣದಿಂದ

## ಧ್ವನಿ—೬೧

ಆರತಿ ಬೆಳಗಿರೆ ಮಾರನ ಸತಿ ರತಿ
ಮಾರನ ಸತಿ ರತಿ ಕೀರುತಿಗಳ ಕೊಂಡಾಡುತಲಿ [ಪ.]

ಅತಿಹರುಷದಿ ರೇವತಿ ರುಕ್ಮಿಣಿ ತನ್ನ
ಸುತನರಸಿಗೆ ಸೂಸುಖ (?) ಮುಡಿಸಿ
ಅತಿಹರುಷದಿ ನಿಂಬೆ ರಂಭಾ ಫಲವ ತುಂಬಿ
ರತುನ ಮಾಣಿಕ್ಯ ಮಂತ್ರಾಕ್ಷತೆಯನಿಟ್ಟು ೧

ಕಂಗಳ ನೋಟದಿ ಕಾಮನ ಮನಗೆದ್ದು ಅರಿದಾಗೆ ತ–
ನ್ನಂಗ ಚೆಲ್ವಿಕೆಯು
ಅಂದಚೆಂದವ ತೋರುತಾಗ ಪತಿಯಕೂಡ್ಯಾ–
ನಂದದಿ ಕುಳಿತರವಿಂದಾಕ್ಷಿಗೆ ೨

ಝಗಝಗಿಸುವ ಜ್ಯೋತಿ ಮುತ್ತಿನವಸ್ತ್ರವನಿಟ್ಟು
ಬಗೆಬಗೆ ಸರಪದಕಗಳ್ಹಾಕಿ
ನಗೆ ಮುಖದಿಂದ ಭೀಮೇಶಕೃಷ್ಣನ ಮುದ್ದು
ಮಗನ ಮೋಹಿಸೋ ಮೋಹನಾಂಗನೆಗೆ ೩

೬

## ಸುಭದ್ರಾ ಕಲ್ಯಾಣ

ಹಸ್ತಿ ಮುಖದ ಗಣಪತಿಗಭಿವಂದಿಸಿ
ಉತ್ತಮ ಸರಸ್ವತಿಯ
ಭಕ್ತಿ ಭಾವಗಳಿಂದೆರಗಿ ನಾ ಪೇಳುವೆ
ಪಾರ್ಥರಾಯರ ಕತೆಯ ಪ.

ಇಂದುವದನೆ ದ್ರೌಪದಿದೇವಿ ಸಹಿತ ಆ-
ನಂದದಿ ಪಾಂಡವರು
ಇಂದ್ರ ಪ್ರಸ್ಥದಲಿರುತಿರಲು ಬ್ಯಾಗಲ್ಲಿಗೆ
ಬಂದ ನಾರಂದ ಮುನಿ ೧

ಬರುವ ನಾರಂದನ ಕರೆದು ಧರ್ಮಜ ತಾ ಕು-
ಳ್ಳಿರಿಸಿ ಸಿಂಹಾಸನದಿ
ಪರಿಪರಿಯಿಂದ ಪೂಜೆಯ ಮಾಡಿ ಭಕ್ತಿಯಿಂ-
ದೆರಗಿದರ್ಹೈವರಾಗ ೨

ಅರಸುಧರ್ಮಜ ತನ್ನರಸಿ ದ್ರೌಪದಿಯನು
ಕರೆಸಿದನಾಕ್ಷಣದಿ
ಹರುಷದಿಂದಲಿ ಮುನಿ ಚರಣಗಳಿಗೆ ನಮ-
ಸ್ಕರಿಸಬೇಕೆಂದೆನುತ ೩

ಅಂಗನೆ ಜರದ(ರಿಯ?) ಪೀತಾಂಬರ ನಡುವಿಗೆ
ಕುಂದಣ ಡಾಬನಿಟ್ಟು
ರಂಗುಮಾಣಿಕದ ರಾಗಟೆ ಗೊಂಡ್ಯಗಳು ಜಡೆ-
ಬಂಗಾರ ಹೊಳೆಯುತಲಿ ೪

ಪಾದದಲೊಪ್ಪೋ ಪೈಜಣ ರುಳಿ ಮುತ್ತಿನ
ವಾಲೆ ಬುಗುಡಿಯನಿಟ್ಟು
ಮೇಲಾದ ಸರಿಗೆ ಸರಗಳ್ಹಾಕಿ ಮಲ್ಲಿಗೆ-
ಮಾಲೆಗಳಲೆಯುತಲಿ ೫

ಹಸ್ತಕಡಗ ದ್ವಾರ್ಯರ್ಜ ಹರಡಿ ಕಂಕಣ ವ್ಯಾಲೆ
ಜತ್ತಾದ ಬಾಜುಬಂದು
ರತ್ನದ ನಾಗಮುರಿಗೆ ವಂಕಿ ಮೂಗಿನ-
ಲ್ಲಿಟ್ಟಳ್ವಜ್ರದ ಮೂಗುತಿ ೬

ಕಸ್ತೂರಿ ಗಂಧ ಕುಂಕುಮವು ಕಾಡಿಗೆ ಕಮ-
ಲಾಕ್ಷದಲ್ಲೊಪ್ಪುಳಿಯುತಿರೆ
ಪಚ್ಚೆಯ ಚಂದ್ರಬಾಳ್ಯದ ಹರಳ್ಹೊಳಿಯುತ
ಪುತ್ಥಳಿ ಗೊಂಬೆಯಂತೆ ೭

ನಾರಿದ್ರೌಪದಿ ಬರುತಿರೆ ಧರ್ಮರಾಯ ತಾ
ವಾರೆ ನೋಟದಿ ನೋಡುತ
ಮಾರನಯ್ಯನ ತಂಗಿಯನು ನೋಡಿ ಅರ್ಜು-
ನರಾಯ ತಾ ನಸುನಗುತ ೮

ಕೋಮಲಾಂಗನೆಯ ಕಾಣುತ ಭೀಮಸೇನ ತಾ
ಪ್ರೇಮದಿಂದಲಿ ಹಿಗ್ಗುತ
ಕಾಮಿಸಿ ನಕುಲ ಸಹದೇವರು ಕಡೆಗಣ್ಣಿಂ-
ದಾ ಮಹಿಮಳ ನೋಡುತ ೯

ಭೂಪರೈವರ ಮುಂದೆ ದ್ರೌಪದಿ ತಾನೊಂದು
ದೀಪದಂತ್ಹೊಳಿಯುತಿರೆ
ಶ್ರೀಪತಿಭಜಕ ನಾರದರ ದಿವ್ಯ ಪ-
ದ್ಮಪಾದಕೆರಗಿದಳು ೧೦

ಇಂದುವದನೆ ಕೃಷ್ಣೆ ಬಂದು ನಾರಂದರಿ
ಗ್ವಂದನೆಮಾಡುತಿರೆ ಆ-
ನಂದದಿಂದಾಗ ನೋಡುತಲಿ ಮುತ್ತೈದ್ಯಾ-
ಗೆಂದ್ಹರಕೆಯು ಕೊಟ್ಟರು ೧೧

ಪುರುಷರೈವರ ಮುಂದೆ ಸರಸದ ಗಿಳಿಯಂತೆ
ಹರುಷದಿ ಬಾಳೆನುತ
ಅರಸಿದ್ರೌಪದಿ ಐದು ಮಕ್ಕಳ ಪಡೆಯೆಂ-
ದ್ಹರಸಿದ ನಾರಂದನು ೧೨

ಅಪ್ಪಣೆಗೊಂಡು ದ್ರೌಪದಿ ಪೋಗಲೊಳಿಯುಕ್ಕ
ಚಿತ್ತದೊಳಗೆ ಯೋಚಿಸಿ
ಸತ್ಯಪಾಂಡವರ ಕರೆದು ಏಕಾಂತದಿ
ಗುಪ್ತದ್ವಚನ ಹೇಳಿದ ೧೩

ಇಂಪುವಪನೆ ಕೃಷ್ಣೆಯಿಂದ ನಿಮ್ಮೊಳಗೆ
ಬಂದೀತು ಕಲಹಗಳು
ಸುಂದೋಪ ಸುಂದರರಂತಾಗಲಾಗೋದು
ಮುಂದೇನುಪಾಯಗಳು ೧೪

ವರುಷವೊಂದಕ್ಕೊಬ್ಬ ಪುರುಷರಂತಾಳ್ವೋದು
ಅರಸಿ ದ್ರೌಪದಿಯು ನೀವು
ಹರುಷದಿಂದೆನ್ನ ಮಾತುಗಳ ಕೇಳಾನಂದ-
ಭರಿತರಾಗುವಿರೆಂದನು ೧೫

ಪತ್ನಿ ಸಹಿತವಾಗಿ ಪುರುಷರಿದ್ದಲ್ಲಿಗೆ
ಮತ್ತೊಬ್ಬ ಪತಿ ಪೋಗಲು ಸಂ-
ವತ್ಸರದಲಿ ಬ್ರಹ್ಮಚಾರಿಯಂದದಿ ತೀರ್ಥ
ಯಾತ್ರೆಯ ಚರಿಸುವುದು ೧೬

ಕೊಟ್ಟ ವಚನ ನಡೆಸುವೆನೆಂದು ಧರ್ಮಜ
ಹಸ್ತವ ಮುಗಿದ್ಹೇಳಲು
ಮತ್ತಾಗ ವೀಣೆಯ ಪಿಡಿದು ನಾರಂದ ತಾ
ಸತ್ಯಲೋಕಕೆ ನಡೆದ ೧೭

ಮುನಿಗೆ ಮಾತನು ಕೊಟ್ಟು ಘನ ಹರುಷದಿ ರಾಯ
ವನಜಾಕ್ಷಿಯಳ ಸಹಿತ
ವಿನಯದಿಂದಿಂದ್ರಪ್ರಸ್ಥದಲ್ಲಿ ಛೀಮೇಶಕೃ-
ಷ್ಣನ ಭಕ್ತರಿರುತಿದ್ದರು ೧೮

ಧ್ವನಿ—೧

ಇಂತೀ ಪರಿಯಲಿಂದ ಶಾಂತಧರ್ಮರು ತಮ್ಮ
ಕಾಂತೆ ದ್ರೌಪದಿ ಸಹಿತಾಗಿ

ಸಂತೋಷದಿಂದಿರುತಿರೆ ಹೇಮ ಮಣಿಮಯ
ಜಂತದ್ಥಲಿಗೆ ಮಂಚದಲ್ಲಿ ೧

ಸರುಹೊತ್ತಿನ್ವ್ಯಾಳ್ಯದಿ ಹೊರಗೆ ಬಂದನು ದ್ವಿಜ
ಕರು ಗೋವುಗಳ ಸಹಿತಾಗಿ
ದುರುಳ ಚೋರರು ಬಂದು ಎಳೆದೊಯ್ದ್ಯೋರೆನುತಲಿ
ಬಳಲುತಿದ್ದನು ಬ್ರಾಹ್ಮಣಾಗ ೨

ಪಾರ್ಥನಿನ್ನೊಬ್ಬರತಿನ್ನು ರಕ್ಷಿಸುವೋರ್ಯಾರೆನ್ನ
ವತ್ಸಗೋವ್ಗಳು ಸಹಿತಾಗಿ
ಬಿಚ್ಚಿ ಕೊಂಡೊಯ್ದ್ರೆನುತ ಕೂಗಲು ಕಿವಿ-
ಗೊಟ್ಟು ಕೇಳಿದ ಪಾರ್ಥ ತಾನು ೩

ಬಿಟ್ಟರೀಗೆನ ಕೀರ್ತಿ ನಷ್ಟವಾಗ್ಹೋಗೋದು
ವ್ಯರ್ಥವಾಗುವುದೆನ್ನ ಖ್ಯಾತಿ
ಇಟ್ಟಿನಾಯುಧ ಧರ್ಮರಾಯನ ಮನೆಯಲ್ಲಿ
ಹೊಕ್ಕು ತರುವ ತೆರನ್ಹ್ಯಾಗೆ ೪

ಧರ್ಮರಲ್ಹೋಗಲಧರ್ಮ ಬಂದೊದಗೋದು
ನಮ್ಮ ಪ್ರತಿಜ್ಞೆ ಕೆಡುವೋದು
ಬ್ರಹ್ಮಚರ್ಯಾಪ್ರಮದಿಂದ ಸಂಚರಿಸುವ್ರೋ
ಧರ್ಮ ನಮಗೆ ಶ್ಯಾ(ಶ್ಲಾ?)ಘ್ಯವೆಂದ ೫

ರತ್ನ ಜ್ಯೋತಿಗಳು ಬಕ್ಕಿಟ್ಟ ಪರಿಮಳ ಗಂಧ
ಅಚ್ಚ ಮಲ್ಲಿಗೆ ಹಾಸಿಕ್ಯಲ್ಲಿ
ನಕ್ಷತ್ರದಂತೆ ಮಲಗಿರೆ ಧರ್ಮರಾಯ ತಾ
ಮಿತ್ರೆ ದ್ರೌಪದಿ ಸಹಿತಾಗಿ ೬

ಶಯನ ಸ್ಥಳಕೆ ಹೋಗ್ಯಾಯುಧಗಳ ತಕ್ಕೊಂಡು
ಪಯಣವಾದನು ಧನುರ್ಧಾರಿ
ಹೊಂದ್ದು ಚೋರರ ಅಪ್ಪಳಿಸಿ ಗೋ ಧನವನ್ನು
ಒಯ್ದು ಕೊಟ್ಟನು ದ್ವಿಜಗಾಗ ೭

ಉದಯದಲ್ಲಿದ್ದು ಉತ್ತಮ ಧರ್ಮರಾಯನ
ಬದಿಯಲ್ಲಿ ಬಂದು ಎರಗಿದ

ಒದಗಿ ಬಂದಿತು ತೀರ್ಥಯಾತ್ರೆಕಾಲವು ನಮಗೆ
ಮುದದಿಂದಪ್ಪಣೆ ಪಾಲಿಸೆಂದ ೮

ಅಗಲಿರಲಾರೆ ಅರ್ಜುನ ಕೇಳೊ ನೀ ಎನ್ನ
ಮಗುವೆಂದು ನಾನು ತಿಳಿದೇನೊ
ಬಗೆಬಗೆಯಿಂದ ಹೇಳಲು ಕೇಳದರ್ಜುನ
ಸುಗುಣ ಅಪ್ಪಣೆ ಪಾಲಿಸೆಂದ ೯

ದೊರೆಯು ಅಪ್ಪಣೆಗೊಂಡು ತೆರಳಿ ಬಂದರ್ಜುನ
ತಿರುಗುತ ತಾನು ತೀರ್ಥವೆಲ್ಲ
ಹರಿದ್ವಾರದಲಿ ಕಂಡ್ಹರಿವೋ ಜಲವ ತನ್ನ
ಪರಿವಾರ ಸಹಿತಿಳಿದನು ೧೦

ಗಂಗಾ ದ್ವಾರದಲಿ ತಾ ಬಂದು ಸ್ನಾನವ ಮಾಡೆ
ಕಂಡಳುಲೂಪಿ ಕರೆತಂದು
ಮುಂಗೈಯ ಪಿಡಿದು ಮೋಹದಿ ಧನಂಜಯ ತನ್ನ
ಗಂಡನಾಗೋದು ಉಚಿತೆಂದು ೧೧

ಆದಿಶೇಷನು ಭಾಳಾನಂದಭರಿತನಾಗಿ
ಮೋದದಿ ಕೊಟ್ಟ ಮಗಳನು
ಆದರದಿಂದಲಂಕಾರ ವಸ್ತ್ರವ ಪಿಡಿದು
ತಾ ದಾರಿ ಹಿಡಿದು ನಡೆದನು ೧೨

ಅರ್ಥಿಯಿಂದಲಿ ಬರುತಿರೆ ಮಣಿಪುರವೆಂಬೋ
ಪಟ್ಟಣ[ದ]ದೊರೆ ಕರೆತಂದು
ಚಿತ್ರಾಂಗದೆಯ ಧಾರೆಯನೆರೆಯಲು ತಾ ಸಂ-
ತುಷ್ಟನಾಗಿರುತಿರ್ದನಲ್ಲಿ ೧೩

ಇಬ್ಬರ್ಹೆಂಡಿರ ಸಹಿತಿರಲು ಚಿತ್ರಾಂಗದೆ
ಗರ್ಭಿಣಿಯಾಗಿ ಪಡೆದಳು
ಬಬ್ರುವಾಹನನೆಂಬೋ ಸುತನ ನೋಡಿ
ಹಿಗ್ಗಿ ಮುಂದಕೆ ನಡೆದನು ೧೪

ಬಿದ್ದಿರೆ ಮಡುವಿನೊಳೈದು ಮಂದಿಯ ಶಾಪ
ಉದ್ಧಾರ ಮಾಡಿ ಕರುಣಾಳು

ಶಾಂತ ಶರೀರ ಸುಂದರ ಸ್ತ್ರೀಯರನ್ನು ನೋಡಿ ಅ-
ಲ್ಲಿದ್ದು ಮುಂದಕೆ ನಡೆದನು ೧೫

ಅತಿಬ್ಯಾಗದಿಂದ ಬರುತಿರೆ ಅರ್ಜುನನು ದ್ವಾರಾ-
ವತಿಯ ಪಟ್ಟಣವನ್ನು ಕಂಡು
ಪತಿತಪಾವನ ಪರಮಾತ್ಮನ ಪುರಕೆ ತಾ
ಹಿತದಿ ಸಾಷ್ಟಾಂಗವೆರಗಿದ ೧೬

ರತ್ನಗೋಡೆಗಳು ವಿಚಿತ್ರ ಗೋಪುರವು
ಮುತ್ತು ಮಾಣಿಕದ ಕಳಸವು
ಭಕ್ತಿ ಭಾವದಲಿ ಭೀಮೇಶಕೃಷ್ಣನ ಪುರಕೆ
ಎತ್ತಿ ತಾ ಕರವ ಮುಗಿದನು ೧೭

ಧ್ವನಿ—೩

ಮುಂದತ್ತ ಬರುತಿರೆ ನಂದನ ವನದೊಳಾ-
ನಂದದಿಂದಲಿ ಕುಳಿತು
ಬಂದಜನರ ಕೇಳುತ ಭಾಳ ಪ್ರೇಮದಿ
ಬಂಧುಗಳ್ವಾರ್ತೆಯನು ೧

ಕ್ಷೇಮದಿಂದಿರುವ್ರೋರೆ ದ್ವಾರಕಾಪುರದಲ್ಲಿ
ಆ ಮಹಾ ಯಾದವರು
ರಾಮಕೃಷ್ಣ ಲಗ್ನಕಾರ್ಯಕ್ಕೆ ಸ್ವಲ್ಪಯಿ(ವಿ?)ವಾ
ದವು ನಡೆಯಿತೀಗ ೨

ಕೆಟ್ಟ ಕೌರವಗೀಗ ಪುಟ್ಟ ಸುಭದ್ರೆಯ
ಕೊಟ್ಟೇನೆನುತ ರಾಮನು
ಶ್ರೇಷ್ಠತನದಿ ಪ್ರತಿಜ್ಞೆ ಮಾಡಿದರದು
ಇಷ್ಟವಿಲ್ಲವು ಕೃಷ್ಣಗೆ ೩

ಘಾತಕ ದುರಿಯೋಧನ ದುರುಳನು ನರ-
ಪಾತಕಿ ಜಗದೊಳಗೆ
ನೀತಿಯಲ್ಲವೊ ನಿನ್ನ ತಂಗಿಯ ಕೊಡುವೋದೆಂ-
ದಾತಗೆ ನುಡಿದ ಕೃಷ್ಣ ೪

ಅಗ್ರ[ಹ]ದಿ ಕೌರವಗನುಜೆ ಕೊಟ್ಟೀನೆಂಬೊ
ಶೀಘ್ರದಿ ಬಲರಾಮನು
ಅಗ್ರಜನ್ವಚನ ಕೇಳುತ ಕೃಷ್ಣನಮಗಿ-
ದು ಶ್ರಾ(ಶ್ಲಾ?)ಘ್ಯವಲ್ಲೆನುತಿದ್ದನು ೫

ಆಣಿ ಮುತ್ತುಗಳೊಯ್ದು ಕ್ವಾಣಗೆ ಕೊಡುವ್ರೇನು
ಜಾಣತನವೆ ನಿನಗೆ
ಮಾಣಿಕ್ಯದ್ಹರಳ ಮಂಗನ ಕೈಯಲ್ಲಿಡುವ್ರೇನ
ಕಾಣೆನೆಂದನು ಕೃಷ್ಣನು ೬

ಕೋಪದಿ ಬಲರಾಮ ಕಣ್ಣು ಕೆಂಪಗೆ ಮಾಡಿ
ಈ ಪಾರುಪತ್ಯಗಳ
ಗೋಪಾಲ ನಿನಗೆ ಕೊಟ್ಟವರ್ಯಾರೆನುತಲಿ
ಭೂಪ ರಾಮನು ನುಡಿದ ೭

ಅಣ್ಣನ ಮಾತು ಕೇಳುತಲಿ ಶ್ರೀಕೃಷ್ಣನು
ತನ್ನೊಳು ತಾ ನಗುತ
ಬ್ರಹ್ಮನ ಲಿಖಿತ ಬಲ್ಲವರ್ಯಾರೆನುತಲಿ
ಸುಮ್ಮನೆ ಕುಳಿತಿದ್ದನು ೮

ಕೇಶವನನುಜೆ ದುಶ್ಯಾಸನ[ನ]ಣ್ಣಗೆ ಮಾಡೊ
ಸೋಸಿಲೆ ಬಲರಾಮಗೆ
ಶ್ರೀಶನ ಸಂಕಲ್ಪ್ಹ್ಯಾಂಗಿರುವುದೋ ಮುಂದೆ ಭೀ-
ಮೇಶಕೃಷ್ಣನೆ ಬಲ್ಲನು ೯

ಧ್ವನಿ—೩

ಇಷ್ಟುವಾರ್ತೆಯು ಕೇಳಿ ಮನದೊಳು
ಹುಟ್ಟಿ ರೋಷ ದಿಟ್ಟ ಪಾರ್ಥಗೆ ೧

ದ್ವೇಷಿ ಅಲ್ಲವೆ ದೋಷಿ ಕೌರವ
ಶ್ರೀಶನನುಜೆಗೆ ವರನ್ಹ್ಯಾಂಗಾಗುವ ೨

ನಾ ಸುಭದ್ರೆಯ ತರದೆ ಹೋದರೆ
ಮಿಾಸೆ ಯಾತಕೀ ಮುಖದೊಳೆಂದನು ೩

ಬಲನ ಚಲಗಳ ಗೆಲಿದು ಬ್ಯಾಗನೆ
ಲಲನೆ ಭದ್ರೆಯ ತರುವೆನೆನುತಲಿ ೪

ಗಾಂಡೀವರ್ಜುನ ತ್ರಿದಂಡಿಯಾದನು
ಗಂಡನಾಗುವೆ ಸುಭದ್ರೆಗೆನುತಲಿ ೫

ಕೃಪಣವತ್ಸಲ ಅಪರ್ಮಿತಗುಣ
ಗುಪಿತ ಮಂತ್ರವ ಜಪಿಸುತಿದ್ದನು ೬

ಮಾಧವ ಮಧುಸೂದನ ಹರಿ
ಯಾದವೇಶನೆ ರಾಧಾವಲ್ಲಭ ೭

ಆದಿ ಮೂರುತಿ ಅನಲಾಂತರ್ಗತ
ನೀ ದಯಾಂಬುಧಿ ನಿಂದು ರಕ್ಷಿಸೊ ೮

ಯಮಕುಲೇಶನೆ ವಿಶ್ವಗುಪ್ತನೆ
ಹೃದಯವಾಸನೆ ರುಕ್ಮಿಣೀ ಪತಿ ೯

ಪದುಮ ನಾಭನೆ ಪರಮ ಆಪ್ತನೆ ಜ-
ಗದೊಳ್ವ್ಯಾಪ್ತನೆ ನೀ ನಿರ್ಲಿಪ್ತನೆ ೧೦

ಜಗದೊಳೋರ್ವನೆ ಜನದೊಳಾರ್ಯನೆ
ಸುಗುಣ ಶೂರನೆ ಸುಂದರ ಗಂಭೀರನೆ ೧೧

ಅಚ್ಯುತನೆ ಶ್ರೀವತ್ಸಧಾರಿ ಎ-
ನ್ನಿಚ್ಛೆ ಪೂರ್ಣ ಮಾಡಿಂದಿರಾಪತಿ ೧೨

ಭೃತ್ಯ ವತ್ಸಲ ಬಿರುದು ನಿನ್ನದು
ಸತ್ಯಭಾಮೆಯರ ಕಾಂತ ಕರುಣಿಸೊ ೧೩

ಕಂತುಪಿತನೆ ಎನ್ನಂತರಂಗದ
ಪಂಥ ಗೆಲಿಸೊ ಪರಮ ಪುರುಷನೆ ೧೪

ಶೇಷಶಯನ ಶ್ರೀನಾಥ ಪ್ರಭುವೆ ಎ-
ನ್ನಾಸೆ ಗೆಲಿಸೊ ಭೀಮೇಶಕೃಷ್ಣನೆ ೧೫

## ಧ್ವನಿ—೪

ರತ್ನಮಂಚ ಸುಪ್ಪತ್ತಿಗೆ ಶಯ್ಯದಿ
ಸತ್ಯಭಾಮೇರ ಕೂಡ ಕೃಷ್ಣ
ಸತ್ಯಭಾಮೇರ ಕೂಡ ೧

ಅಷ್ಟಗಂಧ ಬುಕ್ಕಿಟ್ಟು ಕುಸುಮಗಳು
ಕರ್ಪೂರದ್ವೀಳ್ಯವ ನೀಡೆ ಭಾಮೆ
ಕರ್ಪೂರದ್ವೀಳ್ಯವ ನೀಡೆ ೨

ಅರ್ತಿ ವಿನೋದದಿಂದಿರುತಿಹ ಕಾಲದಿ
ನಕ್ಕನಾಗ ಮುರವೈರಿ ತಾ
ನಕ್ಕನಾಗ ಮುರವೈರಿ ೩

ಯಾಕೆ ನಗುವುದೊ ಲೋಕೋದ್ಧಾರನೆ
ವಾಕು ಪೇಳೋ ಎನ್ನಮುಂದೆ
ವಾಕು ಪೇಳೋ ಎನ್ನ ಮುಂದೆ ೪

ನಾ ಕಂಡೆನೆ ಫಲ್ಗುಣ ಬಂದ್ವನದೊಳು
ಪೋಕಬುದ್ಧಿ ತರವೇನೆ ಇಂಥ
ಪೋಕಬುದ್ಧಿ ತರವೇನೆ ೫

ಯಾತಕೆ ಬಂದನು ಕೇತಕಿ ವನದೊಳು
ಮಾತು ಪೇಳೊ ಎನ್ನ ಮುಂದೆ ಈ
ಮಾತು ಪೇಳೊ ಎನ್ನ ಮುಂದೆ ೬

ಕಳ್ಳತನದಿ ಕಾಮುಕ ಯತಿಯಾದನು
ಚೆಲ್ವಭದ್ರೆ ದೆಸೆಯಿಂದ ನಮ್ಮ
ಚೆಲ್ವ ಭದ್ರೆ ದೆಸೆಯಿಂದ ೭

ಕಳ್ಳತನವು ನಿಮ್ಮಲ್ಲುಪದೇಶಗಳಿಲ್ಲಿ
ಕಲಿತನ್ನು ಪಾರ್ಥ ನಿಮ್ಮಲ್ಲೆ
ಕಲಿತನು ಪಾರ್ಥ ನಿಮ್ಮಲ್ಲೆ ೮

ಹೆಣ್ಣಿಗಾಗಿ ತಾ ಸನ್ನ್ಯಾಸ್ಯಾಗುವ
ಘನ್ನತನವು ಈಗೇನೆ ಸಂ-
ಪನ್ನತನವು ಈಗೇನೆ ೯

ಹೆಣ್ಣಿಗಲ್ಲೆ ರುಕುಮನ ಶಿರ ಗಡ್ಡವ
ಪನ್ನಿತೆಗೆದ ಘನತೇನೊ ಸಂ-
ಪನ್ನ ನಿನ್ನ ಘನತೇನೊ ೧೦

ಅರಸು ಮಕ್ಕಳಾದರೆ ಬಂದುಕೇಳದೆ
ಧರಿಸುವರೇನ್ಯತಿ ರೂಪ ತಾವು
ಧರಿಸುವರೇನ್ಯತಿ ರೂಪ ೧೧

ಕರೆಸಿಕೊಡುವ ಬುದ್ಧಿ ನಿಮ್ಮಲ್ಲಿಲ್ಲವೊ
ಒರೆಸುವ ನಿಮ್ಮಾಂ(ಮ್ಮಹಂ?)ಕಾರ ಪಾರ್ಥ
ಮುರಿಸುವ ನಿಮ್ಮಾಂಕಾರ ೧೨

ನೋಡು ನೋಡು ಪಾರ್ಥನ ಮನದ್ಹಮ್ಮು
ಝೊಡಿಸಿ ಬಿಡುವೆನು ನಾನು ಅವ-
ನೋಡಿಸಿ ಬಿಡುವೆನು ನಾನು ೧೩

ಓಡಿಸುವೊಡೆ ಸಾರಥ್ಯಾಗವನ ರಥ
ಮಾಡ ಬ್ಯಾಡೊ ಬಡಿವಾರ ನಾ
ನೋಡಲಾರೆ ಬಡಿವಾರ ೧೪

ಮುಂಡೆ ಜೋಳಕರಿಗೆ ಹೆಂಡಿರ ಸುಖವೇ ತ್ರಿ-
ದಂಡಿಗ್ಯಾಕೆ ಸಂಸಾರ ತ್ರಿ-
ದಂಡಿಗ್ಯಾಕೆ ಸಂಸಾರ ೧೫

ಮುಂಡೆ ಬೋಳಕರಿಗೆ ಮನೆದೈವವೆ ಹೀ-
ಗೆಂದ್ಯತಿಯಾಗೊಲಿಸೋನ ಹೀ-
ಗೆಂದ್ಯತಿಯಾಗೊಲಿಸೋನ ೧೬

ಸತ್ಯಭಾಮೆ ನುಡಿಗೊಪ್ಪಿ ತಾ ನಗುತ
ಅಪ್ಪಿಕೊಂಡ ಪರಮಾತ್ಮ ತಾ-
ನಪ್ಪಿಕೊಂಡ ಪರಮಾತ್ಮ ೧೭

ಸರ್ಪಶಯನ ಪಾಲಿಸೊ ಪಾರ್ಥನ ಎಂ–
ದ್ಧಸ್ತವ ಮುಗಿದಳು ಭೀಮೇಶನ್ನ
ಹಸ್ತವ ಮುಗಿದಳು ಭೀಮೇಶನ್ನ ೧೮

ಅತ್ರಿಸುತನು ಬಹು ಮಿತ್ರ ಸಖನು ನಮ–
ಗಿಷ್ಟವಿಲ್ಲವೀ ಪಾರ್ಥ ನಮ–
ಗಿಷ್ಟವಿಲ್ಲವೀ ಪಾರ್ಥ ೧೯

ಕೊಟ್ಟು ಕಳುಹೊ ಸುಭದ್ರೆಯು ಭೀಮೇಶ–
ಕೃಷ್ಣ ನಿನ್ನದೀ ಕಾರ್ಯ ಶ್ರೀ–
ಕೃಷ್ಣ ನಿನ್ನದೀ ಕಾರ್ಯ ೨೦

## ವಚನ—೫

ಕಳಿತ ಖರ್ಜೂರ ದ್ರಾಕ್ಷಿಯು ಬಳ್ಳಿ ವನವೊಳಗೆ
ಕುಳಿತ ಪಾರ್ಥನ ಕೇಳುತೊಳಿತು ಕ್ಷೇಮಗಳೆಲ್ಲ
ಜಳಕದಿರು ಬ್ಯಾಗೆ ಸುಭದ್ರೆ ಕೊಡಿಸುವೆನೆಂದ
ಅಳಕನಂದಳ ಜನಕನು
ವನಕೆ ಬಂದ ಕಾರ್ಯ ಅನುಕೂಲವಾಗುವುದು
ಮನಕೆ ಧೈರ್ಯವ ಮಾಡು ಮಂದಗಮನೆಯು ಕೂಡು
ಒನಕೆ ಆಯುಧಗೆ ವಾರ್ತೆಗಳ ತಿಳಿಸಿ ನೀ ಕೂಡು
ಎನ ಕೀರ್ತಿ ಭಜನೆ ಮಾಡು
ಸಖಗೆ ಸಂತೋಷದ್ವಚನವ ಕೊಟ್ಟು ತಾ ಬಂದು
ಪ್ರಕಟ ಮಾಡಿದ ಯತಿಗಳಾಗಮದ ವಾರ್ತೆಯನು
ಭಕತವತ್ಸಲ ಭೀಮೇಶಕೃಷ್ಣನು ಬಂದು
ಸಕಲ ಸಂಭ್ರಮದಿ ಕುಳಿತಿದ್ದನಾಗ

## ಧ್ವನಿ—೬

ಬಂದನು ತಾ ಬಲರಾಮ
ನಂದನವನಗಳಿಗತಿ ಪ್ರೇಮ ನಿಸ್ಸೀಮ ಪ.

ಬರುವ ಯತಿಯು ವಾರ್ತೆಗಳ ಕೇಳಿ
ಕರೆತಾಹೋದು ಬಲರಾಮನ ಚಾಳಿ
ಬಿರುದೂದುವ ಚಿನ್ನದ ಹೊಸ ಕಾಳಿ

ಪರಮ ಆಪ್ತ ಉದ್ಧವ ಅಕ್ರೂರರು
ಸರುವ ಯಾದವರ ಸಹಿತಾಗ್ವನಕ್ಕೆ ಬಂದನು ೧

ಭೇರಿ ಬಾರಿಸುತಿರುವುದೆ ನೌಬತ್ತು
ಬಾಜಾ ಬಜಂತರಿ ಊದುವ ಗತ್ತು
ವಾರ ಸ್ತ್ರೀಯರು ಕುಣಿದಾಡುವ ಜತ್ತು
ಮಾರಜನಕ ಮಕ್ಕಳರೊಡಗೂಡಿ
ಶೂರ ಸುರರು ಸುಂದರರಾ ವನಕೆ ೨

ಆನೆ ಕುದುರೆ ಪಲ್ಲಕ್ಕಿಯ ಸಾಲು
ಸಾವಿರ ಜನರು ಹಚ್ಚಿ ಹಿಡಿದರ್ಥಿಲಾಲು
ಮ್ಯಾಲ್ಹೊದ್ದರು ಜರತಾರಿಯ ಶಾಲು
ನೀಲವರ್ಣ ನಿರ್ಜರರೊಡಗೂಡಿ
ಹಲಾಯುಧ ಬಂದನು ಭಾಳ ಸಂಭ್ರಮದಿ ೩

ಬೆಳ್ಳಿ ಬೆತ್ತ ಆಯುಧ ಹಿಡಿದವರು
ಒಳ್ಳೆ ಛತ್ರ ಚಾಮರ ಬೀಸುವರು
ಅಲ್ಲಲ್ಹೊಗಳುವ ವಂದಿ ಮಾಗಧರು
ಝಲ್ಲೆ ಕುಸುಮ ಲಾಜವು ಸೂರ್ಯಾಡುತ
ಎಲ್ಲ ಜನರು ಕೂಡಿ ಮಲ್ಲಿಗೆವನಕೆ ೪

ಬಂದುಯತಿಗೆ ಎರಗಲು ಜನರೆಷ್ಟು
ತೆಂಗಿನ ಕಾಯಿ ಫಲವು ಮುಂದಿಟ್ಟು ಆ-
ನಂದದಿ ಬಲರಾಮ್ಹಸ್ತವ ಕೊಟ್ಟು
ಮುಂಗೈ ಹಿಡಿದೆಬ್ಬಿಸಿ ಕರೆಯಲು ತಾ
ಬಂದ ಭೀಮೇಶಕೃಷ್ಣನು ನಸುನಗುತ ೫

## ಧ್ವನಿ—೭

ಬ್ಯಾಡವೊ ಅಣ್ಣಯ್ಯ ಬ್ಯಾಡ ಬ್ಯಾಡವೊ
ಬ್ಯಾಡ ಬ್ಯಾಡಣ್ಣಯ್ಯ ಬೇಡಿಕೊಂಡ್ಹೇಳುವೆ
ನಾಡೊಳಗದು ಹಾಸ್ಯ ಗಾಡಿ ಕಾರ್ಯತಿಯಾತ ಪ.

ಯತಿರೂಪ ಧರಿಸಿದನಲ್ಲ ಭಾಳ
ಮತಿಯು ಧಾರಢ್ಯ ತಾನಿಲ್ಲ ಮಹಾ

ಪತಿವ್ರತೇರಿಗಿವನಲ್ಲ
ಅತಿಕೋಪ ಮಾಡದಿರ್‍ರಿ ತವ ಹೇಳುವೆ ಸ–
ಸ್ಮ್ರತದಿಂದ ಕೇಳಿ ನೀ ಯತಿಯು ಕೈಬಿಡು ಕಂಡ್ಯ ೧

ರೂಪನೋಡಲು ಸೌಂದರಿಯ ವಿರಹ
ತಾಪದಿ ಬಂದಂಥ ಚರಿಯ ನೋಡೊ
ಭೂಪ ರಾಮಣ್ಯ(ರಾಮಾಯಣ?)ಕ್ಕಿಂಜರಿಯ
ಈ ಪರಿ ಇವನ ಪ್ರತಾಪ ಮೂರ್ಜಗದೊಳು
ವ್ಯಾಪಿಸಿಕೊಂಡಿರೆ ನಾ ಪೇಳುವುದು ನಿಜ ೨

ಭುಜ ಪರಾಕ್ರಮಿಯಂ[ತೆ]ತೋರುವನೊ ಕರ
ಗಜ ಸುಂಡ ದಂತಿಯಂತಿಹನೊ ಮುಖ
ನಿಜ ಸೂರ್ಯರನು ಸೋಲಿಸುವನೊ
ಯಜಮಾನ ನಿನಗೆ ಕೈಮುಗಿದ್ದೇಳಿಕೊಂಬುವೆ
ಸದನಕ್ಕೆ ಕರೆದೊಯ್ಯಲು ಕಷನ ಬಂದೊದಗೋದು ೩

ದೊರೆಮಕ್ಕಳಂತೆ ತೋರುವನೊ ಮಹಾ
ಶರವಿದ್ಯೆಯಲ್ಲಿ ಪಂಡಿತನೊ ಬಹಳ
ಗರ್ವಿ ಅಹಂಕಾರ ಭರಿತನೊ
ಸುರಪತಿಸುತನಂತೀತನ ಮುಖಕಮಲವು
ಅರಿತು ಅರಿಯದಂತೆ ಗುರುತು ನಾ ಪೇಳುವೆ ೪

ಪಾಶ್ಯಗಾರರಾಗಿ ಕಾಂಬುವನೊ ಹೆಣ್ಣಿ–
ನಾಸೆಯಿಂದಲಿ ಬಂದವನೊ ಚೆಲ್ವ
ಮೀಸೆ ಪ್ರಾಯದಿ ಮೋಹಿಸುವನೊ
ಈಸು ಮಾತನು ಮಂದಹಾಸದಿ ನಗುತ ಭೀ–
ಮೇಶಕೃಷ್ಣನು ಹೇಳಿ ತಾ ಸುಮ್ಮನಾದನು ೫

ಧ್ವನಿ—೮

ಏತಕ್ಕಾಡುವಿ ಎನ್ನ ಕೂಡ ಇಂಥ
ನೀತಿ ಇಲ್ಲದ ಮಾತು ನೀರಜ ನಯನ ಪ.

ದೊಡ್ಡವರನು ದೂಷಿಸುವರೆ ಒಂದು
ಗುಡ್ಡಕ್ಕೆ ಗುಂಡು ಕಲ್ಲೆಂದು ನುಡಿವರೆ

ಎಡ್ಡು ಮಾತನು ಬಳಸುವರೆ ಹೀಗೆ
ಅಡ್ಡಿಲ್ಲದೆನ್ನೆದುರಿಗೆ ನಿಂತಾಡುವರೆ ೧

ಸಿಂಹ್ವಗೆ ನರಿಯೆಂದಾಡುವರೆ ಹಡ-
ದವ್ವಗೆಲ್ಲಾದರು ದಾಸಿ ಎಂಬುವರೆ
ಕುವ್ವಾಡ ಮಾಡಿ ನಗುವರೆ ದೊಡ್ಡ
ಬವ್ವನ ಮಾಡೀಗ ನನ್ನಂಜಿಸುವರೆ ೨

ಅನ್ಯಾಯ ಮಾತನಾಡುವರೆ ಇಂಥ
ಸನ್ನ್ಯಾಸಿಗಳಿಗ್ಹೆಣ್ಣಿನಾಸೆಯೆಂಬುವರೆ
ನಿನ್ನಂಥ ಗುಣ ಎಣಿಸುವರೆ ಬಿಡೋ
ಬೆಣ್ಣೆಕಳ್ಳನೆ ಅಪಹಾಸ್ಯ ಮಾಡುವರೆ ೩

ಅನುಕೂಲವಾಗದೀವಸಕ್ಕೆ ನಿನ್ನ ಕರಕೊಂಡು
ಬಂದದ್ದಲ್ಲವೊ ಕಾಮಜನಕ
ಮನಕೆ ಬಾರದ ಗೋಘನ ಕಾಯುವ ಕೃಷ್ಣ
ಸುಮ್ಮನೆ ನಡೆ ಮನೆತನಕ ೪

ಉಡುವೊ ಸೀರೆಗಳನೆ ಕದ್ದು ನೀ
ಕಡಹಾಲ್ದ ಮರವನೇರಿದ್ದು ಪ್ರಸಿದ್ಧ
ಮಡದೇರ ಕೂಡ ಕುಚೋದ್ಯ ಇನ್ನೂ
ಬಿಡುವಲ್ಲ್ಯೋ ಭೀಮೇಶಕೃಷ್ಣ ಈ ಬುದ್ಧಿ ೫

ಧ್ವನಿ—೯

ಅಕ್ರೂರವರದನ ಧಿಕ್ಕಾರ ಮಾಡಿ ಪಲ್ಲಕ್ಕಿಯೊಳಗೆ
ಯತಿಶ್ರೇಷ್ಠರ ಕರೆತಂದ ರಾಮ ರಾಜೀವ ಲೋಚನ ೧

ಮುತ್ತು ಮಾಣಿಕ್ಯ ನವರತ್ನದಾಸನ ಕೊಟ್ಟು
ಪತ್ನಿ ಸಹಿತ ಪಾದ ಪೂಜೆಮಾಡಿದನಾಗ ೨

ಹಾರ ಪದಕ ವಂಕಿ ದ್ವಾರ್ಯ ಕಂಕಣವಿಟ್ಟು ಒ-
ಯ್ಯಾರಿ ರೇವತಿಯು ಮುಂಗಾರ ಮಿಂಚುಗಳಂತೆ ೩

ಹೊಳೆವೊ ಚಿನ್ನದ ಪಟ್ಟೆ ಬಿಳಿಯ ಪೀತಾಂಬರ
ರುಳಿ ಕಾಲುಂಗುರವಿಟ್ಟು ಕಳೆಯ ಸುರಿವೋ ಜೆಲ್ಪೆ ೪

ಅಚ್ಚ ಮುತ್ತಿನ ಗಿಂಡಿ ಸ್ವಚ್ಛಮುದಕ ತುಂಬಿ
ಭಕ್ತಿಯಿಂದ್ಯತಿ ಪಾದಗಳಿಗೆ ನೀರೆರೆದಳು ೫

ಉತ್ತಮ ಯತಿಯ ಪೂಜೆಯ ಮಾಡ್ವಸ್ತ್ರವ ಕೊಟ್ಟು
ಆರ್ತಿಯಿಂದಲಿ ಮಂಗಳಾರ್ತಿ ಬೆಳಗಿದರಾಗ ೬

ಸತ್ಯಸಂಕಲ್ಪ ಸಂಪೂರ್ಣವಾಗಲಿ ನಿಮ್ಮ
ಭೃತ್ಯನಾಗಿರುವೆನೆಂದ್ಹಸ್ತವ ಮುಗಿದನು ೭

ಶೃಂಗಾರವಾಗಿದ್ದ ತಂಗಿಯು ಕರೆದೆನ್ನ
ಮುಂಗೈಯ ಮ್ಯಾಲಿನ ಮುದ್ದರಗಿಳಿಯಂತೆ ೮

ಶ್ರೀಷ್ಮರ ಸೇವೆ ಸಂತುಷ್ಟರಾಗಲು ಮನೋ-
ಭೀಷ್ಟ ಧರ್ಮಾರ್ಥ ಕಾಮ್ಯವು ಸಿದ್ಧಿಯಾಗೋದು ೯

ಮುದ್ದು ಸುಭದ್ರೆಗೆ ಆಜ್ಞೆ ಮಾಡುತ ಬಲ-
ಭದ್ರ ತಾ ನಡೆದ ಯಾದವರ ಸಹಿತವಾಗಿ ೧೦

ಭೀಮೇಶಕೃಷ್ಣ ಸುಭದ್ರೆ ಪಾರ್ಥನ ನೋಡಿ
ತಾ ಮನದೊಳಗತಿ ಹರುಷಾಗಿ ನಡೆದನು ೧೧

ಧ್ವನಿ—೧೦

ಅಣ್ಣನಪ್ಪಣೆಗೊಂಡು ಸಣ್ಣ ಸುಭದ್ರೆ ತಾ
ಸನ್ನ್ಯಾಸಿಗಳ ಸೇವೆಗನುಕೂಲವಾಗಿ ೧

ಗೋಮಯದಿಂದ ಸಾರಿಸಿ ಸುಣ್ಣ ಕಾರಣೆಯು
ಹೇಮಮಯವಾದ ಉಪಕರಣೆಯ ತೊಳೆದು ೨

ಶಂಖಚಕ್ರ ಗದಾಪದ್ಮ ಪರಿಪರಿ ಚಿತ್ರ
ಪಂಚವರ್ಣದ ರಂಗೋಲಿ ಹಾಕುವಳು ೩

ತೊಳೆದು ಮೈ ಪೀತಾಂಬರವ ತಾ ಸಿರಿದುಟ್ಟು
ಹೊಳೆವೊ ಅರಿಷಿಣ ಗಂಧ ಕುಂಕುಮ ಧರಿಸಿ ೪

ದೀಪ ಧೂಪ ಗಂಧ ಪೂಜೆಸಾಧನ ದ್ರವ್ಯ ಅನೇ-
ಕಪರಿ ಫಲಗಳನು ತಂದರ್ಪಿಸುವಳು ೫

ಕೋಮಲವಾಗಿದ್ದ ದವನ ಕ್ಯಾದಿಗೆ ಕುಸುಮ
ಪಾರಿಜಾತದ ಪುಷ್ಪ ನಾಗಸಂಪಿಗೆಯ ೬

ಎಳೆಯ ಶ್ರೀತುಳಸಿಗಳು ಅರಳು ಮಲ್ಲಿಗೆ ಕಟ್ಟಿ
ಬಿಳಿಯ ಶಾವಂತಿಗೆಯ ಸರವ ತಂದಿರಿಸಿ ೭

ಆಕಳ ಹಾಲು ದಧಿ ಘೃತ ಬೆಣ್ಣೆ ಸಕ್ಕರೆಯು
ಶ್ರೀಕಾಂತನೆದುರು ತಾಂಬೂಲ ತಂದಿರಿಸಿ ೮

ಶಾಕಪಾಕಗಳು ಶಾಲ್ಯಾನ್ನ ಮಂಡಿಗೆ ಭಕ್ಷ್ಯ ಅ-
ನೇಕಪರಿ ಪರಮಾನ್ನ ಮಾಡಿಸುವಳಾಗ ೯

ಒಂದು ಹೇಳದಲೆ ಹನ್ನೊಂದು ಕೆಲಸವ ಮಾಡಿ
ಮಂಗಳಾರತಿ ಚಿತ್ರ ಬರೆದು ತಂದಿರಿಸಿ ೧೦

ಎಳೆಬಾಳೆ ಸುಳಿಯು ಪುತ್ಥಳಿ ಗೊಂಬೆಯಂದದಲಿ
ಸುಳಿದಾಡುತಿಹಳು ಪಂಜರದ ಗಿಳಿಯಂತೆ ೧೧

ಕಾಮನತ್ತೆಯನು ಕಡೆಗಣ್ಣ ನೋಟದಿ ನೋಡಿ
ಪ್ರೇಮದಿಂದ್ಹಿಗ್ಗುವನು ಪಾರ್ಥ ಮನದೊಳಗೆ ೧೨

ದೇವತಾರ್ಚನೆಯು ಯತಿಗಳ ಭೋಜನಾಗುತಿರೆ
ತಾನುಂಡು ಮಲಗುವಳು ತೂಗು ಮಂಚದಲಿ ೧೩

ಇಂತೀಪರಿ ನಿತ್ಯ ಸೇವೆಯ ಮಾಡಿ ರಾತ್ರಿಯೊಳು
ಚಿಂತೆಯಿಂದಾಗ ಯೋಚನೆಯ ಮಾಡುವಳು ೧೪

ರಾಮಯ್ಯ ಹಿಡಿದ ಹಟವನು ಬಿಡದೆ ನಡೆಸುವನು
ಭೀಮೇಶಕೃಷ್ಣ ಇದಕೇನು ಮಾಡುವನೊ ೧೫

ಧ್ವನಿ—೧೧

ಕಣ್ಣಿಗೆ ನಿದ್ರೆ ಬಾರದೆ ಕಳವಳಿಸುತ
ಸಣ್ಣ ಸುಭದ್ರೆ ಸಂತಾಪದಿಂದ
ಅಣ್ಣಯ್ಯಗೆನ್ನಲಂತಃಕರಣಗಳಿಲ್ಲ
ಟೊಣ್ಯ ಕೌರವಗೆ ಒಪ್ಪಿಸಿಕೊಡುವನೆಂದು ಪ

ಯತಿಗಳ ಸೇವೆಯಿಂದೆನ್ನ ದೇಹವು ನೋಡ-
ಲತಿ ಪವಿತ್ರತವು ಆಗುವುದಿಂದಿಗೆ
ಪತಿತ ಕೌರವನ ಕೈಹಿಡಿದ ವ್ಯಾಲಿ ಇನ್ನು
ಪೃಥಿವಿಯೊಳಗೆ ಪಾತಕಿ ಎನಿಸುವೆನೆಂದು ೧

ಶ್ರೇಷ್ಠರ ಸೇವೆ ಮಾಡುತಲಿ ನಾ ಪುಣ್ಯಕ್ಕೆ
ಪಾತ್ರಳಾದೆನು ಇಂದಿಗೆ ಲೋಕದಿ
ದುಷ್ಟ ದುರ್ಯೋಧನನ ಪತ್ನಿಯಾದ ವ್ಯಾಲಿ
ಇಟ್ಟು ಕೊಳ್ಳದೆ ಪ್ರಾಣ ಬಿಟ್ಟುಬಿಡುವೆನೆಂದು ೨

ಅತ್ತೆಯ ಮಗ ಪಾರ್ಥ ತೀರ್ಥಯಾತ್ರೆಗೆಂದು
ಹಸ್ತಿನಾಪುರವ ಬಿಟ್ಟೊಹೊರಟಿಹನು
ಮತ್ತೆಲ್ಲಾದರು ನೀವು ಕಂಡಿರಾ ಎನುತಲಿ
ಭಕ್ತಿಭಾವದಿ ಬಾಯಬಿಟ್ಟು ಕೇಳಲ್ಯಾ ಎಂದು ೩

ಆದರಾಗಲಿ ನಮ್ಮ ಸೋದರತ್ತೆಯ ಮಗ-
ನ್ಹಾದಿ ಮಾರ್ಗದಲಿ ಕಂಡಿರಾ ಎನುತ
ಆದರದಿಂದ ಕೈಮುಗಿದು ಕೇಳುತಲಿರೆ ಮೌ-
ನ ಧರಿಸಿ ಮಾತನಾಡದಿರುವರೆಂದು ೪

ಆ ಮಹಾತಪಸಿಗಳಾದರು ಎನ್ನಲ್ಲಿ
ಭೇದ ಬುದ್ಧಿಗಳ ಮಾಡುವರ್ಯಾತಕೆ ಭೀ-
ಮೇಶಕೃಷ್ಣನ ದಯವು ಉಂಟಾದರೆ
ಪ್ರೇಮದಿ ಕರೆದು ಲಾಲಿಸಿ ಮಾತನಾಡೋರು ೫

ಧ್ವನಿ—೧೨

ಏನೆಂಬೋರೊ ಯತಿಗಳು ಇದಕೆ
ನಾನ್ಹೋಗೆರಗಲವರ ಪಾದಕೆ ಮು-
ತ್ತೇನೆಂಬೋರೊ ಯತಿಗಳು ಇದಕೆ ಪ.

ಒಬ್ಬರಿದ್ದಲ್ಲಿ ಹೋಗೆಬ್ಬಿಸಿ ಕೇಳಲು
ನಿರ್ಭಯದ್ಹೆಣ್ಣಿವಳೆಂಬುವರೊ ೧

ಮಿಟಮಿಟಿ ನೋಡುತ ಎನ್ನ ಮುಖವು ಭಾಳ
ಗಟವಾಣಿ ಸೆಟವಿ[ಇ]ವಳೆಂಬೋರೊ ೨

ಗುಪ್ತ ಕುಚೋದ್ಯದಿಂದಪಹಾಸ್ಯ ಮಾಡೋರೊ
ಹೊತ್ತಲ್ಲಿಂದಕೆ ನಡೆಯೆಂಬೋರೊ ೩

ಈ ನಡುರಾತ್ರಿಯಲ್ಲೇನು ರಾ[ರಹ?]ಸ್ಯಗಳೆಂಬು
ಹೀನ ಮಾತುಗಳ ಕಲ್ಪಿಸಿ ಕೊಂಬರೊ ೪

ಭೀಮೇಶಕೃಷ್ಣನ ಭಿಡಿಯದಿಂದೆನ್ನನು
ಬಾರೆಂದು ಕರೆದ್ವಾರ್ತೆ ಹೇಳುವರೊ ೫

## ವಚನ—೧೩

ಇಷ್ಟು ಯೋಚನೆ ಮಾಡಿ ಪುಟ್ಟ ಸುಭದ್ರೆ ತಾ
ತಟ್ಟನೆದ್ದಳು ತನ್ನ ಮಂಚದಿಂದ
ಉಟ್ಟ ಪೀತಾಂಬರವು ಗಟ್ಯಾಗಿ ಸೆರಗ್ಹೊದ್ದು
ಪಟ್ಟೆ ನಡುವಿಗೆ ಮಾಣಿಕ್ಯದೊಡ್ಯಾಣವನು
ತೊಟ್ಟ ಕುತ್ತನಿಕುಬುಸ ನೆಟ್ಟರಲು ನೈಯಲ್ಲಿ
ಬಟ್ಟಮುತ್ತಿನ ಪಣೆಯಲ್ಲಿಟ್ಟು ಕುಂಕುಮ
ಶ್ರೇಷ್ಠ ಸರಿಗೆಯು ಮ್ಯಾಲೆ ಕಟ್ಟಾಣಿ ಸರಪದಕ
ಕಟ್ಟದಡ್ಡಿಕೆ ಮುತ್ತು ಏಕಾವಳಿಯ ಸರ
ಪುತ್ಥಳಿ ಚಂದ್ರಹಾರಗಳು ಜರಿಸಿರಿಯು ಮ್ಯಾ-
ಲರ್ಥಿಯಿಂದ್ಹೊಲೆದಾಡುತ
ದ್ವಾರ್ಯರ್ಣ ಕಂಕಣ ಹರಡಿ ಗೀರುಬಳೆ ಕೈಕಟ್ಟು ನಾಗ-
ಮುರಿಗೆ ವಂಕಿ ಮ್ಯಾಲೆ ಗೆಜ್ಜೆಯ ಕುಚ್ಚು
ಭಾರಿ ಬಾಜೂಬಂದು ಭಾಗ್ಯಶಾಲಿಯು ತೋಳಲ್ಲಾಡು-
ತಿರಲಾಣೆ ಮುತ್ತಿನ ಗೊಂಚಲು
ಚಂದ್ರ ರಾಗಟೆ ಚೌರಿ ಗೊಂಡ್ಯ ಕ್ಯಾದಿಗೆ ಹೆರಳ-
ಬಂಗಾರದ ಭಾರದಿಂದ ಬಳುಕ್ಯಾಡುತಲಿ
ಕುಂದಣದ ಹರಳ್ವಾಲೆ ಬುಗುಡಿ
ಚಂದರ ಬಾಳ್ಯ ಮುಂದೆ ಮುತ್ತಿನ ದ್ರಾಕ್ಷಿಬಳ್ಳಿ
ಗೊಂಚಲು ಪೂರ್ಣ ಚಂದ್ರಮುಖಿಗೊಪ್ಪುತಿರಲು
ಕೆಂಪು ಕೆತ್ತಿದ ಬುಲಾಕು ಮುತ್ತಿನ ಮುಕುರ್ಯ
ಚಂಚಲಾಕ್ಷಿಯ ಗಲ್ಲ ಮಿಂಚಿಸಂತ್ಹೊಳೆಯುತಲಿ
ಪಂಚ ಬೆರಳಲ್ಲಿದ್ದು ಮುದ್ರೆ ಉಂಗುರವಿಟ್ಟು
ಸಂಪಿಗೆ ಮಲ್ಲೆ ಮಲ್ಲಿಗೆ ಮೊಗ್ಗು ಮುಡಿಯ ಮ್ಯಾಲೆ

ತಂಪಿನಿಂದರಳುತಿರಲು
ಪಿಲ್ಲ್ಯ ಕಾಲುಂಗುರವು ಚೆಲ್ವಪಾದದಲ್ಲಿಟ್ಟು
ಉಲ್ಲು ರುಳಿ ಪೈಜಣವು ಘಲ್ಲು ಘಲ್ಲೆನುತಿರೆ
ಅಲ್ಲಲ್ಲೆ ನಿಂತು ನಾಚುತಲಿ ಮೆಲ್ಲನಡಿಯಿಡುತ
ಚೆಲ್ವೆ ತಾ ಬರುತಿರ್ದಳು
ಘಲಕು ಘಲಿರೆಂಬೊ ನಾದವ ಕೇಳಿ ಅರ್ಜುನನು
ಗೆಲುವಿಲಿಂವೆದ್ದು ಕಾಣುತಲಿ ಸುಭದ್ರೆಯನು ವಿ-
ಗಿಲಾಯಿತೆನ್ನ ಕಾರ್ಯಗಳು ಕೈಗೂಡುವುವು
ಹಲವು ಯೋಚನೆಯಾತಕ್ಕುಲಧರನ ಗೆಲುವುದಕ್ಕೆ
ಒಲಿದು ಬಂದಳು ವಾಸುದೇವನ ತಂಗ್ಯೆನಗೆ
ಬಲು ಪುಣ್ಯ ಒದಗಿತೆಂದ
ಸ್ವಚ್ಛ ನಿರ್ಮಲ ದೇಹಕ್ಕೆ ಚ್ಚಿದ್ದ ಪರಿಮಳವು
ಅಚ್ಚ ವಜ್ರದ ಗೊಂಬೆಯಂತೆ ಝುಳ ಝುಳಿಸುತಿರೆ
ಅಚ್ಯುತನ ತಂಗಿ ಶೃಂಗಾರದ ಮುಖಪದ್ಮ
ಪ್ರತ್ಯಕ್ಷ ಸೂರ್ಯ ಬಂದಂತೆ ಕಾಣುತಲಿರಲು
ರತ್ನದಾಭರಣಗಳ ಥಳಕು ಬೆಳಕಿನ ಕಾಂತಿ
ಪಾರ್ಥನ ಮೈಯ್ಯಲ್ಲಿ ಬಿದ್ದೊಳೆಯುತ್ತಿರಲಾಗ
ದಿಟ್ಟಿಸಿ ನೋಡಿವರೆ ದೃಷ್ಟಿ ತಾಕುವುದೆಂದು
ಮುಚ್ಚುತಿದ್ದನು ತನ್ನ ನೇತ್ರಗಳನು
ಮಂದಗಮನೆಯು ಮನದ ಸಂದೇಹದಿಂದಲಿ
ಮಂದವಾಗೊಂದೊಂದು ಹೆಜ್ಜೆಯಿಕ್ಕುತ ತಾನು
ಕುಂದಣದ ಬೀಸಣಕೆಯನು ಕೈಯಲಿ ಪಿಡಿದು
ಬಂದು ಭೀಮೇಶಕೃಷ್ಣನ ತಂಗಿ
ನಿಂತಳಾನಂದದಿಂದ್ಯತಿಯ ಮುಂದೆ

## ಧ್ವನಿ—೧೪

ಎದ್ದಿರಾ ನೀವೆದ್ದಿರೇನು
ಸುದ್ದಿ ಕೇಳುವೆ ಯತಿರಾಯ ನಾನು ಪ.

ಭಕ್ತಿಯೋ ಸೂಸೂಕ್ತಿಯೊ ಜಾ-
ಗತ್ತಿಲಿಂದ್ಹರಿ ನಾಮವ ಭಜಿಸಿ ವಿ-

ರಕ್ತಿ ಮಾರ್ಗದಿಂದಲೀಗ
ಮುಕ್ತಿ ಪಡೆವಂಥ ಶಕ್ತರೆ ನೀವು ೧

ಏನೋಒಂದು ಧೇನಿಸಿ ಮನದಿ
ಜ್ಞಾನಿಗಳು ನೀವಿದ್ದಂಥ ಸ್ಥಳದಿ
ದಾನವಾಂತಕ ಕೃಷ್ಣನನುಜೆ
ನಾನು ಬಂದೆನಿಲ್ಲಿಗೆ ಈ ಕ್ಷಣದಿ ೨

ತೀರ್ಥಯಾತ್ರೆಗಳನ್ನು ಚರಿಸಿ–
ಭೂತಳವನ್ನೆಲ್ಲ ಸಂಚರಿಸಿ
ನೀತವಾದಾಶ್ರಮವನ್ನು ಧರಿಸಿ ಶ್ರೀ–
ನಾಥನಂಘ್ರಿಗಳನು ಅನುಸರಿಸಿ ೩

ಸುತ್ತಿ ಬಂದಿರಿ ದೇಶಗಳೆಲ್ಲ
ಪಾರ್ಥರಾಯನ ಕಂಡಿದ್ದೀರಲ್ಲ
ಚಿತ್ತಗೊಟ್ಟು ಕೇಳುವುದೆನ್ನ ಸೊಲ್ಲ
ಸತ್ಯವಾಗಿ ನೀವ್ಹೇಳಬೇಕೆಲ್ಲ ೪

ಸ್ವಪ್ರಯೋಜನವೇನು ನಿಮಗೆ
ಅಪ್ರಮಹಿಮನ ಒಲಿಸುವುದೀ ಕಂ–
ದರ್ಪನ ಭೀಮೇಶಕೃಷ್ಣ
ಒಪ್ಪಿಸಿ ಕೊಟ್ಟಿರಿ ತನುಮನವ ೫

ಧ್ವನಿ—೧೫

ಕಂಡಿರಾ ಯತಿರಾಯ
ಪಾಂಡವ ಎನ ಪ್ರಿಯನ ಪ.

ಕಂಡಿರಾ ನೀವು ಕಮಂಡಲ ಪಿಡಿದು ಭೂ–
ಮಂಡಲ ತಿರಿಗಿರಿ ಪಾಂಡು ಕುಮಾರನ ೧

ಸೊಂಡಿಲುಪುರದೊರೆ ಪಾಂಡುರಂಗನ ಸಖ
ಚಂಡ ವಿಕ್ರಮನ ಗಾಂಡೀವ ಧಾರಿಯ ೨

ಕೌಂತೇಯನ ಮ್ಯಾಲಂತಃಕರಣ್ಯೆನ–
ಗುಂಟಾಗಿದೆ ಕೃಷ್ಣೆ ಕಾಂತರ್ಜುನನ ೩

ಬೇಕಾಗಿದೆ ದ್ರೌಪದಿಪತಿ ಫಲ್ಗುಣ
ಪಾಕಶಾಸನಸುತ ಪರಮ ಸಮರ್ಥನ ೪

ಎಲ್ಲರೊಳಗೆ ಮಹಾ ಬಲ್ಲಿದ ಭೂಪನ
ಚೆಲ್ವ ಧನಂಜಯ[ನ]ನೆಲ್ಲಾದರು ನೀವು ೫

ರಸಿಕನಾಗಿ ರಥವೇರಲು ಪಾರ್ಥನ ಪ್ರ-
ತಿ ಸಮರ್ಥರು ಜತೆ ಇಲ್ಲಾತಗೆ ೬

ಸಾರಥಿ ಮಾಡಿದ ಭೀಮೇಶಕೃಷ್ಣನ
ಮಾರುತಿ ಅನುಜನ ವಾರುತೆ ಕೇಳುವೆ ೭

## ವಚನ—೧೬

ಇಷ್ಟು ಮಾತನು ಕೇಳಿ ಸೆಟ್ಟಗಾದವು ಕಿವಿಯು
ಅಷ್ಟದರಿದ್ರರಿಗೆ ಐಶ್ವರ್ಯ ಬಂದೊದಗಿದಂ-
ತ್ತುಟ್ಟಾ ಬಂಜೆಗೆ ಪುತ್ರ ಹುಟ್ಟಿದಂತಾಯಿತು
ಕೆಟ್ಟ ಕುರುಡಗೆ ದಿವ್ಯದೃಷ್ಟಿಗಳು ಬಂದಂತೆ
ಶ್ರೀಷ್ಮ ಭೀಮೇಶಕೃಷ್ಣನು ತನ್ನದಯ ಸೂರೆ-
ಬಿಟ್ಟನೀಗೆನ್ನ ಮ್ಯಾಲಿನುತ ಪರಮ ಹ-
ರುಷದಿಂದತ್ಯಂತ ವಿನಯದಿಂದಾಡುತಿದ್ದನು ಮಾತನು

## ಧ್ವನಿ—೧೭

ಬಾರೆ ಬಾ ಸುಭದ್ರೆ ನಿನಗೆ ಭಾಳ
ಹರುಷ ವಾರ್ತೆಯನ್ನು ಹೇಳುವೆನೇಕ
ಚಿತ್ತದಲ್ಲಿ ಕೇಳೆ ಸುಭದ್ರೆ ೧

ಭಕ್ತಿ ಭಾವದಿಂದಲಾಕೆ ಮುತ್ತಿನಂಥ ಮೋಹನಾಂಗಿ
ಚಿತ್ರದ ಗೊಂಬ್ಯಂತೆ
ಹಸ್ತಗಳ ಮುಗಿದು ನಿಂತಳು ೨

ನಾರಿ ನಿಮ್ಮ ನರನು ಬಂದು ದ್ವಾರಾವತಿಯಲ್ಲಾ ವಾಸವಾಗಿ
ದಾರೂ ಅರಿಯದಂತಲ್ಲಿರುವ ಚೋರನಂದದಲಿ ೩

ದಾರೂ ಅರಿಯದಂತಲಿರುವ ಕಾರಣವೇನೊ ಕಮಲಾಕ್ಷ
ತೋರಬೇಕೆನ್ನ ಕಂಗಳಿಗೆ ಧೀರಪುರುಷನ ೪

ಕುಸುಮಗಂಧಿ ನಿನ್ನ ಮನಕೆ ಕುಶಲವಾದ ಮ್ಯಾಲೆ ಎನ್ನ
ಹೆಸರು ಕೀರ್ತಿ ಕೊಂಡಾಡುವಿಯೆ ವಸುದೇವನ ತನುಜೆ ೫

ಸಂದೇಹವೀ ನಂಟು ಮನಕಾನಂದವಾದ ಮ್ಯಾಲೆ ಎನ್ನ
ಚೆಂದ ಚೆಂದದಿ ನಿಮ್ಮನು ಸ್ಮರಿಸಿಕೊಂಬುವೆ ಮನದಲ್ಲಿ ೬

ಗಾಂಡೀವಪಾಣ್ಯರ್ಜುನ ನಿನ್ನ ಗಂಡನಾದ ಮ್ಯಾಲೆ ಎನ್ನ
ಕಂಡರೆ ಮಾತಾಡುವಳಲ್ಲ ನೀ ಗರ್ವಿ ಸುಭದ್ರೆ ೭

ಗರುವ ಅಹಂಕಾರಗಳು ಎಂದು ಬರಿಯ ಮಾತಿನಿಂದ ಎನ್ನ
ಪರಮ ಮೋಹ ಜಡಿಸದೆ ಪಾರ್ಥ ಆರುಹಬೇಕಿನ್ನು ೮

ಹೆಣ್ಣೇ ಕೇಳ್ಸನ್ನ್ಯಾಸಿಗಳ್ವಾಕ್ಯ ಇನ್ನು ಸುಳ್ಳಾಗುವುದೆ ನಿ-
ಮ್ಮಣ್ಣ ಬಲರಾಮನ ಆಣಿವಕೆ ಚೆನ್ನಾಗಿ ನೋಡೆ ೯

ಆಣೆ ಯಾಕಣ್ಣಯ್ಯನ ಮ್ಯಾಲೆ ಜಾಣ ಪಾರ್ಥರಾಯ ಎನಗೆ
ಕಾಣಿಸಿಕೊಂಬಂತೆ ಮಾಡೋದು ಕರುಣದಿಂದಲಿ ೧೦

ಸುತ್ತ ಮುತ್ತ ನೋಡದ್ಹಾಗೆ ಇತ್ತ ನೋಡಿಂದೀವರಾಕ್ಷಿ
ಉತ್ತಮರ್ಜುನ ಬಂದೀಗ ನಿನ್ನ ಹತ್ತಿಲಿರುವೋನೆ ೧೧

ಎಷ್ಟು ಕಡೆಗು ನೋಡಿದರೆನಗೆ ದೃಷ್ಟನಾಗುವಲ್ಲ ಸ್ವಾಮಿ
ಸತ್ಯವಾಗ್ಹೇಳುವುದು ಪಾರ್ಥ ಮತ್ತೆಲ್ಲಿರುವನು ೧೨

ಮಂದ ಬುದ್ಧಿಯೇನೆ ನಿನಗೆ ಅಂಧಕಳಾದೆಯೆ ನೀನು
ಬಂದೆ ನಾ ಯತಿಯಾಗಿ ಪಾರ್ಥ ಎಂದು ತಿಳಿ ಬ್ಯಾಗ ೧೩

ಇಷ್ಟವಾದ್ವಾಕ್ಯವ ಭೀಮೇಶಕೃಷ್ಣನ ತಂಗಿ ಕೇಳುತಲೆ
ಬಟ್ಟ ಮುತ್ತಿನ ಪಣೆಯ ಬಾಗಿ ನಿಂತಳಾಗಲೆ ೧೪

## ವಚನ—೧೮

ಅರ್ಜುನನೆಂಬೊ ವಾಕ್ಯವ ಕೇಳಿ ಅತಿಬ್ಯಾಗ
ಲಜ್ಜೆಯಿಂದಲಿ ಶಿರವ ಬಾಗಿ ನಾಚಿಕೆಯಿಂದ
ವಜ್ರಕಂಬವ ನಂಬಿ ನಿಂತಳಾ ಸುಕುಮಾರಿ
ಗೆಜ್ಜೆ ಪಾದುಂಗುಷ್ಟದಿಂದೂರ್ವಿಯನೆ ಬಗೆಯುತ

ಗುಪಿತದಿಂದೀಗ ಕೇಳಲು ಬಂದೆ ನಾನೆಂದು
ಕಪಟ ಸನ್ಯಾಸಿಯೆಂಬೋದು ತಿಳಿಯಲಿಲ್ಲಿನಗೆ
ವಿಪರೀತವಾಯಿತೀಗೆನ್ನ ಕಾರ್ಯವು ಭಾಳ
ಅಪಹಾಸ್ಯವಾಯಿತೆನುತ

ನಡುಗುತಿರೆ ಕಂಪಹುಟ್ಟಿತು ದೇಹದಲ್ಲಾಗ
ಹಿಡಿದ ಬೀಸಣಿಗೆ ಕೈಯಿಂದ ಬೀಳುತಲಿರಲು
ಮುಡಿದ ಮಲ್ಲಿಗೆ ಮಾಲೆ ಜಡೆಯಿಂದಲುದುರುತಿರೆ
ಬಡ ನಡುವಿನ್ಹೊಯ್ಯಾರಿಗೆ

ಬ್ಯಾಸಿಕೆಯಂತೆ ಬೆವರಿಡುತಿರಲು ಮೈಯಲ್ಲಿ
ಪೂಸಿದ್ದ ಗಂಧ ಪರಿಮಳವು ಸೀರಾಗ್ಹರಿಯೆ
ಆ ಶರೀರದಲ್ಲೆಚ್ಚರ ವಿಲ್ಲದಂತಾಯ್ತು
ವಾಸವಿಯು ನೋಡಿ ಭಯದಿಂದಲಾಗ

ಯಾಕೆ ಬಂದೆನೊ ಇಲ್ಲಿಗ್ಯಾಕೆ ಬಂದೆನು ನಾನು
ಭೂಕಾಂತ ಭೀಮೇಶಕೃಷ್ಣ ಎನಗಿಂಥ ಮನ-
ಸ್ಯಾಕೆ ಪ್ರೇರಿಸಿದನೆಂದೆನುತ ಮನದಲಿ ಬಹಳ
ವ್ಯಾಕುಲವಾಗಿದ್ದಳು

ಧ್ವನಿ—೧೯

ಅರ್ಜುನ ನೋಡಿ ಅತಿಹರುಷದಲಿಷ್ಟು
ಎದ್ದು ಬಂದ ತನ್ನಾಸನ ಬಿಟ್ಟು
ಪದ್ಮಾಕ್ಷಿಗೆ ಪರಮಾದರಬಟ್ಟು
ಮುದ್ದಿಸಿ ಕರೆಯಲು ಕಡುಮೋಹದಿ ತನ್ನ
ತೊಡೆಲಿಟ್ಟು ಬಾರೆ ಬಾರೆ ಸುಭದ್ರೆ
ನಿನಗೆ ಬಲರಾಮನ ಭಯವೇನೆ ಪ.

ತಿದ್ದಿದ ಮುಂಗುರುಳನು ನ್ಯಾವರಿಸಿ ಸು-
ಭದ್ರೆಯ ಮುಖ ಬೆವರುಗಳನು ಒರೆಸಿ
ಬಿದ್ದಮಲ್ಲಿಗೆ ಮಾಲೆಗಳನ್ನು ಮುಡಿಸಿ ಜಾರಿ
ಬಿದ್ದಂಥ ಜರದ(ರಿಯ?) ಸೆರಗನು ಹೊದಿಸಿ ಬಾರೆ ಬಾರೆ ೧

ಪ್ರೀತಿಂದಲಿ ಬಿಗಿದಪ್ಪಿದ ಸತಿಯು
ನೂತನ ನವಯೌವನ ರೂಪವತಿಯು

ಆ ತರುಣಿಯಲಿಟ್ಟನು ತಾ ರತಿಯು
ಆತುರದಿ ಕರೆದ ತನ್ನ ಸಾರಥಿಯು ಬಾರೆ ಬಾರೆ ೨

ಫುಲ್ಲಾಕ್ಷಿಯೆ ಎನ್ನನು ನೋಡೆನುತ
ಗಲ್ಲವ ಪಿಡಿದುಲ್ಲಾಸದಿ ನಗುತ
ಚೆಲ್ವೆ ನಿನಗೆ ಸರಿದಾರೆಂದೆನುತ
ಬಲ್ಲಿದರ್ಜುನ ನಿನ್ನೊಲ್ಲಭ ನಾನೆನುತ ಬಾರೆ ಬಾರೆ ೩

ಸಾಮಜಪುರದೊರೆ ಪಾರ್ಥನರ್ಧಾಂಗಿ
ಭೀಮೇಶ ಕೃಷ್ಣರಾಯನ ಕಿರಿತಂಗಿ
ಕಾಮಿಸಿ ಬಂದೆ ನಿನಗೆ ಮೋಹನಾಂಗಿ
ಪ್ರೇಮದಿಂದ ಮಾತಾಡೆ ಪುತ್ಥಳಿಗೊಂಬೆ ಬಾರೆ ಬಾರೆ ೪

## ಧ್ವನಿ—೨೦

ಸತಿ ಪತಿಯರು ಸನ್ಮತವಾಗಿರೆ ಶ್ರೀ-
ಪತಿ ತಿಳಿದನು ಆ ಕ್ಷಣದಲ್ಲಿ
ಸತಿ ರುಕ್ಮಿಣಿ ಸತ್ಯಭಾಮೇರ ಸಹಿತ
ಅತಿ ಹರುಷದಿ ಬಂದನು ಹರಿಯು ೧

ಅಕ್ಕರದಿಂದೊಡಗೂಡಿ ದೇವಕ್ಕಿಗೆ
ತಕ್ಕ ಅಳಿಯ ದೊರಕಿದನೆಂದು
ಅಕ್ರೂರ ಉದ್ಧವ ವಸುದೇವ
ಗಕ್ಕನೆ ತೆರಳಿ ಬಂದರು ಬ್ಯಾಗ ೨

ಇಂದ್ರನು ಶಚೀದೇವಿಯು ಸಹಿತಾಗಿ
ಬಂದ ಬೃಹಸ್ಪತಿಯು ಒಡಗೂಡಿ
ಅಂಗನೆ ಸಹಿತ ಗರ್ಗಾಚಾರ್ಯರು
ಬಂದಿಳಿದರು ಆ ಕ್ಷಣದಲ್ಲಿ ೩

ಮಂಗಳ ವಾದ್ಯಗಳಾಗುತಲೆದುರು-
ಗೊಂಡರು ಶಚಿ ದೇವಕ್ಕಿಯರು
ಚೆಂದದಿ ಸತ್ಯಭಾಮೆ ರುಕ್ಮಿಣಿಯರು
ಸಂಭ್ರಮ್ಮದಲ್ಲೋಲ್ಯಾಡುತಿರೆ ೪

ಹರದಿಯರೆಲ್ಲರು ಸುರಗಿಯ ಕಟ್ಟುತ
ಎರೆದು ಪೀತಾಂಬರವನು ಉಡಿಸಿ
ವರ ಮಣಿಮಯದ ಚಿತ್ರಾಸನದಲ್ವಧು-
ವರಗಳ ಕುಳ್ಳಿರಿಸಿದರು ೫

ನಾಂದಿ ಸ್ಥಾಪನೆ ಮಾಡುತಲಾಗ
ಮಂಗಳ ಗೌರಿಯ ಪೂಜಿಸುತ
ಇಂದ್ರನು ತರಿಸಿಟ್ಟವಸ್ತ್ರಾಭರಣ
ತಂದಿಟ್ಟಳು ಶಚಿ ಸಸುನಗುತ ೬

ಅಚ್ಚ ಯಮುನೆ ಭಾಗೀರಥಿ ಉದಕದಿ
ಪಾರ್ಥರಾಯರ ಪಾದವ ತೊಳೆದು
ಕೊಟ್ಟರು ಕನ್ಯಾದಾನವ ಮಾಡಿ ಕೃ-
ತಾರ್ಥನಾದೆನೆಂದ್ವಸುದೇವ ೭

ಅಷ್ಟಪತ್ರಿಕೆ ಉಡಿಸಿದರಾಗಲೆ ಮಂಗ-
ಳಾಷ್ಟಕವನು ಹೇಳುತ ದ್ವಿಜರು
ಮುತ್ತು ಮಾಣಿಕ್ಯದ ಮಂಗಳ ಸೂತ್ರ
ಕಟ್ಟಿದ ಪಾರ್ಥರಾಯನು ನಗುತ ೮

ಅಂತರಪಟ ಹಿಡಿದರು ಆ ಕ್ಷಣದಲಿ
ಮಂತ್ರಾಕ್ಷತೆ ಕೈಯಲಿ ಪಿಡಿದು
ಕಾಂತೆಯ ಶಿರದಲ್ಹಾಕಿದ ನಗುತ
ಸಂತೋಷದಲರ್ಜುನರಾಯ ೯

ಅರಿಷಿಣದಕ್ಕಿ ಜೊಗಸೆಲಿ ಭದ್ರೆ
ಅರಸು ಅರ್ಜುನಗ್ಹಾಕಲು ಬ್ಯಾಗ
ಸರಸದಿ ಸುರರೆಲ್ಲರು ಮಂತ್ರಾಕ್ಷತೆ
ಸುರಿಸಿದರಾ ಶುಭಲಗ್ನದಲಿ ೧೦

ಕುಂದಣ ಕೆತ್ತಿದ ಮಂಗಳ ಸೂತ್ರ
ತಂದು ಕಟ್ಟಿದಳಾ ಶಚೀದೇವಿ
ಚೆಂದದಿ ಮುತ್ತೈದ್ಯಾಗೆಂದೆನ್ನುತ
ಕಂದನ ಪಡೆಯೆಂದ್ಹರಸಿದಳು ೧೧

ಲಾಜ ಹೋಮವ ಮಾಡಿಸಿದನು ಕೃಷ್ಣ
ಲಾಜವನ್ಹಾಕಿದನತಿ ಬ್ಯಾಗ
ಮೂರ್ಜಗತ್ಪತಿ ಭೋಜನಕೆಡೆಮಾಡಲು
ಆ ಜಾಣೇರು ಬಡಿಸಿದರಾಗ ೧೨

ಹಪ್ಪಳ ಸಂಡಿಗೆ ಭಕ್ಷ್ಯ ಎಣ್ಣೋರಿಗೆ
ಒಪ್ಪುವ ಸೂಪ ಶಾಲ್ಯಾನ್ನಗಳು
ಚಿತ್ರಾನ್ನವು ಕಾಯಿರಸ ಆಂಬೋಡೆ
ತಪ್ಪದೆ ಶಾಖ ಪಾಕವ ಬಡಿಸೆ ೧೩

ಹಾಲು ಸಕ್ಕರೆ ದಧಿ ಘೃತ ಕೋಸಂಬರಿ
ಮೇಲು ಮಂಡಿಗೆ ಬುಂದ್ಯ ಫೇಣಿಗಳು
ಶ್ಯಾವಿಗೆ ಗೌಲಿ ಬಟ್ಟವಿ ಪರಮಾನ್ನವ
ಶ್ರೀಲೋಲನ ಪಂಕ್ತಿಗೂಟವ ಮಾಡೆ ೧೪

ಕಾಮಿನಿ ದೇವಕಿ ಭೂಮವನಿಡುತಿರೆ
ಭಾಮೆ ರುಕ್ಮಿಣಿ ಆರತಿ ಪಿಡಿದು
ಹೇಮ ಮಾಣಿಕ್ಯದ ಬಟ್ಟಲೊಳು ಘೃತಪ
ನೇಮದಿಂದ್ಹಾಕಲಾಪೋಶನವ ೧೫

ಉಂಡರು ಸಕಲ ಜನರ ಸಹಿತಾಗಿ ತ–
ಕ್ಕೊಂಡು ಕರ್ಪೂರ ತಾಂಬೂಲಗಳ
ಗಂಧ ಕುಂಕುಮ ಪರಿಮಳ ಕಸ್ತೂರಿಗಳ
ತಂದಿರಿಸಿದರೂ(ರುರು?)ಟಣೆಗೆನುತ ೧೬

ಭೀಮೇಶಕೃಷ್ಣ ತಾ ಪ್ರೇಮದಿ ನಗುತ
ಕೋಮಲೆ ಸುಭದ್ರೆಯ ಕರೆದು
ಈ ಫಲ್ಗುಣಗಂಜದೆ ನೀ ವೂ(ಉರು?)ಟಣಿ
ಮಾಡೆಂದ್ಹೇಳಿದ ಮುರವೈರಿ ೧೭

## ಧ್ವನಿ—೨೧

ಜಯ ಜಯ ಅರ್ಜುನರಾಯ
ಜಯ ಜಯ ಸುಂದರ ಕಾಯ

ಜಯ ಸುಭದ್ರೆಗೆ ಪ್ರಿಯ
ಜಯ ಧನಂಜಯರಾಯ ಪ.

ಅಚ್ಚುತ ನಸುನಗುತ ಅಚ್ಚದತಂಗಿಯ ಕರೆದು
ಬಿಕ್ಷುಕನಂತಲಿ ತನಗೂ ಉರುಟಣೆ ಮಾಡೆಂದನು ೧

ಪುಟ್ಟ ಸುಭದ್ರೆ ತಾ ಬಟ್ಟಲರಿಷಿಣ ಪಿಡಿದು
ತಟ್ಟನೆದ್ದು ಪಾರ್ಥನೆದುರಿಗೆ ನಿಂತಳಾಗ ೨

ಎನ್ನರಸೆ ಚೆನ್ನರಸೆ ಸನ್ಯಾಸಿತನ ಧರಿಸೆ
ಘನ್ನ ಮುನಿವರ ಗುಣಪೇಳರಿಷಿಣ ಹಚ್ಚುವೆ ನಾನು ೩

ದೇಶದೇಶವ ತಿರುಗಿ ಬ್ಯಾಸರಾಗುತ ಇಲ್ಲೆ
ವಾಸವಾದ್ಯಾಸನಿಗೆ ಕುಂಕುಮ ಹಚ್ಚುವೆ ನಾನು ೪

ದಂಡ ಕಮಂಡಲವ ಹಿಡಕೊಂಡೋಡ್ಯಾಡಿದ
ಗಾಂಡೀವಯಿದು ನಿಮ್ಮ ಕೈಗೆ ತಾ ಗಂಧವ ಹಚ್ಚುವೆ ನಾನು ೫

ಇಷ್ಟುಯಾದವರೊಳಗೆ ಗುಟ್ಟು ತೋರದಲಿದ್ದ
ಗಟ್ಟಿ ಎದೆಗೆ ಬಾಕ್ಳುಟ್ಟು ಪರಿಮಳ ಹಾಕುವೆ ನಾನು ೬

ಕಪಟ ಮಂತ್ರವ ಜಪಿಸಿ ಜಪದ ಮಾಲೆಯ ಧರಿಸಿ
ಕೃಪಣ ನಿಮ್ಮ ಕೊರಳಿಗೆ ನಾ ಮಾಲಿಕೆಗಳ ಹಾಕುವೆನು ೭

ಕಳ್ಳತನದಿ ಎನ್ನ ಕಾಮಿಸಿ ಬಂದಿರುವಂಥ
ಸುಳ್ಳು ಯತಿಗ್ವಿಳ್ಯವ ಕೊಟ್ಟಿರಗುವೆ ಎಂದಳಾಗ ೮

ಮುದ್ದು ಮೋಹನ್ನೆ ತಾ ತಿದ್ದಿ ಅಂಜಿಯ ಬರೆದು
ವಿಧ್ಯುಕ್ತದಲುಪ್ಪಕ್ಕಿಯನಿಟ್ಟು ಕುಳಿತಳಾಗ ೯

ಸತ್ಯಭಾಮೆಯು ನಗುತ ಪಾರ್ಥನ ಮುಖ ನೋಡಿ
ದಿಟ್ಟ ಸುಭದ್ರೆಗೆ ಉರುಟಣೆ ಮಾಡೆಂದಳು ೧೦

ಎನ್ನರಸಿ ಎನ್ನ ಸೇವೆ ಕಾಮ್ಯದಿ ಮಾಡಿದಿಯೆಂದು
ನಿನ್ನ ಭಕುತಿಗೆ ಮೆಚ್ಚಿರಿಷಿಣವ ಹಚ್ಚುವೆ ನಾನು ೧೧

ಅರ್ಧರಾತ್ರಿಯಲೆನ್ನ ಎಬ್ಬಿಸಿ ಮಾತಾಡಿದ
ಮುದ್ದು ಮುಖವ ತೋರಲು ಕುಂಕುಮ ಹಚ್ಚುವೆ ನಾನು ೧೨

ಕುಟಿಲ ಬುದ್ಧಿಗಳಿಂದ ಹಟವ ಗೆಲಿಸಿಕೊಂಡೆ
ಘಟವಾಣಿಯೆ ನಿನ್ನ ಕೈ ತಾ ಗಂಧವ ಹಚ್ಚುವೆ ನಾನು ೧೩

ಹಲವು ಯೋಚನೆ ಮಾಡಿ ಹಲಧರ[ನ] ವಂಚಿಸಿ ಎನ್ನ
ಒಲಿಸಿಕೊಂಡ್ಯೊ ಯಸ್ವಾರಿಗೆ ಪರಿಮಳ ಹಾಕುವೆ ನಾನು ೧೪

ಎಲ್ಲಿರುವ ಪಾರ್ಥನೆಂದೆಲ್ಲ ಕೇಳಿದಿ ನಿನ್ನ
ವಲ್ಲಭ ನಾನೆಂದ್ಹೇಳುತ ಮಲ್ಲಿಗೆ ಮಾಲೆಯ ಮುಡಿಸುವೆನು ೧೫

ಭಾಳ ಸೇವೆಯ ಮಾಡಿ ಬಳಲಿದಿ ಭಾಗ್ಯವಂತೆ
ಹೇಳಿದೆ ನಿನ ಗುಣ ಹೇಳುತಲಿ ಕೋಪವ ಮಾಡದಿರೀಗ ೧೬

ಅರಿಷಿಣ ಕುಂಕುಮ ಹಚ್ಚಿ ಬೆರಸಿದ ಮಲ್ಲಿಗೆ ಮುಡಿಸಿ
ಸರಸದಿಂದ್ವೀಳ್ಯವನು ಕೊಂಡು ಕುಳಿತರಾಗ ೧೭

ಶಶಿಮುಖಿ ಅರ್ಜುನರಾಯನ್ನ ಸತ್ಕರಿಸುತ ಬ್ಯಾಗ
ಸವಿನಗುತಲಿ ಸುಭದ್ರೆ ಎನುತ್ತ ಸತ್ಕರಿಸಿದ ಫಲ್ಗುಣನು ೧೮

ಭಾಮೆ ರುಕ್ಮಿಣಿಯರು ಹೇಮದಾರತಿ ಪಿಡಿದು
ಭೀಮೇಶಕೃಷ್ಣನ ಸಖಗೆ ಬೆಳಗಿದರಾಗ ೧೯

ಧ್ವನಿ—೨೨

ಜಯಜಯ ಜಾಣ ಪಾರ್ಥನಿಗೆ ಪ.

ನಾಗವೇಣಿಯರೆಲ್ಲರು ಕೂಡಿ
ಸಾಡ್ಯವ ಬರೆದು ಸಂಭ್ರಮದಿಂದ
ಭ್ಯಾಗ ದೇವಕ್ಕಿ ಸಿಂಧೂಪವ ಸುತ್ತಲು
ನಾಗವಲ್ಲಿಗಳ ಮಾಡಿದರಾಗ ೧

ಉಪ್ಪು ಅಕ್ಕಿ[ಯ]ಲಿ ಗಜಗಳ ಬರೆದು
ಒಪ್ಪದಿಂದ್ಹಿಡಿ ಹಿಡಿ ಎನುತಿರಲು
ತೊಟ್ಟಿಲು ಕಟ್ಟಿ ಜೋಗುಳವನು ಪಾಡಲು
ಅರ್ಥಿಲಿ ಕಂದನ್ನಾಡಿಸಿದರಾಗ ೨

ಮುತ್ತಿನ ರಾಸಿ ತೆಗೆಯುಲಾಗ
ಪುತ್ಥಳಿ ಸರ ಕೊರಳಿಗೆ ಹಾಕಿ
ತುಪ್ಪದ ಚೆಟ್ಟುಬಡಿದಳ್ಸಂಭ್ರಮದಿ ತ-
ಮ್ಮತ್ತಿಯು ಸೆರಗಿನಲ್ಲೊರೆಸಿದಳು ೩

ಮರದ ಬಾಗಿಣವ ಕೊಟ್ಟಳು ಬ್ಯಾಗ
ನೊರೆಹಾಲಿನಿಂದ ಚಟ್ಟನು ಬಡಿದು
ಸುರಪತಿಸತಿ ಶಚಿದೇವ್ಯೇರ ಸೆರಗಿನ
ಲ್ಲೊರಸಿದಳಾಗತಿ ಹರುಷದಿಂದ ೪

ಪಾರ್ಥರಾಯನ ತೊಡೆಯುಲಿ ಬ್ಯಾಗ
ಪುತ್ರೆ ಸುಭದ್ರೆ ಕುಳ್ಳಿರಿಸಿದರು
ಒಪ್ಪಿಸಿದೆನು ನಿನಗೆನುತ ಶ್ರೀಕೃಷ್ಣನು
ಒತ್ತಿದ ತಾ ಕಣ್ಣ ಜಲಗಳನು ೫

ಇಂದ್ರ ಶಚಿಯು ತೊಡೆಯುಲಿ ಬ್ಯಾಗ
ತಂದು ಸುಭದ್ರೆ ಕುಳ್ಳಿರಿಸಿದರು
ಇಂದಿಗೆ ನಿಮಗೊಪ್ಪಿಸಿ ಕೊಟ್ಟೆವೆನುತಲಾ-
ನಂದ ಭಾಷ್ಪಗಳುದುರಿದುವಾಗ ೬

ನಾಲ್ಕುದಿನದ ಉತ್ಸವಗಳನು
ಏಕರಾತ್ರಿಲಿ ಮುಗಿಸಿದ ಕೃಷ್ಣ
ತಾ ಕೂಡುವಂಥ ರಥಗಳನು ತರಿಸಿದ ಸ-
ಹಕಾರಿಯಾದ ಸಖಗೆ ತಾನು ೭

ಮೇಘ ಪುಷ್ಪಕ ಸುಗ್ರೀವನೆಂಬೊ
ಶ್ರೀಘ್ಯ ಬಲಾಕನೆಂಬೋ ದಿವ್ಯ
ವೇಗ ಶಾಲಿಯು ನಾಲ್ಕು ತೇಜಿಗಳನು ಕಟ್ಟಿ
ಬ್ಯಾಗೇರಿಸಿದ ಸತಿಪತಿಯರನು ೮

ಲಗ್ನದುತ್ಸವಗಳ ನೋಡಿ ಅ-
ನರ್ಘ್ಯವಾದ್ವಸ್ತ್ರ ವೀಳ್ಯವ ಕೊಂಡು
ಸ್ವರ್ಗಾಧಿಪತಿ ತನ್ನ ಜನರ ಸಹಿತವಾಗಿ
ಹಿಗ್ಗಿಲಿ ನಡೆದ ತನ್ನಯ ಪುರಕೆ ೯

ಇಂದಿರಾಪತಿಗೆ ವಂದನೆ ಮಾಡಿ
ಇಂದ್ರಪ್ರಸ್ಥಕೆ ನಡೆಯಲು ಪಾರ್ಥ ಆ-
ನಂದದಿ ಭೀಮೇಶಕೃಷ್ಣ ಜನರ ಕೂಡಿ
ಬಂದರು ತಮ್ಮ ತಮ್ಮರಮನೆಗೆ ೧೦

## ಧ್ವನಿ—೨೩

ನಿಲ್ಲೋ ನೀ ನಿಲ್ಲೋ
ನಿಲ್ಲೊ ನಿಲ್ಲೊ ನಮ್ಮೆಲ್ಲರನ್ವಂಚಿಸಿ
ಕಳ್ಳನೆ ನೀ ಮತ್ತೆಲ್ಲಿಗೆ ಪೋಗುವೆ ಪ.

ಗಡಗಡನಾ ರಥ ನಡೆಸುತ ಬರುತಿರೆ
ಕಡೆಯ ಬಾಗಿಲೊಳ್ ತಡೆದರು ಪಾರ್ಥನ ೧

ಹಿಡಿದು ನಿನ್ನ ನಮ್ಮೊಡೆಯ ರಾಮರಿಗೆ
ಕೊಡುವ್ರೋದು ನಿಜವ್ರೋ ಕೊಡು ಸುಭದ್ರೆಯ ೨

ದಾರಮಗನೆ ಗಂಭೀರ ಪುರುಷನೆ
ಧೀರಗೆ ನಿನಗಿಂಥ ಚೋರತನ್ಯಾತಕೆ ೩

ಪಾಂಡುರಾಯನ ಸುತ ಗಾಂಡೀವ್ಯರ್ಜುನ
ಬಂಡಿ ಹೊಡೆವೊ ಶ್ರೀ ಕೃಷ್ಣನೆ ಸಾರಥಿ ೪

ರಥಿಕ ನಾನು ಸಾರಥಿ ನೀನಾದರೆ
ಅತಿಬ್ಯಾಗವರನೆ ಹತಮಾಡುವೆನೆಂದ ೫

ಬಿಚ್ಚಿ ಆಯುಧ ಬಿಡುತಿರೆ ಬಾಣವ
ಕೆಟ್ಟಿವೆನುತ ಕಂಗೆಟ್ಟೋಡಿದರು ೬

ದಾರ ಸತಿಯು ದಾರೊಯ್ದರೆ ನಮಗೇನಾಗೋದು
ಹಲಧರ ಕ್ರೋಧವ ಮಾಡುವ ೭

ಹಸ್ತವ ಮುಗಿದರು ಪಾರ್ಥಗೆ ಮಾರ್ಗವ
ಬಿಟ್ಟೋಡಿ ಬಂದು ವಾರ್ತೆಯ ಹೇಳುತ ೮

ಗದ್ದಲವಿಲ್ಲದೆ ಯುದ್ಧವ ಮಾಡುತ
ಅರ್ಜುನ ಬಂದು ಸುಭದ್ರೆಯನೊಯ್ದನು ೯

ರಾಮನೆ ನಿನ್ನ ಪ್ರೇಮದ ತಂಗಿಯು
ಆ ಮಹಾ ಪಾರ್ಥ ಕದ್ದೊಯ್ದನೆಂದ್ಹೇಳೋರು ೧೦

ಭೀಮೇಶಕೃಷ್ಣನ ದಯದಿಂದೆಲ್ಲರ
ಪ್ರಾಣ ಉಳಿದಿತೆಂದ್ಹೇಳಿದ ವಾರ್ತೆಯು ೧೧

## ಧ್ವನಿ—೨೪

ಎದ್ದನೆದ್ದನಾಗ ಯದುಕುಲೋತ್ತಮ ರಾಮ
ಸುದ್ದಿ ಕೇಳುತ ಶೂರತನಗಳಿಂದ
ಮುದ್ದು ಸುಭದ್ರೆಯ ಕದ್ದೊಯ್ದ ಪಾರ್ಥನ
ಇದ್ದಲ್ಲಿಂದಲಿ ಹಿಡಿದೆಳೆದು ತನ್ನಿರಿಯೆಂದೆದ್ದ ಪ.

ಸುದ್ದಿಕೇಳುತ ಶೂರತನಗಳಿಂದ ಹಾಸಿಕೆಯಿಂ-
ದೆದ್ದ ಆ ಸುರ ಬಲರಾಮ ಮೋಸ ಮಾ-
ಡಿದ ಕನ್ಯಾಪಹಾರ ಪಾಪವು ಭುವಿ ಸಮಗ್ರತ-
ಕೆಂಡೆಸುತಲಿ ರೋಷ
ದಿಂದಲಿ ತನ್ನ ಮೀಸೆ ಹುರಿಯ ಮಾಡಿ ೧

ಎಲ್ಲ ವಾರ್ತೆಯ ಕೇಳಿ ಝುಲ್ಲೆಂದು ತನ್ನೆದೆ
ತಲ್ಲಣಿಸುತಲಿದ್ದ ಮನದೊಳಗೆ
ನಿಲ್ಲದೆ ತನ್ನೇಗಲಲ್ಲಿಟ್ಟು ಮು-
ಸಲವ ಎಲ್ಲಿರುವೊನೋ ಪಾ-
ರ್ಥಲ್ಲಿರುವೊನ್ಹೇಳೆನುತ ೨

ಅತ್ತೆಯ ಮಗನೆಂದು ಅತ್ಯಂತ ಹಿತವಾಗೆ
ಮಿತ್ರತನವು ನೋಡಲಾಗದಿನ್ನು
ವ್ಯರ್ಥವಾಗೆನ್ನ ಸಂಕಲ್ಪ ಭಂಗಾ-
ಯಿತು ಶ್ರೇಷ್ಠ ಕೌರವಗೆ
ಮತ್ತೇನು ಹೇಳಲಿ ಎಂದೆದ್ದ ೩

ಪ್ರದ್ಯುಮ್ನ ಸಾಂಬಾನಿರುದ್ಧ ಭಾನು ಪ್ರ-
ಸಿದ್ಧವಾದ ಯಾದವರು ಕೂಡಿ
ಸಿದ್ಧವಾಗಿರಿ ನಿಮ್ಮಾಯುಧಗಳ ತಕ್ಕೊಂಡು

ಯುದ್ಧವ ಮಾಡಿ
ಸುಭದ್ರೆಯ ತರುವೋಣೆಂದೆದ್ದ ೪

ಇಷ್ಟು ಯಾದವರಿಗಪ್ಪಣೆ ಮಾಡಿ ಬಲರಾಮ
ನೇತ್ರಗಳೆರಡು ಕೆಂಪಗೆ ಮಾಡುತ
ಸಿಟ್ಟಿಲೆ ಬಂದು ಭೀಮೇಶಕೃಷ್ಣನೆ ನೀನು
ತಟ್ಟನೆ ಏಳೋ
ಯುದ್ಧಕೆ ಪೋಗೋಣೆಂದೆನುತ ೫

## ಧ್ವನಿ—೨೫

ನಿದ್ರೆಯೇನೊ ನಿದ್ರೆಯೇನೊ ನೀರಜಾಕ್ಷನೆ
ಸುದ್ದಿಕೇಳೊ ಸುರರಿಗ್ವಂದ್ಯ ಸುಂದರಾಂಗನೆ ೧

ಎತ್ತಲಿಂದ ಬಂದಿತಯ್ಯ ಏನು ಸುದ್ದಿಯೊ
ಸತ್ತೆನ್ನ ಮುಂದ್ಹೇಳಬೇಕೊ ಮರೆಯದೆ ವಾರ್ತೆಯು ೨

ಬಂದನೋ ಯತಿಯಾಗಿ ಪಾರ್ಥ ಭಾಳ ಕಪಟದಿ
ಇಂದು ಸುಭದ್ರೆಯ ಕದ್ದೊಯ್ದನೆಂದು ಹೇಳುವರೊ ೩

ಎಷ್ಟು ಹೇಳಲಿನ್ನ ಮಾತು ಸಿಟ್ಟು ಬರಾಯ್ತೊ
ಕಟ್ಟ ಕಡೆಗೆ ಎನ್ನ ಮಾತು ಕಷ್ಟಾ ನಿಜವಾಯ್ತೊ ೪

ನಿನ್ನ ಸಿಟ್ಟು ತರುವುದು ತಂಗಿಯು ಅರುದೇ ನಾ ನಿನಗೆ
ನಿನ್ನ ಘಾತಕತನವ ಮಾಡೋದು ತರವೇನ್ಹೇಳಿನಗೆ ೫

ನಾರು ಗೆಲುವ್ಹೇರಯ್ಯ ಪಾರ್ಥನ ಮೂರುಲೋಕದಲ ಕೈ-
ಯಾರ ಕೈಲಿಬದ್ದಿ ಕೃಷ್ಣ ಕರ್ಣನಿಂಬುವುದ್ಹಯ್ಯ ೬

ನಿನ್ನ ಚಕ್ರ ಎನ್ನ ಮುಸಲವನ್ನು ಮೀರುವರೊ
ಇನ್ನಾಕ್ಯ ಗನನ ಜಯಿಸುವುದ್ಹೇಳೊ ಕನ್ನಂಗಳರಾಯನ ೭

ಎನ್ನ ರಥ ಕಟ್ಟೊಯ್ದ ನಾಲ್ಕು ಘನ್ನ ತೇಜಿಗಳು
ಇನ್ನ್ಯಾರುಂಟೇ ಜಗದೊಳಗ್ಹೇಳೋ ಕೃಷ್ಣಯ್ಯ ನೀನು ೮

ಶ್ರೇಷ್ಠ ಕೌರವರಾಯಗ್ಯಾಕನ ಕೊಟ್ಟು ತಪ್ಪೇನು
ಭ್ರಷ್ಟನಾದೆ ಜಗದೊಳಗೆ ಕೃಷ್ಣಯ್ಯ ಕೇಳೊ ೯

ಅತ್ತ ತನಯು ಪಾರ್ಥನೆಂಥ ಶ್ರೇಷ್ಠನುಂಟೇನೊ ಅವನು
ಬಿಟ್ಟು ಕನ್ಯೆ ಮಾಡಿಕೊಂಬ ದಿಟ್ಟನುಂಟೇನೊ ೧೦

ಹಿಂದೆ ಮಾಡಿದ ಕಾರ್ಯ ಹೋಗಲಿ ಮುಂದ ಬುದ್ಧಿಯಲಿ
ಮುಂದೇನಿದಕುಪಾಯ ಹೇಳೊ ಇಂದಿರಾರಮಣ ೧೧

ಇಂದ್ರಪ್ರಸ್ಥದಲ್ಲಿ ಹೋಗಿ ಕಂಡು ಪಾಂಡವರ
ಚೆಂದಾಗ್ಸರ ಉಪಚಾರವ ಕೊಟ್ಟಾನಂದನಾಗುವ್ರೊ ೧೨

ಬಂದು ನೀ ಭೀಮೇಶಕೃಷ್ಣ ಬಂಧು ಬಳಗವನೆ ಕೂಡಿ-
ಕೊಂಡು ಪಯಣವಾಗುವ್ರೋಣೆಂದ ಅನುಜನಿ ಬಲರಾಮ ೧೩

## ವಚನ—೨೬

ಅತ್ತ ಬಲರಾಮ ಕೃಷ್ಣ ಪಯಣಾಗುತಿರೆ
ಇತ್ತ ಬಂದನು ಇಂದ್ರಪ್ರಸ್ಥಕ್ಕೆ ಪಾರ್ಥನು
ಸತ್ಯಪಾಂಡವರೆದುರುಗೊಂಡು ಕರೆತರಲಾಗ
ಪತ್ನಿ ಸಹಿತಾಗ ಬಂದ್ಹೊಕ್ಕನರಮನೆಯನು
ದೇವ ಬ್ರಾಂಬರಿಗೆ ನಮಸ್ಕರಿಸಿದನು ಸತಿಸಹಿತ
ತಾಯಿಕುಂತಿ ಧರ್ಮರಾಯ ಭೀಮಗೆ ಎರಗಿ
ತಾ ಮಹಾ ತೀರ್ಥಯಾತ್ರೆಯ ಮಾಡಿದ್ವಾರ್ತೆಗಳ
ಹೇಳುತಿದ್ದನು ಪರಮ ಪ್ರೇಮದಿಂದ
ಪತ್ನಿರಾದರು ಎನಗುಲೂಪಿ ಚಿತ್ರಾಂಗದ
ಪುತ್ರ ಹುಟ್ಟಿದ ಬಬ್ರುವಾಹನನೆಂಬುವನು
ಸುತ್ತಿಬಂದೆನು ಭೂಪ್ರದಕ್ಷಿಣೆಯು ದ್ವಾರಕಾ
ಪಟ್ಟಣವ ಕಂಡು ಪರಮ್ಹರುಷದಿಂದ
ಯತಿಯಾಗಿ ನಿಂತೆ ನಾ ವನದೊಳಗೆ ಬಲರಾಮ
ಅತಿಭಕ್ತಿಯಿಂದ ಕರೆದೊಯ್ದು ಪೂಜಿಸಿ ಎನ್ನ
ಜತೆ ಮಾಡಿಕೊಟ್ಟ ತನ್ನನುಜೆಯನ್ನು ಸೇವೆಗೆ
ಸತಿಯಾದಳೆನಗೆ ಸುಭದ್ರ ತಾನು
ಇಟ್ಟು ಭೀಮೇಶಕೃಷ್ಣನ ದಯವು ನಮ್ಮಲ್ಲಿ
ಕೊಟ್ಟ ಸುಭದ್ರೆಯನು ಕನ್ಯಾದಾನವ ಮಾಡಿ
ದುಷ್ಟಕೌರವನೆದೆಯ ಮೆಟ್ಟಿ ಹಾರಿದೆನೆಂದು
ಸತ್ಯ ಪಾಂಡವರು ಸಂಭ್ರಮವಾದರು

## ಧ್ವನಿ—೨೭

ಎಲ್ಲವಾರ್ತೆ ಹೇಳಜರ್ುನರಾಯ
ಮೆಲ್ಲನೆ ನಡೆತಂದನು ಬ್ಯಾಗ
ಚೆಲ್ವೆದ್ರೌಪದಿ ಎಲ್ಲಿರುವ್ಳೋಳೆಂದೆನುತ
ಅಲ್ಲಲ್ಲಿಗೆ ನೋಡುತ ಬರಲು ೧

ರತ್ನ ಮಂಚ ಸುಪ್ಪತ್ತಿಗೆ ಶಯ್ಯದಿ
ಅಚ್ಚ ಜರದ(ರಿಯ?)ಹಚ್ಚಡ ಹೊದ್ದು
ಸ್ವಚ್ಛವಾದ ಚಂದ್ರಮನಂತ್ಹೊಳೆವೊ
ಮಿತ್ರೆ ದ್ರೌಪದಿಯ ನೋಡಿದನಾಗ ೨

ಯಾಕೆ ಮಲಗಿದ್ಯೆಂದ್ವ್ಯಾಕುಲವಾಗಿದೆ
ಈ ಕಾರಣ ಹೇಳೆನ ಮುಂದೆ
ಲೋಕನಾಯಕಿ ಮುನಿಸ್ಯಾಕೆಂದೆನುತ
ತಾ ಕಯ್ಯ ಪಿಡಿದೆಬ್ಬಿಸುತಿರಲು ೩

ಅತಿ ಭಕ್ತಿಯಲೆದ್ದಳು ದ್ರೌಪದಿ ತನ್ನ
ಪತಿಪಾವಕೆ ವಂದನೆ ಮಾಡಿ
ಮಿತವಾಣಿಯು ಮುಖ ತಗ್ಗಿಸಿ ನಿಂತಿರೆ
ಸತಿಯು ನೋಡಿದ ಸುಂದರ ಪಾರ್ಥ ೪

ಸಿಟ್ಟ್ಯಾತಕೆ ಸಿರಿನಲ್ಲ ಭೀಮೇಶ
ಕೃಷ್ಣನ ದಯಕೆ ಪಾತ್ರಳೆ ನೀನು
ಪಟ್ಟದರಸಿ ತೊಡೆಲಿಟ್ಟು ಮೋಹದಲಿ
ಪಟ್ಟೆ ಮಂಚದಿ ಕುಳಿತನು ಪಾರ್ಥ ೫

## ಧ್ವನಿ—೨೮

ಬಿಡು ಬಿಡು ಬಿಡು ಕೃಷ್ಣ ಕೋಪವ
ಮಡದಿ ನಿನ್ನ ಮನ ಸಂತಾಪವ ಪ.

ಮುದ್ದು ದ್ರೌಪದಿ ನಿನ್ನ ಪದ್ಮಮುಖವು ಬಾ-
ಡಿದ್ದ ಕಾರಣವ ಹೇಳೆನ ಮುಂದೆ ಇನ್ನ ೧

ಬುದ್ಧಿ ಶಾಲಿಗಳರಿಯದಿದ್ದ ಕಾರಣವುಂಟೆ
ಶುದ್ಧಿ ಹೇಳುವುದೇನೊ ನಿನ್ನ ಮುಂದೆ ಎನ್ನ ೨

ಶುದ್ಧ ಸುಂದರ ಗಾತ್ರಿ ಸುಗುಣೆ ನಿನ್ನಗಲೀಗ
ನಿದ್ರೆ ಹಸಿವಿಯಿಲ್ಲೆನಗೆ ನೀರೆ ೩

ನಿದ್ರೆ ಹಸಿವೆ ಬಿಟ್ಟು ನಿರುತದಿಂದಲಿ ಸು-
ಭದ್ರೆ ಧ್ಯಾನದಿ ಚಿತ್ತ ಪರವಶವಾಗೆ ೪

ರಂಗ ತಮ್ಮಣ್ಣನ್ವಂಚಿಸಿ ಛಲದಲ್ಲಿ ಕನ್ಯೆ
ತಂದು ಕೊಟ್ಟನೆ ಪರಮಾಗ್ರಜ ೫

ಒಂದು ಗಂಟಿನ ವ್ಯಾಲಿನ್ಯೊಂದು ಗಂಟಿಕ್ಕಲು
ಹಿಂದೆ ಬಿಗಿದ ಬಿಗಿ ಸಡಲದೆ- ೬

ಸಂದೇಹ ಬ್ಯಾಡ ಭದ್ರೆಯು ನಿನ್ನ ಸೇವಕ-
ಳೆಂದು ತಿಳಿದು ಅವಳ ಪಾಲಿಸೆ ೭

ವಾಸುದೇವನ ತಂಗಿ ದಾಸಿಯೆಂಬುವರೆ ಎ-
ನ್ನ ಸರಿಸವತ್ಯವಳಲ್ಲವೆ ೮

ಪಟ್ಟದರಸಿ ನಿನಗೆ ಶ್ರೇಷ್ಠರೈವರು ಪತಿಗ-
ಳಿಲ್ಲವೆ [illegible] ನಿನ್ನಲ್ಲಿ ೯

ಕಾಮಮೋಹಗಳಿಂದ ಕಳ್ಳಯತಿಗಳಾಗ-
ಲೀ ಕಪಟಗಳೆಲ್ಲಿ ಕಲಿತೆಯೊ ೧೦

ಭೀಮೇಶಕೃಷ್ಣನ್ವನಕೆ ಬಂದು
ನಿಮ್ಮಣ್ಣ ಮಾಡಿದ ಎನಗುಪದೇಶವ ೧೧

ವಚನ—೨೯

ತನ್ನ ಪತಿ ವಚನವನು ಕೇಳುತಲೆ ಪಾಂಚಾಲಿ
ಚೆನ್ನವಾಗಾನಂದ ಹೊಂದಿ ತನ್ನ ಮನದೊಳಗೆ
ಇನ್ನು ಮೋಹನನು ಗರುಡವಾಹನನು ಶ್ರೀ ಕೃಷ್ಣ
ಅಣ್ಣನಾಗಲು ಪುಣ್ಯಶಾಲಿಯು ನಾನೆಂದು
ಪನ್ನಂಗಶಯನ ಪರಮಾತ್ಮ [illegible]ಯಾಗೆ
[illegible] ದುರ್ಯೋಧನರ [illegible] ಪಾರ್ಥ
ಇನ್ಯಾತಕೀ ಕುರುಗಳ ಭಯವು ನಮಗೀಗ

ಧನ್ಯರಾದಿರಿ ಮೂರು ಲೋಕದಲಿ ನೀವೆಂದು
ಕನ್ನಡಿ ಕವಚಿಸ್ಕೊಂಡು ಪ್ಯಾರಿ ನಸುನಗುತಿರಲು
ಸನ್ಮತವಾದ ಸತಿಯಳನು ನೋಡಿ ಫಲ್ಗುಣನು
ಸಣ್ಣ ಸುಭದ್ರೆ ಕರೆದೆರಗಿಸಲು ಚರಣಕ್ಕೆ
ಮನ್ನಿಸೆಬ್ಬಿಸಿ ಹರುಷದಾಗ ಮಾತಾಡಿಸುತ
ತನ್ನ ತೊಡೆಯಲ್ಲಿ ಕುಳ್ಳಿರಿಸಿ ಗಲ್ಲವ ಪಿಡಿದು
ಹುಣ್ಣಿಮೆ ಚಂದ್ರಸೂರ್ಯರು ಬಂದು ಕುಳಿತಂತೆ
ಕನ್ನೆಯರ ನೋಡಿ ಕಡುಹರುಷದಿಂದಿರೆ ಪಾರ್ಥ
ಚಿನ್ನದ ಭೇರಿ ಭೀಮೇಶಕೃಷ್ಣನ ಮುಂದೆ
ಬಣ್ಣ ಬಣ್ಣದ ಕಾಳೆ ಹಿಡಿದವಗೆ

ಧ್ವನಿ—೩೦

ಮದುವೆ ಸಂಭ್ರಮವ ಕೇಳಿರಿ ಜನರು
ಪದುಮನಾಭನ ಕೀರ್ತಿಯನು ಪ.
ಹಲಧರ ತಾ ರೇವತಿ ಒಡಗೂಡಿ
ಹಲವು ಯಾದವರ ಸಹಿತಾಗಿ
ಬಲಭದ್ರನು ತಾ ಬರುತಾ ನೆನುತ
ಬಡಿದವಾಗ ಬಿರುದಿನ ಭೇರಿ ೧

ವಸುದೇವನು ದೇವಕ್ಕಿ ರೋಹಿಣಿ
ಯಶೋದ ನಂದಗೋಪರು ಕೂಡಿ
ಹಸುಗೂಸನು ಎತ್ತಿದ ವನಿತೆಯರ್ಹದಿನಾ-
ರುಸಾವಿರ ಸತಿಯರು ಬರಲು ೨

ಸತ್ಯಭಾಮೆ ರುಕ್ಮಿಣಿ ಸಹಿತಾಗಿ
ಅಷ್ಟಮ ಸತಿಯರ ಒಡಗೂಡಿ
ಪಕ್ಷಿಯೇರಿ ಪರಮ್ಹರುಷದಿ ಹರಿ ಸ-
ಮರ್ಥ ಬಂದನೆಂದವೆ ಕಾಳೆ ೩

ಬಂದರಾಗ ಅರಮನೆಗೆನುತೆದುರು-
ಗೊಂಡು ಧರ್ಮ ಭೀಮಾರ್ಜುನರು
ತಂದು ಗುಲಾಲು ಬುಕ್ಕಿಟ್ಟ್ಹುಗ್ಗ್ಯಾಳಿಡುತ
ರಂಗ ರಾಮರಾಲಿಂಗನೆ ಮಾಡುತ ೪

ನಿಜ ಹರುಷದಿ ರೇವತಿ ರುಕ್ಮಿಣಿ ತನ್ನ
ನಗೆನುಡಿ ಮಾತಿನ ದ್ರೌಪದಿಯು
ಖಗವಾಹನನರಸೇರ ಕರೆತರಲು
ಬಗೆಬಗೆಯಲಿ ಭೂಮಿಯನುಪಚರಿಸುತ ೫

ಕುಂತಿ ದೇವಕಿದೇವಿಯು ರೋಹಿಣಿ ಮಣಿ
ಮಂಚದಿ ಕುಳಿತು ಮಾತಾಡುತಿರೆ ಅ–
ನಂತಶಾಯಿ ಅಂತಃಕರಣದಲಿ
ಸಂತೋಷವು ನಮಗಾಯಿತೀಗೆನುತ ೬

ಬಡನಡುವಿನ ಭಾಂವಕಿಯರ್ವೊಯ್ಯಾರದಿ
ಮಡಿಯನುಟ್ಟು ಸಾಲಿಡೆಯಲ್ಲಿ
ಸಡಗರದಿಂದ್ಯಾದವರೆಲ್ಲರು ಪಾ–
ಲ್ಗಡಲೊಡೆಯನ ಸಹಿತಾಗಿ ಕುಳಿತರು ೭

ಎಣ್ಣೋರಿಗೆ ಯಾಲಕ್ಕಿ ಹೋಳಿಗೆಯು
ಚೆನ್ನವಾದ ಮಂಡಿಗೆ ಫೇಣಿ
ಕಣ್ಣಿಗೆಸೆವ ಶಾಲ್ಯಾನ್ನ ಸೂಪಗಳು
ಸಣ್ಣಶ್ಯಾವಿಗೆ ಪರಮಾನ್ನವ ಬಡಿಸೆ ೮

ರಾಜನ್ವಲ್ಲಭೆ ರಾಜ್ಞಿಯು ದ್ರೌಪದಿ ಘೃತ
ಕ್ಷೀರ ಸಕ್ಕರೆ ಕೈಯಲಿ ಪಿಡಿದು
ರಾಜುಪಚಾರದಿ ಭೋಜನ ಮಾಡಿಸೆ
ಮೂರ್ಜಗತ್ಪತಿ ಮುದದಿಂದುಂಡೆದ್ದನು ೯

ಗಂಧ ಕುಂಕುಮ ಪರಿಮಳ ಪುಷ್ಪಗಳು
ದುಂಡುಮಲ್ಲಿಗೆ ಹಾರಗಳ್ಹಾಕಿ
ತಂದು ತಾಂಬೂಲ ನೀಡಲು ಜನಸಹಿತ ತ–
ಕ್ಕೊಂಡ ಭೀಮೇಶಕೃಷ್ಣನು ಪರವ್ಯುರುಷದಿ ೧೦

ವಚನ—೩೧

ಯಜ್ಞಶಯನಗೆ ತಂದರ್ಪ್ವಜ್ರದಾಭರಣಾ–
ನರ್ಘ್ಯವಾಗಿದ್ದ ಪೀತಾಂಬರವನು
ಮುದ್ದು ಸುಭದ್ರೆಗೆ ಮುತ್ತಿನಾಭರಣ ಬಲ–

ಭದ್ರ ಕೊಟ್ಟನು ಭಾರಿ ಪೀತಾಂಬರ
ಬಂಗಾರದಾಭರಣ ತಂಡ ತಂಡದ ಜವಳಿ
ಪಾಂಡವರಿಗೆಲ್ಲ ಕೊಡುತಿದ್ದರಾಗ
ರತ್ನಮಾಣಿಕ್ಯಾಭರಣ ಕಂಠಿ ವರ ಉಪಚಾರ
ಕೃಷ್ಣ ತಂದಿದ್ದ ಕಿರೀಟಗಾಗ
ಅಚ್ಚ ಜರತಾರಿ ಮ್ಯಾಲೊಪ್ಪೋ ಸರ ಪದಕವು
ಅತ್ತೆ ಕುಂತಿಗೆ ಕೊಟ್ಟರಧಿಕವಾಗಿ
ರತ್ನದ ಕೊಳವಿಲೋಕುಳಿ ತುಂಬಿ ಬಲರಾಮ
ಕೃಷ್ಣಪಾಂಡವರ ಮ್ಯಾಲುಗ್ಗುತಿರಲು
ಸತ್ಯಭಾಮೆ ಸರಸದಿಂದ ಓಕುಳಿ ತಂದು
ಅತ್ತಿಗೆ ನಾದಿನೇರೆಲ್ಲ ಕೂಡಿ
ವಜ್ರದ ಕೊಳವಿಲೋಕುಳಿ ತುಂಬಿ
ಧರ್ಮ ಭೀಮಾರ್ಜುನರೆಲ್ಲ ನಿಂತಾಡುತಿರಲು
ಅರ್ತಿವಿನೋದದಿಂದಾಡೆ ಪರಪುರುಷದಲಿ
ಪಟ್ಟವಾಳಿಗಳುಡು[ಗೊರೆ]ಕೊಟ್ಟರಾಗ
ವಸ್ತ್ರ ವೀಳ್ಯವ ಕೊಂಡು ಅರ್ತಿಯಲಿ
ದ್ವಾರಕಾ ಪಟ್ಟಣಕೆ ಬಂದ ಬಲರಾಮ ತಾನು
ಭೀಮೇಶಕೃಷ್ಣ ಸತ್ಯಭಾಮೆ ಸಹಿತಾಗಿ
ರಾಯ ಪಾಂಡವರು ಸುಖಬಡುತಿದ್ದರು

ಧ್ವನಿ—೩೨

ಪಾರ್ಥನ ಸಖ ಹರಿಯೆಂಬುವ ಬಿರುದು
ಭೂತಳದೊಳಗೀ ಮಾತ್ಹಿರಿದು ಪ.

ಆಕಳಪಾಲ ತನ್ನಾಖಳಮರ್ದನ
ತಾ ಕಾಳಿ ಫಣ ತುಳಿದಾಡುತಿರೆ
ತಾ ಕೋಳಲೂದಿ ಗೋಪಾಂಗನೆರೊಲಿಸಿದ
ಶ್ರೀಕಾಳದೇವಿರಮಣ ಹರಿಯು ೧

ತಂಗಿ ಸುಭದ್ರೆ ಕಲ್ಯಾಣವ ಕೇಳ ಲಾ-
ನಂದ ವಾಗೋದು ತನುಮನಕೆಲ್ಲ

## ಪೂರ್ವಕಥೆಗಳು ಮತ್ತು ಟಿಪ್ಪಣಿಗಳು

**ಹರಿಯ ದಶಾವತಾರಗಳು** : (ಹಾ. ೧, ಸು. ೨–೧೯)

(ಅ) **ಮತ್ಸ್ಯ** : ಹಯಗ್ರೀವನೆಂಬ ರಾಕ್ಷಸನು ಬ್ರಹ್ಮನ ಮುಖದಿಂದ ಜಾರಿದ ವೇದಗಳನ್ನು ಅಪಹರಿಸಿ ಪ್ರಳಯಜಲದಲ್ಲಿ ಅಡಗಿರಲು ವಿಷ್ಣು ಮತ್ಸ್ಯರೂಪಿಯಾಗಿ ವೇದಗಳನ್ನು ಹಿಂದಕ್ಕೆ ತಂದನು. ( ಭಾ. ಸ್ಕಂ. ೮, ಅ. ೨೪ )

(ಆ) **ಕೂರ್ಮ** : ದೇವಾಸುರರು ಮಂದರಪರ್ವತವನ್ನು ಕಡಗೋಲಾಗಿಯೂ ವಾಸುಕಿಯನ್ನು ಹಗ್ಗವನ್ನಾಗಿಯೂ ಮಾಡಿಕೊಂಡು ಅಮೃತಕ್ಕಾಗಿ ಸಮುದ್ರವನ್ನು ಕಡೆಯುತ್ತಿದ್ದಾಗ ಭಾರದಿಂದ ಆ ಪರ್ವತ ಮೆಲ್ಲನೆ ಮುಳುಗಲಾರಂಭಿಸಿತು. ಆಗ ವಿಷ್ಣು ಕೂರ್ಮರೂಪಿಯಾಗಿ ಪರ್ವತವನ್ನು ಬೆನ್ನ ಮೇಲೆತ್ತಿಕೊಂಡು ನಿಂತನು.

( ಭಾ. ಸ್ಕಂ. ೮, ಅ. ೭ )

(ಇ) **ವರಾಹ** : ಹಿರಣ್ಯಾಕ್ಷನೆಂಬ ರಾಕ್ಷಸ ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು ಸಮುದ್ರದ ತಳಕ್ಕೆ ಒಯ್ಯಲು ವಿಷ್ಣು ವರಾಹರೂಪಿಯಾಗಿ ಅವನನ್ನು ಸಂಹರಿಸಿ, ಭೂಮಿಯನ್ನು ತನ್ನ ಕೋರೆದಾಡೆಗಳಿಂದ ಎತ್ತಿ ತಂದನು.

( ಭಾ. ಸ್ಕಂ. ೩, ಅ. ೧೩ )

(ಈ) **ನರಸಿಂಹ** : ಶ್ರೀಹರಿ ಬಾಲಕ ಪ್ರಹ್ಲಾದನ ಕರೆಗೆ ಓಗೊಟ್ಟು ನರಸಿಂಹಾಕೃತಿಯನ್ನು ತಾಳಿ ಕಂಬದಿಂದ ಹೊರಬಂದು ಪ್ರಹ್ಲಾದನ ತಂದೆಯಾದ ಹಿರಣ್ಯಕಶಿಪುವನ್ನು ಸಂಹರಿಸಿದನು. ( ಭಾ. ಸ್ಕಂ. ೭, ಅ. ೮ )

(ಉ) **ವಾಮನ** : ಬಲಿಚಕ್ರವರ್ತಿಯಲ್ಲಿಗೆ ವಟುವೇಷದಿಂದ ಬಂದ ವಿಷ್ಣು ಮೂರುಹೆಜ್ಜೆ ಭೂಮಿಯನ್ನು ದಾನವಾಗಿ ಬೇಡಿ ಆ ನೆವದಲ್ಲಿ ಅವನನ್ನು ಸುತಳಕ್ಕೆ ಮೆಟ್ಟಿದನು. ( ಭಾ. ಸ್ಕಂ. ೮, ಅ. ೧೩ )

(ಊ) **ಪರಶುರಾಮ** : ಉನ್ಮತ್ತರಾದ ಕ್ಷತ್ರಿಯರ ಕುಲವನ್ನೇ ಸವರಿ ಹಾಕುವ ಪಣತೊಟ್ಟ ವಿಷ್ಣು ಗಂಡುಗೊಡಲಿ ಹಿಡಿದು ಪರಶುರಾಮನಾಗಿ ಅವತರಿಸಿದ.

( ಭಾ. ಸ್ಕಂ ೯, ಅ. ೭ )

(ಋ) **ರಾಮ** : ರಾವಣನೇ ಮೊದಲಾದ ರಾಕ್ಷಸರ ಬಾಧೆಯನ್ನು ಪರಿಹರಿಸಲು ವಿಷ್ಣುವು ಇಕ್ಷ್ವಾಕು ವಂಶದಲ್ಲಿ ರಾಮನಾಗಿ ಅವತರಿಸಿದನು.

(ಭಾ. ಸ್ಕಂ. ೯, ಅ. ೭)

(ೠ) **ಕೃಷ್ಣ** : ದುಷ್ಟಕ್ಷತ್ರಿಯರ ಮದೋನ್ಮತ್ತತೆಯಿಂದ ಹೆಚ್ಚಿದ ಭೂಭಾರವನ್ನು ಪರಿಹರಿಸುವ ಸಲುವಾಗಿ ವಿಷ್ಣು ಕೃಷ್ಣಾವತಾರದಿಂದ ಯಾದವಕುಲದಲ್ಲಿ ಅವತರಿಸಿದನು. ( ಭಾ. ಸ್ಕಂ. ೧೦, ಅ. ೩ )

(೨) ಬುದ್ಧ : ವೈದಿಕಮಾರ್ಗದಲ್ಲಿ ಬಹಳ ಶ್ರದ್ಧೆಯಿಂದ ಇದ್ದ ತ್ರಿಪುರಾಸುರರನ್ನು ವಂಚಿಸುವುದಕ್ಕಾಗಿ ವಿಷ್ಣು ಪಾಷಂಡವೇಷಿಯಾಗಿ ಅವರಿಗೂ ಪಾಷಂಡಧರ್ಮವನ್ನುಪದೇಶಿಸುವನು. (ಭಾ. ಸ್ಕಂ. ೨, ಅ. ೭)

ತ್ರಿಪುರಾಸುರರ ಪತ್ನಿಯರ ಪಾತಿವ್ರತ್ಯಕ್ಕೆ ಭಂಗತರುವ ಸಲುವಾಗಿ ಜಿತ್ತಲಿಯಾಗಿ ಅವರೆದುರಿಗೆ ನಿಂತನೆಂದು ಹೆಂಗಸರ ಹಾಡುಗಳಲ್ಲಿ ಒಂದು ಕತೆ ಬರುತ್ತದಂತೆ.

(೨) ಕಲ್ಕಿ : ಕಲಿಯುಗದಲ್ಲಿ ಅನಾಚಾರಗಳು ಮೇರೆ ಮೀರಿದಾಗ ಕರ್ಮಭ್ರಷ್ಟರನ್ನು ಶಿಕ್ಷಿಸಲು ವಿಷ್ಣು ಕಲ್ಕಿಯ ಅವತಾರದಿಂದ ಕುದುರೆಯೇರಿ ಬರುವನು.

(ಭಾ. ಸ್ಕಂ. ೨, ಅ. ೭)

(ಹಾ. ೩, ನು. ೧-೫) (ಹಾ. ೯, ನು ೧-೩) (ಹಾ. ೧೫, ನು. ೨೬-೩೦) (ಹಾ. ೧೬, ನು. ೨೫-೨೭) (ಹಾ. ೨೪, ನು. ೧-೧೯) (ಹಾ. ೩೦, ನು. ೩-೨೧) (ಹಾ. ೩೯, ನು. ೧-೧೦) (ಹಾ. ೪೬, ನು. ೧-೩) (ಹಾ. ೪೯, ನು. ೮೪-೯೬) (ಹಾ. ೬೭, ನು. ೧೯-೨೮) (ಹಾ. ೬೯, ನು. ೮-೫೫) (ಹಾ. ೭೦, (ಉ)) (ಹಾ. ೭೪, ನು. ೨-೧೧) (ಹಾ. ೯೩, ನು. ೧-೩) (ಹಾ. ೧೦೦, ನು. ೯-೧೩) (ಹಾ. ೧೦೨, ನು. ೧-೧೦) (ಹಾ. ೧೦೬, ನು. ೧-೫) (ಹಾ. ೧೧೦, ನು. ೧-೩) (ಹಾ. ೧೧೨, ನು. ೧-೧೦) (ಹಾ. ೧೧೭, ನು. ೧-೫) (ಹಾ. ೧೨೨ (ಸು.) ನು. ೧) (ಹಾ. ೧೨೭, ನು ೫-೨೩) (ಹಾ. ೧೩೦, ನು ೯೩-೯೭) (ಹಾ ೧೪೩ ನು. ೧-೧೦) (ಮುಹಾ. ಧ್ವ. ೫೭, ನು. ೧-೯) (ಮುಹಾ. ಧ್ವ. ೭೩ ನು. ೧-೧೦) (ಮುಹಾ. ಕಡೇಧ್ವನಿ, ನು. ೧-೫) (ಸಹಾ. ಧ್ವ. ೩೬, ನು. ೧-೫)

**ಹೆದರದೆ ಭೃಗುಋಷಿಯು ಒದೆಯೆ ಪಾದಗಳಿಂದ :** (ಹಾ. ೨, ನು. ೧)

ಒಮ್ಮೆ ಋಷಿಗಳೆಲ್ಲರೂ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಯಾರು ಶ್ರೇಷ್ಠರೆಂಬುದನ್ನು ತಿಳಿಯಬಯಸಿ ಭೃಗುಋಷಿಗಳನ್ನು ಆ ಕಾರ್ಯಕ್ಕಾಗಿ ಕಳುಹಿಸಿದರು. ಅವರು ಮೊದಲು ಬ್ರಹ್ಮನಲ್ಲಿಗೆ ಹೋಗಿ, ಪರೀಕ್ಷಾರ್ಥವಾಗಿ ಅವನಿಗೆ ನಮಸ್ಕರಿಸಲಿಲ್ಲ. ಬ್ರಹ್ಮನಿಗೆ ಸಿಟ್ಟು ಬಂತು. ಅಲ್ಲಿಂದ ಋಷಿಗಳು ಕೈಲಾಸಕ್ಕೆ ಹೋದರು. ಅಲ್ಲಿ ಆಲಿಂಗಿಸಲು ಬಂದ ಶಿವನನ್ನು ಇವರು ನಿರಾಕರಿಸಿದರು. ಶಿವನೂ ಸಿಟ್ಟಾದನು. ಅನಂತರ ಮಹರ್ಷಿಗಳು ವೈಕುಂಠಕ್ಕೆ ಹೋಗಿ ಲಕ್ಷ್ಮಿಯೊಂದಿಗಿದ್ದ ವಿಷ್ಣುವಿನ ಎದೆಗೆ ಒದ್ದರು. ಆದರೂ ಅವನು ಸಿಟ್ಟಾಗದೆ ಮಹರ್ಷಿಗಳಿಗೆ ವಂದಿಸಿ, ಸತ್ಕರಿಸಿ, ಹಿರಿಯವನೆನ್ನಿಸಿಕೊಂಡನು. (ಭಾ. ಸ್ಕಂ, ೧೦ ಅ. ೯೧)

(ಹಾ. ೩೨, ನು. ೨೧) (ಹಾ. ೩೯, ನು. ೮) (ಹಾ. ೧೨೨ (ಸು.), ನು. ೪)

**ಆಲದೆಲೆಯ ಮ್ಯಾಲೆ ಮಲಗಿದ್ದಾದಿಕೇಶವ :** (ಹಾ. ೮, ಪ.)

ಪ್ರಳಯಕಾಲದಲ್ಲಿ ಶ್ರೀಹರಿ ತನ್ನ ಸೃಷ್ಟಿಯೆಲ್ಲವನ್ನೂ ತಾನೇ ನುಂಗಿ, ಮುಂದೆ ಸೃಷ್ಟಿಕಾಲದವರೆಗೂ ಅವರನ್ನು ತನ್ನ ಹೊಟ್ಟೆಯಲ್ಲಿ ನಿದ್ರಾವಸ್ಥೆಯಲ್ಲಿಟ್ಟಿರುತ್ತಾನೆ.

ಲಕ್ಷ್ಮೀದೇವಿ ವಟಪತ್ರರೂಪಿಯಾಗಿ ಅವನನ್ನು ಸೇವಿಸುತ್ತಿರುತ್ತಾಳೆ. ಆ ಎಲೆಯಲ್ಲಿ ಬಾಲರೂಪಿ ಕೃಷ್ಣ ತನ್ನ ಕಾಲಹೆಬ್ಬೆರಳನ್ನು ಚೀಪುತ್ತಾ ಮಲಗಿರುವನೆಂಬ ಕಲ್ಪನೆ.
(ಹಾ. ೩೮, ನು. ೧) (ಹಾ. ೯೧, ನು. ೧) (ಹಾ. ೧೧೬, ನು. ೩) (ಮುಹಾ. ಧ್ವ. ೩೦, ನು. ೨)

**ಶ್ರೀವತ್ಸ:** (ಹಾ.೮, ನು.೨)
ಭೃಗುಮಹರ್ಷಿ ಶ್ರೀಹರಿಯ ಎದೆಯಮೇಲೆ ಒದ್ದಾಗ ಉಂಟಾದ ಗುರುತು.
(ಹಾ.೪೦,ನು.೨) (ಮುಹಾ.ಧ್ವ.೪೧,ನು.೩) (ಸುಕ.ಧ್ವ.೩,ನು. ೧೨)

**ಫಣಿಪಮಂಚ ಶಯನ:** (ಹಾ.೮,ನು.೫)
ಕಶ್ಯಪ–ಕದ್ರುವಿನ ಮಗನಾದ ಶೇಷ ಒಂದು ಅಂಶದಿಂದ ಪಾತಾಳದಲ್ಲಿದ್ದು ಇನ್ನೊಂದು ಅಂಶದಿಂದ ವಿಷ್ಣುವಿನ ಹಾಸಿಗೆಯಾದನು. (ಪುನಾಚೂ.ಪು.೬೧೩) (ಹಾ. ೯, ಪ.) (ಹಾ. ೧೬, ನು. ೩೨) (ಹಾ. ೩೨, ನು. ೭,ನು. ೭೧, ನು. ೧೦೩) (ಹಾ. ೬೫, ನು. ೨) (ಹಾ ೬೬, ನು ೩) (ಹಾ. ೭೯, ನು. ೫೭) (ಹಾ. ೯೪, ನು. ೯) (ಹಾ. ೧೧೩, ನು. ೧೩) (ಹಾ. ೧೨೨ (ಸು.) ನು. ೪) (ಹಾ. ೧೨೬, ನು ೩) (ಹಾ. ೧೩೦, ನು. ೧೦೮) (ಹಾ. ೧೩೬, ನು. ೩) (ಮುಹಾ. ಧ್ವ. ೩೧, ನು. ೪) (ಮುಹಾ. ಧ್ವ. ೫೫, ನು. ೫) (ಮುಹಾ. ಧ್ವ. ೭೯, ನು. ೩) (ಪಹಾ. ವ. ೨೭) (ಪಹಾ. ಧ್ವ. ೪೦, ನು. ೫) (ಪಹಾ. ವ. ೫೯) (ರಕ. ಧ್ವ. ೩೧, ನು. ೬) (ಸುಕ. ಧ್ವ. ೩, ನು. ೧೫) (ಸುಕ. ಧ್ವ. ೪, ನು. ೧೮) (ಸುಕ. ಧ್ವ. ೩೦, ನು. ೬) (ಸುಕ. ಧ್ವ. ೩೨, ನು.೩)

**ಕಾರ್ತವೀರ್ಯಾರ್ಜುನನ ಕೊಂದು:** (ಹಾ. ೯, ನು. ೨)
ಚಂದ್ರವಂಶದ ಕೃತವೀರ್ಯರಾಜನ ಮಗ ಕಾರ್ತವೀರ್ಯಾರ್ಜುನ. ಒಮ್ಮೆ ಇವನು ಬೇಟೆಗೆ ಹೋಗಿದ್ದಾಗ ಜಮದಗ್ನಿಯ ಆಶ್ರಮವನ್ನು ಹೊಕ್ಕ. ಮುನಿ ರಾಜನನ್ನೂ ಅವನ ಪರಿವಾರವನ್ನೂ ತನ್ನಲ್ಲಿದ್ದ ಕಪಿಲೆಯ ಮಹಿಮೆಯಿಂದ ತೃಪ್ತಿಗೊಳಿಸಿದ. ಇದನ್ನು ತಿಳಿದ ರಾಜ ಕಪಿಲೆಯನ್ನು ತನಗೆ ಕೊಡುವಂತೆ ಕೇಳಿದ. ಮುನಿ ಒಪ್ಪಲಿಲ್ಲ. ಆಗ ರಾಜನು ಸೇನೆಯನ್ನು ಕಳುಹಿಸಿ ಮುನಿಯನ್ನು ಕೊಲ್ಲಿಸಿದ. ಆದರೂ ಕಪಿಲೆ ಮಾತ್ರ ದೊರೆಯಲಿಲ್ಲ. ಮುನಿಯ ಸಾವಿನ ಸುದ್ದಿ ಅವನ ಮಗನಾದ ಪರಶುರಾಮನಿಗೆ (ವಿಷ್ಣುವಿನ ಆರನೆಯ ಅವತಾರ) ತಿಳಿದು, ಕೂಡಲೇ ಅವನು ಮಾಹಿಷ್ಮತಿಗೆ ಹೋಗಿ ಕಾರ್ತವೀರ್ಯನ ಸಾವಿರ ತೋಳುಗಳನ್ನೂ ತರಿದು, ಮಾಹಿಷ್ಮತಿಯನ್ನು ಸುಟ್ಟುಹಾಕಿದನು. (ಪುನಾಚೂ. ಪು. ೯೮–೯೯)

**ಉದರದಾಸೆಗೆ ಅಸುರೆ ಜಗಿದು ವಿಷಮೊಲೆನುಂಡಿ:** (ಹಾ. ೯, ನು ೨)
ಕಂಸನಿಂದ ಪ್ರೇರಿತಳಾಗಿ ತನ್ನ ವಿಷಭರಿತ ಮೊಲೆಗಳಿಂದ ಹಾಲೂಡಲು

ಪೂತನಿಯೆಂಬ ರಾಕ್ಷಸಿಯು ಕೃಷ್ಣನಲ್ಲಿಗೆ ಬರುವಳು. ಕೃಷ್ಣ ವಿಷಮೊಲೆಯುಣ್ಣುವ ನೆವದಲ್ಲಿ ಅವಳ ಪ್ರಾಣವನ್ನೇ ಹೀರಿಬಿಡುತ್ತಾನೆ. (ಭಾ. ಸ್ಕಂ. ೧೦, ಅ. ೬)

(ಹಾ. ೨೪, ಸು. ೧೫) (ಹಾ. ೨೭, ಸು. ೧) (ಹಾ. ೩೨, ಸು. ೭೧) (ಹಾ. ೭೬, ಸು. ೭) (ಮುಹಾ. ಧ್ವ. ೫೯, ಸು. ೫) (ಮುಹಾ. ಧ್ವ. ೬೭, ಸು. ೪)

**ವತ್ಸಕಾಯುತ ವನದೊಳಗೆ ಆಡೆಂದರೆ ಕಿಚ್ಚು ನುಂಗಿ....:** (ಹಾ. ೧೦, ಸು. ೨)

ಒಂದುಸಲ ಗೋಕುಲದ ಗೋಪಾಲಕರೆಲ್ಲ ಹಸುಗಳನ್ನಟ್ಟಿಕೊಂಡು ಅರಣ್ಯಕ್ಕೆ ಹೋಗಿರಲು, ಮೇಯುತ್ತಾ ಮೇಯುತ್ತಾ ಅರಣ್ಯದಲ್ಲಿಯ ಒಂದು ದಟ್ಟವಾಗಿದ್ದ ಪೊದರಿನಬಳಿಗೆ ಹೋದ ಹಸುಕರುಗಳನ್ನು ಗೋಪಾಲಕರೂ ಹಿಂಬಾಲಿಸಿದರು. ಇದಕ್ಕಿದ್ದಂತೆಯೇ ಆ ಪೊದರಿನ ನಾಲ್ಕೂ ಕಡೆಗಳಲ್ಲಿ ಕಾಡುಕಿಚ್ಚು ತಲೆದೋರಲು, ಕೃಷ್ಣ ಆ ಕಿಚ್ಚನ್ನು ನುಂಗಿ ಪ್ರಾಣಭಯದಿಂದ ಅರಚುತ್ತಿದ್ದ ಆ ಗೋಪಾಲಕರನ್ನೂ ಅವರ ಗೋವುಗಳನ್ನೂ ರಕ್ಷಿಸಿದ. (ಭಾ. ಸ್ಕಂ. ೧೦, ಅ. ೧೯)
(ಹಾ. ೨೭, ಸು. ೨) (ಹಾ. ೭೯, ಸು. ೯) (ಮುಹಾ. ಧ್ವ. ೫೫, ಸು. ೩)

**ಶಿಶುಪಾಲಗೊಲಿದೆಯೊ:** (ಹಾ. ೧೧, ಸು. ೨೬)

ಶಿಶುಪಾಲ ಚೇದೀದೇಶದ ಒಬ್ಬ ಅರಸು. ರಾಜಸೂಯ ಯಾಗದ ಅಗ್ರಪೂಜೆಯ ಸಂದರ್ಭದಲ್ಲಿ ಕೃಷ್ಣನನ್ನು ನಿಂದಿಸಿ ಅವನಿಂದ ಹತನಾಗಿ ಮುಕ್ತಿಯನ್ನು ಪಡೆದ. ಹಿಂದೆ, ಇವನಿಗೇ ಕೊಡಬೇಕೆಂದಿದ್ದ ರುಕ್ಮಿಣಿಯನ್ನು ಕೃಷ್ಣ ಕದ್ದೊಯ್ದು ವಿವಾಹವಾಗಿದ್ದ. (ಪುನಾಚೂ. ಪು. ೬೦೧–೬೦೮)
(ಹಾ. ೧೩ (ಸು) ಸು. ೪) (ಹಾ. ೩೨, ಸು. ೮೪) (ಹಾ. ೪೦, ಸು. ೩) (ಹಾ. ೪೫, ಸು ೧೧) (ಹಾ. ೯೦, ಸು. ೬) (ಹಾ. ೧೨೨ (ಪ), ಸು. ೪) (ಪಹಾ. ಧ್ವ. ೪, ಸು. ೧೩) (ಪಹಾ. ಧ್ವ. ೧೨, ಸು. ೬)

**ತಕ್ಕಡಿಯೊಳಗಿದ್ದ ಚಿನ್ನವ ತೆಗಿಸಿ....ಚಕ್ಕನೆ ತಾನೆದ್ದನು:** (ಹಾ. ೧೧)

ಒಮ್ಮೆ ಸತ್ಯಭಾಮೆ ಕೃಷ್ಣನನ್ನು ನಾರದನಿಗೆ ದಾನಮಾಡಿದಾಗ ಅವನನ್ನು ಪುನಃ ಹಿಂದಕ್ಕೆ ಪಡೆಯಲು ದೇವಕಿಯೇ ಮೊದಲಾದವರು ನಾರದನಿಗೆ ಕೃಷ್ಣನ ತೂಕ ಚಿನ್ನ ಕೊಡುವುದಾಗಿ ಹೇಳುವರು. ಅರಮನೆಯ ಚಿನ್ನವೆಲ್ಲ ಬರಿದಾದರೂ ಕೃಷ್ಣ ಕುಳಿತಿದ್ದ ತಕ್ಕಡಿ ಮೇಲೇಳಲಿಲ್ಲ. ಆಗ ರುಕ್ಮಿಣಿ ತಟ್ಟೆಯಲ್ಲಿದ್ದ ಚಿನ್ನವನ್ನೆಲ್ಲ ತೆಗೆಸಿ, ಬದಲಾಗಿ ಒಂದು ತುಳಸಿದಳವನ್ನಿಡಲು ಕೃಷ್ಣ ಚಕ್ಕನೆ ಮೇಲೆದ್ದ
(ಹಾ. ೨೯, ಸು. ೧೦) (ಹಾ. ೩೦, ಸು ೧೬) (ಪಹಾ) (ಮುಹಾ. ಧ್ವ. ೫೨)

**ಸಾಮಜ ವರದ:** (ಹಾ. ೧೨, ಸು. ೨೩)

ಪೂರ್ವದಲ್ಲಿ ಇಂದ್ರದ್ಯುಮ್ನನೆಂಬ ವಿಷ್ಣುಭಕ್ತನು ಅಗಸ್ತ್ಯರ ಶಾಪದಿಂದ

ಆನೆಯ ಜನ್ಮವನ್ನು ಪಡೆದನು. ತ್ರಿಕೂಟಪರ್ವತದ ತಪ್ಪಲಿನಲ್ಲಿದ್ದ ಈ ಆನೆ ಒಮ್ಮೆ ಪದ್ಮಸರೋವರದಲ್ಲಿ ನೀರು ಕುಡಿಯುತ್ತಿದ್ದಾಗ ಒಂದು ಮೊಸಳೆ ಅದರ ಕಾಲನ್ನು ಹಿಡಿಯಿತು. ಸಾವಿರ ವರ್ಷಗಳಕಾಲ ಸತತವಾಗಿ ಹೋರಾಡಿದರೂ ಯಾರಿಂದಲೂ ಅದನ್ನು ಬಿಡಿಸಲಾಗಲಿಲ್ಲ. ಆಗ ಆನೆ ಶ್ರೀಹರಿಯನ್ನು ಪ್ರಾರ್ಥಿಸಲು ಅವನು ಓಡಿಬಂದು ಚಕ್ರಾಯುಧದಿಂದ ನಕ್ರವನ್ನು ಸೀಳಿ ಗಜೇಂದ್ರನನ್ನು ರಕ್ಷಿಸುತ್ತಾನೆ.

(ಭಾ. ಸ್ಕಂ. ೮, ಅ. ೩)

(ಹಾ. ೨೨, ನು. ೪) (ಹಾ. ೨೪, ನು. ೨) (ಹಾ. ೨೫, ನು. ೨) (ಹಾ. ೫೪, ನು. ೫) (ಹಾ. ೬೨, ನು. ೪) (ಹಾ. ೬೪, ನು. ೧) (ಹಾ. ೭೩, ನು. ೧) (ಹಾ. ೮೪, ನು. ೧) (ಹಾ. ೧೧೩, ನು. ೬) (ಹಾ. ೧೨೦, ನು. ೨) (ಹಾ. ೧೨೨ (ಸು), ನು. ೪) (ಪಹಾ. ಧ್ವ. ೪೦. ನು. ೩) (ಪಹಾ. ಧ್ವ. ೫೦, ನು. ೧)

**ಮಂದಾಕಿನಿಯು ಪಡೆದ ಮುದ್ದು ಚರಣ:** (ಹಾ. ೧೩ (ಸು), ನು.೧)

ವಿಷ್ಣು ವಾಮನಾವತಾರದಿಂದ ಭೂಮಿ ಆಕಾಶಗಳನ್ನು ಅಳೆಯಲು, ಅವನ ಪಾದ ಆಕಾಶವನ್ನು ಸ್ಪರ್ಶಿಸಿ, ಬ್ರಹ್ಮಾಂಡಕಟಹವನ್ನು ಸೀಳಿ ಸತ್ಯಲೋಕದಲ್ಲಿ ಅದರ ಉಗುರಿನ ಕಾಂತಿ ತೋರಿಬರಲು ಬ್ರಹ್ಮನು ಅದಕ್ಕೆ ನೀರಿನಿಂದ ಅಭಿಷೇಕ ಮಾಡಿದನು. ಆಗ ಆ ನೀರು ಗಂಗೆಯಾಗಿ ಹರಿಯಿತು. (ಭಾ. ಸ್ಕಂ. ೮, ಅ. ೧೮-೨೩)

(ಹಾ. ೩೨, ನು. ೩೯) (ಹಾ. ೪೦, ನು. ೧) (ಹಾ. ೫೧, ನು. ೧-೨) (ಹಾ. ೬೯, ನು. ೪೦) (ಹಾ. ೯೯, ನು. ೧) (ಹಾ. ೧೦೦, ನು. ೧) (ಹಾ. ೧೨೩, ನು. ೧-೪) (ಹಾ. ೧೩೦, ನು. ೧೦೧) (ಮುಹಾ. ಧ್ವ. ३೦, ನು..೨)

**ಶಕಟಾಸುರಾಂತಕ:** (ಹಾ. ೧೩ (ಸು) ನು. ೩)

ಕಂಸನಿಂದ ಕೃಷ್ಣನ ಕೊಲೆಗೆಂದು ನಿಯೋಜಿತನಾದ ಶಕಟಾಸುರ ಬಂಡಿಯ ರೂಪದಲ್ಲಿ ಬರಲು, ಮಗು ಕೃಷ್ಣ ಅವನನ್ನು ಒದೆಯುತ್ತಾನೆ. ಬಂಡಿ ಪುಡಿಪುಡಿಯಾಗಿ ಶಕಟಾಸುರ ಸಾಯುತ್ತಾನೆ. (ಭಾ. ಸ್ಕಂ. ೧೦, ಅ. ೭)

(ಹಾ. ೩೨, ನು. ೯೧) (ಹಾ. ೭೬, ನು. ೭) (ಹಾ.೧೦೦, ನು. ೧೨)

**ಬಕವೈರಿ:** (ಹಾ. ೧೩ (ಸು), ನು.೩)

ಬಕ ಕಂಸ ಪರಿವಾರದ ಒಬ್ಬ ರಾಕ್ಷಸ. ಬಲರಾಮ ಕೃಷ್ಣರು ಗೋಪಬಾಲಕರೊಂದಿಗೆ ಕರುಗಳನ್ನು ಮೇಯಿಸುತ್ತಿದ್ದಾಗ ಇವನು ಬಕಪಕ್ಷಿಯ ರೂಪದಿಂದ ಕೃಷ್ಣನನ್ನು ನುಂಗಿ ತನ್ನ ದವಡೆಗಳಲ್ಲಿ ಅಗಿದು ನೆಲಕ್ಕೆ ಉಗುಳಿದ. ಕೃಷ್ಣನಿಗೆ ಸ್ವಲ್ಪವೂ ಗಾಯವಾಗದಿರುವುದನ್ನು ಕಂಡು ಕೋಪದಿಂದ ಅವನನ್ನು ತನ್ನ ಕೊಕ್ಕಿನಿಂದ ಕುಕ್ಕಲು

ಹೋದಾಗ ಕೃಷ್ಣ ಆ ಬಕಪಕ್ಷಿಯ ಎರಡುಕೊಕ್ಕುಗಳನ್ನೂ ಎರಡು ಕೈಗಳಿಂದ ಹಿಡಿದು ಸೀಳಿ ಕೊಂದ. (ಪುನಾಚೂ. ಪು. ೪೦೫)
(ಹಾ. ೭೬, ನು. ೭)

**ಶರಣೆಂದ ದ್ರೌಪದಿ ಕಾಯ್ದಂತೆ :** (ಹಾ. ೧೩ (ಸು.), ನು. ೪)

ಮಹಾಭಾರತದ ವಿರಾಟಪರ್ವದಲ್ಲಿ ಬರುವ, ದ್ರೌಪದೀವಸ್ತ್ರಾಪಹರಣದ ಸಮಯದಲ್ಲಿ ಕೃಷ್ಣ ದ್ರೌಪದಿಗೆ 'ಉಟ್ಟವಸ್ತ್ರ ಅಕ್ಷಯವಾಗಲಿ' ಎಂದು ಅನುಗ್ರಹಿಸಿದ ಪ್ರಸಂಗ.
(ಹಾ. ೧೫) (ಹಾ. ೨೨, ನು. ೫) (ಹಾ .೩೦, ನು. ೧೪) (ಹಾ. ೩೨, ನು. ೨೯) (ಹಾ. ೪೦, ನು. ೬) (ಹಾ. ೫೬, ನು. ೩) (ಹಾ. ೫೭, ನು. ೨) (ಹಾ. ೮೪, ನು. ೫) (ಹಾ. ೧೦೭, ನು. ೧) (ಹಾ. ೧೨೦, ನು. ೩) (ಹಾ. ೧೨೨ (ಸು.), ನು. ೪) (ಹಾ. ೧೩೦, ನು. ೧೪) (ನಚ. ಧ್ವ. ೩, ನು. ೪) (ಮುಹಾ. ಧ್ವ. ೪೯, ನು. ೩-೪) (ಮುಹಾ. ಧ್ವ. ೫೧, ನು. ೨-೪) (ಮುಹಾ. ಧ್ವ. ೫೯, ನು. ೧೨) (ಮುಹಾ. ಧ್ವ. ೬೧, ನು. ೪) (ರಕ. ಧ್ವ. ೧೫, ನು. ೩) (ರಕ. ಧ್ವ. ೩೯, ನು. ೬)

**ಗುರುವಿನ್ನಲ್ಲಿಭೆ ಮೂಢಪರಾಧವೆಣಿಸದೆ.... ಸುತರನಿಟ್ಟೆ :**
(ಹಾ. ೧೩(ಸು), ನು. ೪)

ಅವಂತೀ ಪಟ್ಟಣದಲ್ಲಿ ವಾಸವಾಗಿದ್ದ ಸಾಂದೀಪಿನಿಯಲ್ಲಿ ಬಲರಾಮ, ಕೃಷ್ಣ, ಸುದಾಮರು ವಿದ್ಯಾಭ್ಯಾಸ ಮಾಡಿದರು. ಗುರುಗಳು ಗುರದಕ್ಷಿಣಾರ್ಥವಾಗಿ ಕೃಷ್ಣ ತಮ್ಮ ಸತ್ತ ಮಗನನ್ನು ಬದುಕಿಸಿಕೊಡಬೇಕೆಂದು ಕೇಳಲು, ಕೃಷ್ಣ ಯಮಲೋಕಕ್ಕೆ ಹೋಗಿ, ಅವರ ಮೃತನಾದ ಮಗನನ್ನು ಮರಳಿ ಕರೆತಂದು ಅವರಿಗೆ ಗುರುದಕ್ಷಿಣೆಯಾಗಿ ಒಪ್ಪಿಸಿದನು. (ಪುನಾಚೂ. ಪು. ೬೩೪)
(ಹಾ. ೩೨, ನು. ೮೭) (ಹಾ. ೧೩೦, ನು. ೬೨)

**ಕಾಂತೆ ಪಾರ್ವತಿ ನೀಲಕಂಠ ನಾ ಬಂದೀನಿ :** (ಹಾ. ೧೪, ನು. ೯)

ದೇವಾಸುರರು ಸಮುದ್ರ ಮಥನ ಮಾಡಿದ ಕಾಲದಲ್ಲಿ ಹುಟ್ಟಿಬಂದ ಕಾಳಕೂಟ ವಿಷವನ್ನು ಈಶ್ವರ ನುಂಗಿದುದರಿಂದ ಅವನ ಕತ್ತಿನಲ್ಲಿ ಕಪ್ಪುಕಲೆಯುಂಟಾಗಿ ಆವನು ನೀಲಕಂಠನೆನಿಸಿದನು. (ಭಾ. ಸ್ಕಂ. ೮, ಅ. ೭)
(ಹಾ. ೨೪, ನು. ೧೬)

**ಕೊಂದೆ ಕಂಸನ :** (ಹಾ. ೧೬, ನು. ೨೭)

ಸೋದರ ಮಾವನಾದ ಕಂಸನನ್ನು ಸಂಹರಿಸಿದವನು ಶ್ರೀಕೃಷ್ಣ. ಯದುವಂಶದ

ಉಗ್ರಸೇನನ ಮಗನೂ ಮಥುರೆಯ ಅರಸನೂ ಆದ ಕಂಸ ಕೃಷ್ಣನನ್ನು ಕೊಲ್ಲಲು ಶತ ಪ್ರಯತ್ನಮಾಡಿ ಸಾಧ್ಯವಾಗದೆ, ಕೊನೆಗೆ ಕೃಷ್ಣನಿಂದಲೇ ಸತ್ತ.

(ಪುನಾಚೂ. ಪು. ೭೪–೭೫)

(ಹಾ. ೨೪, ನು. ೨೧) (ಹಾ. ೬೬, ನು. ೨) (ಹಾ. ೮೬, ನು. ೬೩–೬೫) (ಹಾ. ೯೦, ನು. ೧) (ಹಾ. ೧೨೧, ನು. ೪೭) (ಹಾ. ೧೨೩, ನು. ೨) (ಹಾ. ೧೩೬, ನು. ೩) (ಹಾ. ೧೩೦,ನು. ೧೦೫) (ಮುಹಾ. ಧ್ವ. ೫೯, ನು. ೨೧)

**ವಿಷಮಡುವನು ಹಾರಿ ಕಲಕಿ:** (ಹಾ. ೧೬, ನು. ೩೨)

ಕಾಳಿಂದಿ ಮಡುವಿನಲ್ಲಿ ಅಡಗಿದ್ದ ಕಾಳಿಂಗನೆಂಬ ಸರ್ಪದ ವಿಷಜ್ವಾಲೆಯಿಂದ ಆ ಮಡುವಿನ ನೀರೆಲ್ಲ ವಿಷಮಯವಾಗಿ ಆ ನೀರನ್ನು ಕುಡಿದ ಪ್ರಾಣಿಗಳೆಲ್ಲ ಸಾಯ ತೊಡಗಿದವು. ಈ ವಿಷಯವನ್ನು ತಿಳಿದ ಕೃಷ್ಣ ಕಾಳಿಂಗನ ಹೆಡೆಯನ್ನು ಮೆಟ್ಟಿ ನಾಟ್ಯ ಮಾಡಿ, ಅವನನ್ನು ಪಾತಾಳಕ್ಕೆ ಕಳುಹಿಸಿ ಮಡುವನ್ನು ಸ್ವಚ್ಛಗೊಳಿಸಿದನು. (ಪುನಾಚೂ. ಪು. ೧೦೯)

(ಹಾ. ೨೭, ನು. ೨) (ಹಾ. ೩೨, ನು,೭೧) (ಹಾ. ೪೮, ನು. ೬) (ಹಾ. ೪೯, ನು. ೧೫) (ಹಾ. ೭೬, ನು. ೮) (ಹಾ. ೯೧, ನು. ೩) (ಹಾ. ೯೯, ನು. ೧) (ಹಾ. ೧೦೭, ನು. ೨) (ಹಾ. ೧೨೨ (ಸು), ನು. ೪) (ಹಾ. ೧೨೩, ನು. ೪) (ನಜ. ಧ್ವ. ೪೯, ನು. ೨೪) (ಮುಹಾ. ಧ್ವ. ೫೩, ನು. ೩) (ಪಹಾ. ಧ್ವ. ೨೭, ನು. ೧೨)

**ವಿಷಕಂಠನೆದುರು ಸ್ತ್ರೀರೂಪವ ತೋರಿದಿ:** (ಹಾ. ೧೬, ನು. ೩೨)

ಒಮ್ಮೆ ಮೊಮ್ಮಗನಾದ ರುದ್ರ ಹರಿಯ ಮೋಹಿನೀ ರೂಪವನ್ನು ನೋಡ ಬಯಸಿದ. ಹರಿಯು ಬೇಡವೆಂದು ಎಷ್ಟು ಹೇಳಿದರೂ ಅವನು ಒಪ್ಪಲಿಲ್ಲ. ಕೊನೆಗೆ ವಿಷ್ಣು ಅವನೆದುರಿಗೆ ತನ್ನ ಸ್ತ್ರೀರೂಪವನ್ನು ತೋರಿಸಲು ಒಪ್ಪಿಕೊಂಡನು. ಹರಿಯ ಸ್ತ್ರೀರೂಪವನ್ನು ನೋಡಿದ ಶಿವ ಆಕೆ ನಿಜವಾದ ಸ್ತ್ರೀಯೆಂದೇ ಭ್ರಮಿಸಿ ಮೋಹ ಗೊಂಡನು. (ಭಾ. ಸ್ಕಂ. ೮. ಅ. ೧೨)

(ಹಾ. ೨೪, ನು. ೪) (ಹಾ. ೯೧, ನು. ೧೮)

**ಡೊಂಕಸತಿಯ ಕೂಡಿ:** (ಹಾ. ೧೬. ನು. ೩೩)

ಕೃಷ್ಣ ಮಥುರೆಗೆ ಹೋದಾಗ ರಾಜನಿಗೆ ಗಂಧವನ್ನು ತೆಗೆದುಕೊಂಡು ಹೋಗು ತ್ತಿದ್ದ ತ್ರಿವಕ್ರೆಯೆಂಬ ಕುರೂಪಿಯನ್ನು ಸುರೂಪಿಯನ್ನಾಗಿ ಮಾಡಿ ಅನುಗ್ರಹಿಸಿದನು. (ಭಾ. ಸ್ಕಂ. ೧೦, ಅ. ೪೨)

(ಹಾ. ೩೨, ನು. ೨೭) (ಹಾ. ೧೧೩, ನು. ೧೨) (ಮುಹಾ. ಧ್ವ. ೫೯, ನು. ೧೫)

**ನರ್ಕಾ(ರಕಾ)ಸುರ:** (ಹಾ. ೧೬, ನು. ೩೬)

ಒಬ್ಬರಾಕ್ಷಸ. ವರಾಹಾವತಾರಿ ವಿಷ್ಣುವಿನ ಬೆವರಿನಿಂದ ಹುಟ್ಟಿದವನು, ವಿಷ್ಣು ಭೂದೇವಿಯರ ಮಗ. ಭೂದೇವಿ ವಿಷ್ಣುವನ್ನು ಪ್ರಾರ್ಥಿಸಿ ಇವನಿಗೆ ವೈಷ್ಣವಾಸ್ತ್ರವನ್ನು ಕೊಡಿಸಿದಳು. ಇದರಿಂದ ಬಲಗೊಂಡ ನರಕಾಸುರ ಲೋಕಕಂಟಕನಾಗಲು ಶ್ರೀ ಕೃಷ್ಣ ಅವನನ್ನು ಕೊಂದು, ಅವನ ಅಂತಃಪುರದಲ್ಲಿದ್ದ ಹದಿನಾರುಸಾವಿರಮಂದಿ ಸ್ತ್ರೀಯರನ್ನೂ ವಿವಾಹವಾದನು. (ಪುನಾಚೂ. ಪು. ೩೬೭)
(ಹಾ. ೧೨೮, ನು. ೩)

**ಶೂರ್ಪನಖಿ:** (ಹಾ. ೧೮, ನು.೨)

ರಾವಣನತಂಗಿ. ವಿಷ್ಣು ರಾಮಾವತಾರದಲ್ಲಿ ಲಕ್ಷ್ಮಣನಿಂದ ಅವಳ ಕಿವಿ ಮೂಗುಗಳನ್ನು ಕೊಯಿಸಿದ.

**ಕಲ್ಲ್ಹೆಣ್ಣು ಮಾಡಿದ:** (ಹಾ. ೧೮, ನು. ೩)

ರಾಮಾಯಣದ ಅಹಲ್ಯಾಶಾಪವಿಮೋಚನೆಯ ಪ್ರಸಂಗ.
(ಹಾ. ೩೨,ನು. ೨೮) (ಹಾ. ೩೫, ಪ.) (ಹಾ. ೪೧, ನು. ೪) (ಹಾ. ೧೧೪, ನು. ೧)
(ಹಾ. ೧೨೦, ನು. ೩) (ಹಾ. ೧೨೨ (ಸು), ನು. ೪) (ಹಾ. ೧೨೩, ನು. ೩.)

**ಹನುಮ ಭೀಮ ಮಧ್ವ ಅವತಾರಗಳು:** (ಹಾ. ೨೦)

ಪ್ರಾಣದೇವರ ಅಂಶ ತ್ರೇತಾಯುಗದಲ್ಲಿ ಹನುಮಂತನಾಗಿಯೂ, ದ್ವಾಪರದಲ್ಲಿ ಭೀಮಸೇನನಾಗಿಯೂ, ಕಲಿಯುಗದಲ್ಲಿ ಮಧ್ವಾಚಾರ್ಯರಾಗಿಯೂ ಜನಿಸಿದ್ದೆಂಬ ನಂಬಿಕೆ ಮಾಧ್ವಮತೀಯರಲ್ಲಿದೆ.
(ಹಾ. ೫೬) (ಹಾ. ೮೦)

**ಅಕ್ಷಕುಮಾರನ್ನ ಮುರಿದು:** (ಹಾ. ೨೦, ನು. ೧)

ಅಕ್ಷಕುಮಾರ ಮಂಡೋದರಿ ರಾವಣರ ಕಿರಿಯ ಮಗ. ಹನುಮಂತ ಸೀತೆಯನ್ನು ಹುಡುಕಲು ಲಂಕೆಗೆ ಹೋಗಿದ್ದಾಗ ಇವನನ್ನು ಕೊಂದ. (ಪುನಾಚೂ. ಪು.೨)
(ಹಾ. ೯೬, ನು. ೯)

**ರಜತಪೀಠಪುರ:** (ಹಾ. ೨೦, ನು. ೩.)

ಇದು ಉಡುಪಿ ಕ್ಷೇತ್ರಕ್ಕೆ ಹಿಂದೆ ಇದ್ದ ಹೆಸರು. ಮಧ್ವಾಚಾರ್ಯರು ಇಲ್ಲಿ ಕಡಗೋಲು ಕೃಷ್ಣನ ಪ್ರತಿಮೆಯನ್ನು ಪ್ರತಿಷ್ಠಾಪಿಸಿರುವರು.
(ಹಾ. ೮೪, ನು. ೪)

**ರಾಸಿಹಾಡು :** (ಹಾ. ೨೧)

ಮೇಷ, ವೃಷಭ, ಕುಂಭ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಿಥುನ, ಕರ್ಕಾಟಕ, ಮಕರ, ಮೀನ–ಈ ಹನ್ನೆರಡು ರಾಸಿ(ಶಿ)ಗಳನ್ನೂ ಒಡಪಿನ ರೂಪದಲ್ಲಿ ಹೇಳಿರುವ ವಿಶಿಷ್ಟವಾದ ಹಾಡು.

**ಪ್ರಹ್ಲಾದ :** (ಹಾ. ೨೨, ನು. ೧)

ಪರಮ ವಿಷ್ಣು ಭಕ್ತ. ಹಿರಣ್ಯ ಕಶಿಪುವಿನಿಂದ ಕಯಾಧು ಎಂಬುವಳಲ್ಲಿ ಜನಿಸಿದ. ಬಾಲಕ ಪ್ರಹ್ಲಾದನ ಕರೆಗೆ ಓಗೊಟ್ಟು ಕಂಬದಿಂದ ಹೊರಬಂದು ನರಸಿಂಹಾಕೃತಿಯನ್ನು ತಾಳಿದ ಶ್ರೀಹರಿ ಅವನ ತಂದೆಯಾದ ಹಿರಣ್ಯಕಶಿಪುವನ್ನು ಸಂಹರಿಸಿದ. (ಭಾ. ಸ್ಕಂ. ೭, ಅ. ೮)
(ಹಾ. ೩೨, ನು. ೨೨) (ಹಾ. ೬೭, ನು. ೨೨) (ಹಾ. ೭೩, ನು. ೨)
(ಹಾ. ೧೧೩, ನು. ೬) (ಹಾ. ೧೨೦, ನು. ೧) (ಹಾ. ೧೨೨ (ಸು), ನು. ೮)

**ದ್ವಿಜನು ಕೆಟ್ಟು ಅಂತ್ಯಜ ಸ್ತ್ರೀಯಳ ಕೂಡಿ :** (ಹಾ. ೨೨. ನು. ೨)

ಅಜಾಮಿಳನ ಕತೆ. ಅಜಾಮಿಳನು ಬ್ರಾಹ್ಮಣನ ಕುಲದಲ್ಲಿ ಹುಟ್ಟಿದವನಾಗಿದ್ದರೂ ಧರ್ಮಪತ್ನಿಯನ್ನೂ ತಂದೆತಾಯಿಗಳನ್ನೂ ತ್ಯಜಿಸಿ, ಒಬ್ಬ ಶೂದ್ರಸ್ತ್ರೀಯಲ್ಲಿ ವ್ಯಾಮೋಹಗೊಂಡು ದುರಾಚಾರ ಮಗ್ನನಾಗಿದ್ದನು. ಈತ ತನ್ನ ಕೊನೆಗಾಲದಲ್ಲಿ ತನ್ನ ಮಗ ನಾರಾಯಣನನ್ನು 'ನಾರಗ' ಎಂದು ಕರೆಯಲು ಆ ಕೂಗಿಗೆ ಶ್ರೀಹರಿ ಒಲಿದು ಅವನಿಗೆ ಸದ್ಗತಿಯಿತ್ತನು. (ಭಾ. ಸ್ಕಂ. ೬, ಅ. ೧–೨)
(ಹಾ. ೩೨, ನು. ೨೩.) (ಹಾ. ೬೨, ನು. ೪) (ಹಾ. ೬೮, ನು. ೧) (ಹಾ. ೬೯, ನು. ೪–೫) (ಹಾ. ೧೧೩, ನು. ೬) (ಹಾ. ೧೨೦, ನು. ೨) (ಹಾ. ೧೨೨(ಸು), ನು. ೪)

**ದುಷ್ಟಪತ್ನಿ ನುಡಿಗೆ........ಪದವಿ ಧ್ರುವಗೆ:** (ಹಾ. ೨೨, ನು. ೩)

ಉತ್ತಾನಪಾದರಾಯನ ಹಿರಿಯ ಹೆಂಡತಿಯ ಮಗ ಧ್ರುವ. ಅವನ ಮಲತಾಯಿ ಸುರುಚಿಯ ಧೋರಣೆಯಿಂದಾಗಿ ಧ್ರುವ ಕಾಡಿಗೆ ಹೋಗಿ ತಪಸ್ಸು ಮಾಡಿ ಹರಿಯನ್ನು ಒಲಿಸಿಕೊಂಡು ಭೂಲೋಕದಲ್ಲಿ ರಾಜನಾದುದಲ್ಲದೆ ನಕ್ಷತ್ರಗಳ ಸಮೂಹದಲ್ಲಿ ಧ್ರುವ ಎಂಬ ಶಾಶ್ವತ ಸ್ಥಾನವನ್ನು ಸಂಪಾದಿಸಿದನು. (ಭಾ. ಸ್ಕಂ. ೪, ಅ. ೮–೧೪)
(ಹಾ. ೩೨, ನು. ೨೨) (ಹಾ. ೭೩, ನು. ೨) (ಹಾ. ೮೪, ನು. ೩) (ಹಾ. ೧೧೩, ನು. ೬) (ಹಾ. ೧೨೦, ನು. ೧) (ಹಾ. ೧೨೨ (ಸು), ನು.೪) (ಹಾ. ೧೩೦, ನು. ೧೫೦)

**ಸತಿರೂಪದಿಂದಾಸುರರಸೆಲ್ಲ ಭಾಳ ಮತಿಗೆಡಿಸಿದ** (ಹಾ. ೨೪, ನು. ೩)

ಸಮುದ್ರಮಥನದ ಸಂದರ್ಭದಲ್ಲಿ ವಿಷ್ಣು ಮೋಹಿನೀ ಅವತಾರವನ್ನು ತಾಳಿ

ರಾಕ್ಷಸರನ್ನೆಲ್ಲ ಮರುಳುಗೊಳಿಸಿ ಸುರರಿಗೆ ಅಮೃತವನ್ನು ಹಂಚಿದ ಪ್ರಸ್ತಾಪ. (ಪುನಾಚೂ. ಪು. ೫೦೪)
(ಹಾ. ೪೩) (ಹಾ. ೬೭, ನು. ೨೦) (ಹಾ. ೬೯, ನು. ೧೨) (ಹಾ. ೯೧, ನು. ೧೮)

**ಸುತನ ಶಿರವನೆ ಛೇದನ ಮಾಡಿ:** (ಹಾ. ೨೪. ನು. ೧೨)

ಒಮ್ಮೆ ಪಾರ್ವತಿ ಸ್ನಾನಮಾಡಲು ಒಳಕ್ಕೆ ಹೋಗುವಾಗ ಬಾಗಿಲು ಕಾಯಲು ಮಾಡಿರಿಸಿದ್ದ ಗಣಪತಿಯ ತಲೆಯನ್ನು ಶಿವ ತಿಳಿಯದೆ ಕತ್ತರಿಸಿದ ಪ್ರಸಂಗ.

**ಹೋತನ ಶಿರ ಮಾವಗಿಟ್ಟನೆ:** (ಹಾ. ೨೪, ನು. ೨೨)

ವೀರಭದ್ರ ದಕ್ಷಯಜ್ಞವನ್ನು ಧ್ವಂಸಮಾಡಿದ ಕಾಲದಲ್ಲಿ ದಕ್ಷನ ಕುತ್ತಿಗೆಯನ್ನು ಕತ್ತರಿಸಿ ಯಜ್ಞಕುಂಡದಲ್ಲಿ ಬಿಸುಟು ಸುಟ್ಟುಬಿಟ್ಟ. ಬಳಿಕ ಕರುಣಾಳುವಾದ ಶಿವನು ದೇವತೆಗಳ ಪ್ರಾರ್ಥನೆಯ ಮೇರೆಗೆ ಒಂದು ಟಗರಿನ ಕುತ್ತಿಗೆಯನ್ನು ತರಿಸಿ, ದಕ್ಷನ ಮುಂಡಕ್ಕೆ ಜೋಡಿಸಿ ಅವನನ್ನು ಬದುಕಿಸಿದನು. (ಪುನಾಚೂ. ಪು. ೨೭೮)

**ಫಾಲಾಕ್ಷ ಪರಮ ಅದರಿಂದ ಗಂಗೆಯ ಮಾಣಿಕ್ಯ ಮುಕುಟದಂತಿಟ್ಟಾನೆ:** (ಹಾ. ೨೪, ನು. ೨೩)

ಭಗೀರಥನು ತನ್ನ ಮುತ್ತಜ್ಜಂದಿರಿಗೆ ಸದ್ಗತಿಯನ್ನುಂಟು ಮಾಡುವುದಕ್ಕಾಗಿ ಗಂಗೆಯನ್ನು ಕುರಿತು ತಪಸ್ಸುಮಾಡಿ ಒಪ್ಪಿಸಿದ. ಆಗ ಶಿವ ಆಕೆಯನ್ನು ತನ್ನ ಜಟೆಯಲ್ಲಿ ಧರಿಸುವ ಮೂಲಕ ಆಕೆಯ ವೇಗವನ್ನು ತಡೆದ. (ಪುನಾಚೂ. ಪು. ೧೬೬)
(ಹಾ. ೫೧, ನು. ೨)

**ಕಡುಕೋಪದಿಂ ವೀರಭದ್ರನ ತನ್ನ ಜಡೆಯಿಂದ ಪಡೆದ:** (ಹಾ. ೨೪, ನು. ೨೬)

ದಕ್ಷಯಜ್ಞದ ಸಂದರ್ಭದಲ್ಲಿ ತಂದೆಯ ಅನಾದರಣೆಗೆ ಗುರಿಯಾದ ದಾಕ್ಷಾಯಿಣಿ ಯೋಗಾಗ್ನಿಯಿಂದ ಸುಟ್ಟುಹೋದಳು. ನಾರದರ ಮೂಲಕ ಈ ವಿಷಯವನ್ನು ತಿಳಿದ ಶಿವ ಕೋಪಾವಿಷ್ಟನಾಗಿ ತನ್ನ ಜಟೆಯಿಂದ ಒಂದುಹಿಡಿ ಕೂದಲನ್ನು ಕಿತ್ತು ನೆಲದ ಮೇಲೆ ಎಸೆದ. ಕೂಡಲೇ ಭಯಂಕರರೂಪಿ ಪುರುಷನೊಬ್ಬ ಎದ್ದುಬಂದ. ಅವನೇ ವೀರಭದ್ರ. (ಪುನಾಚೂ. ಪು. ೨೯೪-೯೫)

**ಕುಂಭೀನರಕ:** (ಹಾ. ೨೪, ನು. ೨೮)

ನರಕದಲ್ಲಿ ಒಂದುಬಗೆ. ಜೀವಹಿಂಸೆ ಮಾಡಿದವರು ಈ ನರಕಕ್ಕೆ ಹೋಗುತ್ತಾರೆ. (ಭಾ. ಸ್ಕಂ. ೫, ಅ. ೨೬)

**ಅಷ್ಟದಿಕ್ಪಾಲಕರನೆ ಓಡಿಸಿ ವೃಕ್ಷ....ಒದರುದಲ್ಲೆ:** (ಹಾ. ೨೯, ನು. ೭)

ನಾರದನು ತಂದಿತ್ತ ಒಂದು ಸುರಪಾರಿಜಾತವನ್ನು ಕೃಷ್ಣ ರುಕ್ಮಿಣಿಗೆ ಕೊಡಲು ಕೋಪಗೊಂಡ ಭಾಮೆಯನ್ನು ರಮಿಸಲು ಕೃಷ್ಣ ಪಾರಿಜಾತ ವೃಕ್ಷವನ್ನೇ ದೇವಲೋಕದಿಂದ ಕದ್ದು ಭೂಮಿಗೆ ತರುತ್ತಾನೆ. ಆ ಸಂದರ್ಭದಲ್ಲಿ ಕೃಷ್ಣನನ್ನು ಬೆನ್ನಟ್ಟಿ ಬಂದವರೊಡನೆ ಭಾಮೆ ಯುದ್ಧಮಾಡಿ ಗೆಲ್ಲುತ್ತಾಳೆ.
(ಹಾ. ೪೦, ನು. ೫) (ಹಾ. ೫೯, ನು. ೨) (ಹಾ. ೬೯, ನು. ೫೨) (ಹಾ. ೭೧, ನು.೭೧) (ಮುಹಾ. ಧ್ವ. ೪೨, ನು. ೩) (ಮುಹಾ. ಧ್ವ. ೪೬, ನು. ೩–೫) (ಮುಹಾ. ಧ್ವ. ೫೯, ನು. ೨೭)

**ಮಾತಾಪಿತರು ಅನುಜನನ್ನಂಜಿಸಿ....ಬಂದವಳೆಂದು:** (ಹಾ. ೨೯, ನು. ೧೨)

ರುಕ್ಮಿಣೀಸ್ವಯಂವರದ ಕತೆ. ರುಕ್ಮಿಣಿ ತಂದೆ, ತಾಯಿ ಹಾಗೂ ಅಣ್ಣನಿಗೆ ತಿಳಿಯದಂತೆ ಕೃಷ್ಣನಿಗೆ ಪತ್ರಬರೆದು ಅವನನ್ನು ಕರೆಸಿಕೊಂಡವಳೆಂಬ ದೂರು.
(ಹಾ. ೯೦) (ಹಾ. ೧೨೮, ಪ.) (ಮುಹಾ. ಧ್ವ. ೪೨, ನು. ೨) (ಮುಹಾ.ಧ್ವ. ೪೪, ನು. ೩–೫)

**ಕಂಡರಿಯೆ ಎನ್ನ ಪರಾಕ್ರಮ ಖಾಂಡವವನ ದಹಿಸಿದೆನೆ:** (ಹಾ. ೩೦, ನು. ೩)

ಅರ್ಜುನ ಅಗ್ನಿಯ ಅಜೀರ್ಣವನ್ನು ಹೋಗಲಾಡಿಸಲು ಇಂದ್ರನನ್ನು ಎದುರಿಸಿ, ಖಾಂಡವವನ ದಹನ ಮಾಡಿಸಿದ. ಮಹಾಭಾರತದ ಆದಿಪರ್ವದಲ್ಲಿಯ ಒಂದು ಪ್ರಸಂಗವಿದು.

**ಸುರಪತಿಗೆ ಪತ್ರವನೆ....ಕಾರಣೇನೊ:** (ಹಾ. ೩೦, ನು. ೮)

ಒಮ್ಮೆ, ಶ್ರೀ ವೇದವ್ಯಾಸರ ಹೇಳಿಕೆಯಂತೆ ಗಾಂಧಾರಿಯು ಮಣ್ಣಿನಿಂದ ಮಾಡಿದ ಆನೆಯಮೇಲೆ ಗೌರಿಯನ್ನು ಕೂಡಿಸಿ ವಿಜೃಂಭಣೆಯಿಂದ ಪೂಜೆಮಾಡಿದಳು. ಸಮಾರಂಭಕ್ಕೆ ಕುಂತಿಯನ್ನು ಆಹ್ವಾನಿಸಲಿಲ್ಲ. ದುಃಖಿತಳಾದ ಆಕೆ, ತನಗಾದ ಅಪಮಾನವನ್ನು ತನ್ನ ಮಕ್ಕಳೆದುರಿನಲ್ಲಿ ಹೇಳಲು, ಅರ್ಜುನನು ಇಂದ್ರಲೋಕದಿಂದ ಐರಾವತವನ್ನೇ ತರಿಸಿ ಕುಂತಿಯ ವ್ರತವನ್ನು ಸಾಂಗೋಪಾಂಗವಾಗಿ ನಡೆಸುವುದಾಗಿ ಪ್ರತಿಜ್ಞೆ ಮಾಡಿ, ಅದರಂತೆ ಇಂದ್ರನಿಗೆ ಪತ್ರಬರೆದು, ಭೂಮಿಸ್ವರ್ಗಲೋಕಗಳಿಗೆ ಶರಮಯವಾದ ಮಾರ್ಗವನ್ನು ರಚಿಸಿ ಐರಾವತವನ್ನು ಭೂಮಿಗೆ ಇಳಿಸಿದನು.

('ಐರಾವತ' ಸಂ.ಆರ್.ಎಸ್. ಪಂಚಮುಖಿ)

(ಹಾ. ೭೫, ನು. ೨೨)

**ಮಗನಕೈಯಿಂದ ವಧೆಯು ನೀತವೆ:** (ಹಾ. ೩೦, ನು. ೧೬)

ಅಶ್ವಮೇಧಯಾಗದ ಕುದುರೆಯ ಬೆಂಗಾವಲಿಗೆ ಹೋಗುತ್ತಿದ್ದ ಅರ್ಜುನನ

ತನ್ನ ಮಗನಾದ ಬಭ್ರುವಾಹನನಿಂದ ಹತನಾದಾಗ ಉಲೂಪಿ ಸಂಜೀವಕರತ್ನದಿಂದ ಅವನನ್ನು ಬದುಕಿಸಿದಳು. (ಪುನಾಚೂ. ಪು. ೨೬)

**ಐದುಮಂದ್ಯೆನ್ನಲ್ಲಿ ಐದಾರೆ:** (ಹಾ. ೩೨, ನು. ೧೧)

ಪಂಚೇಂದ್ರಿಯಗಳ ಇರುವಿಕೆ. ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ಜಿಹ್ವೆ, ನಾಸಿಕ.

**ಆರುಮಂದ್ಯರಿಗಳು:** (ಹಾ. ೩೨, ನು. ೧೨)

ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಮೋಹ, ಲೋಭ, ಮದ, ಮತ್ಸರಗಳು.

**ಹತ್ತುಮಂದಿ:** (ಹಾ. ೩೨, ನು. ೧೩)

ದಶೇಂದ್ರಿಯಗಳಾದ ಶ್ರೋತ್ರ, ತ್ವಕ್ಕು, ಚಕ್ಷುಸ್ಸು. ಜಿಹ್ವೆ, ನಾಸಿಕ (ಈ ಐದು ಬುದ್ಧೀಂದ್ರಿಯಗಳು), ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ (ಈ ಐದು ಕರ್ಮೇಂದ್ರಿಯಗಳು). (ಶ್ರೀನಿ. ಪು. ೬೩)

**ಅಂಬರೀಷ್ವರದ:** (ಹಾ. ೩೨, ನು. ೨೦)

ನಭಗನ ಮಗನೂ ನಾಭಾಗನ ಮೊಮ್ಮಗನೂ ಆದ, ಒಬ್ಬ ವಿಷ್ಣುಭಕ್ತ ಅಂಬರೀಷ. ಒಮ್ಮೆ ಏಕಾದಶೀವ್ರತಪರಾಯಣನಾಗಿದ್ದ ಇವನ ವ್ರತಕ್ಕೆ ಭಂಗ ವನ್ನುಂಟುಮಾಡುವ ಉದ್ದೇಶದಿಂದ ಇವನಲ್ಲಿಗೆ ಬಂದ ದೂರ್ವಾಸಮುನಿ ಇವನನ್ನು ಶಪಿಸಿದನು. ವಿಷ್ಣುಭಕ್ತನಾದ ಅಂಬರೀಷನ ರಕ್ಷಣೆಗೆ ಚಕ್ರಾಯುಧ ಧಾವಿಸಿ ಬಂತು. ಕೊನೆಗೆ ಮುನಿ ಅಂಬರೀಷನನ್ನೇ ಮರೆಹೊಕ್ಕು ಪಾರಾಗಬೇಕಾಯಿತು.

(ಪುನಾಚೂ. ಪು. ೧೯)

(ಹಾ. ೧೧೩, ನು. ೬) (ಹಾ. ೧೨೦, ನು. ೧) (ಮುಹಾ. ಧ್ವ. ೬, ನು. ೨)

**ತಿರುಕ ತಂದವಲಕ್ಕಿ ಕರಕರನೆ ನೀ ಮುಕ್ಕಿ....ದಾರಿದ್ರ್ಯ ಕಳೆದದ್ದು:**

(ಹಾ. ೩೨, ನು. ೨೪)

ಕೃಷ್ಣನ ಬಾಲ್ಯದ ಸಹಪಾಠಿಯಾಗಿದ್ದ ಕುಚೇಲ (ಸುದಾಮ) ಕಡುಬಡವ. ಒಮ್ಮೆ ಅವನು ತನ್ನ ಹೆಂಡತಿಯ ಒತ್ತಾಯದಿಂದ ಕೃಷ್ಣನನ್ನು ಕಾಣಲು ಸ್ವಲ್ಪ ಅವಲಕ್ಕಿಯನ್ನು ತೆಗೆದುಕೊಂಡು ಅವನ ಅರಮನೆಗೆ ಹೊರಟನು. ಕೃಷ್ಣ ಅವನು ತಂದಿದ್ದ ಅವಲಕ್ಕಿಯನ್ನು ಪ್ರೀತಿಯಿಂದ ತಿಂದು ಬದಲಿಗೆ ಅಷ್ಟೈಶ್ವರ್ಯಗಳನ್ನೂ ಅನುಗ್ರಹಿಸಿದನು. (ಪುನಾಚೂ. ಪು. ೧೧೪)

(ಹಾ. ೬೨, ನು.೫) (ಹಾ. ೮೪,ನು. ೪) (ಹಾ. ೧೦೭, ನು. ೨) (ಹಾ. ೧೨೦, ನು. ೧) (ಹಾ. ೧೨೨ (ಸು.) ನು.೪) (ಹಾ. ೧೩೦)

**ನಿಲ್ಲಬೇಕೆಂದಿಟ್ಟಕಲ್ಲು ಕೊಟ್ಟವಗೆ ಕೈವಲ್ಯ....ಕರುಣಾಳು:**
(ಹಾ. ೩೨, ನು. ೨೫)

ಹರಿಗೆ ನಿಲ್ಲಲು ಇಟ್ಟಿಕಲ್ಲು ಕೊಟ್ಟವನು ಪುಂಡರೀಕನೆಂಬ ಭಕ್ತ. ಒಮ್ಮೆ ಅವನನ್ನು ಪರೀಕ್ಷಿಸಲು ಬಂದ ಶ್ರೀಹರಿಗೆ ಶ್ರದ್ಧೆಯಿಂದ ತಂದೆ ತಾಯಿಗಳ ಸೇವೆಯಲ್ಲಿ ತೊಡಗಿದ್ದ ಪುಂಡರೀಕ ತಾನು ಅವರ ಸೇವೆಯನ್ನು ಮುಗಿಸಿ ಬರುವವರೆಗೂ ನಿಂತಿರಬೇಕೆಂದು ಒಂದು ಇಟ್ಟಿಗೆಯನ್ನು ಹರಿಯುತ್ತ ಎಸೆದನಂತೆ. ಹರಿ ಅವನ ಭಕ್ತಿಗೆ ಮೆಚ್ಚಿ, ಅವನ ಆಜ್ಞೆಯಂತೆ ಇಟ್ಟಿಗೆಯ ಮೇಲೆ ನಿಂತು ಅವನನ್ನು ಅನುಗ್ರಹಿಸಿದನಂತೆ. ಪಂಢರಾಪುರದ ಪಾಂಡುರಂಗ ಇಟ್ಟಿಗೆಯ ಮೇಲೆ ನಿಂತಿರುವುದಕ್ಕೆ ಈ ಕತೆ ಪ್ರಚಲಿತವಿದೆ.
(ಹಾ. ೮೩, ನು. ೧–೨)

**ಅಕ್ರೂರಗೆ ನದಿಯಲ್ಲಿ ನಿನ್ನ ನಿಜರೂಪ ತೋರಿದ್ದು:** (ಹಾ. ೩೨, ನು. ೨೬)

ಶ್ವಫಲ್ಕ ಮತ್ತು ಗಾಂಧಿನಿಯರ ಮಗನಾದ ಅಕ್ರೂರ ಕಂಸನ ಆಪ್ತಮಂತ್ರಿಗಳಲ್ಲಿ ಒಬ್ಬನು. ಕಂಸನ ಆಜ್ಞೆಯಂತೆ ಕೃಷ್ಣ ಬಲರಾಮರನ್ನು ಮಥುರೆಗೆ ಕರೆತರುವಾಗ ಯಮುನಾನದಿಯಲ್ಲಿ ಸ್ನಾನಮಾಡುತ್ತಿದ್ದ ಅಕ್ರೂರನಿಗೆ ಕೃಷ್ಣ ತನ್ನ ದಿವ್ಯ ರೂಪವನ್ನು ತೋರಿದನು. (ಪುನಾಚೂ. ಪು. ೧–೨)
(ಹಾ. ೬೭, ನು. ೫) (ಹಾ. ೮೬, ನು. ೩೬–೩೭–೫೭) (ಹಾ. ೧೧೩, ನು. ೬)
(ಹಾ. ೧೨೦, ನು. ೨) (ಹಾ. ೧೨೨ (ಸು), ನು. ೪) (ರಕ. ಧ್ವ. ೨೯, ನು. ೬)
(ಸುಕ. ಧ್ವ. ೯, ನು. ೧) (ಸುಕ. ಧ್ವ. ೨೦, ನು. ೨)

**ಸಂಗ್ರಾಮದಿ ಬಂದಂಥ....ಉಳುಹಿದಿ:** (ಹಾ. ೩೨. ನು. ೩೦)

ಕರ್ಣಾರ್ಜುನರಿಗೆ ಘೋರಯುದ್ಧ ನಡೆಯುತ್ತಿದ್ದಾಗ ಕರ್ಣ ಅರ್ಜುನನ ಕೊರಳಿಗೆ ಗುರಿಯಿಟ್ಟು ಪ್ರಯೋಗಿಸಿದ ನಾಗಾಸ್ತ್ರವನ್ನು ಕೃಷ್ಣ ಅರ್ಜುನನ ರಥವನ್ನು ನೆಲಕ್ಕೆ ಕುಸಿಯುವಂತೆ ಮಾಡುವ ಮೂಲಕ ಅದು ಅರ್ಜುನನ ಕಿರೀಟಕ್ಕೆ ಮಾತ್ರ ತಾಗುವಂತೆ ಮಾಡಿದ. (ಪುನಾಚೂ. ಪು. ೧೫೦)
(ಮುಹಾ. ಧ್ವ. ೫೮, ನು. ೩)

**ಯಮಳಾರ್ಜುನರ ಕಿತ್ತಿ....ಪುರಕಾಗ:** (ಹಾ. ೩೨, ನು. ೩೨)

ಕುಬೇರನ ಮಕ್ಕಳಾದ ನಳಕೂಬರ ಮತ್ತು ಮಣಿಗ್ರೀವರು ಅಹಂಕಾರದಿಂದ ನಾರದರ ಶಾಪಕ್ಕೆ ಗುರಿಯಾಗಿ ಗೋಕುಲದಲ್ಲಿ ಅವಳಿ ಮತ್ತಿಮರಗಳಾಗಿ ಹುಟ್ಟಿದರು. ಬಾಲಕ ಕೃಷ್ಣ, ಯಶೋದೆ ತನ್ನನ್ನು ಕಟ್ಟಿಹಾಕಿದ್ದ ಒರಳಿನ ಸಮೇತ ಆ ಅವಳಿ ಮರಗಳ ಮಧ್ಯೆ ನುಸುಳಿದ. ಆಗ ಆ ಮರಗಳು ಕಡಿದು ಬಿದ್ದು ಕುಬೇರನ ಮಕ್ಕಳಿಗೆ ಶಾಪವಿಮೋಚನೆಯಾಯಿತು. (ಭಾ. ಸ್ಕಂ. ೧೦, ಅ. ೧೦)
(ಹಾ. ೩೮, ನು. ೪) (ಹಾ. ೭೦ (ಉ) ) (ಹಾ. ೭೬, ನು. ೫)

**ಅಡಿಗೆ ಮಾಡುವನ ಕೈಹಿಡಿದ ಹುಟ್ಟಸಂತೆ...ಜಗಕೆಲ್ಲ:** (ಹಾ. ೩೨, ನು. ೩೪)
ಶ್ರೀಹರಿಯೊಬ್ಬನೇ ಸರ್ವಸ್ವತಂತ್ರ. ಜೀವಿಗಳಿಗೆ ದತ್ತ ಸ್ವಾತಂತ್ರ್ಯ ಮಾತ್ರ.

**ಅಣುವ್ರೊಳಗು ನೀನೆ ಪರಮಾಣುವಿನೊಳಗು ನೀನೆ:** (ಹಾ. ೩೨, ನು. ೩೩)
ಅಣೋರಣೀಯಾನ್ಮಹತೋಮಹೀಯಾನ್–ಎಂಬ ತೈತ್ತಿರೀಯ ಉಪನಿಷತ್ತಿನ ಭಾವ.

**ಘಟದ ಒಳಗಿದ್ದ...ಜಗದೀಶ:** (ಹಾ. ೩೨, ನು. ೩೮)
ಶ್ರೀಹರಿ ಘಟಪಟಾದಿ ತತ್ವಗಳಲ್ಲಿ ವ್ಯಾಪ್ತ (ಸರ್ವವ್ಯಾಪ್ತ)

**ಮೂರು ಕಣ್ಣಲಿ ರುದ್ರ ನಿನನೋಡಿ....ಪರ್ಯಂಕಪದವಿಯು:** (ಹಾ. ೩೨, ನು. ೪೧)
ರುದ್ರದೇವರು ಹತ್ತು ಮಹಾಕಲ್ಪಗಳಲ್ಲಿ ಲವಣಸಮುದ್ರದಲ್ಲಿ ಮುಳುಗಿ ಧ್ಯಾನೋಪಾಸನೆ ಮಾಡುತ್ತ ತಪಸ್ಸುಮಾಡಿ, ೧೦೦ ನೆಯ ಕಲ್ಪದಲ್ಲಿ ಶೇಷ ಪದವಿಯನ್ನು ಪಡೆಯುತ್ತಾರೆ. (ಶ್ರೀ ಹರಿಭಜನಾಮೃತಸಾರ ಪು. ೪೩)

**ಪ್ರಳಯ ಕಾಲದಿ....ನಿನ್ನ ಗುಣಗಳ:** (ಹಾ. ೩೨, ನು. ೪೫)

"ಯತ್ಪಾದಸ್ಯ ನಖಾಗ್ರೇಣ ಜಗತ್ಸೃಷ್ಟ್ಯಾದಿ ಕಾರಿಣಿ
ದೃಷ್ಟ್ವಾಪಿ ಶ್ರೀರ್ನೈವ ಜಾನಾತಿ ಹ್ಯನಂತಾಪಿ ವಿಚಿತ್ರತಾಂ"

ಲಕ್ಷ್ಮೀದೇವಿ ಕೂಡ ಶ್ರೀಹರಿಯ ಗುಣಗಳನ್ನು ತಿಳಿಯಲು ಅಶಕ್ತಳು. ಅವಳು ಕೇವಲ ಅವನ ಕಿರುಬೆರಳ ನಖಾಗ್ರದಿಂದ ಜಗತ್ತಿನ ಸೃಷ್ಟಿ ಮುಂತಾದವುಗಳಾಗುವುದನ್ನುಮಾತ್ರ ಬಲ್ಲಳು.

**ಅನಂತಾಸನ, ಶ್ವೇತದ್ವೀಪ, ವೈಕುಂಠ:** (ಹಾ. ೩೨, ನು. ೪೬)
ಇವು ಮೂರೂ ಹರಿಯ ಆವಾಸಸ್ಥಾನಗಳು.

**ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ:** (ಹಾ. ೩೨, ನು. ೫೫)
ಮಾಧ್ವಸಂಪ್ರದಾಯದ ಪ್ರಕಾರ ಇವು ಮುಕ್ತಿಯ ನಾಲ್ಕು ಬಗೆಗಳು. **ಸಾಷ್ಟಿ೯** ಎಂಬ ಐದನೆಯ ವಿಧವನ್ನೂ ಹೇಳುವುದುಂಟು.

**ಜೀವ ಜೀವರು ಭೇದ....ಭೇದಾದರೆ:** (ಹಾ. ೩೨, ನು. ೬೭)
ಜೀವ–ಜೀವ, ಜೀವ-ಜಡ, ಜಡ–ಜಡ, ಜಡ–ಈಶ, ಜೀವ–ಈಶರಿಗೆ ಭೇದ–ಇವೇ **ಪಂಚಭೇದಗಳು.**

ಅನ್ನಮಯ, ಪ್ರಾಣಮಯ, (ಮನೋಮಯ, ವಿಜ್ಞಾನಮಯ) ಆನಂದಮಯ: (ಹಾ. ೩೨, ನು. ೬೮)–ಇವೇ **ಪಂಚಕೋಶಗಳು.**

(ಹಾ. ೩೨, ನು. ೬೪–೭೦) ಶ್ರೀಹರಿ ಕರುಣಾ ಸಮುದ್ರ; ಜರಾಜನ್ಮಾದಿ ಕರ್ಮರಹಿತ ಇತ್ಯಾದಿ ತತ್ವಗಳು.

**ಮೂರು ಜನ್ಮದಿ ನಿನ್ನ....ನಿಲಿಸಿದೆ:** (ಹಾ. ೩೨, ನು. ೮೫)

ಸನಕಾದಿ ಮುನಿಗಳಿಂದ ಭೂಲೋಕದಲ್ಲಿ ರಾಕ್ಷಸರಾಗಿ ಜನಿಸುವಂತೆ ಶಾಪವನ್ನು ಪಡೆದ ಜಯವಿಜಯರು ಮೊದಲನೆಯ ಜನ್ಮದಲ್ಲಿ ಹಿರಣ್ಯಾಕ್ಷ–ಹಿರಣ್ಯಕಶಿಪುಗಳಾಗಿ ಹುಟ್ಟಿ ವರಾಹ ನೃಸಿಂಹರಿಂದ ಹತರಾದರು. ಎರಡನೆಯ ಜನ್ಮದಲ್ಲಿ ರಾವಣ–ಕುಂಭಕರ್ಣರಾಗಿ ಜನಿಸಿ ಶ್ರೀರಾಮನಿಂದ ಮಡಿದರು. ಮೂರನೆಯ ಜನ್ಮದಲ್ಲಿ ಶಿಶುಪಾಲ ದಂತವಕ್ತ್ರರಾಗಿ ಜನಿಸಿ ಕೃಷ್ಣನಿಂದ ಹತರಾದರು. (ಭಾ. ಸ್ಕಂ. ೩, ಅ. ೧೬)

**ಕುಂಭಕರ್ಣ:** (ಹಾ. ೩೨, ನು. ೮೬)

ಒಬ್ಬ ರಾಕ್ಷಸ. ರಾವಣನ ತಮ್ಮ. ರಾಮರಾವಣರಿಗೆ ಯುದ್ಧ ಪ್ರಾಪ್ತವಾದಾಗ ರಾವಣನ ಆಜ್ಞೆಯಂತೆ ನಿದ್ರೆಯಿಂದ ಎಬ್ಬಿಸಲ್ಪಟ್ಟ ಕುಂಭಕರ್ಣ ಸೀತೆಯನ್ನು ರಾಮನಿಗೆ ಒಪ್ಪಿಸುವಂತೆ ರಾವಣನಿಗೆ ಬಹುವಾಗಿ ಹೇಳಿದ. ರಾವಣ ಒಪ್ಪದಿರಲು ಯುದ್ಧ ರಂಗವನ್ನು ಹೊಕ್ಕು ಭಯಂಕರವಾಗಿ ಯುದ್ಧಮಾಡಿ, ರಾಮನಿಂದ ಹತನಾಗಿ ಸದ್ಗತಿಯನ್ನು ಪಡೆದನು. (ಪುನಾಚೂ. ಪು. ೧೨೨–೨೩)

**ದಂತವಕ್ತ್ರ:** (ಹಾ. ೩೨. ನು. ೮೬)

ಇವನು ವೃದ್ಧಶರ್ಮ–ಶ್ರುತದೇವಿಯರ ಮಗ. ಕೃಷ್ಣನ ಸೋದರಳಿಯ. ಶಿಶುಪಾಲನ ವಧೆಯ ಅನಂತರ ಕೃಷ್ಣನೊಡನೆ ಯುದ್ಧಮಾಡಿ ಕೃಷ್ಣನ ಕೌಮೋದಕಿಯೆಂಬ ಗದೆಗೆ ಪ್ರಾಣವನ್ನು ಅರ್ಪಿಸಿದನು. (ಪುನಾಚೂ. ಪು. ೨೮೫)

**ದ್ವಿಜಗೆ ಸಡಗರದಿ ಕೊಟ್ಟ್ಯೋ ಸುತನನು:** (ಹಾ. ೩೨, ನು. ೮೭)

ಪುತ್ರಶೋಕದಿಂದ ಮರುಗುತ್ತಿದ್ದ ಶ್ರುತದೇವನೆಂಬ ಬ್ರಾಹ್ಮಣನನ್ನು ಸಂತೋಷಪಡಿಸುವ ಸಲುವಾಗಿ ಕೃಷ್ಣ ಶ್ವೇತದ್ವೀಪಕ್ಕೆ ಹೋಗಿ ಆ ಬ್ರಾಹ್ಮಣನ ಮಡಿದ ಮಗನನ್ನು ಬದುಕಿಸಿ ತಂದನು. (ಪುನಾಚೂ. ಪು. ೧೫೨)

**ಆರುಮಂದಿ ಸುತರ ತೋರಿ ದೇವಕಿಗೆ:** (ಹಾ. ೩೨, ನು. ೮೭)

ದೇವಕಿ ತನ್ನ ಮಡಿದ ಆರುಮಂದಿ ಗಂಡುಮಕ್ಕಳನ್ನು ನೋಡಬೇಕೆಂದು ಬಯಸಿದಾಗ ಕೃಷ್ಣ ಅವರನ್ನೆಲ್ಲ ಬರಮಾಡಿ ತೋರಿಸಿದನು. (ಭಾ. ಸ್ಕಂ. ೧೦, ಅ. ೮೬)

**ಬೆಟ್ಟಲಿ ಗಿರಿನೆತ್ತಿ ಶಕ್ರನ್ನ ಮದವ ಮುರಿದೆಯೊ:** (ಹಾ. ೩೨, ನು. ೯೨)

ಕೃಷ್ಣ ಗೋವರ್ಧನ ಗಿರಿಯೆತ್ತಿದ ಪ್ರಸಂಗ. ಯಾದವರೆಲ್ಲ ಕೃಷ್ಣನ ಮಾತಿನಂತೆ

ದೇವೇಂದ್ರನಿಗೆ ಪೂಜೆ ಸಲ್ಲಿಸುವ ಬದಲು ಗೋವರ್ಧನ ಪರ್ವತಕ್ಕೂ, ಗೋ, ಬ್ರಾಹ್ಮಣರಿಗೂ ಪೂಜೆ ಸಲ್ಲಿಸಲು, ಕೋಪಗೊಂಡ ದೇವೇಂದ್ರ ಸಿಡಿಲು ಗುಡುಗುಗಳಿಂದ ಕೂಡಿದ ಭಯಂಕರ ಮಳೆಯನ್ನು ಸುರಿಸಿದನು. ಆಗ ಕೃಷ್ಣ ಗೋವರ್ಧನ ಗಿರಿಯನ್ನೇ ಎತ್ತಿ ಕೊಡೆಯಂತೆ ಹಿಡಿದು, ಬೆದರಿದ ಯಾದವವೃಂದ, ದನಕರುಗಳೆಲ್ಲವನ್ನೂ ಮಳೆಗಾಳಿಗಳಿಂದ ರಕ್ಷಿಸುತ್ತಾನೆ. (ಭಾ. ಸ್ಕಂ. ೧೦, ಅ. ೨೫)
(ಹಾ. ೭೬, ನು. ೧೦) (ಹಾ. ೯೯, ನು. ೬) (ಹಾ. ೧೦೭, ನು. ೧) (ಹಾ. ೧೨೨ (ಸು), ನು. ೨) (ಹಾ. ೧೩೦, ನು. ೧೨) (ಮುಹಾ. ಧ್ರು. ೯, ನು. ೩) (ಮುಹಾ. ಧ್ರು. ೭೫, ನು. ೧) (ಮಹಾ. ಧ್ರು. ೨೨, ನು. ೮)

**ವ್ಯತ್ಯಾಸದಿಂದ್ವಸ್ತ್ರ ಇಟ್ಟು ಶೃಂಗಾರವಾಗಿ....ಬಗೆಯೋನು:**
(ಹಾ. ೩೨,ನು. ೯೫)

ಕೃಷ್ಣನ ಕೊಳಲಗಾನಕ್ಕೆ ಮನಸೋತು ಆತುರದಿಂದ ಅಸ್ತವ್ಯಸ್ತವಾಗಿ ಅಲಂಕರಿಸಿಕೊಂಡು ಬಂದ ಗೋಕುಲದ ಗೋಪಿಯರ ಸಮೂಹದಿಂದ ಕೃಷ್ಣ ಮರೆಯಾಗುತ್ತಾನೆ. ಸ್ವಲ್ಪಕಾಲದ ಅನಂತರ ಮತ್ತೆ ಗೋಚರನಾಗುತ್ತಾನೆ.
(ಭಾ. ಸ್ಕಂ. ೧೦, ಅ. ೨೯-೩೨)

**ತನು ತಮ್ಮ ಯೋಗ್ಯತೆಯು....ವಿಚಿತ್ರ ಫಲವನು:** (ಹಾ. ೩೨, ನು.೧೦೪)
ಮಧ್ವಸಿದ್ಧಾಂತದ ಪ್ರಕಾರ ಜೀವಿಗಳಲ್ಲಿ ಮೂರುವಿಧ. ಮುಕ್ತಿಯೋಗ್ಯರು, (ಉತ್ತಮರು,). ನಿತ್ಯಸಂಸಾರಿಗಳು (ಅಧಮರು) ಮತ್ತು ತಮೋಯೋಗ್ಯರು (ಅಧಮಾಧಮರು), ಹೀಗೆ ಸತ್ವ, ರಜ, ತಮೋಗುಣಗಳಿಂದ ಕೂಡಿದ ಜೀವರು ಅವರವರ ಯೋಗ್ಯತೆಗೆ ತಕ್ಕಂತಹ ಫಲವನ್ನು ಉಣ್ಣುವರು.

**ನವವಿಧಭಕ್ತಿ:** (ಹಾ. ೩೨, ನು. ೧೦೯)

ಭಾಗವತದ ಪ್ರಕಾರ ಭಕ್ತಿಯಲ್ಲಿ ಒಂಬತ್ತು ವಿಧ. ಶ್ರವಣಭಕ್ತಿ, ಕೀರ್ತನಭಕ್ತಿ, ಸ್ಮರಣಭಕ್ತಿ, ಪಾದಸೇವನಭಕ್ತಿ, ಅರ್ಚನಭಕ್ತಿ, ವಂದನಭಕ್ತಿ, ದಾಸ್ಯಭಕ್ತಿ, ಸಖ್ಯಭಕ್ತಿ ಮತ್ತು ಆತ್ಮನಿವೇದನಭಕ್ತಿ.
(ಹಾ. ೩೩, ನು. ೨೭)ರಲ್ಲಿ ಮೊದಲನೆಯ ಸಾಲನ್ನು 'ಹಚ್ಚಿಟ್ಟ [ದೀಪ] ಗಂಧಾಕ್ಷತೆ ಪುಷ್ಪಗಳ' ಎಂದು ಓದಿಕೊಳ್ಳಬೇಕು.
(ಹಾ. ೩೩, ನು. ೩೦.) ಅರವಟ್ಟಿ-ಅರೆಹೊಟ್ಟೆ(?)

**ಹದಿನಾಲ್ಕು ಲೋಕದ ವಾಸ:** (ಹಾ. ೩೮, ನು. ೫)

ಭಗವಂತನ ಹೊಟ್ಟೆಯಲ್ಲಿ ಭೂರ್ಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಅತಲ, ವಿತಲ, ಸುತಲ, ಮಹಾತಲ,

ತಲಾತಲ, ರಸಾತಲ, ಪಾತಾಳಗಳೆಂಬ ಹದಿನಾಲ್ಕು ಲೋಕಗಳೂ ಅಡಗಿವೆ ; ಅವನು ಆ ಹದಿನಾಲ್ಕು ಲೋಕಗಳಲ್ಲೂ ವ್ಯಾಪ್ತನೆಂಬ ನಂಬಿಕೆ.
(ಹಾ. ೯೧, ನು. ೭) (ಹಾ. ೧೦೦, ನು. ೮) (ಹಾ. ೧೨೧, ನು. ೧೯) (ಮುಹಾ. ಧ್ವ. ೫೯, ನು. ೯) (ರಕ. ಧ್ವ. ೨೩, ನು. ೮)

**ಮುಚುಕುಂದ ವರದ:** (ಹಾ. ೩೯, ಪ.)

ಸೂರ್ಯವಂಶದ ಮಾಂಧಾತನ ಮಗ ಮುಚುಕುಂದ. ಅಂಬರೀಷನ ಸಹೋದರ. ಕೃಷ್ಣನನ್ನು ಕೊಲ್ಲಲು ಬೆನ್ನಟ್ಟಿಬಂದ ಕಾಲಯವನನು ಈ ಮುಚುಕುಂದನಿಂದ ಭಸ್ಮವಾದ. ಮುಚುಕುಂದ ಕೃಷ್ಣನ ಅನುಗ್ರಹಕ್ಕೆ ಪಾತ್ರನಾದ. (ಪುನಾಚೂ. ಪು. ೧೦೭–೧೦೮) (ಹಾ. ೧೨೦, ಪ.) (ಹಾ. ೧೨೭, ನು. ೨೦) (ಮುಹಾ. ಧ್ವ. ೨೯, ಪ.) (ಮುಹಾ. ಧ್ವ. ೫೯, ನು. ೨೩)

**ಕೌಸ್ತುಭ:** (ಹಾ. ೪೦, ನು. ೨)

ಒಂದು ರತ್ನ. ದೇವದಾನವರು ಕ್ಷೀರ ಸಮುದ್ರವನ್ನು ಮಥಿಸಿದಾಗ ಹುಟ್ಟಿದ ಇದನ್ನು ವಿಷ್ಣು ತನ್ನ ಎದೆಯಲ್ಲಿ ಧರಿಸಿದನು. (ಪುನಾಚೂ. ಪು. ೧೬೭)
(ಹಾ. ೧೨೧, ನು. ೫) (ಮುಹಾ. ಧ್ವ. ೪೧, ನು. ೩)

**ಶೀಘ್ರದಲ್ಲಿ ಜರೆಸುತನ ವಧೆಮಾಡಿ:** (ಹಾ. ೪೦, ನು. ೩)

ಮಗಧದೇಶದ ಅರಸ ಜರಾಸಂಧ; ಜರೆಯೆಂಬ ರಾಕ್ಷಸಿಯ ಮಗ. ಕೃಷ್ಣ ಭೀಮನ ಮೂಲಕ ಜರಾಸಂಧನನ್ನು ಕೊಲ್ಲಿಸಿ ಅವನ ಮಗ ಸಹದೇವನಿಗೆ ಪಟ್ಟಗಟ್ಟಿದ. (ಪುನಾಚೂ. ಪು. ೧೪೬)
(ಹಾ. ೫೬, ಪ.) (ಹಾ. ೯೦, ನು. ೨) (ಹಾ. ೧೦೩, ನು. ೨)

**ಬಿಲ್ಲನೆತ್ತಿದ್ದ ಬಿರುದಾಂಕರಾಮ:** (ಹಾ. ೪೧, ನು. ೫)

ಹರಿ ರಾಮಾವತಾರದಲ್ಲಿ ಶಿವಧನುಸ್ಸನ್ನೆತ್ತಿ ಸೀತೆಯನ್ನು ವರಿಸಿದ-ರಾಮಾಯಣದ ಬಾಲಕಾಂಡದ–ಪ್ರಸಂಗ.
(ಹಾ. ೧೧೪, ನು. ೧)

**ಲಿಂಗ ಭಂಗಬಡಿಸೊ:** (ಹಾ. ೪೪, ನು. ೧)

ಮಾಧ್ವರ ಪ್ರಕಾರ ನಮ್ಮ ಈ ಶರೀರ ಭಕ್ತಿಸಾಧನೆಗೆ ಸಾಧನ ಮಾತ್ರ. (ಸಾಧನ ಶರೀರ) ಇದನ್ನು ಭಂಗಪಡಿಸಿ ಒಳಗಿನ ಅಂತರಾತ್ಮನನ್ನು ಪರಮಾತ್ಮನ ಸಾನ್ನಿಧ್ಯಕ್ಕೆ ಕಳುಹಿಸಬೇಕೆಂಬ ಪ್ರಾರ್ಥನೆಯಿದು.

**ಕಡಲೊಳಗಿದ್ದು ಬಂದ್ದ ಡಗದಿಂದಲಿ....ಕೃಷ್ಣನೀ:** (ಹಾ. ೪೮, ನು. ೨)

ದ್ವಾರಕೆಯಿಂದ ಹೊರಟು ಉಡುಪಿಯ ಸಮೀಪದ ಮಲ್ಪೆಯ ತೀರಕ್ಕೆ ಬಂದು

ಅಲ್ಲಿ ಬಿರುಗಾಳಿಗೆ ಸಿಕ್ಕಿ ತತ್ತರಿಸುತ್ತಿದ್ದ ಹಡಗನ್ನು ರಕ್ಷಿಸಿ, ಮಧ್ವಾಚಾರ್ಯರು ಅದರ ಒಡೆಯನಿಂದ ಕೃಷ್ಣನ ಮೂರ್ತಿಯೊಂದನ್ನು ಪಡೆದು ಉಡುಪಿ ಕ್ಷೇತ್ರದಲ್ಲಿ ಪ್ರತಿಷ್ಠಿಸಿದ ರೆಂದು ಪ್ರತೀತಿ.
(ಹಾ. ೯೧, ನು. ೧೨)

**ಮಧು :** (ಹಾ. ೫೬, ನು. ೨)

ಮಧು ಒಬ್ಬ ರಾಕ್ಷಸ. ವಿಷ್ಣುವಿನ ಕರ್ಣಮಲದಿಂದ ಜನಿಸಿದವನು. ಕೈಟಭ ನೆಂಬುವನು ಇವನ ತಮ್ಮ. ಇವರಿಬ್ಬರೂ ಜನಿಸಿದೊಡನೆ ವಿಷ್ಣುವಿನ ನಾಭಿಯಲ್ಲಿದ್ದ ಬ್ರಹ್ಮನನ್ನು ಪೀಡಿಸತೊಡಗಿದರು. ಎಲ್ಲಿ ಭೂಮಿಯನ್ನು ನೀರು ಆವರಿಸಿಕೊಂಡಿಲ್ಲವೋ ಅಲ್ಲಿ ಅವರನ್ನು ಕೊಲ್ಲಲಾಗುವಂತೆ ಅವರಿಂದಲೇ ವರವನ್ನು ಕೇಳಿಸಿದ ವಿಷ್ಣು ತನ್ನ ತೊಡೆಯ ಮೇಲೆಯೇ ಅವರಿಬ್ಬರನ್ನೂ ಕೊಂದ. (ಪುನಾಚೂ. ಪು. ೧೬೨)
(ಹಾ. ೧೦೬, ಪ.) (ಹಾ. ೧೧೬, ನು. ೪) (ಹಾ. ೧೨೭, ನು. ೧೯) (ಹಾ. ೧೩೭, ನು. ೩) (ಹಾ. ೧೩೯, ನು. ೧) (ಮುಹಾ. ಧ್ವ. ೪೦, ನು. ೪)

**ಸತಿಗೆ ಕಾಟಕಳೆದ್ಯಮುಪುರಿಗೆ ದಾಟಿಸ್ಯೋ ಕೀಚಕನ :** (ಹಾ. ೫೭, ನು. ೩)

ಮಹಾ ಬಲಶಾಲಿಯಾದ ಕೀಚಕ ವಿರಾಟರಾಜನ ಸೇನಾಪತಿ ಹಾಗೂ ಅವನ ರಾಣಿಯಾದ ಸುದೇಷ್ಣೆಯ ತಮ್ಮ. ಇವನಿಗೆ ಸಿಂಹಬಲನೆಂದೂ ಹೆಸರು. ಪಾಂಡವರು ವಿರಾಟರಾಜಧಾನಿಯಲ್ಲಿ ಅಜ್ಞಾತವಾಸದಿಂದಿದ್ದಾಗ ಕೀಚಕ ಸೈರಂಧ್ರಿವೇಷದ ದ್ರೌಪದಿ ಯನ್ನು ನೋಡಿ ಮೋಹಿತನಾದ. ಅವನ ಕಾಟವನ್ನು ತಡೆಯಲಾರದ ದ್ರೌಪದಿ ಗುಟ್ಟಾಗಿ ಭೀಮನಿಗೆ ಹೇಳಿ ಅವನಿಂದ ಕೀಚಕನನ್ನು ಕೊಲ್ಲಿಸಿದಳು.

(ಪುನಾಚೂ. ಪು. ೧೧೨-೧೧೩)

(ಹಾ. ೧೦೩, ನು. ೨) (ಹಾ. ೧೩೯, ನು. ೧) (ಮುಹಾ. ಧ್ವ ೬೩, ನು. ೩) (ಮುಹಾ. ಧ್ವ. ೬೧, ನು. ೩)

**ಪರೀಕ್ಷಕ (ಕ್ಷಿತ ?) ನುಳುಹಿದಂತೆ :** (ಹಾ. ೬೨, ನು. ೧)

ಪರೀಕ್ಷಿತ ಅಭಿಮನ್ಯುವಿನಿಂದ ವಿರಾಟ ಪುತ್ರಿಯಾದ ಉತ್ತರೆಯಲ್ಲಿ ಜನಿಸಿ ದವನು. ತಾಯಿಯ ಗರ್ಭದಲ್ಲಿರುವಾಗಲೇ ಅಶ್ವತ್ಥಾಮನು ಪ್ರಯೋಗಿಸಿದ ಬಾಣದಿಂದ ಹತನಾಗಿ, ಕೃಷ್ಣನ ಮಹಿಮೆಯಿಂದ ಮರಳಿ ಬದುಕಿಕೊಂಡನು. (ಪುನಾಚೂ. ಪು. ೩೩೮)

**ಉದ್ಧವ :** (ಹಾ. ೬೭, ನು. ೧)

ಇವನು ಕೃಷ್ಣನ ಮಂತ್ರಿ, ಸ್ನೇಹಿತ. ಕೃಷ್ಣ ಮಥುರೆಯಲ್ಲಿ ಕಂಸನನ್ನು ಕೊಂದ ವಿಷಯವನ್ನು ಗೋಕುಲದ ಗೋಪಿಯರಿಗೆ ಅರುಹಿದ ದೂತ.

(ಪುನಾಚೂ. ಪು. ೫೮)

(ರಕ. ಧ್ವ. ೨೯, ನು. ೬) (ಸುಕ. ಧ್ವ. ೨೦, ನು. ೨)

**ಜಲನ ಭೇದಿಸಿ :** (ಹಾ. ೬೭, ನು. ೧೯)

ಜಲಂಧರ ಒಬ್ಬ ರಾಕ್ಷಸ. ಅವನ ಹೆಂಡತಿಯಾದ ವೃಂದೆಯು ಪಾತಿವ್ರತ್ಯದ ಬಲದಿಂದ ಅವನು ಅಭೇದ್ಯನಾಗಿದ್ದನು. ವಿಷ್ಣುವು ವೃಂದೆಯು ಪಾತಿವ್ರತ್ಯವನ್ನು ಹಾಳುಮಾಡಲು ಶಿವನು ಜಲಂಧರನನ್ನು ಕೊಂದನು. (ಪುಭಾಕೋ. ಪು. ೨೩೦)

**ಹಯನ ಕೊಂದು :** (ಹಾ. ೬೭, ನು. ೧೯)

ವೇದಗಳನ್ನು ಕದ್ದೊಯ್ದ ಹಯನೆಂಬ ರಾಕ್ಷಸನನ್ನು ಹರಿಯು ಹಯಗ್ರೀವ ಅವತಾರದಿಂದ ಸಂಹರಿಸಿದನು.

**ಕರಡಿಗೆ ಅಳಿಯಾದಾತನೆ ಕೃಷ್ಣ :** (ಹಾ. ೭೦, (ಉ) )

ಕರಡಿಗಳರಾಜ ಜಾಂಬವಂತನ ಮಗಳಾದ ಜಾಂಬವತಿ ಕೃಷ್ಣನ ಅಷ್ಟಭಾರ್ಯೆಯರಲ್ಲೊಬ್ಬಳು. (ಪುಭಾಕೋ. ಪು. ೨೩೩)
(ಹಾ. ೧೩೦, ನು. ೧೦೭) (ಮುಹಾ. ಧ್ವ. ೪೨, ನು.೧)

**ಶ್ಯಾಮಲ, ಭಾರತಿ, ಶಚಿ, ಉಷಾ, ಪಾರ್ವತಿ**–ಈ ಐದೂ ಅಂಶಗಳು ದ್ರೌಪದಿಯಲ್ಲಿವೆಯೆಂಬ ನಂಬಿಕೆ. (ಹಾ. ೭೪, ನು. ೩೧) (ಮುಹಾ. ಧ್ವ. ೨೧, ನು. ೨) (ಮುಹಾ. ಧ್ವ. ೨೩, ನು. ೭) (ಮುಹಾ, ಧ್ವ. ೪೯, ನು. ತಿ)

**ಉಕ್ಕುವೋ ಎಣ್ಣೆಯೊಳಗೆ ನೋಡಿ ಮಾಲೆ ಹಾಕಿದಳಾಗ :** (ಹಾ. ೭೫)

ದ್ರೌಪದೀ ಸ್ವಯಂವರದ ಕತೆ ಮತ್ತು ಪಾಂಡವರ ವನವಾಸ, ಅಜ್ಞಾತವಾಸದ ಪ್ರಸಂಗಗಳ ಪ್ರಸ್ತಾಪ.
(ಮುಹಾ. ಧ್ವ. ೪೩, ನು. ೨) (ರಕ. ಧ್ವ. ೪೫. ನು. ೪) (ಸುಕ. ಕೊನೆಯ ಆರತಿ ಹಾಡು, ನು. ೩)

**ಕೇಶಿ :** (ಹಾ. ೭೬, ನು. ೭)

ಕಂಸನ ಪರಿವಾರಕ್ಕೆ ಸೇರಿದ ಒಬ್ಬ ರಾಕ್ಷಸ. ಇವನು ಕುದುರೆಯ ರೂಪವನ್ನು ತಾಳಿ ಗೋಕುಲದಲ್ಲಿ ಬಲರಾಮಕೃಷ್ಣರನ್ನೂ, ಗೊಲ್ಲ ಹುಡುಗರನ್ನೂ ಪೀಡಿಸಲಾಗಿ ಕೃಷ್ಣ ಇವನನ್ನು ಕೊಂದ. (ಪುನಾಚೂ. ಪು. ೧೫೦)

**ಧೇನು (ಕ) :** (ಹಾ. ೭೬, ನು. ೭)

ಒಬ್ಬ ರಾಕ್ಷಸ. ಕತ್ತೆಯ ರೂಪವನ್ನು ಧರಿಸಿ, ಬೃಂದಾವನದ ಸಮೀಪದ ತಾಳೆ ವನದಲ್ಲಿ ತನ್ನ ಪರಿವಾರದೊಂದಿಗೆ ನೆಲೆಸಿ ಅಲ್ಲಿಗೆ ಬಂದವರನ್ನೆಲ್ಲ ಕೊಂದು ತಿನ್ನುತ್ತಿದ್ದ. ಒಮ್ಮೆ ಗೊಲ್ಲಹುಡುಗರು ತಾಳೆಹಣ್ಣುಗಳನ್ನು ತಿನ್ನುವ ಆಸೆಯಿಂದ ಆ ವನಕ್ಕೆ ಹೋದಾಗ ಧೇನುಕ ಬಲರಾಮನ ಮೇಲೆ ಬಿದ್ದು ಅವನಿಂದ ಹತನಾದ. (ಪುನಾಚೂ. ಪು. ೩೫೮)

**ತೃಣಾವರ್ತ:** (ಹಾ. ೭೬, ನು. ೭)

ಒಬ್ಬ ರಾಕ್ಷಸ. ಕಂಸನ ಪ್ರೇರಣೆಯಂತೆ ಬಲರಾಮ ಕೃಷ್ಣರನ್ನು ಕೊಲ್ಲುವುದಕ್ಕಾಗಿ ಬಿರುಗಾಳಿಯ ರೂಪದಿಂದ ಬಂದು ಅವರಿಬ್ಬರನ್ನೂ ಹೊಡೆದುಕೊಂಡು ಹೋಗುತ್ತಿರುವಲ್ಲಿ ಕೃಷ್ಣ ಗರಿಮಾ ಸಿದ್ಧಿಯಿಂದ ದೇಹವನ್ನು ಭಾರವಾಗಿ ಮಾಡಿ ತೃಣಾವರ್ತನ ಕುತ್ತಿಗೆಯಮೇಲೆ ಗುದ್ದಿ ಅವನನ್ನು ಕೊಂದ.
(ಪುನಾಚೂ. ಪು. ೨೬೮)

**ಕಾಲನೇಮಿ:** (ಹಾ. ೭೬, ನು. ೨೪)

ನೂರು ತಲೆಗಳುಳ್ಳ ಒಬ್ಬ ರಾಕ್ಷಸ. ಇಂದ್ರಪದವಿಯನ್ನೇರಿ ಮೆರೆಯುತ್ತಿದ್ದ ಅವನನ್ನು ವಿಷ್ಣು ಚಕ್ರಾಯುಧದಿಂದ ಸಂಹರಿಸಿದನು. (ಪುನಾಚೂ. ಪು ೧೦೭)
(ಹಾ. ೮೬, ನು. ೬೩)

**ನಾರಾಯಣಭೂತ:** (ಹಾ. ೭೭, ನು. ೨)

ದಕ್ಷಿಣ ಕನ್ನಡ ಜಿಲ್ಲೆಯ ನಾರಳ ಎಂಬಲ್ಲಿದ್ದ ನಾರಾಯಣಾಚಾರ್ಯನೆಂಬ ಬ್ರಾಹ್ಮಣ ವಾದಿರಾಜರ ಶಾಪಕ್ಕೊಳಗಾಗಿ ಬ್ರಹ್ಮರಾಕ್ಷಸನಾಗಿ ಅವರ ಸೇವೆ ಮಾಡುತ್ತಿದ್ದನು. (ಭಾಶ್ರೀಗು. ಪು. ೧೫೭–೧೬೦)

**ರಾಘವೇಂದ್ರರು:** (ಹಾ. ೭೮)

೧೭ನೇ ಶತಮಾನದಲ್ಲಿದ್ದ ಮಾಧ್ವಪರಂಪರೆಯ ಯತಿಗಳಾದ ಇವರು ಮಂಚಾಲಿಯ ರಾಯರೆಂದು ಪ್ರಸಿದ್ಧರಾಗಿದ್ದು ಇಂದಿಗೂ ಭಕ್ತರ ಅಭೀಷ್ಟವನ್ನು ಸಲ್ಲಿಸುತ್ತಿರುವರೆಂಬ ನಂಬಿಕೆಯಿದೆ. ಪರಿಮಳಾಚಾರ್ಯರೆಂದು ಪ್ರಸಿದ್ಧರಾದ ಇವರು ಪುರಂದರಾದಿ ಹರಿದಾಸರ ಗುಂಪಿಗೂ, ವಿಜಯದಾಸಾದಿ ದಾಸರ ಪರಂಪರೆಗೂ ಮಧ್ಯವರ್ತಿಗಳಾಗಿದ್ದವರು. ಮಧ್ವಾಚಾರ್ಯರ ಗ್ರಂಥಗಳಿಗೂ, ಉಪನಿಷತ್ತು ಬ್ರಹ್ಮಸೂತ್ರ, ಗೀತಾದಿ ಗ್ರಂಥಗಳಿಗೂ ಟೀಕೆಟಿಪ್ಪಣಿಗಳನ್ನು ರಚಿಸಿರುವ ಪಂಡಿತರಿವರು. ಮಂತ್ರಾಲಯವನ್ನು ಹರಿಭಕ್ತಿಯ ಕೇಂದ್ರವನ್ನಾಗಿ ಮಾಡಿ, ಹರಿಭಕ್ತಿಯನ್ನೂ ಹರಿದಾಸರನ್ನೂ ಉಜ್ಜೀವನಗೊಳಿಸಿದ ಕೀರ್ತಿ ಇವರದು. ಇವರ ಬೃಂದಾವನ ಮಂತ್ರಾಲಯದಲ್ಲಿ ಇಂದಿಗೂ ಭಕ್ತರಿಂದ ಸೇವೆಯನ್ನು ಪಡೆಯುತ್ತಾ, ಮಾಧ್ವರಿಗಷ್ಟೇ ಅಲ್ಲದೆ ಎಲ್ಲ ಕೋಮಿನವರಿಗೂ ಒಂದು ದೊಡ್ಡ ಯಾತ್ರಾಸ್ಥಳವಾಗಿ ಪರಿಣಮಿಸಿದೆ.

**ತಂದು ರತ್ನ ತೋರಿ ನಿನ್ನ ತಂದೆ ಭಾಮಿನಿ:** (ಹಾ. ೮೧, ನು. ೯)

ಕೃಷ್ಣ ಶ್ಯಮಂತಕ ಮಣಿಯನ್ನು ತಂದು ಸತ್ರಾಜಿತನಿಗೆ ತೋರಿಸಿ, ಸತ್ಯಭಾಮೆಯನ್ನು ಮದುವೆಯಾದ ಪ್ರಸಂಗ. (ಭಾ. ಸ್ಕಂ. ೧೦, ಅ. ೫೬)
(ಹಾ. ೧೭೭, ನು. ೨೫) (ಹಾ. ೧೨೮, ನು. ೧)

**ಪರಮ ಪಾವನ.... ಹನ್ನೆರಡುಮಂದಿ :** (ಹಾ. ೮೨, ಪ)

ಈ ಹನ್ನೆರಡು ಎಂಬ ಸಂಖ್ಯೆಯಲ್ಲಿ ಶ್ರೀ ಟೀಕಾಚಾರ್ಯರ ವೃಂದಾವನದೊಂದಿಗೆ ಇರುವ ಇತರ ವೃಂದಾವನಗಳು ಮಾತ್ರವಲ್ಲದೆ, ಅಲ್ಲಿ ಸ್ವಪ್ನದ್ವಾರಾ ಇರುವುದಾಗಿ ಪ್ರತೀತಿಯಿಂದ ತಿಳಿದುಬರುವ ಇತರ ಯತಿಗಳನ್ನೂ ಪರಿಗಣಿಸಲಾಗಿದೆಯೆಂದು ತೋರುತ್ತದೆ. [ಈ ಬಗ್ಗೆ ಹೆಚ್ಚಿನ ವಿವರಗಳಿಗೆ ನೋಡಿ: ಶ್ರೀ ಜಯತೀರ್ಥ ಚರಿತಾಮೃತಂ. ಲೇ. ಪಂಡಿತ ಚಿಕ್ಕೇರೂರು ಗೋವಿಂದಾಚಾರ್ಯ, ಹರಪನಹಳ್ಳಿ.]

**ರಜಕನ ಕೊಂದು :** (ಹಾ. ೮೪, ನು. ೫೮)

ಕಂಸನು ಕೃಷ್ಣನನ್ನು ಬಿಲ್ಲಹಬ್ಬಕ್ಕೆಂದು ಮಧುರೆಗೆ ಕರೆಸಿದಾಗ ಮಧುರೆಯನ್ನು ಹೊಕ್ಕ ಕೃಷ್ಣ ಕಂಸನ ಅಗಸನನ್ನು ಕೊಂದು ರಾಜಯೋಗ್ಯವಾದ ವಸ್ತ್ರಗಳನ್ನು ಧರಿಸಿದ. (ಪುನಾಚೂ. ಪು. ೧೪೨-೧೪೩)

**ಕುವಲಯಾಪೀಡ :** (ಹಾ. ೮೪, ನು.೫೯)

ಕಂಸನ ಆನೆ. ಕೃಷ್ಣನನ್ನು ಕೊಲ್ಲುವ ಉದ್ದೇಶದಿಂದ ಬಲರಾಮ ಕೃಷ್ಣರನ್ನು ತನ್ನ ಪಟ್ಟಣಕ್ಕೆ ಕರೆಸಿದ ಕಂಸ ಪಟ್ಟಣದ ಬಾಗಿಲಿನಲ್ಲೇ ಕುವಲಯಾಪೀಡವನ್ನು ಅವರ ಮೇಲೆ ಓಡಿಸಿದ. ಕೃಷ್ಣ ಅದನ್ನು ಕೊಂದು ಕಂಸನ ಸಭೆಯನ್ನು ಪ್ರವೇಶಿಸಿದ. (ಪುನಾಚೂ. ಪು. ೭೫)

**ದ್ವಾರಾವತಿಯಲ್ಲಿದ್ದ ಅಷ್ಟಭಾರ್ಯೆರಿಂದ್ವಿಹಾರ ಮಾಡಿ :** (ಹಾ. ೯೧, ನು. ೧೩)

ಭೀಷ್ಮಕನ ಮಗಳಾದ ರುಕ್ಮಿಣಿ, ಸತ್ರಾಜಿತನ ಮಗಳಾದ ಸತ್ಯಭಾಮೆ, ನಗ್ನಜಿತನ ಮಗಳಾದ ನೀಲಾ (ಸತ್ಯಾ), ಸೋದರತ್ತೆ ಶ್ರುತಕೀರ್ತಿಯ ಮಗಳಾದ ಭದ್ರೆ, ಸೋದರತ್ತೆ ರಾಜಾಧಿದೇವಿಯ ಮಗಳು ಮಿತ್ರವಿಂದೆ, ಸೂರ್ಯನ ಮಗಳು ಕಾಳಿಂದಿ, ಮದ್ರಾಧಿಪತಿಯ ಮಗಳು ಲಕ್ಷಣಾ, ಜಾಂಬವಂತನೆಂಬ ಕರಡಿರಾಜನ ಮಗಳು ಜಾಂಬವತಿ ಕೃಷ್ಣನ ಅಷ್ಟಭಾರ್ಯೆಯರು. (ಪುಭಾಕೋ. ಪು. ೧೪೭-೧೪೮)
(ಹಾ. ೧೦೫, ನು. ೧) (ಹಾ. ೧೧೭. ನು. ೩) (ಹಾ. ೧೨೮, ನು. ೨)

**ಮೋಸದಿಂದ ಭಸ್ಮಾಸುರನ ನಾಶಮಾಡಿದ ನಾರಿ :** (ಹಾ. ೯೧, ನು. ೧೮)

ಈಶ್ವರನ ವರದಿಂದ ಭಸ್ಮಾಸುರನು ಯಾರ ತಲೆಯ ಮೇಲೆ ಕೈ ಇಟ್ಟರೂ ಅವರು ಸುಟ್ಟು ಭಸ್ಮವಾಗುತ್ತಿದ್ದರು. ಈ ದುಷ್ಟವರವನ್ನು ಪಡೆದ ಆ ರಾಕ್ಷಸ ಈಶ್ವರನಿಗೆ ಮೃತ್ಯುಪ್ರಾಯನಾದ. ಆಗ ಈಶ್ವರ ಹರಿಯನ್ನು ಪ್ರಾರ್ಥಿಸಲು ಹರಿ ಮೋಹಿನೀ ರೂಪತಾಳಿ, ಭಸ್ಮಾಸುರನ ಮನಸ್ಸನ್ನಾಕರ್ಷಿಸಿ, ಆಚಮನಸಂಕಲ್ಪದ ನೆವದಿಂದ ಭಸ್ಮಾಸುರನು ಹಿಂದೆ ಮುಂದೆ ಆಲೋಚಿಸದೆ ತನ್ನ ಕೈಯನ್ನು ತಲೆಯ ಮೇಲಿಟ್ಟು

ಕೊಂಡು ಸುಟ್ಟು ಬೂದಿಯಾಗುವಂತೆ ಮಾಡಿದನು. ('ಶ್ವೇತಾದ್ರಿ ಸಂದೇಶ'.-ಶ್ವೇತಾಚಲಮಹಾತ್ಮ್ಯೆ-೪-೫ನೆಯ ಅಧ್ಯಾಯಗಳು.)

**ಒದೆಯುತಿರಲು....ಪತ್ನಿ ಮಾಡಿದೆ ಪದ್ಮಾವತಿಯ :** (ಹಾ. ೯೫, ನು. ೧, ೨)
ಶ್ರೀನಿವಾಸಕಲ್ಯಾಣದ ಕತೆ.

**ಅರಸರಂತಕನಾದ ಪರಶುರಾಮನ ಗೆದ್ದ ಅರಸನಂಘ್ರಿಗಳನು ಸ್ಮರಿಸಿ:** (ಹಾ. ೯೬, ನು. ೬)

ಇಪ್ಪತ್ತೊಂದು ಬಾರಿ ಭೂಮಿಯನ್ನು ಸುತ್ತಿ ಕ್ಷತ್ರಿಯರನ್ನು ನಾಶಮಾಡಿದ ಪರಶುರಾಮನ ಗರ್ವಭಂಗ ಮಾಡಿದಂತಹ ಶ್ರೀರಾಮನ ಪಾದಗಳನ್ನು ಸ್ಮರಿಸಿರಿ

(ಹಾ. ೯೬, ನು. ೧೦)ರ ಮೊದಲನೆಯ ಸಾಲನ್ನು: 'ವರದಿ ಬೆಳೆದ ಕುಂಭಕರಣನ [ಕೊಲಿಸಿ] ಕಟ್ಟಿ- ಎಂದಿಟ್ಟುಕೊಂಡರೆ ಅರ್ಥಸರಿಬರುತ್ತದೆ. ಕುಂಭಕರ್ಣ ಹತನಾದದ್ದು ರಾಮನಿಂದ.

**ಅಂಜನಾತ್ಮಜ.... ಪಡೆದನೀತ :** (ಹಾ. ೯೬, ನು. ೧೪)

ರಾಮರಾವಣರಿಗೆ ಯುದ್ಧ ಕೈಗೂಡಿದ ಸಂದರ್ಭದಲ್ಲಿ ರಾವಣನ ಮಗನಾದ ಇಂದ್ರಜಿತು ಯುದ್ಧದಲ್ಲಿ ಒಂದು ಕಡೆಯಿಂದ ವಾನರರನ್ನೆಲ್ಲ ಸದೆಬಡಿದು ರಾಮಲಕ್ಷ್ಮಣರಿಬ್ಬರನ್ನೂ ಮೂರ್ಛೆಗೆಡಹುತ್ತಾನೆ. ಆಗ ಜಾಂಬವನ ಮಾತಿನಂತೆ ಗಿಡಮೂಲಿಕೆಗಳಿಗಾಗಿ ಹಿಮವತ್ಪರ್ವತಕ್ಕೆ ಹೋದ ಹನುಮಂತ ಆ ಓಷಧೀ ಪರ್ವತವನ್ನೇ ಕಿತ್ತು ತರುತ್ತಾನೆ. ಅದರಲ್ಲಿದ್ದ ಸಂಜೀವಿನಿಯ ಪ್ರಭಾವದಿಂದ ಸತ್ತವಾನರರೂ ಮತ್ತೆ ಬದುಕುತ್ತಾರೆ. (ರಾಮಾಯಣ- ಯುದ್ಧಕಾಂಡ)

**ವಾಹನನಾದ ತ್ರಿಧಾಮದೊಡೆಯಗೆ:** (ಹಾ. ೯೭, ನು.೨)

ರಾಮ ರಾವಣರ ಯುದ್ಧದ ಸಂದರ್ಭದಲ್ಲಿ ರಾವಣ ರಥದ ಮೇಲೆಯೂ, ರಾಮ ನೆಲದ ಮೇಲೆಯೂ ನಿಂತಿರಲಾಗಿ, ಹನುಮಂತ ರಾಮನನ್ನು ಹೊತ್ತು ತಂದು ಆ ಮೂಲಕ ಅವನ ವಾಹನವಾಗಿ ತನ್ನ ಭಕ್ತಿಯನ್ನು ವ್ಯಕ್ತಪಡಿಸಿದ.

(ರಾಮಾಯಣ- ಯುದ್ಧಕಾಂಡ.)

**ಬಕ :** (ಹಾ. ೧೦೩, ನು.೨)

ಒಬ್ಬರಾಕ್ಷಸ. ಏಕಚಕ್ರನಗರದಲ್ಲಿ ವಾಸವಾಗಿದ್ದ. ಅವನಿಗಾಗಿ ಸಿದ್ಧಪಡಿಸಿದ್ದ ಒಂದು ಬಂಡಿ ಅನ್ನವನ್ನು ಉಂಡ ಭೀಮ ಬಕನ ಪ್ರಾಣವನ್ನೂ ತೆಗೆದ.

(ಪುನಾಚೂ. ೪೩೦-೪೩೧) (ಮಹಾ. ಧ್ವ. ೫೯, ನು.೮)

**ಹಿಡಿಂಬಕ :** (ಹಾ..೧೦೩, ನು. ೨)

ಒಬ್ಬರಾಕ್ಷಸ. ಪಾಂಡವರು ಅರಗಿನ ಮನೆಯಿಂದ ಹೊರಬಿದ್ದು ಅರಣ್ಯವನ್ನು ಸೇರಿದಾಗ ಭೀಮನನ್ನು ಕೆಣಕಿ ಅವನಿಂದಲೇ ಮಡಿದ. (ಪುನಾಚೂ. ಪು. ೬೮೨)

**ಕಿರ್ಮಿರ :** (ಹಾ. ೧೦೩, ನು. ೨)
ಒಬ್ಬ ರಾಕ್ಷಸ. ಬಕಾಸುರನ ತಮ್ಮ. ಪಾಂಡವರ ಅರಣ್ಯವಾಸಕಾಲದಲ್ಲಿ ಕಾಮ್ಯಕವನದಲ್ಲಿ ಅವರ ಆಶ್ರಮದಲ್ಲಿದ್ದ ಋಷಿಗಳನ್ನು ಪೀಡಿಸಿ, ತನ್ನ ಅಣ್ಣ ಬಕಾಸುರನನ್ನು ಕೊಂದವರೆಂದು ಪಾಂಡವರೊಡನೆ ಯುದ್ಧಮಾಡಿ ಭೀಮನಿಂದ ಹತನಾದ. (ಪುನಾಚೂ. ಪು ೧೧೨)

**ದುಶ್ಶಾಸನ :** (ಹಾ. ೧೦೮, ನು. ೨)
ಧೃತರಾಷ್ಟ್ರಗಾಂಧಾರಿಯರ ಎರಡನೆಯ ಮಗ. ದುರ್ಯೋಧನನ ತಮ್ಮ. ಅಣ್ಣನ ಸೂಚನೆಯಂತೆ ದ್ರೌಪದಿಯ ವಸ್ತ್ರಾಪಹರಣ ಮಾಡಿ ಭೀಮನ ಉಗ್ರ ಕೋಪಕ್ಕೆ ಗುರಿಯಾಗಿ, ಅವನಿಂದಲೇ ಹತನಾದ. (ಪುನಾಚೂ. ಪು. ೩೧೯)

**ದುರ್ಯೋಧನ :** (ಹಾ. ೧೦೮, ನು. ೨)
ಧೃತರಾಷ್ಟ್ರ ಗಾಂಧಾರಿಯರ ಹಿರಿಯ ಮಗ. ಕಲಿಪುರುಷನ ಅಂಶದಿಂದ ಜನಿಸಿದವನು. ದಾಯಾದಿಮತ್ಸರದಿಂದ ಪಾಂಡವರನ್ನು ಬಗೆಬಗೆಯಾಗಿ ಹಿಂಸಿಸಿದ. ಅದರಲ್ಲೂ ಭೀಮಸೇನಿಗೆ ವಿಷದ ಆಹಾರವನ್ನು ತಿನ್ನಿಸಿ, ಹಾವುಗಳಿಂದ ಕಡಿಸಿ, ಹಗ್ಗಗಳಿಂದ ಬಿಗಿಸಿ, ಗಂಗೆಯಲ್ಲಿ ತಳ್ಳಿಸಿದ. ಪಾಂಡವರನ್ನು ನಿರ್ಮೂಲಗೊಳಿಸುವ ಒಂದೇ ಛಲದಿಂದ ಯುದ್ಧವನ್ನು ಘೋಷಿಸಿ, ಗದಾಯುದ್ಧದಲ್ಲಿ ಭೀಮನೊಂದಿಗೆ ಸೆಣಸಿ, ತೊಡೆಮುರಿದುಬಿದ್ದು ಪ್ರಾಣತ್ಯಾಗ ಮಾಡಿದ. (ಪುನಾಚೂ. ಪು. ೩೦೫-೩೧೬)
(ಹಾ. ೧೫೯, ನು. ೨)

**ಮುರ :** (ಹಾ. ೧೧೬, ನು. ೪)
ಒಬ್ಬರಾಕ್ಷಸ. ನರಕಾಸುರನ ಸೇನಾಪತಿಗಳಲ್ಲಿ ಒಬ್ಬ. ಇವನು ಕೃಷ್ಣನಿಂದ ಹತನಾದ. ಆದ್ದರಿಂದ ಕೃಷ್ಣನಿಗೆ ಮುರಾರಿ, ಮುರಾಂತಕ ಎಂದು ಹೆಸರು.
(ಹಾ. ೧೨೨ (ಸು.) ನು. ೪) (ಹಾ. ೧೨೭, ನು. ೧೯)

**ವಿದುರ :** (ಹಾ. ೧೨೦, ನು. ೨)
ಕೃಷ್ಣನ ಪರಮಭಕ್ತನಾದ ವಿದುರ ವೇದವ್ಯಾಸಮುನಿಯಿಂದ ಒಬ್ಬ ದಾಸಿಯಲ್ಲಿ ಹುಟ್ಟಿದವನು. ಅಣಿಮಾಂಡವ್ಯನ ಶಾಪದಿಂದ ಯಮನೇ ವಿದುರನಾಗಿ ಜನಿಸಿದ. ಕೃಷ್ಣ ಸಂಧಾನಕ್ಕೆಂದು ಹಸ್ತಿನಾವತಿಗೆ ಬಂದಾಗ ಈತನ ಮನೆಯಲ್ಲೇ ಉಳಿದುಕೊಂಡು, ಉಂಡು ತೃಪ್ತನಾದನು. (ಪುಭಾಕೋ. ಪು. ೫೪೦)

**ಸಿಂಧೂಪ :** (ಹಾ. ೧೨೧, ನು. ೩೭)
ಮದುವೆಯಲ್ಲಿ ಮಾಡುವ ನಾಗವಲ್ಲಿಯ ಸಂದರ್ಭದಲ್ಲಿ ಹೆಣ್ಣಿನ ತಾಯಿಯು ತಲೆಯ ಮೇಲೆ ಹೊರಿಸುವ ದೀಪದ ಆರತಿ.
(ರಕ. ವ. ೫೪) (ಸುಕ. ಧ್ವ. ೨೨, ನು. ೧)

**ಗಯನ ಮೆಟ್ಟಿದ್ದ ಪಾದ :** (ಹಾ. ೧೨೩, ನು. ೧)

ಗಯಾಸುರ ಒಬ್ಬ ರಾಕ್ಷಸ. ಲೋಕಕಂಟಕನಾಗಿದ್ದ ಅವನ ಶರೀರದ ಮೇಲೆ ಬ್ರಹ್ಮ ಯಜ್ಞವೇದಿಕೆಯನ್ನು ನಿರ್ಮಿಸಿ ಯಜ್ಞ ಮಾಡುತ್ತಿದ್ದಾಗ ಅವನು ಕದಲದಂತೆ ವಿಷ್ಣು ಅವನನ್ನು ಮೆಟ್ಟಿನಿಂತ. (ಪ್ರನಾಚೂ. ಪು. ೧೮೦)

**ಕಮಲನಾಳದಿ ಹುಟ್ಟಿದಾತನ ಜನನಿಪತಿ :** (ಹಾ. ೧೨೭, ನು. ೧)

ಬ್ರಹ್ಮನ ಜನನಿಯಾದ ಲಕ್ಷ್ಮೀದೇವಿಯ ಪತಿ. ವಿಷ್ಣು.

**ಕಾಲಯಮ (ಕಾಲಯವನ ?) :** (ಹಾ. ೧೨೭, ನು. ೨೦)

ಇವನು ಗರ್ಗಮಹರ್ಷಿಯ ಮಗ. ಒಮ್ಮೆ ಯಾದವರು ತನ್ನ ತಂದೆಯನ್ನು ಪರಿಹಾಸ್ಯಮಾಡಿದ್ದರಿಂದ ಯಾದವರ ಮೇಲೆ ಇವನು ದ್ವೇಷಕಾರುತ್ತಿದ್ದನು. ಶಿವನ ಅನುಗ್ರಹವನ್ನು ಪಡೆದ ಇವನನ್ನು ಗೆಲ್ಲುವುದು ಕೃಷ್ಣನಿಗೂ ಕಷ್ಟವಾಗಿತ್ತು. ಒಮ್ಮೆ ಕಾಲಯವನನು ಕೃಷ್ಣನನ್ನು ಬೆನ್ನಟ್ಟಿ ಬರಲು ಕೃಷ್ಣ ಮುಚುಕುಂದನು ಮಲಗಿ ನಿದ್ರಿಸುತ್ತಿದ್ದ ಗುಹೆಯನ್ನು ಹೊಗಲು, ಕಾಲಯವನನು ಮಲಗಿ ನಿದ್ರಿಸುತ್ತಿದ್ದ ಮುಚುಕುಂದನನ್ನೇ ಕೃಷ್ಣನೆಂದು ಬಗೆದು ಅವನನ್ನು ಕಾಲಿನಿಂದ ಒದ್ದನು. ಎಚ್ಚೆತ್ತ ಮುಚುಕುಂದನು ದೃಷ್ಟಿಸಿ ನೋಡಲು ಕಾಲಯವನನು ಭಸ್ಮವಾದನು.

(ಪುನಾಚೂ. ಪು. ೯೭)

**ದ್ರೌಪದಿಗೆ ಸುಗಂಧ ಕುಸುಮವನಿಟ್ಟೆ :** (ಹಾ. ೧೨೯, ನು. ೨)

ಭೀಮಾವತಾರದಲ್ಲಿ ಕುಬೇರನ ಉದ್ಯಾನವನದಲ್ಲಿದ್ದ ಸೌಗಂಧಿಕಾ ಕುಸುಮವನ್ನು ದ್ರೌಪದಿಗೆ ತಂದುಕೊಟ್ಟದ್ದು. ಮಹಾಭಾರತದ ಅರಣ್ಯಪರ್ವದಲ್ಲಿ ಬರುವ ಪ್ರಸಂಗ.
(ಪುಭಾಕೋ. ಪು. ೪೨೩)
(ಸುಕ. ಕೊನೆಯ ಆರತಿಹಾಡು. ನು. ೨)

**ಮೊದಲಕಲ್ಲು ಶೇಷದಾಸರು :** (ಹಾ. ೧೩೩)

ತುಂಗಭದ್ರಾ ಹಾಗೂ ಕೃಷ್ಣನದಿಗಳ ನಡುವೆಯಿರುವ ಸಣ್ಣ ಊರು ಮೊದಲಕಲ್ಲು (ಆದಿಶಿಲೆ). ಪ್ರಕೃತಿಯ ಅಂದವಾದ ಪರಿಸರದಲ್ಲಿ ಆ ಊರಿನಲ್ಲಿ ಸಾಧನೆಮಾಡಿ ಮುಖ್ಯಪ್ರಾಣದೇವರನ್ನು ಒಲಿಸಿಕೊಂಡ ಹರಿದಾಸ ಪರಂಪರೆಯ ಕೊನೆಯ ಅಪರೋಕ್ಷ ಜ್ಞಾನಿಗಳು ಮೊದಲಕಲ್ಲು ಶೇಷದಾಸರು. ವಿಜಯರಾಯರಿಂದ ಅನುಗೃಹೀತರಾಗಿ 'ಗುರುವಿಜಯವಿಠಲ' ಎಂಬ ಅಂಕಿತವನ್ನು ಪಡೆದವರು. ಬಿಂಬಾಪರೋಕ್ಷಜ್ಞಾನಕ್ಕಾಗಿ ರುದ್ರೋಪಾಸನೆ ಮಾಡಿ ರುದ್ರನನ್ನು ಒಲಿಸಿಕೊಂಡರು. ಅರ್ಜುನಾಂಶರಾದ ಶೇಷದಾಸರು ಹಿಂದೆ ವೈಕುಂಠದಾಸರಾಗಿದ್ದು, ಅನಂತರ ತಿಮ್ಮಣ್ಣಯ್ಯನವರಾಗಿ ಬಳಿಕ ಶೇಷದಾಸರಾಗಿ ಅವತರಿಸಿದರೆಂದು ನಂಬಿಕೆ. (ಕಭವಿ. ಪು. ೬೨೫-೨೬)

**ಚೋರತನಗಳಿಂದ ಸೀರೆಗಳನು ಕದ್ದು ...ಬತ್ತಲೆ ತಿರುಗಿಸಿದಂಥ ಶವರಿ :**
(ಮುಹಾ. ಧ್ವ. ೨೭, ನು. ೨-೩)

ಭಾಗವತದಲ್ಲಿ ಬರುವ ಗೋಪಿಯರ ಜಲಕ್ರೀಡೆಯ ಸಂದರ್ಭದಲ್ಲಿ ಕೃಷ್ಣ ಅವರ ಸೀರೆಗಳನ್ನು ಕದ್ದು ಕಡಹಾಲದ ಮರವನ್ನೇರಿದ ಪ್ರಸಂಗ
(ಮುಹಾ. ಧ್ವ. ೫೯, ನು. ೧೧) (ಮುಹಾ. ಧ್ವ. ೬೯, ನು. ೮) (ರಕ. ಧ್ವ. ೨೧, ನು. ೧೩) (ಸುಕ. ಧ್ವ. ೮, ನು. ೫)

**ನೀರಲಾಹಣ್ಣಾಗೃತ್ತಿತೆ ತಲೆಕೆಳಗೆ :** (ಮುಹಾ. ಧ್ವ. ೪೯, ನು. ೫)

ಪಾಂಡವರ ಅರಣ್ಯವಾಸಕಾಲದಲ್ಲಿ ಭೀಮನು ಕಣ್ವರ ಆಶ್ರಮದಲ್ಲಿದ್ದ ಒಂದೇ ಒಂದು ನೇರಳೆ ಹಣ್ಣನ್ನು ಕಿತ್ತು ಬಿಡಲು, ಋಷಿಗಳ ಶಾಪದ ಭಯದಿಂದ ಪಾಂಡವರು ಕೃಷ್ಣನನ್ನು ಬೇಡಿಕೊಳ್ಳುವರು. ಆಗ ಕೃಷ್ಣ ಪಾಂಡವರ ಅನುಕೂಲಧರ್ಮಗಳನ್ನು ಅವರಿಂದಲೇ ಹೇಳಿಸುವ ಮೂಲಕ ಆ ಹಣ್ಣನ್ನು ಪುನಃ ಆ ಕೊಂಬೆಗೇ ಹತ್ತಿಸಿದನು. ಆ ಸಂದರ್ಭದಲ್ಲಿ ದ್ರೌಪದಿ ತನಗೆ ಪತಿಗಳು ಐವರಾದರೂ ತನ್ನ ಮನಸ್ಸಿನ ರೀತ್ಯಾ ಆರುಜನರೆಂದು ಒಪ್ಪಿಕೊಳ್ಳುವಳು.
(ರಕ. ಧ್ವ. ೩೯, ನು. ೧೦)

**ವನದೊಳಗನ್ನದಾನವ....ಉಳುಹೆಂದೆ :** (ಮುಹಾ. ಧ್ವ. ೫೧, ನು. ೫-೭)

ಪಾಂಡವರ ವನವಾಸಕಾಲದಲ್ಲಿ ದ್ರೌಪದಿಯ ಭೋಜನಾನಂತರ ಪಾಂಡವರ ಆಶ್ರಮಕ್ಕೆ ಬಂದ ದೂರ್ವಾಸ ಮಹರ್ಷಿಯು ದ್ರೌಪದಿಯ ಕೃಷ್ಣಭಕ್ತಿಯ ಬಿಸಿಯಿಂದ ಹೆದರಿ, ತೇಗುತ್ತಾ ಶಿಷ್ಯರೊಂದಿಗೆ ಓಡಿಹೋದಂತಹ ಅಕ್ಷಯಪಾತ್ರೆಯ ಪ್ರಸಂಗ.
(ಪುನಾಜೂ. ಪು. ೩೩೮)
(ರಕ. ಧ್ವ. ೩೯ ನು. ೯)

**ನಿಮ್ಮ ಪ್ರಾಣದಾಸೆಗಾಗಿ....ಬಂದಿರಜುರ್ನರಾಯ :** (ಮುಹಾ. ಧ್ವ. ೫೯, ನು. ೪)

ಮಹಾಭಾರತದ ಆದಿಪರ್ವದಲ್ಲಿ ಬರುವ ಅರಗಿನ ಮನೆಯ ಪ್ರಸಂಗ. ದುರ್ಯೋಧನನ ಒತ್ತಾಸೆಯಿಂದ ಪುರೋಚನನು ಅರಮಲಿನಿಂದ ಒಂದು ಮನೆಯನ್ನು ನಿರ್ಮಿಸಿ ಪಾಂಡವರನ್ನೂ ಕುಂತಿಯನ್ನೂ ಸುಟ್ಟುಬಿಡುವ ಯೋಚನೆಯಲ್ಲಿದ್ದನು. ಆ ಸಂಚನ್ನು ತಿಳಿದ ಪಾಂಡವರು ಒಬ್ಬ ಬೇಡಿತಿ ಮತ್ತು ಆವಳ ಐದುಮಕ್ಕಳೂ ಆ ಮನೆಯ ಒಳಗೆ ಇದ್ದಂತೆಯೇ ಆ ಮನೆಗೆ ಬೆಂಕಿಯಿಟ್ಟು, ತಾವು ಮೊದಲೇ ಸಿದ್ಧಪಡಿಸಿದ್ದ ಸುರಂಗಮಾರ್ಗದ ಮೂಲಕ ತಪ್ಪಿಸಿಕೊಂಡರು.

**ಅರಣ್ಯ ಅರ್ಧರಾತ್ರಿಯುಲಿ...ಮನಸೋತಿರ್‍ಹೀಳೊ :** (ಮುಹಾ. ಧ್ವ. ೫೯, ನು. ೧೬)

ಮಹಾಭಾರತದ ಆದಿಪರ್ವದಲ್ಲಿ ಬರುವ, ಭೀಮ ಹಿಡಿಂಬಿಯನ್ನು ವರಿಸಿದ ಪ್ರಸಂಗ.
(ರಕ. ಧ್ವ. ೪೫, ನು.೧)

**ಪಟ್ಟದರಸಿಯು ನೀ ಸುದೇಷ್ಣೆ ದಾಸಿಯು ಮಾಡಿ :** (ಮುಹಾ. ಧ್ವ. ೬೧, ನು. ೫)

ಪಾಂಡವರ ಅಜ್ಞಾತವಾಸದ ಸಂದರ್ಭದಲ್ಲಿ ದ್ರೌಪದಿ ವಿರಾಟನರಾಣಿ ಸುದೇಷ್ಣೆಯಲ್ಲಿ ದಾಸಿಯಾಗಿದ್ದಂತಹ ಪ್ರಸಂಗ. (ಮಹಾಭಾರತ, ವಿರಾಟಪರ್ವ)

**ಬ್ರಹ್ಮನ ನಾಸಿಕದ ಉಸಿರಿನಿಂದ ಜನಿಸಿ :** (ಮುಹಾ. ಧ್ವ. ೭೩, ನು. ೩)

ಶ್ರೀಹರಿ ಶ್ವೇತವರಾಹಕಲ್ಪದಲ್ಲಿ ಬ್ರಹ್ಮನ ಮೂಗಿನಿಂದ ಅಂಗುಷ್ಠ ಪ್ರಮಾಣದ ಶ್ವೇತವರಾಹನಾಗಿ ಹುಟ್ಟಿಬಂದು ಅವನಿಗೆ ಮಗನಾದ. (ಸೃಷ್ಟಿಪ್ರಕರಣಪ ಹಾಡಿಗಳು, ಹಿನ್ನುಡಿ. ಪು. ೭೩–೭೪)

**ಶಂಬರಾರಿಯ ಜನಕ :** (ಪಹಾ. ವ. ೨೩)

ಶೋಣಿತ ಪುರದ ದೊರೆ ಶಂಬರಾಸುರ. ಅವನ ಶತ್ರು ಪ್ರದ್ಯುಮ್ನ. ಪ್ರದ್ಯುಮ್ನನ ತಂದೆ ಶ್ರೀಕೃಷ್ಣ.

**ಸಾತ್ಯಕಿ :** (ಪಹಾ. ಧ್ವ. ೨೯, ನು. ೬)

ಯದುವಂಶದ ಸತ್ಯಕನ ಮಗ. ಇವನಿಗೆ ಯುಯುಧಾನನೆಂದೂ ಹೆಸರಿದೆ. ಭೂರಿಶ್ರವಸು ಇವನ ಹತ್ತುಮಂದಿ ಪುತ್ರರನ್ನೂ ಕೊಂದು ಇವನನ್ನೂ ಕೊಲ್ಲುವ ಪ್ರಯತ್ನದಲ್ಲಿದ್ದಾಗ ಅರ್ಜುನನು ಅವನ ಭುಜವನ್ನೂ ಸಾತ್ಯಕಿಯು ಅವನ ತಲೆಯನ್ನೂ ತುಂಡರಿಸಿದರು. (ಪುಭಾಕೋ. ಪು. ೪೭೬)

**ಸಾಂಬ :** (ಪಹಾ. ಧ್ವ. ೨೯, ನು. ೬)

ಶ್ರೀಕೃಷ್ಣ–ಜಾಂಬವತಿಯರ ಮಗ. ದುರ್ಯೋಧನನ ಪುತ್ರಿ ಲಕ್ಷಣೆಯು ಈತನ ಪತ್ನಿ. ದ್ವಾರಕೆಗೆ ಬಂದ ಕಣ್ವಮುನಿಗಳ ಪರೀಕ್ಷಾರ್ಥವಾಗಿ ಯಾದವರು ಈತನಿಗೆ ಗರ್ಭಿಣಿಸ್ತ್ರೀಯ ವೇಷಹಾಕಿ, ಮುನಿಗಳಲ್ಲಿಗೆ ಕರೆದುಕೊಂಡು ಹೋಗಿ 'ಈಕೆಯು ಎಂತಹ ಮಗುವನ್ನು ಹಡೆಯುವಳು?' ಎಂದು ಕೇಳಲು 'ನಿಮ್ಮ ವಂಶ ನಾಶಕನಾದ ಮುಸಲವನ್ನು ಹಡೆಯುವಳು' ಎಂದು ಹೇಳಿಹೋದರು. ಮುಂದೆ ಮುನಿ ವಾಕ್ಯದಂತೆ ಸಾಂಬನು ಹೆತ್ತ ಮುಸಲದಿಂದ ಯದುವಂಶವು ನಾಶವಾಯಿತು
(ಪುಭಾಕೋ. ಪು. ೬೪೮)

**ಸುಂದೋಪಸುಂದರರಂತಾಗಲಾಗೋದು :** (ಸುಕ. ನು. ೧೪)

ಸುಂದ, ಉಪಸುಂದರು ಹಿರಣ್ಯ ಕಶಿಪುವಿನ ವಂಶದ ನಿಕುಂಭನೆಂಬ ಅಸುರನ ಮಕ್ಕಳು. ಇಬ್ಬರೂ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ, 'ಪರಸ್ಪರ ನಮ್ಮಿಂದ ನಮಗೆ ಮರಣವಾಗಬೇಕಲ್ಲದೆ ಅನ್ಯರಿಂದ ಅಸಾಧ್ಯವಾಗಲಿ' ಎಂದು ವರ ಪಡೆದು ಲೋಕಕಂಟಕರಾದರು. ಒಮ್ಮೆ ಇವರು ವಿಶ್ವಕರ್ಮನಿಂದ ನಿರ್ಮಿತಳಾದ ತಿಲೋತ್ತಮೆಯನ್ನು ಮೋಹಿಸಿ, ಅವಳಸಲುವಾಗಿ ಪರಸ್ಪರ ಹೋರಾಡಿ ಮೃತರಾದರು. (ಪ್ರಭಾಕೋ. ಪು. ೬೬೮)

**ಬಿದ್ದಿರೆ ಮಡುವಿನೊಳೈದು....ಮುಂದಕೆ ನಡೆದನು :** (ಸುಕ. ಪ್ರ. ೧, ನು. ೧೫)

ಅರ್ಜುನ ತನ್ನ ತೀರ್ಥಯಾತ್ರೆಯ ಸಂದರ್ಭದಲ್ಲಿ ನಾರೀತೀರ್ಥದಲ್ಲಿ ಸ್ನಾನ ಮಾಡುತ್ತಿದ್ದಾಗ ಒಂದು ಮೊಸಳೆ ಅವನನ್ನು ಹಿಡಿಯುತ್ತದೆ. ಅವನು ಅದನ್ನು ಹೊರಗೆ ತೆಗೆದು ಹಾಕಲು ಅದು ವರ್ಗೆಯೆಂಬ ಅಪ್ಸರಸಿಯಾಗಿ, ತನ್ನ ಶಾಪ ಕಾರಣವನ್ನು ತಿಳಿಸಲು ಅರ್ಜುನ ಆ ಸುತ್ತಮುತ್ತಣ ತೀರ್ಥಗಳಲ್ಲಿ ಶಾಪದಿಂದ ಮೊಸಳೆಯ ರೂಪದಲ್ಲಿದ್ದ ಅಪ್ಸರಸಿಯರನ್ನೆಲ್ಲ ವಿಶಾಪೆಯರನ್ನಾಗಿಸಿದ. (ಪುನಾಜೂ. ಪು. ೨೪)

# ಅನುಬಂಧ ೨

## ಕಠಿಣ ಶಬ್ದಗಳ ಅರ್ಥ

ಅಂಕ–ತೊಡೆ
ಅಂಗುಲಿ–ಬೆರಳು
ಅಂತಕ-ಯಮ
ಅಂದಣ–ಪಲ್ಲಕ್ಕಿ
ಅಕೃತ್ರಿಮ–ಮಾಡದಪಾರದ್ದನ್ನು ಮಾಡುವವನು (?)
ಅಗ್ರಜ–ಅಣ್ಣ
ಅಚ್ಚದ–ಪ್ರೀತಿಯ
ಅಜ–ಬ್ರಹ್ಮ
ಅನುಜೆ–ತಂಗಿ
ಅರ್ಭಕ–ಮಗು
ಅರಣಿ–ಯಾಗಾಗ್ನಿಯನ್ನು ಹೊತ್ತಿಸಲು ಉಪಯೋಗಿಸುವ ಮರದ ಕೊರಡು
ಅವ್ಯಾಳ್ಯ–ಅಲಕ್ಷ್ಯ, ಅಸಡ್ಡೆ (?)
ಅಶನ–ಅನ್ನ
ಅಸು–ಪ್ರಾಣ
ಅಕ್ಷ–ಕಣ್ಣು
ಆಗಾಮಿ–ಮುಂದಿನ
ಆನಕ–ಒಂದು ವಾದ್ಯವಿಶೇಷ
ಆಪೋಶನ–ಊಟಕ್ಕೆ ಮೊದಲು ಮತ್ತು ಅನಂತರ ಮಂತ್ರಪೂರ್ವಕವಾಗಿ ಹೀರುವ ಅಂಗೈನ ನೀರು
ಆರ್ಯಳು–ಹಿರಿಯಳು
ಆರೋಗಣೆ– ಊಟ
ಆಲ್ಪರಿ–ಗಟ್ಟಿಯಾಗಿ ಕೂಗು
ಇಂಬು–ಜಾಗ
ಈಡು–ಸಮಾನ
ಈರಲು–ಹೆರಿಗೆಯಾದ ಹನ್ನೊಂದನೆಯ ದಿನ ಬಾಣಂತಿಯುಮಾಡುವ ಮಂಗಳಸ್ನಾನ
ಉಂಗುಷ್ಠ-ಕಾಲಹೆಬ್ಬೆರಳು
ಉಚ್ಚುಬಡಿ–ಹೊರತೆಗೆ
ಉತ್ತತ್ತಿ–ಖರ್ಜೂರ
ಉತ್ರಾಣಿ–ಬುಧಗ್ರಹದ ಪೂಜೆಗೇ ಬಳಸುವ ಸಸ್ಯವಿಶೇಷ

ಉದ್ರಿ–ಸಾಲ
ಉರ–ಎದೆ
ಉರುಲು > ಉರಿಲ್–ಪಾಶ, ನೇಣುಗುಣಿಕೆಯ ಹಗ್ಗ
ಉರುಟಣೆ > (ಊಟಣೆ)–ಮದುವೆಯಲ್ಲಿ ವಧೂವರರು ಪರಸ್ಪರರಿಗೆ ಮಂಗಲದ್ರವ್ಯಗಳನ್ನು ಹಚ್ಚಿ, ಹಾಡುಹೇಳುವ ವಿನೋದ
ಉರುಟು–ದುಂಡಾದ
ಉಸುಕು–ಮರಳು
ಎಜ್ಜ–ತೂತು
ಎಡ್ಡು–ಸೊಕ್ಕು, ಅಹಂಕಾರ
ಎಡೆ–ಊಟ
ಎಲ್ವಾಸೆ–ಎಲ್ಲಿದ್ವಾಸೆ
ಒನಪು–ಬೆಡಗು, ಬಿನ್ನಾಣ
ಓಗರ–ಅನ್ನ
ಔದುಂಬ್ರ–ಅತ್ತಿಹಣ್ಣು
ಕಂಜ–ತಾವರೆ
ಕಂದರ–ಕತ್ತು
ಕಕ್ಕಸ–ಕಷ್ಟ
ಕದಪು–ಕೆನ್ನೆ
ಕಪಿತ್ಥ–ಬೇಲದಹಣ್ಣು
ಕಬರಿ–ಕೂದಲು
ಕಳಲು–ಮಜ್ಜಿಗೆ
ಕಾಷ್ಠ–ಕಟ್ಟಿಗೆ
ಕಿರಾತ–ಬೇಡರವನು
ಕೀರ–ಗಿಳಿ
ಕುಂದಣ–ಅಪರಂಜಿ
ಕುಂಭೀಪಾಕ–ನರಕದಲ್ಲಿ ಒಂದು ಬಗೆ
ಕುಕ್ಕುಟ–ಹುಂಜ
ಕುಷ್ಮಾಂಡ–ಹಾಸ್ಯ, ಕುಚೋದ್ಯ
ಕುಕ್ಷಿ–ಹೊಟ್ಟೆ
ಕೃಷ್ಣೆ–ದ್ರೌಪದಿ
ಕೈಪು–ಲಂಗೋಟಿ
ಕೈವಲ್ಯ–ಮೋಕ್ಷ

ಕೊಂಡ–ಹೊಂಡ, ತಗ್ಗು
ಕೋರಿ–ತುಂಡುಸೀರೆ
ಕ್ರೋಡ–ಹಂದಿ
ಖಗ–ಪಕ್ಷಿ
ಖಗವಾಹನ–ಗರುಡ, ವಿಷ್ಣು
ಖಡುಕಿಲಿಂದ > ಖಡಕಿನಿಂದ–ತೀವ್ರವಾಗಿ
ಖರೆಯು–ನಿಜ
ಖೋಡಿ–ಕೆಡುಕ
ಖೋಡಿಲಿಖಿತ–ಕೆಟ್ಟಬರೆಹ
ಗಡ್ಡಕೆತ್ತಿ ಪನ್ನಿಯ ತೆಗೆದಿ–ಸೋಲಿಸಿ ಅಹಂಕಾರ ವನ್ನು ಮುರಿದಿ
ಗಣ–ಗುಂಪು
ಗರಳ–ವಿಷ
ಗಾಡಿಕಾರ್ತಿ–ಚೆಲುವೆ
ಗುಳ್ಳ–ತ್ರಿಕೋಣಾಕಾರದಲ್ಲಿ ಮಾಡಿರುವ ತಂಬಿಟ್ಟು
ಗೋದಲಿ–ಗೊಂತು (ಹಸುಗಳಿಗೆ ಮೇವು ಹಾಕುವ ತಾವು)
ಗೋಪಾಳ–ಭಿಕ್ಷೆ
ಗೋಮಯ–ಸೆಗಣಿ
ಘೃತ–ತುಪ್ಪ
ಚಟ್ಟಿಗೆ–ಮಡಕೆ
ಚವಮ್ಮಾಳಿಗೆ–ಚರ್ಮದ ಚಪ್ಪಲಿ
ಚಾಳಿ–ನಡತೆ
ಚಿಂತಾಲು–ತಕ್ಕಡಿ
ಚುಮ್ಮ್ನ–ಮುತ್ತು (?)
ಚೆಂಡಿಕೆ–ಜುಟ್ಟು
ಜವ–ಯಮ
ಜಳಕದಿರು–ನಡುಗದಿರು, ಅಂಜದಿರು
ಜಾಂಬೂಫಲ > ಜಂಬೂಫಲ–ನೇರಿಲಹಣ್ಣು
ಜಾಮಾತ–ಅಳಿಯ
ಜಾವಳ–ಚೌಲ
ಜಿಹ್ವೆ–ನಾಲಿಗೆ
ಡೊಂಕಸತಿ–ಕುಬ್ಜೆ (ಕಂಸನ ಗಂಧಪವಳು)
ತಡವು–ಕೆಣಕು
ತಬಕು–ತಟ್ಟೆ, ಹರಿವಾಣ
ತಳುಪು–ಗಂಟು
ತ್ವರಿಯು–ಬೇಗ
ತ್ರಿದಂಡಿ–ಸನ್ಯಾಸಿ (?)
ತುರು–ಆಕಳು
ತೆತ್ತಿಸಿದ–ಕೂಡಿಸಿದ
ತೇಜಿ–ಕುದುರೆ
ತೊಂಡಿಲು > ತೊಂಡಲ್–ತಲೆಯಲ್ಲಿ ಧರಿಸುವ ಮುತ್ತಿನ ಆಭರಣ
ದಡ್ಡು–ಜಡ್ಡು
ದಧಿ–ಮೊಸರು
ದಾಯ–ಪಗಡೆಯಾಟ
ದಾರಂತೆ–ಪೆಂಡತಿಯಂತೆ
ದೆಸೆ–ಭಾಗ್ಯ
ನಗ–ಬೆಟ್ಟ
ನದರು–ಬಹುಮಾನ, ಗೌರವಾರ್ಥವಾಗಿ ಒಯ್ಯುವ ವಸ್ತು
ನಾಗಾರಿ–ಗರುಡ
ನಾಸಿಕ–ಮೂಗು
ನಿಚ್ಚಣಿಕೆ–ಏಣಿ
ನಿರ್ಜರ–ದೇವತೆ
ನಿರ್ಜರೇಶ–ಇಂದ್ರ, ಕೃಷ್ಣ
ನೆಗೆಣ್ಣೆ–ಓರಗಿತ್ತಿ
ನೆಲವು–ಹಾಲು, ಮೊಸರಿನ ಪಾತ್ರೆಗಳನ್ನು ಇಡು ವುದಕ್ಕೆ ಇಳಿ ಬಿಡುವ ಹಗ್ಗದ ಜಾಳಿಗೆ
ನೋತು > ನೋಂತು–ವ್ರತಮಾಡಿ
ಪಡಿಪಾಟು–ಪೇಚಾಟ, ತೊಂದರೆ
ಪತ್ತಲ–ಸೀರೆ
ಪನ್ನಂಗ > ಪನ್ನಗ–ಸರ್ಪ
ಪಯಾಬ್ಧಿ–ಹಾಲಿನ ಸಮುದ್ರ
ಪರ್ಣ–ಎಲೆ
ಪರವಣಿ > ಪರ್ವ (?)–ಹಬ್ಬ
ಪ್ರುತಕ–ಅವಲಕ್ಕಿ
ಪಾಕಶಾಸನ–ಇಂದ್ರ
ಪಾವಕ–ಬೆಂಕಿ
ಪಾಶ್ಯಗಾರ–ಬಲೆ ಹೂಡಿದವನು, ಮೋಸಗಾರ (?)
ಪೆಂಟಿ > ಪೆಂಟೆ–ಹೆಂಟೆ, ಮುದ್ದೆ
ಪೆಳೆ–ಪೈರಿನ ಸಾಲು
ಪೋಕಬುದ್ಧಿ–ನೀಚಬುದ್ಧಿ
ಬಂಡುಮಾತು–ಅಶ್ಲೀಲವಾದ ಮಾತು
ಬಡಿವಾರ–ಜಂಬ
ಬಣ್ಣ–ಸೀರೆ

ಬವಣಿ–ತೊಂದರೆ
ಬಾಜಾರ > ಬಜಾರ್–ಪೇಟೆಬೀದಿ
ಬಿಷ್ಟು–ಬಿಸುಟು
ಬೂಟಕತನ–ಮೋಸಗಾರಿಕೆ
ಭಾರ್ಯೆ— ಹೆಂಡತಿ
ಭಿಡಿಯ > ಭಿಡೆ–ದಾಕ್ಷಿಣ್ಯ
ಭೂಮ–ಮದುವೆಯಲ್ಲಿ ವಧುವರರಿಗೆ ಒಟ್ಟಿಗೇ ಹಾಕುವ ವಿಶೇಷಊಟ
ಭೃತ್ಯ–ಸೇವಕ
ಮಂಚಿಕೆ–ಅಟ್ಟಣೆ, ವೇದಿಕೆ
ಮಂಡಿ > ಮಂಡೆ–ತಲೆ
ಮಂಡೆಬೋಳಕ–ಸನ್ನ್ಯಾಸಿ (?)
ಮಕರ (ರಿ)–ಮೊಸಳೆ
ಮಟ್ಟಿ–ಮಣ್ಣು
ಮಥನ–ಕಡೆಯುವಿಕೆ
ಮದಡ–ದಡ್ಡ
ಮಾತುಳ–ಮಾವ
ಮಾದೇವಹಾರದವೇಣಿ–ಸರ್ಪದಂತೆ ಹೆರಳುಳ್ಳವಳು
ಮಿರ್ತು > ಮೃತ್ಯು–ಸಾವು
ಮಿಳ್ಳೆ–ನೀರುಕುಡಿಯಲು ಬಳಸುವ ಸಣ್ಣಪಾತ್ರೆ; ಥಾಲಿ
ಮೀಸಲು–ಪ್ರತ್ಯೇಕವಾಗಿ ತೆಗೆದಿರಿಸಿದ್ದು
ಮುಡಿಪು–ಮೀಸಲು
ಮುದ್ಗರ–ಗದೆ
ಮುಸಲ–ನೇಗಿಲು
ಮೂರ್ಜಗ–ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರುಲೋಕಗಳು
ಮೂರು ಮ್ಯಾಲೇಳು–ಹತ್ತು
ಯುಗಳ–ಜೋಡಿ
ರಜಕ–ಅಗಸ
ರಜತಪೀಠಪುರ–ಉಡುಪಿ
ರಸಾತಳ–ಪಾತಾಳಲೋಕಗಳಲ್ಲಿ ಒಂದು
ರೇಕು–ದಳ
ರೇಣು–ಧೂಳಿನ ಕಣ
ಲಾಜ–ಬತ್ತದ ಅರಳು
ವಗಲ್‌ವಗಲ್ ಮಾಡುತ–ಬಿನ್ನಾಣ ಮಾಡುತ್ತ (?)
ವಛ > ವತ್ಸ–ಕರು
ವಟ–ಆಲ
ವಟು–ಬ್ರಹ್ಮಚಾರಿ
ವರ್ಮ–ಗುಟ್ಟು
ವ್ಯಾಕುಲ–ದುಃಖ, ಚಿಂತೆ
ವ್ಯಾಳ್ಯ–ಸಮಯ
ವಿಗಡಗಂಟಕ–ಜಗಳಗಂಟ
ವಿರಿಂಚಿ–ಬ್ರಹ್ಮ
ವಿಷದನುಜೆ–ಲಕ್ಷ್ಮಿ
ವೃಕ–ತೋಳ
ವೇಣಿ–ಜಡೆ
ವೇಣು–ಬಿದಿರು
ಶಕ್ರ–ಇಂದ್ರ
ಶಾಕ–ತರಕಾರಿ
ಶಾಕೂತಿ–ಸಕಲಾತಿ (?)–ನಕ್ಕಿಕೆಲಸ ಮಾಡಿದ ರೇಷ್ಮೆಬಟ್ಟೆ
ಶಾಲ್ಯಾನ್ನ–ಗಂಧಶಾಲಿ ಅಕ್ಕಿಯ ಅನ್ನ
ಶ್ಯಾರೆ–ಬೊಗಸೆ
ಶ್ರೀಕಾಂತನ ಮುಖಸೂನು–ಸೂರ್ಯ
ಶುಕ್ಲ–ವೀರ್ಯ, ರೇತಸ್ಸು
ಶೂರಸುತ–ವಸುದೇವ
ಶೋಣಿ(ತ)–ರಕ್ತ
ಸಂಗ್ರಾಮ–ಯುದ್ಧ
ಸಂಚಿತ–ಕೂಡಿಟ್ಟ
ಸಗಟು–ಸೌಟು
ಸದ್ಯೋಜಾತ–ಶಿವ
ಸಪ್ತಜಿಂಹ್ವೆ–ಅಗ್ನಿ
ಸಾರ್ಯ–ಹತ್ತಿರ
ಸ್ಥಾವರ–ಸ್ಥಿರವಾದುದು
ಸ್ವಾದ–ರುಚಿ
ಸುರಪತಿಸುತ–ಅರ್ಜುನ
ಸೃಗಾಲ–ನರಿ
ಸಿಂಧು–ಸಮುದ್ರ
ಸೂನು–ಮಗ
ಸೂಪ–ಸಾರು (ಸೂಪ್ ?)
ಸೋಳ–ಹದಿನಾರು
ಹಮ್ಮು–ಅಹಂಕಾರ
ಹಯ–ಕುದುರೆ
ಹರದೇರು–ಮುತ್ತೈದೆಯರು
ಹರಿದಿನ–ಏಕಾದಶಿ

ಹಲ–ನೇಗಿಲು
ಪಾಂಶಿ (ಪಾಪಸೆ ?)–ಪಾಚಿ
ಹಾಕ್ಯಾಮಾತು–ಕೋಪದಮಾತು, ಜಗಳದ ಮಾತು
ಹುಟ್ಟು–ಮರದ ಸೌಟು
ಹುದಲು–ಕೆಸರು
ಹುದವು > ಹುದುವು–ಪಾಲು
ಹಿಕ್ಕು–ಬಾಚು

ಮಾಲತಿ
ಬಟ್ಟವಿ
ಗೌಲಿ } —ಪಾಯಸದ ಪರಿಕರಗಳು
ಪರಡಿ

ಕುಂಜರ
ಹಸ್ತಿ
ಕರಿ
ಸಾಮಜ } —ಆನೆ
ಗಜ
ನಾಗ
ದಂತಿ

ಆಲಯ
ಸದನ } —ಮನೆ
ಗೃಹ
ಧಾಮ

ಇಂದೀವರ
ವನರುಹ } —ತಾವರೆ
ಕಂಜ
ಸಾರಸ

ಅವನಿ
ಪೊಡವಿ
ಪೃಥ್ವಿ
ಕ್ಷೋಣಿ
ವಸುಧೆ } —ಭೂಮಿ
ರೂಢಿ
ಕುಂಭಿಣಿ
ಮೇದಿನಿ
ಇಳೆ
ಉರ್ವಿ

ಜಾಂಬೂನದ
ಹಾಟಕ } —ಬಂಗಾರ
ಹೇಮ
ಮಿಸುಣಿ(ನಿ)

# ಅನುಬಂಧ ೩

## ಶಬ್ದಸೂಚಿ

### ೧. ಅಂಕಿತ ನಾಮಗಳು

೧ ಅಂಗಜ—ಹಾ. ೧೨೫
೨ ಅಂಗಜಪಿತ—ಹಾ. ೨೬
೩ ಅಂಗದ—ಹಾ. ೮೧
೪ ಅಂಗೀರಸ (ಸ್ಸ)—ಹಾ. ೩೨
೫ ಅಂಜನಾ (ನೆ) —ಹಾ. ೮೦, ಹಾ. ೯೫, ಹಾ. ೧೨೯
೬ ಅಂಜನಾತ್ಮಜ—ಹಾ. ೯೬
೭ ಅಂತಕ—ಹಾ. ೫೬, ಹಾ. ೮೦, ಹಾ. ೧೦೨
೮ ಅಂಬರೀಷ—ಹಾ. ೩೨, ಹಾ. ೧೧೩, ಹಾ. ೧೨೦, ಹಾ. ೧೩೦
೯ ಅಂಬರೀಷವರದ—ಹಾ. ೧೩೦, (ಮುಹಾ. ಧ್ವ. ೬)
೧೦ ಅಂಬಾ—ಹಾ. ೨೮
೧೧ ಅಂಬುಜನಾಭ—ಹಾ. ೧೨
೧೨ ಅಂಬುಜೋದ್ಭವ—ಹಾ. ೧೬
೧೩ ಅಕ್ರೂರ—ಹಾ. ೩೨, ಹಾ. ೬೭, ಹಾ. ೮೬ ಹಾ. ೯೮, ಹಾ. ೧೧೩, ಹಾ. ೧೨೦, (ಪಹಾ.ಧ್ವ. ೨), (ರಕ. ಧ್ವ. ೨೯,೩೭) (ಸುಕ. ಧ್ವ. ೬, ೨೦)
೧೪ ಅಕ್ರೂರವರದ (ಮುಹಾ. ಧ್ವ, ೬) (ಸುಕ. ಧ್ವ. ೯)
೧೫ ಅಗಸ್ಯ—ಹಾ. ೩೨
೧೬ ಅಗ್ನಿ—(ನಚ. ಧ್ವ. ೧೩), (ಮುಹಾ. ಧ್ವ. ೪)
೧೭ ಅಚ್ಯುತ—ಹಾ. ೪೫, ಹಾ. ೬೯, ಹಾ. ೭೪, ಹಾ. ೯೦, ಹಾ. ೧೨೧, ಹಾ. ೧೨೭, ಹಾ. ೧೨೮, ಹಾ. ೧೩೦, ಹಾ. ೧೩೯, (ಮುಹಾ. ಧ್ವ. ೩೩, ೮೦) (ಪಹಾ. ಧ್ವ. ೧೨, ೨೨, ೪೬, ೫೬, ೫೭, ೬೫, ೬೬) (ಸುಕ. ಧ್ವ. ೩, ವ. ೧೩, ಧ್ವ. ೨೧)
೧೮ ಅಜ—ಹಾ. ೨೪, ಹಾ. ೩೨, ಹಾ. ೩೯, ಹಾ. ೬೧, ಹಾ. ೬೯, ಹಾ. ೯೬, ಹಾ. ೯೯, ಹಾ. ೧೧೩, ಹಾ. ೧೧೬, ಹಾ. ೧೨೦, ಹಾ. ೧೨೨ (ಮುಹಾ. ಧ್ವ. ೨೨, ೭೬, ಕಡೇಧ್ವನಿ.)
೧೯ ಅಜಗಣೇಂದ್ರ—ಹಾ. ೬೨
೨೦ ಅಜಜನಕ—ಹಾ. ೨೬
೨೧ ಅಜನಪಿತ—ಹಾ. ೯೧
೨೨ ಅಜನಯ್ಯ—ಹಾ. ೭೮
೨೩ ಅಜನಸತಿ—ಹಾ. ೧೩೦
೨೪ ಅಜಸುತ—ಹಾ. ೮೪
೨೫ ಅಜಾಮಿಳ—ಹಾ. ೩೨, ಹಾ. ೬೨, ಹಾ. ೬೯, ಹಾ. ೧೧೩, ಹಾ. ೧೨೦, ಹಾ. ೧೨೨, ಹಾ. ೧೩೦
೨೬ ಅತ್ರಿ—ಹಾ. ೩೨
೨೭ ಅದಿತಿ—ಹಾ. ೧೬, ಹಾ. ೧೦೨'
೨೮ ಅಧೋಕ್ಷಜ—ಹಾ. ೬೨, ಹಾ. ೧೨೩ ಹಾ. ೧೩೫, ಹಾ. ೧೩೯
೨೯ ಅನಂಗ—(ಪಹಾ. ವ. ೫೧) (ರಕ. ಧ್ವ. ೪೯)
೩೦ ಅನಂತ—ಹಾ. ೧೩೦, (ಪಹಾ. ಧ್ವ. ೪೬, ೬೬)
೩೧ ಅನಂತ ಮಹಿಮ—ಹಾ. ೧೩೪
೩೨ ಅನಂತಮೂರುತಿ—ಹಾ. ೧೦೭
೩೩ ಅನಂತಶಯನ (ಅನಂತಶಾಯಿ)—ಹಾ. ೯೧ (ಸುಕ. ಧ್ವ. ೩೦)
೩೪ ಅನಂತಾಸನ—ಹಾ. ೧೫, ಹಾ. ೩೨, ಹಾ. ೪೯, ಹಾ. ೭೭
೩೫ ಅನಲ—(ಸುಕ. ಧ್ವ. ೩)
೩೬ ಅನಸೂಯ—(ಶಹಾ. ಧ್ವ. ೧೫, ೧೭, ೧೯, ೨೫, ವ. ೩೦, ೫೦)
೩೭ ಅನ್ನಪೂರ್ಣೆ—ಹಾ. ೨
೩೮ ಅನಿರುದ್ಧ—ಹಾ. ೧೬, ಹಾ. ೩೨, ಹಾ. ೧೩೫, ಹಾ. ೧೩೬, ಹಾ. ೧೩೯, (ಪಹಾ. ಧ್ವ. ೩೬) (ಮುಹಾ. ಧ್ವ. ೬, ೧೪, ೨೪, ೬೮) (ಸುಕ. ಧ್ವ. ೨೪)

## ೨ ಒಡವೆಗಳು

೨೬ ಚಂದ್ರಬಾಳ್ಯ, ಗಿಳಿಬಾಳ್ಯ (?) (ಚಂದ್ರಬಾಳಿ) — ಹಾ. ೬, ಹಾ. ೪೩, ಹಾ. ೪೫, ಹಾ. ೪೯, ಹಾ. ೬೦, ಹಾ. ೧೩೦ (ನಚ. ಧ್ವ. ೧೯) (ಪಹಾ. ಧ್ವ. ೮, ೫೮, ವ. ೬೫) (ಶಹಾ. ವ. ೪) (ರಕ. ವ. ೧೮, ೩೪) (ಸುಕ. ನು. ೭, ವ. ೧೩)

೨೭ ಚಂದ್ರಹಾರ, ಚಂದ್ರಹಾರಸರ—ಹಾ. ೪೫, ಹಾ. ೪೯, ಹಾ. ೯೨, ಹಾ. ೧೩೫ (ನಚ. ಧ್ವ. ೧೯) (ಪಹಾ. ಧ್ವ. ೫೮, ವ. ೬೫) (ರಕ. ವ. ೧೮) (ಸುಕ. ವ. ೧೩)

೨೮ ಚಳತುಂಬು—ಹಾ. ೪೩, ಹಾ. ೫೫, ಹಾ. ೧೦೦ (ಪಹಾ. ಧ್ವ. ೫೮)

೨೯ ಚಿಂತಾಕು—ಹಾ. ೬, ಹಾ. ೪೩, ಹಾ. ೬೦

೩೦ ಚಿನ್ನದಕಡ್ಡಿ—ಹಾ. ೪೩

೩೧ ಚೂಡ್ಯ (ಚೂಡೆ) ವಂಕಿ—ಹಾ. ೬, ಹಾ. ೪೩, ಹಾ. ೪೫, ಹಾ. ೪೯, ಹಾ. ೫೫, ಹಾ. ೫೮, ಹಾ. ೬೦, ಹಾ. ೭೬, ಹಾ. ೯೦, ಹಾ. ೯೧, ಹಾ. ೯೨, ಹಾ. ೧೦೦, ಹಾ. ೧೨೧, ಹಾ. ೧೩೦, ಹಾ. ೧೩೫ (ನಚ. ಧ್ವ. ೧೯, ೯೩, ೧೦೫) (ಮುಹಾ. ಧ್ವ. ೩೨, ೪೦, ೪೩, ೬೨, ೭೦) (ಪಹಾ. ಧ್ವ. ೮, ೫೮, ವ. ೬೫) (ಶಹಾ. ವ. ೪) (ರಕ. ವ. ೧೮, ೩೪) (ಸುಕ. ನು. ೬, ಧ್ವ. ೯ ವ. ೧೩)

೩೨ ಚೌಕುಳಿ (ಚೌಕಳಿ)—ಹಾ. ೧೦೦, ಹಾ. ೧೩೦ (ಪಹಾ. ಧ್ವ. ೫೮)

೩೩ ಚೌರಿ—ಹಾ. ೧೨, ಹಾ. ೪೩, ಹಾ. ೬೦, ಹಾ. ೯೦, ಹಾ. ೯೨, ಹಾ. ೧೩೦, ಹಾ. ೧೩೫ (ನಚ. ಧ್ವ. ೩೯) (ಮುಹಾ. ಧ್ವ. ೧, ೩೨, ೬೨, ೭೦) (ಪಹಾ. ಧ್ವ. ೮, ವ. ೬೫) (ಸುಕ. ವ. ೧೩)

೩೪ ಜಡೆಬಂಗಾರ, ಹೆರಳುಬಂಗಾರ—ಹಾ. ೬, ಹಾ. ೪೩, ಹಾ. ೪೫, ಹಾ. ೪೯, ಹಾ. ೫೫. ಹಾ. ೬೦, ಹಾ. ೯೦, ಹಾ. ೯೨, ಹಾ. ೧೦೪, ಹಾ. ೧೩೫, ಹಾ. ೧೪೨ (ನಚ. ಧ್ವ. ೧೧, ೧೯, ೯೩, ೧೦೫) (ಮುಹಾ. ಧ್ವ. ೩೨, ೬೨, ೭೦) (ಪಹಾ. ಧ್ವ. ೮, ೫೮, ವ. ೬೫) (ರಕ ವ. ೧೮, ವ. ೩೪. ಧ್ವ. ೪೩, ವ. ೫೨.) (ಸುಕ. ನು. ೪, ವ. ೧೩)

೩೫ ಜಾಳಿಗೆ—(ಮುಹಾ. ಧ್ವ. ೩೨)

೩೬ ಝಾಲಕ, ಝೂಲರ, (ಝುಲ್ಲರಿ), ಝುಳಕು—(ನಚ. ಧ್ವ. ೧೯) (ಮುಹಾಧ್ವ. ೪೦) (ಪಹಾ. ವ. ೬೫) (ಶಹಾ. ವ. ೪)

೩೭ ತಾಯಿತ—ಹಾ. ೪೩, ಹಾ. ೧೦೦ (ಮುಹಾ. ಧ್ವ. ೭೦)

೩೮ ತಾಳಿ—(ಹಾ. ೪೩)

೩೯ ತೊಂಡಿಲು (ತೊಂಡಲ್)—ಹಾ. ೪೩

೪೦ ತೋಡ್ಯ (ತೋಡ)—ಹಾ. ೪೩ ಹಾ. ೫೮. (ನಚ ಧ್ವ. ೯೩).

೪೧ ತೋಳಬಂದಿ, ಬಂದಿ—ಹಾ. ೮ (ಮುಹಾ. ಧ್ವ. ೩೨) (ರಕ. ಧ್ವ. ೪೯)

೪೨ ದ್ರಾಕ್ಷಿಬಳ್ಳಿ, ದ್ರಾಕ್ಷಿಬಳ್ಳಿಗೊಂಚಲು—ಹಾ. ೧೩೦, (ಪಹಾ. ವ. ೬೫) (ರಕ. ವ. ೧೮) (ಸುಕ. ವ. ೧೩)

೪೩ ದ್ವಾರ್ಯ (ದೋರೆ)—ಹಾ. ೬, ಹಾ. ೪೩, ಹಾ. ೪೫, ಹಾ. ೪೯, ಹಾ. ೫೫, ಹಾ. ೯೦, ಹಾ. ೯೨, ಹಾ. ೧೩೦, ಹಾ. ೧೩೫ (ನಚ. ಧ್ವ. ೧೯, ೯೩, ೧೦೫) (ಮುಹಾ. ಧ್ವ. ೩೨, ೩೮, ೪೦, ೬೨) (ಪಹಾ. ಧ್ವ. ೮, ೫೮, ವ. ೬೫) (ಶಹಾ. ವ. ೪) (ರಕ. ವ. ೧೮, ವ. ೩೪, ಧ್ವ. ೩೯, ವ. ೫೨) (ಸುಕ. ನು. ೬, ಧ್ವ. ೯, ವ. ೧೩)

೪೪ ದುಂಡು—(ಪಹಾ. ಧ್ವ. ೮)

೪೫ ನಾಗಮುರಿಗೆ, ಉರುಗಮುರುಗಿ—ಹಾ. ೬, ಹಾ. ೧೧, ಹಾ. ೪೫, ಹಾ. ೪೯, ಹಾ. ೫೫, ಹಾ. ೬೦, ಹಾ. ೯೦, ಹಾ. ೯೨, ಹಾ. ೧೦೦, ಹಾ. ೧೨೧, ಹಾ. ೧೩೦, (ನಚ. ಧ್ವ. ೧೯, ೯೩, ೧೦೫) (ಮುಹಾ. ಧ್ವ. ೭೦) (ಪಹಾ. ಧ್ವ. ೮, ೫೮, ವ. ೬೫) (ಶಹಾ. ವ. ೪) (ರಕ. ವ. ೧೮, ೩೪, ಧ್ವ. ೪೯) (ಸುಕ. ನು. ೬, ವ. ೧೩)

೪೬ ನೂಪುರ—ಹಾ. ೩೧, ಹಾ. ೧೨೫. (ಮುಹಾ. ಧ್ವ. ೩೨) (ಪಹಾ. ಧ್ವ. ೩೪, ವ. ೬೫)

೪೭ ಪದಕ—ಹಾ. ೨, ಹಾ. ೧೧, ಹಾ. ೧೨, ಹಾ. ೧೬, ಹಾ. ೧೮, ಹಾ. ೪೩, ಹಾ. ೪೯, ಹಾ. ೫೮. ಹಾ. ೬೦, ಹಾ. ೭೫, ಹಾ. ೭೬, ಹಾ. ೮೬, ಹಾ. ೯೦, ಹಾ. ೯೧, ಹಾ. ೯೨, ಹಾ. ೯೪, ಹಾ. ೧೦೦, ಹಾ. ೧೨೧, ಹಾ. ೧೩೦, ಹಾ. ೧೩೫ (ನಚ. ಧ್ವ. ೧೧, ೧೯, ೯೩) (ಮುಹಾ. ಧ್ವ. ೩೨, ೪೧, ೭೧, ೭೨) (ಪಹಾ. ಧ್ವ. ೨೪, ವ. ೬೫) (ರಕ. ವ. ೧೮, ೩೨, ೩೪, ೫೨, ಧ್ವ. ೬೧) (ಸುಕ. ಧ್ವ. ೯, ವ. ೩೧, ಕೊನೆಯ ಆರತಿ ಹಾಡು)

೪೮ ಪಾಗಡ—ಹಾ. ೨, ಹಾ. ೮, ಹಾ. ೪೩,

೪೯ ಪಿಲ್ಯ (<ಪಿಲ್ಲಿ)—ಹಾ. ೪೩ ಹಾ. ೧೩೦ ಹಾ. ೧೩೫ (ನಚ. ಧ್ವ. ೧೯,) (ಪಹಾ. ವ. ೬೫) (ರಕ. ವ. ೪೮) (ಸುಕ. ವ. ೧೩)

೫೦ ಪುತ್ಥಳಿ, (ಪುತ್ಥಳಿಸರ. ಪುತ್ಥಳಿಹಾರ)—ಹಾ. ೪೫ ಹಾ. ೪೯ ಹಾ. ೯೨ ಹಾ. ೧೩೦ ಹಾ. ೧೩೫ (ನಚ. ಧ್ವ. ೧೯) (ಮುಹಾ. ಧ್ವ. ೯) (ಪಹಾ. ಧ್ವ. ೮, ೫೮, ವ. ೬೫) (ರಕ. ವ. ೧೮, ಧ್ವ. ೪೩) (ಸುಕ. ವ. ೧೩)

೫೧ ಪೆಂಡೆ, ಪೆಂಡ್ಯ—ಹಾ. ೯೧, (ನಚ. ಧ್ವ. ೧೨೫) (ಪಹಾ. ಧ್ವ. ೮) (ರಕ. ವ. ೧೮, ೩೪)

೫೨ ಪೈಜಣ—ಹಾ. ೪೩ ಹಾ. ೪೫ ಹಾ. ೪೯, ಹಾ. ೯೨, ಹಾ. ೧೩೦, ಹಾ. ೧೩೫, (ನಚ. ಧ್ವ. ೧೯, ೯೩, ೧೦೫) (ಪಹಾ. ಧ್ವ. ೮, ವ. ೬೫) (ಶಹಾ. ವ. ೪) (ರಕ. ವ. ೧೮, ೩೪, ೫೨) (ಸುಕ. ನು. ೫, ವ. ೧೩)

೫೩ ಬಳೆ—ಹಾ. ೧೧, ಹಾ. ೧೨, ಹಾ. ೨೮, ಹಾ. ೭೬, (ಮುಹಾ. ಧ್ವ. ೪೦) (ಶಹಾ. ವ. ೪) (ರಕ. ವ. ೧೮, ೪೮) (ಸುಕ. ವ. ೧೩)

೫೪ ಬಾಜುಬಂದು (<ಬಾಜುಬಂದ)—ಹಾ. ೪೩, ಹಾ. ೪೫, ಹಾ. ೪೯, ಹಾ. ೧೩೫ (ನಚ. ಧ್ವ. ೧೯, ೧೦೫) (ಮುಹಾ. ಧ್ವ. ೩೨, ೭೦) (ಪಹಾ. ಧ್ವ. ೮, ವ. ೬೫) (ರಕ. ವ. ೩೪, ಧ್ವ. ೪೯) (ಸುಕ. ನು. ೬, ಫ. ೧೩)

೫೫ ಬಾವುಲಿ (<ಬಾವಲಿ)—ಹಾ ೧೨, ಹಾ. ೯೦, ಹಾ. ೧೦೦, ಹಾ. ೧೩೦ (ನಚ. ಧ್ವ. ೯೩) (ಮುಹಾ. ಧ್ವ. ೩೮) (ಪಹಾ. ಧ್ವ. ೮, ೫೮)

೫೬ ಬಾಹುಪುರಿ, ಬಾಪುರಿ (<ಭಾಪುರಿ)—ಹಾ. ೮, ಹಾ. ೨೫, ಹಾ. ೫೮, ಹಾ. ೭೬, ಹಾ. ೯೧, ಹಾ. ೧೩೦ (ಪಹಾ. ಧ್ವ. ೩೪)

೫೭ ಬಿಂದಲಿ—ಹಾ. ೫೮ ಹಾ. ೧೦೦ ಹಾ. ೧೩೦ (ಪಹಾ. ಧ್ವ. ೫೮)

೫೮ ಬುಗುಡಿ—ಹಾ. ೬, ಹಾ. ೪೩ ಹಾ. ೪೫, ಹಾ. ೪೯, ಹಾ. ೯೦, ಹಾ. ೯೨. ಹಾ. ೧೩೦, ಹಾ. ೧೩೫, (ನಚ. ಧ್ವ, ೧೯, ೯೩) (ಮುಹಾ. ಧ್ವ. ೩೨, ೩೮, ೪೦) (ಪಹಾ. ಧ್ವ. ೮, ೫೮, ವ. ೬೫) (ಶಹಾ. ವ. ೪) (ರಕ. ವ. ೧೮, ೩೪) (ಸುಕ. ನು. ೫, ವ. ೧೩)

೫೯ ಬುಲಾಕು—ಹಾ. ೪೯, ಹಾ, ೯೨, ಹಾ ೧೩೫, (ನಚ ಧ್ವ. ೧೯, ೯೩) (ಪಹಾ. ಧ್ವ. ೮) (ಶಹಾ. ವ. ೪) (ರಕ. ವ. ೩೪) (ಸುಕ. ವ. ೧೩)

೬೦ ಬೇಸರಿ—(ನಚ. ಧ್ವ. ೧೯) (ರಕ. ವ. ೩೪)

೬೧ ಭುಜಕೀರ್ತಿ—ಹಾ. ೨, ಹಾ. ೩೧, ಹಾ. ೧೦೦,(ಶಹಾ. ವ. ೧೨)

೬೨ ಮಂಗಳಸೂತ್ರ—ಹಾ. ೨೮ (ರಕ. ವ. ೩೪) (ಸುಕ. ಧ್ವ. ೨೦)

೬೩ ಮಲಕು. ಮಲಕುಮುತ್ತಿನಹಾರ—ಹಾ. ೪೩, ಹಾ. ೧೦೦ (ಮುಹಾ. ಧ್ವ. ೪೦) (ಪಹಾ. ಧ್ವ. ೮) (ರಕ. ಧ್ವ. ೪೯)

೬೪ ಮಾಗಾಯಿ—ಹಾ. ೮

೬೫ ಮಿಂಚು—(ನಚ. ಧ್ವ. ೨೩) (ಮುಹಾ. ಧ್ವ. ೭೧) (ರಕ. ವ. ೪೮)

೬೬ ಮುಕುರ್ಕ (< ಮುಕುರ)—ಹಾ. ೬, ಹಾ ೪೩, ಹಾ. ೪೯, ಹಾ. ೯೨, ಹಾ. ೧೩೦, ಹಾ. ೧೩೫. (ನಚ. ಧ್ವ. ೧೯, ೯೩) (ಪಹಾ. ಧ್ವ. ೮, ವ. ೬೫) (ಶಹಾ. ವ. ೪) (ರಕ. ವ. ೧೮, ೩೪, ಧ್ವ. ೪೩) (ಸುಕ. ವ. ೧೩)

೬೭ ಮುತ್ತಿನದಂಡೆ, ಮುತ್ತಿನಗಂಟೆ—ಹಾ. ೪೩ ಹಾ. ೯೦, ಹಾ. ೧೨೧ (ಮುಹಾ. ಧ್ವ. ೩೨, ೭೦) (ರಕ. ವ. ೩೪)

೬೮ ಮುದ್ರೆ, ಮುದ್ರಿಕೆ—ಹಾ. ೯೧, ಹಾ. ೧೩೦, (ಪಹಾ. ಧ್ವ. ೮, ವ. ೬೫)

೬೯ ಮುರಡಿ (< ಮುರುಡಿ)—(ರಕ. ವ. ೩೪)

೭೦ ಮುರುವು—ಹಾ. ೪೩, ಹಾ. ೧೩೫, (ಪಹಾ. ಧ್ವ. ೫೮)

೭೧ ಮೂಗುತಿ—ಹಾ. ೧೨, ಹಾ ೪೫, ಹಾ. ೮೬, ಹಾ ೯೦, ಹಾ. ೯೧, (ನಚ. ಧ್ವ. ೧೦೫) (ಮುಹಾ. ಧ್ವ. ೩೨) (ಪಹಾ. ಧ್ವ. ೫೮) (ರಕ. ಧ್ವ. ೨೯) (ಸುಕ. ನು. ೬)

೭೨ ಮೆಂಟಿಕೆ—ಹಾ. ೪೩

೭೩ ಮೋಹನ್ಮಾಲೆ—ಹಾ. ೪೫, ಹಾ. ೫೫ (ಪಹಾ. ಧ್ವ. ೫೮, ವ. ೬೫) (ರಕ. ಧ್ವ. ೪೩)

೭೪ ರಾಗಟೆ—ಹಾ. ೧೨, ಹಾ. ೪೩, ಹಾ. ೪೫, ಹಾ. ೪೯, ಹಾ. ೫೫, ಹಾ. ೬೦, ಹಾ. ೯೦, ಹಾ. ೯೨, ಹಾ. ೧೦೪, ಹಾ. ೧೩೫, ಹಾ. ೧೪೨ (ನಚ. ಧ್ವ. ೧೧, ೧೯, ೯೩, ೧೦೫) (ಮುಹಾ. ಧ್ವ. ೧, ೬೨, ೭೦) (ಪಹಾ. ಧ್ವ. ೮, ವ. ೬೫) (ಶಹಾ. ವ. ೪) (ರಕ. ವ. ೧೮, ೩೪) (ಸುಕ. ನು. ೪, ವ. ೧೩)

೭೫ ರುಳಿ—ಹಾ. ೨, ಹಾ. ೧೨, ಹಾ. ೧೩, ಹಾ. ೪೩, ಹಾ. ೪೫, ಹಾ. ೪೯, ಹಾ. ೫೫, ಹಾ. ೯೨, ಹಾ. ೧೩೦, ಹಾ. ೧೩೫ (ನಚ. ಧ್ವ. ೧೯, ೯೩, ೧೦೫) (ಪಹಾ. ಧ್ವ. ೮, ವ. ೬೫) (ಶಹಾ. ವ. ೪) (ರಕ. ವ. ೧೮, ೩೪, ಧ್ವ. ೪೯, ವ. ೫೨) (ಸುಕ. ನು. ೫, ಧ್ವ. ೯, ವ. ೧೩)

೭೬ ಲುಲ್ಲು—ಹಾ. ೪೩, ಹಾ. ೧೩೦, ಹಾ. ೧೩೫, (ನಚ. ಧ್ವ. ೧೯) (ರಕ. ಧ್ವ. ೪೯, ವ. ೫೨) (ಸುಕ. ವ. ೧೩)

೭೭ ವಜ್ರದ್ಬೂವು—ಹಾ. ೧೩೦

೭೮ ಸರ, ಸರಹಾರ—ಹಾ. ೨, ಹಾ. ೬, ಹಾ. ೧೧, ಹಾ. ೧೨, ಹಾ. ೧೬, ಹಾ. ೪೩, ಹಾ. ೪೯, ಹಾ. ೫೮, ಹಾ. ೬೧, ಹಾ. ೭೬, ಹಾ. ೮೬, ಹಾ. ೯೦, ಹಾ. ೯೧, ಹಾ. ೯೨, ಹಾ. ೧೨೧, ಹಾ. ೧೩೦ (ನಚ. ಧ್ವ. ೧೧, ೯೩) (ಮುಹಾ. ಧ್ವ. ೩೨, ೪೦, ೪೧, ೬೨, ೬೬, ೭೧, ೭೨) (ಪಹಾ. ಧ್ವ. ೮, ೨೫, ೩೪) (ರಕ. ಧ್ವ. ೭, ವ. ೨೮, ೩೨, ೫೨, ಧ್ವ. ೫೯, ೬೧) (ಸುಕ. ನು. ೫, ಧ್ವ. ೯, ವ. ೩೧, ಕೊನೆಯ ಆರತಿಹಾಡು)

೭೯ ಸರಪಳಿ (ಕಾಲಸರಪಳಿ, ಕೆನ್ನೆಸರಪಳಿ)—ಹಾ. ೬, ಹಾ. ೪೫, ಹಾ. ೪೯, ಹಾ. ೫೫ ಹಾ. ೯೦, ಹಾ. ೯೧, ಹಾ. ೧೩೦, ಹಾ. ೧೩೫ (ನಚ. ಧ್ವ. ೧೯) (ಮುಹಾ. ಧ್ವ. ೩೮, ೭೦) (ಶಹಾ. ವ. ೪) (ರಕ. ವ. ೩೪)

೮೦ ಸರಿಗೆ—ಹಾ. ೨, ಹಾ. ೬, ಹಾ. ೧೧, ಹಾ. ೪೩, ಹಾ. ೪೯, ಹಾ. ೫೫, ಹಾ. ೬೦, ಹಾ. ೯೨, ಹಾ. ೧೨೧, ಹಾ. ೧೩೦, ಹಾ. ೧೩೫, (ನಚ. ಧ್ವ. ೧೯, ೯೩, ೧೦೫) (ಮುಹಾ. ಧ್ವ. ೩೨, ೭೦, ೭೧, (ಪಹಾ. ಧ್ವ. ೮. ೫೮, ವ. ೬೫) (ರಕ. ವ. ೧೮) (ಸುಕ. ನು. ೫, ವ. ೧೩)

೮೧ ಸೂರ್ಯ—ಹಾ. ೪೩

೮೨ ಹರಡಿ(?)—ಹಾ. ೬, ಹಾ. ೪೩, ಹಾ. ೪೫, ಹಾ. ೫೫, ಹಾ. ೬೦, ಹಾ. ೮೬, ಹಾ. ೯೦, ಹಾ. ೧೩೦ (ನಚ. ಧ್ವ. ೧೯, ೯೩) (ಮುಹಾ. ಧ್ವ. ೩೨. ೩೮, ೪೦, ೬೨) (ಪಹಾ. ಧ್ವ. ೮, ೫೮, ವ. ೬೫) (ರಕ. ವ. ೧೮, ೩೪, ಧ್ವ. ೪೯) (ಸುಕ. ನು. ೬, ವ. ೧೩)

೮೩ ಹವಳ—ಹಾ. ೪೩

೮೪ ಹಿಂಬಳೆ—ಹಾ. ೬೦, ಹಾ. ೧೩೮, (ರಕ. ವ. ೩೪)

೮೫ ಹುಲಿಯುಗುರು—ಹಾ. ೧೦೦

## ೩ ಅಡುಗೆ, ತಿಂಡಿ ಮತ್ತು ಪರಿಕರಗಳು

೧ ಅಂಬಲಿ—ಹಾ. ೩೩, ಹಾ. ೫೦, ಹಾ. ೧೩೫
೨ ಅತಿರಸ—(ಮುಹಾ. ಧ್ವ. ೧೦, ೭೪) (ರಕ. ಧ್ವ. ೫೧)
೩ ಅನ್ನ, ಓಗರ—ಹಾ. ೩೩, ಹಾ. ೭೫, ಹಾ. ೭೬, ಹಾ. ೧೩೫, ಹಾ. ೧೪೦, (ನಚ. ಧ್ವ. ೮೧) (ಮುಹಾ. ಧ್ವ ೭೪) (ಪಹಾ ಧ್ವ. ೩೮)
೪ ಅನಾರಸ—ಹಾ. ೬೦, ಹಾ. ೧೩೫
೫ ಅಪ್ಪಾಲು—(ಮುಹಾ. ಧ್ವ. ೧೦, ೭೪) (ರಕ. ಧ್ವ. ೫೧)
೬ ಅವಲಕ್ಕಿ—ಹಾ. ೮೪, ಹಾ. ೧೩೦
೭ ಅಪ್ಪಗುಳ್ಳ—ಹಾ. ೭
೮ ಅಂಬೊಡೆ—ಹಾ. ೭, ಹಾ. ೧೩೦, ಹಾ. ೧೩೫, (ಮುಹಾ. ಧ್ವ. ೭೪), (ರಕ. ಧ್ವ. ೫೧) (ಸುಕ. ಧ್ವ. ೨೦)
೯ ಉಂಡೆ—(ಮುಹಾ. ಧ್ವ. ೭೪)
೧೦ ಉಪ್ಪಿನ ಕಡುವು—ಹಾ. ೧೩೫
೧೧ ಉಪ್ಪಿನಕಾಯಿ, ನಿಂಬೆ, ಮಾವಿನುಪ್ಪಿನಕಾಯಿ—ಹಾ. ೧೩೦, ಹಾ. ೧೩೫, (ಮುಹಾ, ಧ್ವ. ೭೪) (ರಕ. ಧ್ವ. ೫೧)
೧೨ ಉಪ್ಪೇರಿ—ಹಾ. ೧೩೫
೧೩ ಎಣ್ಣೋರಿಗೆ—ಹಾ. ೭, ಹಾ. ೫೦, ಹಾ. ೧೦೧, ಹಾ. ೧೨೧, ಹಾ. ೧೩೦, ಹಾ. ೧೩೫, (ಮುಹಾ. ಧ್ವ. ೭೪) (ಪಹಾ. ಧ್ವ. ೩೮), (ರಕ. ಧ್ವ. ೫೧) (ಸುಕ. ಧ್ವ. ೨೦, ೩೦)
೧೪ ಕಣಕಪ್ಪಾಲಗ(?)—ಹಾ. ೭೭
೧೫ ಕಡಲೆ ಹೂರಣಗಡುವು—ಹಾ. ೧೩೫
೧೬ ಕರ್ಜಿಕಾಯಿ—ಹಾ. ೭, ಹಾ ೧೦೧, ಹಾ. ೧೩೦, (ಮುಹಾ. ಧ್ವ. ೭೪) (ರಕ. ಧ್ವ. ೫೧)
೧೭ ಕಲಸನ್ನ—ಹಾ. ೭, (ಮುಹಾ. ಧ್ವ. ೭೪)
೧೮ ಕಾಯ್ಪಾಲು, ಕಾಯಿರಸ—ಹಾ. ೭, ಹಾ. ೧೩೫, (ಮುಹಾ. ಧ್ವ. ೭೪) (ಸುಕ ಧ್ವ. ೨೦)
೧೯ ಕೀರು—ಹಾ. ೩೩, ಹಾ. ೧೩೫, (ಪಹಾ. ಧ್ವ. ೩೮)
೨೦ ಕೆನೆಮೊಸರು, ಮೊಸರು, ದಧಿ—ಹಾ. ೭, ಹಾ. ೩೩, ಹಾ. ೬೦, ಹಾ. ೭೯, ಹಾ. ೧೩೦, ಹಾ. ೧೩೫, (ಮುಹಾ. ಧ್ವ. ೧೦, ೨೪, ೭೪) (ರಕ. ಧ್ವ. ೫೧) (ಸುಕ. ಧ್ವ. ೧೦, ೨೦)
೨೧ ಕೇಸರಿಭಾತು—ಹಾ. ೧೩೫ (ಮುಹಾ. ಧ್ವ. ೭೪) (ರಕ. ಧ್ವ. ೫೧)
೨೨ ಕೊಬ್ಬರಿಖಾರ—ಹಾ. ೩೩
೨೩ ಕೋಸಂಬರಿ—ಹಾ. ೭, ಹಾ. ೧೩೦, ಹಾ. ೧೩೫, (ಮುಹಾ. ಧ್ವ. ೭೪), (ರಕ. ಧ್ವ. ೫೧) (ಸುಕ. ಧ್ವ. ೨೦)
೨೪ ಗಿಲಗಂಜಿ (>ಗಿಲಿಗಿಂಚಿ)—ಹಾ. ೧೩೫
೨೫ ಗುಳ್ಳೋರಿಗೆ—ಹಾ. ೭, ಹಾ. ೧೦೧, ಹಾ. ೧೩೦, (ಮುಹಾ. ಧ್ವ. ೭೪) (ರಕ. ಧ್ವ. ೫೧)
೨೬ ಗೇಹೂರಿ, ಗೇಹೂರ (>ಹೂರಿಗೆ?) ಹಾ. ೧೩೫, (ಮುಹಾ. ಧ್ವ. ೭೪)
೨೭ ಗೌಲಿ—ಹಾ. ೭, ಹಾ. ೧೦೧, ಹಾ. ೧೩೫, (ಮುಹಾ. ಧ್ವ. ೭೪) ,(ರಕ. ಧ್ವ. ೫೧) (ಸುಕ. ಧ್ವ. ೨೦)
೨೮ ಘೃತ, ತುಪ್ಪ—ಹಾ. ೭, ಹಾ. ೧೨, ಹಾ. ೩೩, ಹಾ. ೩೬, ಹಾ. ೫೦, ಹಾ. ೬೦, ಹಾ. ೬೧, ಹಾ. ೭೯, ಹಾ. ೧೦೧. ಹಾ. ೧೧೫, ಹಾ. ೧೨೧, ಹಾ. ೧೩೦, ಹಾ. ೧೩೫ (ಮುಹಾ. ಧ್ವ. ೧೦, ೭೪) (ಪಹಾ. ಧ್ವ. ೩೮, ವ. ೬೫) (ರಕ. ಧ್ವ. ೩೩, ೫೧, ೫೫,) (ಸುಕ. ಧ್ವ. ೧೦, ೨೦, ೩೦)
೨೯ ಚಕ್ಕುಲಿ—ಹಾ. ೭, ಹಾ. ೧೦೧, ಹಾ. ೧೩೦, ಹಾ. ೧೩೫, (ಮುಹಾ. ಧ್ವ. ೭೪) (ರಕ. ಧ್ವ. ೫೧)
೩೦ ಚಟ್ಟಣಿ—ಹಾ. ೭, ಹಾ. ೩೩, ಹಾ. ೧೩೫, (ಮುಹಾ. ಧ್ವ .೭೪) (ರಕ. ಧ್ವ. ೫೧)
೩೧ ಚಿತ್ರಾನ್ನ—ಹಾ. ೬೦, ಹಾ. ೧೩೦, ಹಾ. ೧೩೫, (ರಕ. ಧ್ವ. ೫೧) (ಸುಕ. ಧ್ವ. ೨೦)
೩೨ ಚಿರೋಟಿ—ಹಾ. ೧೩೫

೭೧ ಮೋತಿಚೂರು(?)—ಹಾ. ೧೩೫, (ಮುಹಾ. ಧ್ವ. ೭೪)

೭೨ ರಸ(?)—ಹಾ. ೧೩೫, (ರಕ. ಧ್ವ. ೫೧)

೭೩ ಲಡ್ಡಿಗೆ, ಲಾಡು—ಹಾ. ೬೧, ಹಾ. ೭೫, ಹಾ. ೮೨, (ಮುಹಾ. ಧ್ವ. ೧೦), (ರಕ. ಧ್ವ. ೫೧)

೭೪ ಶಂಕ್ರಿಗಂಡನ ಅಡಿಗೆ(?)—ಹಾ. ೩೩

೭೫ ಶಾಕ, ಶಾಕಪಾಕ, ಶಾಕಗಳು—ಹಾ. ೭, ಹಾ. ೩೩, ಹಾ. ೧೨೧, ಹಾ. ೧೩೦, ಹಾ. ೧೩೫, (ನಚ. ಧ್ವ. ೮೧), (ಸುಕ. ಧ್ವ. ೧೦, ೨೦)

೭೬ ಶಾಖಸೂಪ—ಹಾ. ೩೩

೭೭ ಶಾಲ್ಯಾನ್ನ—ಹಾ. ೭, ಹಾ. ೩೩, ಹಾ. ೫೦, ಹಾ. ೧೦೧, ಹಾ. ೧೨೧, ಹಾ. ೧೩೦, ಹಾ. ೧೩೫, (ಮುಹಾ. ಧ್ವ. ೭೪) (ರಕ. ಧ್ವ. ೫೧) (ಸುಕ. ಧ್ವ. ೧೦, ೨೦, ೩೦)

೭೮ ಶಾವಿಗೆ, ಶ್ಯಾವಿಗೆ—ಹಾ. ೭, ಹಾ. ೫೦, ಹಾ. ೬೦, ಹಾ. ೧೦೧, ಹಾ. ೧೨೧, ಹಾ. ೧೩೫, (ಮುಹಾ. ಧ್ವ. ೭೪), (ರಕ. ಧ್ವ. ೫೧) (ಸುಕ. ಧ್ವ. ೨೦, ೩೦)

೭೯ ಶಿಖಿಯದುಂಡೆ, ಸುಕಿಯದುಂಡೆ (ಸಕ್ಕಿನುಂಡೆ?)—ಹಾ. ೧೩೫, (ಮುಹಾ. ಧ್ವ. ೭೪) (ರಕ. ಧ್ವ. ೫೧)

೮೦ ಸಂಡಿಗೆ—ಹಾ. ೧೦೧, ಹಾ. ೧೩೦, ಹಾ. ೧೩೫, (ಮುಹಾ. ಧ್ವ. ೭೪) (ರಕ. ಧ್ವ. ೫೧) (ಸುಕ. ಧ್ವ. ೨೦)

೮೧ ಸಕ್ಕರೆ—ಹಾ. ೭, ಹಾ. ೩೩, ಹಾ. ೮೨, ಹಾ. ೧೦೧, ಹಾ. ೧೧೫, ಹಾ. ೧೨೧, ಹಾ. ೧೩೦, ಹಾ. ೧೩೫, (ಮುಹಾ. ಧ್ವ. ೧೦, ೭೪) (ಪಹಾ. ವ. ೬೫) (ರಕ. ಧ್ವ. ೩೩, ೫೧, ೫೫) (ಸುಕ. ಧ್ವ. ೧೦, ೨೦, ೩೦)

೮೨ ಸಬ್ಬಿಭಾತು—ಹಾ. ೧೩೫

೮೩ ಸಾಂಬಾರು—ಹಾ. ೭, ಹಾ. ೧೩೫, (ಮುಹಾ. ಧ್ವ. ೭೪) (ರಕ. ಧ್ವ. ೫೧,

೮೪ ಸಾರು—ಹಾ. ೭, ಹಾ. ೩೩, ಹಾ. ೧೩೫, (ಮುಹಾ. ಧ್ವ. ೭೪) (ರಕ. ಧ್ವ. ೫೧)

೮೫ ಸಾಸಿವೆಗಾಯಿ—(ಮುಹಾ. ಧ್ವ. ೭೪)

೮೬ ಸೀಕರ್ಣೆ (ಸೀಕರಣೆ?)—ಹಾ. ೭, (ಮುಹಾ. ಧ್ವ. ೭೪)

೮೭ ಸೀದೋಸೆ—(ಮುಹಾ. ಧ್ವ. ೭೪)

೮೮ ಸೂಪ (?)—ಹಾ. ೫೦, ಹಾ. ೧೩೫, (ಸುಕ. ಧ್ವ. ೨೦, ೩೦)

೮೯ ಸೌತೆಭಾತು, ಸೌತೆಕಾಯಿಭಾತು—ಹಾ. ೧೩೫, (ಮುಹಾ. ಧ್ವ. ೭೪)

೯೦ ಹಪ್ಪಳ—ಹಾ. ೧೦೧, ಹಾ. ೧೩೦, ಹಾ. ೧೩೫, (ಮುಹಾ. ಧ್ವ. ೭೪) (ರಕ. ಧ್ವ ೫೧) (ಸುಕ. ಧ್ವ. ೨೦)

೯೧ ಹಿಂಡಿಯಪಲ್ಯ—ಹಾ. ೫೦, ಹಾ. ೧೩೫

೯೨ ಹಿಟ್ಟಿನ ಕಡುವು—ಹಾ. ೫೦, ಹಾ. ೧೩೫

೯೩ ಹುಗ್ಗಿ—(ಮುಹಾ. ಧ್ವ. ೭೪)

೯೪ ಹುಳಿದೋಸೆ—(ಮುಹಾ. ಧ್ವ. ೭೪)

೯೫ ಹೂರಣಗಡುವು—ಹಾ. ೧೩೫ (ಮುಹಾ. ಧ್ವ. ೭೪) (ರಕ. ಧ್ವ. ೫೧)

೯೬ ಹೊಯ್ಗಡುವು (< ಹುಯಿಗಡುಬು) ಹಾ. ೭, ಹಾ. ೧೩೫ (ಮುಹಾ. ಧ್ವ. ೭೪)

೯೭ ಹೋಳಿಗೆ—ಹಾ. ೧೩೫ (ಮುಹಾ. ಧ್ವ. ೭೪) (ಪಹಾ. ಧ್ವ. ೩೮) (ರಕ. ಧ್ವ. ೫೧) (ಸುಕ. ಧ್ವ. ೩೦)

೯೮ ಕ್ಷೀರಾನ್ನ—(ಪಹಾ. ಧ್ವ ೩೮)

